ಗೃಧ್ರರಾಜಃ ಸಮುತ್ಪತ್ಯ ಸಮಭಿದ್ರುತ್ಯ ರಾವಣಮ್ ।
ಸಮಾವಾರ್ಯ ಮಹಾತೇಜಾ ಜಟಾಯುರಿದಮಬ್ರವೀತ್ ॥೨೪॥

ವಜ್ರಸಂಸ್ಪರ್ಶಬಾಣಸ್ಯ ಭಾರ್ಯಾಂ ರಾಮಸ್ಯ ರಾವಣ ।
ಅಲ್ಪಬುದ್ಧೇ ಹರಸ್ಯೇನಾಂ ವಧಾಯ ಖಲು ರಕ್ಷಸಾಮ್ ॥೨೫॥

ಸಮಿತ್ರಬನ್ಧುಃ ಸಾಮಾತ್ಯಃ ಸಬಲಃ ಸಪರಿಚ್ಛದಃ ।
ವಿಷಪಾನಂ ಪಿಬಸ್ಯೇತತ್ಪಿಪಾಸಿತ ಇವೋದಕಮ್ ॥೨೬॥

ಅನುಬನ್ಧಮಜಾನನ್ತಃ ಕರ್ಮಣಾಮವಿಚಕ್ಷಣಾಃ ।
ಶೀಘ್ರಮೇವ ವಿನಶ್ಯನ್ತಿ ಯಥಾ ತ್ವಂ ವಿನಶಿಷ್ಯಸಿ ॥೨೭॥

ಬದ್ಧಸ್ತ್ವಂ ಕಾಲಪಾಶೇನ ಕ್ವ ಗತಸ್ತಸ್ಯ ಮೋಕ್ಷ್ಯಸೇ ।
ವಧಾಯ ಬಡಿಶಂ ಗೃಹ್ಯ ಸಾಮಿಷಂ ಜಲಜೋ ಯಥಾ ॥೨೮॥

ನ ಹಿ ಜಾತು ದುರಾಧರ್ಷೌ ಕಾಕುತ್ಸ್ಥೌ ತವ ರಾವಣ ।
ಧರ್ಷಣಂ ಚಾಶ್ರಮಸ್ಯಾಸ್ಯ ಕ್ಷಮಿಷ್ಯೇತೇ ತು ರಾಘವೌ ॥೨೯॥

ಯಥಾ ತ್ವಯಾ ಕೃತಂ ಕರ್ಮ ಭೀರುಣಾ ಲೋಕಗರ್ಹಿತಮ್ ।
ತಸ್ಕರಾಚರಿತೋ ಮಾರ್ಗೋ ನೈಷ ವೀರನಿಷೇವಿತಃ ॥೩೦॥

ಯುಧ್ಯಸ್ವ ಯದಿ ಶೂರೋಽಸಿ ಮುಹೂರ್ತಂ ತಿಷ್ಠ ರಾವಣ ।
ಶಯಿಷ್ಯಸೇ ಹತೋ ಭೂಮೌ ಯಥಾ ಭ್ರಾತಾ ಖರಸ್ತಥಾ ॥೩೧॥

ಪರೇತಕಾಲೇ ಪುರುಷೋ ಯತ್ಕರ್ಮ ಪ್ರತಿಪದ್ಯತೇ ।
ವಿನಾಶಾಯಾತ್ಮನೋಽಧರ್ಮ್ಯಂ ಪ್ರತಿಪನ್ನೋಽಸಿ ಕರ್ಮ ತತ್ ॥

ಪಾಪನುಬನ್ಧೋ ವೈ ಯಸ್ಯ ಕರ್ಮಣಃ ಕರ್ಮ ಕೋ ನು ತತ್ ।
ಕುರ್ವೀತ ಲೋಕಾಧಿಪತಿಃ ಸ್ವಯಂಭೂರ್ಭಗವಾನಪಿ ॥೩೩॥

ಏವಮುಕ್ತ್ವಾ ಶುಭಂ ವಾಕ್ಯಂ ಜಟಾಯುಸ್ತಸ್ಯ ರಕ್ಷಸಃ ।
ನಿಪಪಾತ ಭೃಶಂ ಪೃಷ್ಠೇ ದಶಗ್ರೀವಸ್ಯ ವೀರ್ಯವಾನ್ ॥೩೪॥

ತಂ ಗೃಹೀತ್ವಾ ನಖೈಸ್ತೀಕ್ಷ್ಣೈರ್ವಿರರಾದ ಸಮನ್ತತಃ ।
ಅಧಿರೂಢೋ ಗಜಾರೋಹೋ ಯಥಾ ಸ್ಯಾದ್ದುಷ್ಟವಾರಣಮ್ ॥

ವಿರರಾದ ನಖೈರಸ್ಯ ತುಣ್ಡಂ ಪೃಷ್ಠೇ ಸಮರ್ಪಯನ್ ।
ಕೇಶಾಂಶ್ಚೋತ್ಪಾಟಯಾಮಾಸ ನಖಪಕ್ಷಮುಖಾಯುಧಃ ॥೩೬॥

ಸ ತಥಾ ಗೃಧ್ರರಾಜೇನ ಕ್ಲಿಶ್ಯಮಾನೋ ಮುಹುರ್ಮುಹುಃ ।
ಅಮರ್ಷಸ್ಫುರಿತೋಷ್ಠಃ ಸನ್ಪ್ರಾಕಮ್ಪತ ಚ ರಾಕ್ಷಸಃ ॥೩೭॥

ಸಂಪರಿಷ್ವಜ್ಯ ವೈದೇಹೀಂ ವಾಮೇನಾಙ್ಕೇನ ರಾವಣಃ ।
ತಲೇನಾಭಿಜಘಾನಾಶು ಜಟಾಯುಂ ಕ್ರೋಧಮೂರ್ಛಿತಃ ॥

ಜಟಾಯುಸ್ತಮಭಿಕ್ರಮ್ಯ ತುಣ್ಡೇನಾಸ್ಯ ಖಗಾಧಿಪಃ ।
ವಾಮಬಾಹೂನ್ದಶ ತದಾ ವ್ಯಪಾಹರದರಿಂದಮಃ ॥೩೯॥

ಸಂಛಿನ್ನಬಾಹೋಃ ಸದ್ಯೋ ವೈ ಬಾಹವಃ ಸಹಸಾಭವನ್ ।
ವಿಷಜ್ವಾಲಾವಲೀಯುಕ್ತಾ ವಲ್ಮೀಕಾದಿವ ಪನ್ನಗಾಃ ॥೪೦॥

ತತಃ ಕ್ರೋಧಾದ್ದಶಗ್ರೀವಃ ಸೀತಾಮುತ್ಸೃಜ್ಯ ವೀರ್ಯವಾನ್ ।
ಮುಷ್ಟಿಭ್ಯಾಂ ಚರಣಾಭ್ಯಾಂ ಚ ಗೃಧ್ರರಾಜಮಪೋಥಯತ್ ॥೪೧॥

ತತೋ ಮುಹೂರ್ತಂ ಸಂಗ್ರಾಮೋ ಬಭೂವಾತುಲವೀರ್ಯಯೋಃ ।
ರಾಕ್ಷಸಾನಾಂ ಚ ಮುಖ್ಯಸ್ಯ ಪಕ್ಷಿಣಾಂ ಪ್ರವರಸ್ಯ ಚ ॥೪೨॥

ತಸ್ಯ ವ್ಯಾಯಚ್ಛಮಾನಸ್ಯ ರಾಮಸ್ಯಾರ್ಥೇ ಸ ರಾವಣಃ ।
ಪಕ್ಷೌ ಪಾದೌ ಚ ಪಾರ್ಶ್ವೌ ಚ ಖಡ್ಗಮುದ್ಧೃತ್ಯ ಸೋಽಚ್ಛಿನತ್ ॥

ಸ ಛಿನ್ನಪಕ್ಷಃ ಸಹಸಾ ರಕ್ಷಸಾ ರೌದ್ರಕರ್ಮಣಾ ।
ನಿಪಪಾತ ಮಹಾಗೃಧ್ರೋ ಧರಣ್ಯಾಮಲ್ಪಜೀವಿತಃ ॥೪೪॥

ತಂ ದೃಷ್ಟ್ವಾ ಪತಿತಂ ಭೂಮೌ ಕ್ಷತಜಾರ್ದ್ರಂ ಜಟಾಯುಷಮ್ ।
ಅಭ್ಯಧಾವತ ವೈದೇಹೀ ಸ್ವಬನ್ಧುಮಿವ ದುಃಖಿತಾ ॥೪೫॥

ತಂ ನೀಲಜೀಮೂತನಿಕಾಶಕಲ್ಪಂ
ಸುಪಾಣ್ಡುರೋರಸ್ಕಮುದಾರವೀರ್ಯಮ್ ।
ದದರ್ಶ ಲಙ್ಕಾಧಿಪತಿಃ ಪೃಥಿವ್ಯಾಂ
ಜಟಾಯುಷಂ ಶಾನ್ತಮಿವಾಗ್ನಿದಾವಮ್ ॥೪೬॥

ತತಸ್ತು ತಂ ಪತ್ರರಥಂ ಮಹೀತಲೇ
ನಿಪಾತಿತಂ ರಾವಣವೇಗಮರ್ದಿತಮ್ ।
ಪುನಃ ಪರಿಷ್ವಜ್ಯ ಶಶಿಪ್ರಭಾನನಾ
ರುರೋದ ಸೀತಾ ಜನಕಾತ್ಮಜಾ ತದಾ ॥೪೭॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಏಕಪಞ್ಚಾಶಃ ಸರ್ಗಃ

---

## ದ್ವಿಪಞ್ಚಾಶಃ ಸರ್ಗಃ

ತಮಲ್ಪಜೀವಿತಂ ಗೃಧ್ರಂ ಸ್ಫುರನ್ತಂ ರಾಕ್ಷಸಾಧಿಪಃ ।
ದದರ್ಶ ಭೂಮೌ ಪತಿತಂ ಸಮೀಪೇ ರಾಘವಾಶ್ರಮಾತ್ ॥ ॥೧॥

ಸಾ ತು ತಾರಾಧಿಪಮುಖೀ ರಾವಣೇನ ಸಮೀಕ್ಷ್ಯ ತಮ್ ।
ಗೃಧ್ರರಾಜಂ ವಿನಿಹತಂ ವಿಲಲಾಪ ಸುದುಃಖಿತಾ ॥೨॥

ಆಲಿಙ್ಗ್ಯ ಗೃಧ್ರಂ ನಿಹತಂ ರಾವಣೇನ ಬಲೀಯಸಾ ।
ವಿಲಲಾಪ ಸುದುಃಖಾರ್ತಾ ಸೀತಾ ಶಶಿನಿಭಾನನಾ ॥ ॥೩॥

ನಿಮಿತ್ತಂ ಲಕ್ಷಣಜ್ಞಾನಂ ಶಕುನಿಸ್ವರದರ್ಶನಮ್ ।
ಅವಶ್ಯಂ ಸುಖದುಃಖೇಷು ನರಾಣಾಂ ಪರಿದೃಶ್ಯತೇ ॥೪॥

ನೂನಂ ರಾಮ ನ ಜಾನಾಸಿ ಮಹದ್ವ್ಯಸನಮಾತ್ಮನಃ ।
ಧಾವನ್ತಿ ನೂನಂ ಕಾಕುತ್ಸ್ಥಂ ಮದರ್ಥಂ ಮೃಗಪಕ್ಷಿಣಃ ॥೫॥

ಅಯಂ ಹಿ ಪಾಪಚಾರೇಣ ಮಾಂ ತ್ರಾತುಮಿಹ ಸಂಗತಃ ।
ಶೇತೇ ವಿನಿಹತೋ ಭೂಮೌ ಮಮಾಭಾಗ್ಯಾದ್ವಿಹಂಗಮಃ ॥೬॥

ತ್ರಾಹಿ ಮಾಮದ್ಯ ಕಾಕುತ್ಸ್ಥ ಲಕ್ಷ್ಮಣೇತಿ ವರಾಙ್ಗನಾ ।
ಸುಸಂತ್ರಸ್ತಾ ಸಮಾಕ್ರನ್ದಚ್ಛೃಣ್ವತಾಂ ತು ಯಥಾನ್ತಿಕೇ ॥೭॥

ತಾಂ ಕ್ಲಿಷ್ಟಮಾಲ್ಯಾಭರಣಾಂ ವಿಲಪನ್ತೀಮನಾಥವತ್ ।
ಅಭ್ಯಧಾವತ ವೈದೇಹೀಂ ರಾವಣೋ ರಾಕ್ಷಸಾಧಿಪಃ ॥೮॥

ತಾಂ ಲತಾಮಿವ ವೇಷ್ಟನ್ತೀಮಾಲಿಙ್ಗನ್ತೀಂ ಮಹಾದ್ರುಮಾನ್ ।
ಮುಞ್ಚ ಮುಞ್ಚೇತಿ ಬಹುಶಃ ಪ್ರವದನ್ರಾಕ್ಷಸಾಧಿಪಃ ॥೯॥

ಕ್ರೋಶನ್ತೀಂ ರಾಮ ರಾಮೇತಿ ರಾಮೇಣ ರಹಿತಾಂ ವನೇ ।
ಜೀವಿತಾನ್ತಾಯ ಕೇಶೇಷು ಜಗ್ರಾಹಾನ್ತಕಸಂನಿಭಃ ॥೧೦॥

ಪ್ರಧರ್ಷಿತಾಯಾಂ ವೈದೇಹ್ಯಾಂ ಬಭೂವ ಸಚರಾಚರಮ್ ।
ಜಗತ್ಸರ್ವಮಮರ್ಯಾದಂ ತಮಸಾನ್ಧೇನ ಸಂವೃತಮ್ ॥೧೧॥

ನ ವಾತಿ ಮಾರುತಸ್ತತ್ರ ನಿಷ್ಪ್ರಭೋಽಭೂದ್ದಿವಾಕರಃ ॥೧೨॥

ದೃಷ್ಟ್ವಾ ಸೀತಾಂ ಪರಾಮೃಷ್ಟಾಂ ದೇವೋ ದಿವ್ಯೇನ ಚಕ್ಷುಷಾ ।
ಕೃತಂ ಕಾರ್ಯಮಿತಿ ಶ್ರೀಮಾನ್ವ್ಯಾಜಹಾರ ಪಿತಾಮಹಃ ॥೧೩॥

ಪ್ರಹೃಷ್ಟಾ ವ್ಯಥಿತಾಶ್ಚಾಸನ್ಸರ್ವೇ ತೇ ಪರಮರ್ಷಯಃ ।
ದೃಷ್ಟ್ವಾ ಸೀತಾಂ ಪರಾಮೃಷ್ಟಾಂ ದಣ್ಡಕಾರಣ್ಯವಾಸಿನಃ ।
ರಾವಣಸ್ಯ ವಿನಾಶಂ ಚ ಪ್ರಾಪ್ತಂ ಬುದ್ಧ್ವಾ ಯದೃಚ್ಛಯಾ ॥೧೪॥

ಸ ತು ತಾಂ ರಾಮ ರಾಮೇತಿ ರುದನ್ತೀಂ ಲಕ್ಷ್ಮಣೇತಿ ಚ ।
ಜಗಾಮಾದಾಯ ಚಾಕಾಶಂ ರಾವಣೋ ರಾಕ್ಷಸೇಶ್ವರಃ ॥೧೫॥

ತಪ್ತಾಭರಣವರ್ಣಾಙ್ಗೀ ಪೀತಕೌಶೇಯವಾಸಿನೀ ।
ರರಾಜ ರಾಜಪುತ್ರೀ ತು ವಿದ್ಯುತ್ಸೌದಾಮಿನೀ ಯಥಾ ॥೧೬॥

ಉದ್ಧೂತೇನ ಚ ವಸ್ತ್ರೇಣ ತಸ್ಯಾಃ ಪೀತೇನ ರಾವಣಃ ।
ಅಧಿಕಂ ಪರಿಬಭ್ರಾಜ ಗಿರಿರ್ದೀಪ್ತ ಇವಾಗ್ನಿನಾ ॥೧೭॥

ತಸ್ಯಾಃ ಪರಮಕಲ್ಯಾಣ್ಯಾಸ್ತಾಮ್ರಾಣಿ ಸುರಭೀಣಿ ಚ ।
ಪದ್ಮಪತ್ರಾಣಿ ವೈದೇಹ್ಯಾ ಅಭ್ಯಕೀರ್ಯನ್ತ ರಾವಣಮ್ ॥೧೮॥

ತಸ್ಯಾಃ ಕೌಶೇಯಮುದ್ಧೂತಮಾಕಾಶೇ ಕನಕಪ್ರಭಮ್ ।
ಬಭೌ ಚಾದಿತ್ಯರಾಗೇಣ ತಾಮ್ರಮಭ್ರಮಿವಾತಪೇ ॥೧೯॥

ತಸ್ಯಾಸ್ತತ್ಸುನಸಂ ವಕ್ತ್ರಮಾಕಾಶೇ ರಾವಣಾಙ್ಕಗಮ್ ।
ನ ರರಾಜ ವಿನಾ ರಾಮಂ ವಿನಾಲಮಿವ ಪಙ್ಕಜಮ್ ॥೨೦॥

ಬಭೂವ ಜಲದಂ ನೀಲಂ ಭಿತ್ತ್ವಾ ಚನ್ದ್ರ ಇವೋದಿತಃ ।
ಸುಲಲಾಟಂ ಸುಕೇಶಾನ್ತಂ ಪದ್ಮಗರ್ಭಾಭಮವ್ರಣಮ್ ॥೨೧॥

ಶುಕ್ಲೈಃ ಸುವಿಮಲೈರ್ದನ್ತೈಃ ಪ್ರಭಾವದ್ಭಿರಲಂಕೃತಮ್ ।
ತಸ್ಯಾಃ ಸುನಯನಂ ವಕ್ತ್ರಮಾಕಾಶೇ ರಾವಣಾಙ್ಕಗಮ್ ॥೨೨॥

ರುದಿತಂ ವ್ಯಪಮೃಷ್ಟಾಸ್ರಂ ಚನ್ದ್ರವತ್ಪ್ರಿಯದರ್ಶನಮ್ ।
ಸುನಾಸಂ ಚಾರು ತಾಮ್ರೋಷ್ಠಮಾಕಾಶೇ ಹಾಟಕಪ್ರಭಮ್ ॥೨೩॥

ರಾಕ್ಷಸೇನ್ದ್ರಸಮಾಧೂತಂ ತಸ್ಯಾಸ್ತದ್ವದನಂ ಶುಭಮ್ ।
ಶುಶುಭೇ ನ ವಿನಾ ರಾಮಂ ದಿವಾ ಚನ್ದ್ರ ಇವೋದಿತಃ ॥೨೪॥

ಸಾ ಹೇಮವರ್ಣಾ ನೀಲಾಙ್ಗಂ ಮೈಥಿಲೀ ರಾಕ್ಷಸಾಧಿಪಮ್ ।
ಶುಶುಭೇ ಕಾಞ್ಚನೀ ಕಾಞ್ಚೀ ನೀಲಂ ಮಣಿಮಿವಾಶ್ರಿತಾ ॥೨೫॥

ಸಾ ಪದ್ಮಗೌರೀ ಹೇಮಾಭಾ ರಾವಣಂ ಜನಕಾತ್ಮಜಾ ।
ವಿದ್ಯುದ್ಘನಮಿವಾವಿಶ್ಯ ಶುಶುಭೇ ತಪ್ತಭೂಷಣಾ ॥೨೬॥

ತಸ್ಯಾ ಭೂಷಣಘೋಷೇಣ ವೈದೇಹ್ಯಾ ರಾಕ್ಷಸೇಶ್ವರಃ ।
ಬಭೌ ಸಚಪಲೋ ನೀಲಃ ಸಘೋಷ ಇವ ತೋಯದಃ ॥೨೭॥

ಉತ್ತಮಾಙ್ಗಚ್ಚ್ಯುತಾ ತಸ್ಯಾಃ ಪುಷ್ಪವೃಷ್ಟಿಃ ಸಮನ್ತತಃ ।
ಸೀತಾಯಾ ಹ್ರಿಯಮಾಣಾಯಾಃ ಪಪಾತ ಧರಣೀತಲೇ ॥೨೮॥

ಸಾ ತು ರಾವಣವೇಗೇನ ಪುಷ್ಪವೃಷ್ಟಿಃ ಸಮನ್ತತಃ ।
ಸಮಾಧೂತಾ ದಶಗ್ರೀವಂ ಪುನರೇವಾಭ್ಯವರ್ತತ ॥೨೯॥

ಅಭ್ಯವರ್ತತ ಪುಷ್ಪಾಣಾಂ ಧಾರಾ ವೈಶ್ರವಣಾನುಜಮ್ ।
ನಕ್ಷತ್ರಮಾಲಾ ವಿಮಲಾ ಮೇರುಂ ನಗಮಿವೋನ್ನತಮ್ ॥೩೦॥

ಚರಣಾನ್ನೂಪುರಂ ಭ್ರಷ್ಟಂ ವೈದೇಹ್ಯಾ ರತ್ನಭೂಷಿತಮ್ ।
ವಿದ್ಯುನ್ಮಣ್ಡಲಸಂಕಾಶಂ ಪಪಾತ ಮಧುರಸ್ವನಮ್ ॥೩೧॥

ತರುಪ್ರವಾಲರಕ್ತಾ ಸಾ ನೀಲಾಙ್ಗಂ ರಾಕ್ಷಸೇಶ್ವರಮ್ ।
ಪ್ರಾಶೋಭಯತ ವೈದೇಹೀ ಗಜಂ ಕಕ್ಷ್ಯೇವ ಕಾಞ್ಚನೀ ॥೩೨॥

ತಾಂ ಮಹೋಲ್ಕಾಮಿವಾಕಾಶೇ ದೀಪ್ಯಮಾನಾಂ ಸ್ವತೇಜಸಾ ।
ಜಹಾರಾಕಾಶಮಾವಿಶ್ಯ ಸೀತಾಂ ವೈಶ್ರವಣಾನುಜಃ ॥೩೩॥

ತಸ್ಯಾಸ್ತಾನ್ಯಗ್ನಿವರ್ಣಾನಿ ಭೂಷಣಾನಿ ಮಹೀತಲೇ ।
ಸಘೋಷಾಣ್ಯವಕೀರ್ಯನ್ತ ಕ್ಷೀಣಾಸ್ತಾರಾ ಇವಾಮ್ಬರಾತ್ ॥೩೪॥

ತಸ್ಯಾಸ್ತನಾನ್ತರಾದ್ಭ್ರಷ್ಟೋ ಹಾರಸ್ತಾರಾಧಿಪದ್ಯುತಿಃ ।
ವೈದೇಹ್ಯಾ ನಿಪತನ್ಭಾತಿ ಗಙ್ಗೇವ ಗಗನಾಚ್ಚ್ಯುತಾ ॥೩೫॥

ಉತ್ಪಾತವಾತಾಭಿಹತಾ ನಾನಾದ್ವಿಜಗಣಾಯುತಾಃ ।
ಮಾ ಭೈರಿತಿ ವಿಧೂತಾಗ್ರಾ ವ್ಯಾಜಹ್ರುರಿವ ಪಾದಪಾಃ ॥೩೬॥

ನಲಿನ್ಯೋ ಧ್ವಸ್ತಕಮಲಾಸ್ತ್ರಸ್ತಮೀನಜಲೇಚರಾಃ ।
ಸಖೀಮಿವ ಗತೋಚ್ಛ್ವಾಸಾಮನ್ವಶೋಚನ್ತ ಮೈಥಿಲೀಮ್ ॥೩೭॥

ಸಮನ್ತಾದಭಿಸಂಪತ್ಯ ಸಿಂಹವ್ಯಾಘ್ರಮೃಗದ್ವಿಜಾಃ ।
ಅನ್ವಧಾವಂಸ್ತದಾ ರೋಷಾತ್ಸೀತಾಂ ಛಾಯಾನುಗಾಮಿನಃ ॥೩೮॥

ಜಲಪ್ರಪಾತಾಸ್ರಮುಖಾಃ ಶೃಙ್ಗೈರುಚ್ಛ್ರಿತಬಾಹುಭಿಃ ।
ಸೀತಾಯಾಂ ಹ್ರಿಯಮಾಣಾಯಾಂ ವಿಕ್ರೋಶನ್ತೀವ ಪರ್ವತಾಃ ॥

ಹ್ರಿಯಮಾಣಾಂ ತು ವೈದೇಹೀಂ ದೃಷ್ಟ್ವಾ ದೀನೋ ದಿವಾಕರಃ ।
ಪ್ರವಿಧ್ವಸ್ತಪ್ರಭಃ ಶ್ರೀಮಾನಾಸೀತ್ಪಾಣ್ಡುರಮಣ್ಡಲಃ ॥೪೦॥

ನಾಸ್ತಿ ಧರ್ಮಃ ಕುತಃ ಸತ್ಯಂ ನಾರ್ಜವಂ ನಾನೃಶಂಸತಾ ।
ಯತ್ರ ರಾಮಸ್ಯ ವೈದೇಹೀಂ ಭಾರ್ಯಾಂ ಹರತಿ ರಾವಣಃ ॥೪೧॥

ಇತಿ ಭೂತಾನಿ ಸರ್ವಾಣಿ ಗಣಶಃ ಪರ್ಯದೇವಯನ್ ।
ವಿತ್ರಸ್ತಕಾ ದೀನಮುಖಾ ರುರುದುರ್ಮೃಗಪೋತಕಾಃ ॥೪೨॥

ಉದ್ವೀಕ್ಷ್ಯೋದ್ವೀಕ್ಷ್ಯ ನಯನೈರಾಸ್ರಪಾತಾವಿಲೇಕ್ಷಣಾಃ ।
ಸುಪ್ರವೇಪಿತಗಾತ್ರಾಶ್ಚ ಬಭೂವುರ್ವನದೇವತಾಃ ।
ವಿಕ್ರೋಶನ್ತೀಂ ದೃಢಂ ಸೀತಾಂ ದೃಷ್ಟ್ವಾ ದುಃಖಂ ತಥಾ ಗತಾಮ್॥

ತಾಂ ತು ಲಕ್ಷ್ಮಣ ರಾಮೇತಿ ಕ್ರೋಶನ್ತೀಂ ಮಧುರಸ್ವರಮ್ ।
ಅವೇಕ್ಷಮಾಣಾಂ ಬಹುಶೋ ವೈದೇಹೀಂ ಧರಣೀತಲಮ್ ॥೪೪॥

ಸ ತಾಮಾಕುಲಕೇಶಾನ್ತಾಂ ವಿಪ್ರಮೃಷ್ಟವಿಶೇಷಕಾಮ್ ।
ಜಹಾರಾತ್ಮವಿನಾಶಾಯ ದಶಗ್ರೀವೋ ಮನಸ್ವಿನೀಮ್ ॥೪೫॥

ತತಸ್ತು ಸಾ ಚಾರುದತೀ ಶುಚಿಸ್ಮಿತಾ
ವಿನಾಕೃತಾ ಬನ್ಧುಜನೇನ ಮೈಥಿಲೀ ।
ಅಪಶ್ಯತೀ ರಾಘವಲಕ್ಷ್ಮಣಾವುಭೌ
ವಿವರ್ಣವಕ್ತ್ರಾ ಭಯಭಾರಪೀಡಿತಾ ॥೪೬॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ದ್ವಿಪಞ್ಚಾಶಃ ಸರ್ಗಃ

——

## ತ್ರಿಪಞ್ಚಾಶಃ ಸರ್ಗಃ

ಖಮುತ್ಪತನ್ತಂ ತಂ ದೃಷ್ಟ್ವಾ ಮೈಥಿಲೀ ಜನಕಾತ್ಮಜಾ ।
ದುಃಖಿತಾ ಪರಮೋದ್ವಿಗ್ನಾ ಭಯೇ ಮಹತಿ ವರ್ತಿನೀ ॥೧॥

ರೋಷರೋದನತಾಮ್ರಾಕ್ಷೀ ಭೀಮಾಕ್ಷಂ ರಾಕ್ಷಸಾಧಿಪಮ್ ।
ರುದನ್ತೀ ಕರುಣಂ ಸೀತಾ ಹ್ರಿಯಮಾಣೇದಮಬ್ರವೀತ್ ॥೨॥

ನ ವ್ಯಪತ್ರಪಸೇ ನೀಚ ಕರ್ಮಣಾನೇನ ರಾವಣ ।
ಜ್ಞಾತ್ವಾ ವಿರಹಿತಾಂ ಯನ್ಮಾಂ ಚೋರಯಿತ್ವಾ ಪಲಾಯಸೇ ॥೩॥

ತ್ವಯೈವ ನೂನಂ ದುಷ್ಟಾತ್ಮನ್ಭೀರುಣಾ ಹರ್ತುಮಿಚ್ಛತಾ ।
ಮಮಾಪವಾಹಿತೋ ಭರ್ತಾ ಮೃಗರೂಪೇಣ ಮಾಯಯಾ ॥೪॥

ಯೋ ಹಿ ಮಾಮುದ್ಯತಸ್ತ್ರಾತುಂ ಸೋಽಪ್ಯಯಂ ವಿನಿಪಾತಿತಃ ।
ಗೃಧ್ರರಾಜಃ ಪುರಾಣೋಽಸೌ ಶ್ವಶುರಸ್ಯ ಸಖಾ ಮಮ ॥೫॥

ಪರಮಂ ಖಲು ತೇ ವೀರ್ಯಂ ದೃಶ್ಯತೇ ರಾಕ್ಷಸಾಧಮ ।
ವಿಶ್ರಾವ್ಯ ನಾಮಧೇಯಂ ಹಿ ಯುದ್ಧೇ ನಾಸ್ಮಿ ಜಿತಾ ತ್ವಯಾ ॥೬॥

ಈದೃಶಂ ಗರ್ಹಿತಂ ಕರ್ಮ ಕಥಂ ಕೃತ್ವಾ ನ ಲಜ್ಜಸೇ ।
ಸ್ತ್ರಿಯಾಶ್ಚ ಹರಣಂ ನೀಚ ರಹಿತೇ ತು ಪರಸ್ಯ ಚ ॥೭॥

ಕಥಯಿಷ್ಯನ್ತಿ ಲೋಕೇಷು ಪುರುಷಾಃ ಕರ್ಮ ಕುತ್ಸಿತಮ್ ।
ಸುನೃಶಂಸಮಧರ್ಮಿಷ್ಠಂ ತವ ಶೌಣ್ಡೀರ್ಯಮಾನಿನಃ ॥೮॥

ಧಿಕ್ತೇ ಶೌರ್ಯಂ ಚ ಸತ್ತ್ವಂ ಚ ಯತ್ತ್ವಯಾ ಕಥಿತಂ ತದಾ ।
ಕುಲಾಕ್ರೋಶಕರಂ ಲೋಕೇ ಧಿಕ್ತೇ ಚಾರಿತ್ರಮೀದೃಶಮ್ ॥೯॥

ಕಿಂ ಶಕ್ಯಂ ಕರ್ತುಮೇವಂ ಹಿ ಯಜ್ಜವೇನೈವ ಧಾವಸಿ ।
ಮುಹೂರ್ತಮಪಿ ತಿಷ್ಠಸ್ವ ನ ಜೀವನ್ಪ್ರತಿಯಾಸ್ಯಸಿ ॥೧೦॥

ನ ಹಿ ಚಕ್ಷುಃಪಥಂ ಪ್ರಾಪ್ಯ ತಯೋಃ ಪಾರ್ಥಿವಪುತ್ರಯೋಃ ।
ಸಸೈನ್ಯೋಽಪಿ ಸಮರ್ಥಸ್ತ್ವಂ ಮುಹೂರ್ತಮಪಿ ಜೀವಿತುಮ್ ॥

ನ ತ್ವಂ ತಯೋಃ ಶರಸ್ಪರ್ಶಂ ಸೋಢುಂ ಶಕ್ತಃ ಕಥಂಚನ ।
ವನೇ ಪ್ರಜ್ವಲಿತಸ್ಯೇವ ಸ್ಪರ್ಶಮಗ್ನೇರ್ವಿಹಂಗಮಃ ॥೧೨॥

ಸಾಧು ಕೃತ್ವಾತ್ಮನಃ ಪಥ್ಯಂ ಸಾಧು ಮಾಂ ಮುಞ್ಚ ರಾವಣ ।

ಮತ್ಪ್ರಧರ್ಷಣಸಂಕ್ರುದ್ಧೋ ಭ್ರಾತ್ರಾ ಸಹ ಪತಿರ್ಮಮ ।
ವಿಧಾಸ್ಯತಿ ವಿನಾಶಾಯ ತ್ವಂ ಮಾಂ ಯದಿ ನ ಮುಞ್ಚಸಿ ॥೧೩॥

ಯೇನ ತ್ವಂ ವ್ಯವಸಾಯೇನ ಬಲಾನ್ಮಾಂ ಹರ್ತುಮಿಚ್ಛಸಿ ।
ವ್ಯವಸಾಯಃ ಸ ತೇ ನೀಚ ಭವಿಷ್ಯತಿ ನಿರರ್ಥಕಃ ॥೧೪॥

ನ ಹ್ಯಹಂ ತಮಪಶ್ಯನ್ತೀ ಭರ್ತಾರಂ ವಿಬುಧೋಪಮಮ್ ।
ಉತ್ಸಹೇ ಶತ್ರುವಶಗಾ ಪ್ರಾಣಾನ್ಧಾರಯಿತುಂ ಚಿರಮ್ ॥೧೫॥

ನ ನೂನಂ ಚಾತ್ಮನಃ ಶ್ರೇಯಃ ಪಥ್ಯಂ ವಾ ಸಮವೇಕ್ಷಸೇ ।
ಮೃತ್ಯುಕಾಲೇ ಯಥಾ ಮರ್ತ್ಯೋ ವಿಪರೀತಾನಿ ಸೇವತೇ ॥೧೬॥

ಮುಮೂರ್ಷೂಣಾಂ ಹಿ ಸರ್ವೇಷಾಂ ಯತ್ಪಥ್ಯಂ ತನ್ನ ರೋಚತೇ ।
ಪಶ್ಯಾಮ್ಯದ್ಯ ಹಿ ಕಣ್ಠೇ ತ್ವಾಂ ಕಾಲಪಾಶಾವಪಾಶಿತಮ್ ॥೧೭॥

ಯಥಾ ಚಾಸ್ಮಿನ್ಭಯಸ್ಥಾನೇ ನ ಬಿಭೇಷಿ ದಶಾನನ ।
ವ್ಯಕ್ತಂ ಹಿರಣ್ಮಯಾಂಸ್ತ್ವಂ ಹಿ ಸಂಪಶ್ಯಸಿ ಮಹೀರುಹಾನ್ ॥೧೮॥

ನದೀಂ ವೈತರಣೀಂ ಘೋರಾಂ ರುಧಿರೌಘನಿವಾಹಿನೀಮ್ ।
ಅಸಿಪತ್ರವನಂ ಚೈವ ಭೀಮಂ ಪಶ್ಯಸಿ ರಾವಣ ॥೧೯॥

ತಪ್ತಕಾಞ್ಚನಪುಷ್ಪಾಂ ಚ ವೈಡೂರ್ಯಪ್ರವರಚ್ಛದಾಮ್ ।
ದ್ರಕ್ಷ್ಯಸೇ ಶಾಲ್ಮಲೀಂ ತೀಕ್ಷ್ಣಾಮಾಯಸೈಃ ಕಣ್ಟಕೈಶ್ಚಿತಾಮ್ ॥

ನ ಹಿ ತ್ವಮೀದೃಶಂ ಕೃತ್ವಾ ತಸ್ಯಾಲೀಕಂ ಮಹಾತ್ಮನಃ ।
ಧರಿತುಂ ಶಕ್ಷ್ಯಸಿ ಚಿರಂ ವಿಷಂ ಪೀತ್ವೇವ ನಿರ್ಘೃಣಃ ॥೨೦॥

ಬದ್ಧಸ್ತ್ವಂ ಕಾಲಪಾಶೇನ ದುರ್ನಿವಾರೇಣ ರಾವಣ ।
ಕ್ವ ಗತೋ ಲಪ್ಸ್ಯಸೇ ಶರ್ಮ ಮಮ ಭರ್ತುರ್ಮಹಾತ್ಮನಃ ॥೨೨॥

ನಿಮೇಷಾನ್ತರಮಾತ್ರೇಣ ವಿನಾ ಭ್ರಾತ್ರಾ ಮಹಾವನೇ ।
ರಾಕ್ಷಸಾ ನಿಹತಾ ಯೇನ ಸಹಸ್ರಾಣಿ ಚತುರ್ದಶ ॥೨೩॥

ಸ ಕಥಂ ರಾಘವೋ ವೀರಃ ಸರ್ವಾಸ್ತ್ರಕುಶಲೋ ಬಲೀ ।
ನ ತ್ವಾಂ ಹನ್ಯಾಚ್ಛರೈಸ್ತೀಕ್ಷ್ಣೈರಿಷ್ಟಭಾರ್ಯಾಪಹಾರಿಣಮ್ ॥೨೪॥

ಏತಚ್ಚಾನ್ಯಚ್ಚ ಪರುಷಂ ವೈದೇಹೀ ರಾವಣಾಙ್ಕಗಾ।
ಭಯಶೋಕಸಮಾವಿಷ್ಟಾ ಕರುಣಂ ವಿಲಲಾಪ ಹ ॥೨೫॥

ತಥಾ ಭೃಶಾರ್ತಾ ಬಹು ಚೈವ ಭಾಷಿಣೀಂ
ವಿಲಾಪಪೂರ್ವಂ ಕರುಣಂ ಚ ಭಾಮಿನೀಮ್ ।
ಜಹಾರ ಪಾಪಃ ಕರುಣಂ ವಿವೇಷ್ಟತೀಂ
ನೃಪಾತ್ಮಜಾಮಾಗತಗಾತ್ರವೇಪಥುಮ್ ॥೨೬॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ತ್ರಿಪಞ್ಚಾಶಃ ಸರ್ಗಃ

---

## ಚತುಃಪಞ್ಚಾಶಃ ಸರ್ಗಃ

ಹ್ರಿಯಮಾಣಾ ತು ವೈದೇಹೀ ಕಞ್ಚಿನ್ನಾಥಮಪಶ್ಯತೀ।
ದದರ್ಶ ಗಿರಿಶೃಙ್ಗಸ್ಥಾನ್ಪಞ್ಚ ವಾನರಪುಂಗವಾನ್ ॥೧॥

ತೇಷಾಂ ಮಧ್ಯೇ ವಿಶಾಲಾಕ್ಷೀ ಕೌಶೇಯಂ ಕನಕಪ್ರಭಮ್ ।
ಉತ್ತರೀಯಂ ವರಾರೋಹಾ ಶುಭಾನ್ಯಾಭರಣಾನಿ ಚ ।
ಮುಮೋಚ ಯದಿ ರಾಮಾಯ ಶಂಸೇಯುರಿತಿ ಮೈಥಿಲೀ ॥೨॥

ವಸ್ತ್ರಮುತ್ಸೃಜ್ಯ ತನ್ಮಧ್ಯೇ ನಿಕ್ಷಿಪ್ತಂ ಸಹಭೂಷಣಮ್ ।
ಸಂಭ್ರಮಾತ್ತು ದಶಗ್ರೀವಸ್ತತ್ಕರ್ಮ ನ ಸ ಬುದ್ಧವಾನ್ ॥೩॥

ಪಿಙ್ಗಾಕ್ಷಾಸ್ತಾಂ ವಿಶಾಲಾಕ್ಷೀಂ ನೇತ್ರೈರನಿಮಿಷೈರಿವ ।
ವಿಕ್ರೋಶನ್ತೀಂ ತದಾ ಸೀತಾಂ ದದೃಶುರ್ವಾನರೋತ್ತಮಾಃ ॥೪॥

ಸ ಚ ಪಮ್ಪಾಮತಿಕ್ರಮ್ಯ ಲಙ್ಕಾಮಭಿಮುಖಃ ಪುರೀಮ್ ।
ಜಗಾಮ ರುದತೀಂ ಗೃಹ್ಯ ವೈದೇಹೀಂ ರಾಕ್ಷಸೇಶ್ವರಃ ॥೫॥

ತಾಂ ಜಹಾರ ಸುಸಂಹೃಷ್ಟೋ ರಾವಣೋ ಮೃತ್ಯುಮಾತ್ಮನಃ ।
ಉತ್ಸಙ್ಗೇನೇವ ಭುಜಗೀಂ ತೀಕ್ಷ್ಣದಂಷ್ಟ್ರಾಂ ಮಹಾವಿಷಾಮ್ ॥

ವನಾನಿ ಸರಿತಃ ಶೈಲಾನ್ಸರಾಂಸಿ ಚ ವಿಹಾಯಸಾ ।
ಸ ಕ್ಷಿಪ್ರಂ ಸಮತೀಯಾಯ ಶರಶ್ಚಾಪಾದಿವ ಚ್ಯುತಃ ॥೭॥

ತಿಮಿನಕ್ರನಿಕೇತಂ ತು ವರುಣಾಲಯಮಕ್ಷಯಮ್ ।
ಸರಿತಾಂ ಶರಣಂ ಗತ್ವಾ ಸಮತೀಯಾಯ ಸಾಗರಮ್ ॥೮॥

ಸಮ್ಭ್ರಮಾತ್ಪರಿವೃತ್ತೋರ್ಮೀ ರುದ್ಧಮೀನಮಹೋರಗಃ ।
ವೈದೇಹ್ಯಾಂ ಹ್ರಿಯಮಾಣಾಯಾಂ ಬಭೂವ ವರುಣಾಲಯಃ ॥೯॥

ಅನ್ತರಿಕ್ಷಗತಾ ವಾಚಃ ಸಸೃಜುಶ್ಚಾರಣಾಸ್ತದಾ ।
ಏತದನ್ತೋ ದಶಗ್ರೀವ ಇತಿ ಸಿದ್ಧಾಸ್ತದಾಬ್ರುವನ್ ॥೧೦॥

ಸ ತು ಸೀತಾಂ ವಿಚೇಷ್ಟನ್ತೀಮಙ್ಕೇನಾದಾಯ ರಾವಣಃ ।
ಪ್ರವಿವೇಶ ಪುರೀಂ ಲಙ್ಕಾಂ ರೂಪಿಣೀಂ ಮೃತ್ಯುಮಾತ್ಮನಃ ॥೧೧॥

ಸೋಽಭಿಗಮ್ಯ ಪುರೀಂ ಲಙ್ಕಾಂ ಸುವಿಭಕ್ತಮಹಾಪಥಾಮ್ ।
ಸಂರೂಢಕಕ್ಷ್ಯಾಬಹುಲಂ ಸ್ವಮನ್ತಃಪುರಮಾವಿಶತ್ ॥೧೨॥

ತತ್ರ ತಾಮಸಿತಾಪಾಙ್ಗಾಂ ಶೋಕಮೋಹಪರಾಯಣಾಮ್ ।
ನಿದಧೇ ರಾವಣಃ ಸೀತಾಂ ಮಯೋ ಮಾಯಾಮಿವ ಸ್ತ್ರಿಯಮ್ ॥

ಅಬ್ರವೀಚ್ಚ ದಶಗ್ರೀವಃ ಪಿಶಾಚೀರ್ಘೋರದರ್ಶನಾಃ ।
ಯಥಾ ನೇಮಾಂ ಪುಮಾನ್ ಸ್ತ್ರೀ ವಾ ಸೀತಾಂ ಪಶ್ಯತ್ಯಸಂಮತಃ ॥

ಮುಕ್ತಾಮಣಿಸುವರ್ಣಾನಿ ವಸ್ತ್ರಾಣ್ಯಾಭರಣಾನಿ ಚ ।
ಯದ್ಯದಿಚ್ಛೇತ್ತದೇವಾಸ್ಯಾ ದೇಯಂ ಮಚ್ಛನ್ದತೋ ಯಥಾ ॥೧೫॥

ಯಾ ಚ ವಕ್ಷ್ಯತಿ ವೈದೇಹೀಂ ವಚನಂ ಕಿಂಚಿದಪ್ರಿಯಮ್ ।
ಅಜ್ಞಾನಾದ್ಯದಿ ವಾ ಜ್ಞಾನಾನ್ನ ತಸ್ಯಾ ಜೀವಿತಂ ಪ್ರಿಯಮ್ ॥೧೬॥

ತಥೋಕ್ತ್ವಾ ರಾಕ್ಷಸೀಸ್ತಾಸ್ತು ರಾಕ್ಷಸೇನ್ದ್ರಃ ಪ್ರತಾಪವಾನ್ ।
ನಿಷ್ಕ್ರಮ್ಯಾನ್ತಃಪುರಾತ್ತಸ್ಮಾತ್ಕಿಂ ಕೃತ್ಯಮಿತಿ ಚಿನ್ತಯನ್ ।
ದದರ್ಶಾಷ್ಟೌ ಮಹಾವೀರ್ಯಾನ್ರಾಕ್ಷಸಾನ್ಪಿಶಿತಾಶನಾನ್ ॥೧೭॥

ಸ ತಾನ್ದೃಷ್ಟ್ವಾ ಮಹಾವೀರ್ಯೋ ವರದಾನೇನ ಮೋಹಿತಃ ।
ಉವಾಚೈತಾನಿದಂ ವಾಕ್ಯಂ ಪ್ರಶಸ್ಯ ಬಲವೀರ್ಯತಃ ॥೧೮॥

ನಾನಾಪ್ರಹರಣಾಃ ಕ್ಷಿಪ್ರಮಿತೋ ಗಚ್ಛತ ಸತ್ವರಾಃ ।
ಜನಸ್ಥಾನಂ ಹತಸ್ಥಾನಂ ಭೂತಪೂರ್ವಂ ಖರಾಲಯಮ್ ॥೧೯॥

ತತ್ರೋಷ್ಯತಾಂ ಜನಸ್ಥಾನೇ ಶೂನ್ಯೇ ನಿಹತರಾಕ್ಷಸೇ ।
ಪೌರುಷಂ ಬಲಮಾಶ್ರಿತ್ಯ ತ್ರಾಸಮುತ್ಸೃಜ್ಯ ದೂರತಃ ॥೨೦॥

ಬಲಂ ಹಿ ಸುಮಹದ್ಯನ್ಮೇ ಜನಸ್ಥಾನೇ ನಿವೇಶಿತಮ್ ।
ಸದೂಷಣಖರಂ ಯುದ್ಧೇ ನಿಹತಂ ರಾಮಸಾಯಕೈಃ ॥೨೧॥

ತತಃ ಕ್ರೋಧೋ ಮಮಾಮರ್ಷಾದ್ಧೈರ್ಯಸ್ಯೋಪರಿ ವರ್ತತೇ ।
ವೈರಂ ಚ ಸುಮಹಜ್ಜಾತಂ ರಾಮಂ ಪ್ರತಿ ಸುದಾರುಣಮ್ ॥೨೨॥

ನಿರ್ಯಾತಯಿತುಮಿಚ್ಛಾಮಿ ತಚ್ಚ ವೈರಂ ಮಹಾರಿಪೋಃ ।
ನ ಹಿ ಲಪ್ಸ್ಯಾಮ್ಯಹಂ ನಿದ್ರಾಮಹತ್ವಾ ಸಂಯುಗೇ ರಿಪುಮ್॥೨೩॥

ತಂ ತ್ವಿದಾನೀಮಹಂ ಹತ್ವಾ ಖರದೂಷಣಘಾತಿನಮ್ ।
ರಾಮಂ ಶರ್ಮೋಪಲಪ್ಸ್ಯಾಮಿ ಧನಂ ಲಬ್ಧ್ವೇವ ನಿರ್ಧನಃ ॥೨೪॥

ಜನಸ್ಥಾನೇ ವಸದ್ಭಿಸ್ತು ಭವದ್ಭೀ ರಾಮಮಾಶ್ರಿತಾ ।
ಪ್ರವೃತ್ತಿರುಪನೇತವ್ಯಾ ಕಿಂ ಕರೋತೀತಿ ತತ್ತ್ವತಃ ॥೨೫॥

ಅಪ್ರಮಾದಾಚ್ಚ ಗನ್ತವ್ಯಂ ಸರ್ವೈರಪಿ ನಿಶಾಚರೈಃ ।
ಕರ್ತವ್ಯಶ್ಚ ಸದಾ ಯತ್ನೋ ರಾಘವಸ್ಯ ವಧಂ ಪ್ರತಿ ॥೨೬॥

ಯುಷ್ಮಾಕಂ ಚ ಬಲಜ್ಞೋಽಹಂ ಬಹುಶೋ ರಣಮೂರ್ಧನಿ ।
ಅತಶ್ಚಾಸ್ಮಿಞ್ಜನಸ್ಥಾನೇ ಮಯಾ ಯೂಯಂ ನಿಯೋಜಿತಾಃ॥೨೭॥

ತತಃ ಪ್ರಿಯಂ ವಾಕ್ಯಮುಪೇತ್ಯ ರಾಕ್ಷಸಾ
ಮಹಾರ್ಥಮಷ್ಟಾವಭಿವಾದ್ಯ ರಾವಣಮ್ ।
ವಿಹಾಯ ಲಙ್ಕಾಂ ಸಹಿತಾಃ ಪ್ರತಸ್ಥಿರೇ
ಯತೋ ಜನಸ್ಥಾನಮಲಕ್ಷ್ಯದರ್ಶನಾಃ ॥೨೮॥

ತತಸ್ತು ಸೀತಾಮುಪಲಭ್ಯ ರಾವಣಃ
ಸುಸಂಪ್ರಹೃಷ್ಟಃ ಪರಿಗೃಹ್ಯ ಮೈಥಿಲೀಮ್ ।
ಪ್ರಸಜ್ಯ ರಾಮೇಣ ಚ ವೈರಮುತ್ತಮಂ
ಬಭೂವ ಮೋಹಾನ್ಮುದಿತಃ ಸ ರಾವಣಃ ॥೨೯॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ
ಆದಿಕಾವ್ಯೇ ಅರಣ್ಯಕಾಣ್ಡೇ ಚತುಃಪಞ್ಚಾಶಃ ಸರ್ಗಃ

---

## ಪಞ್ಚಪಞ್ಚಾಶಃ ಸರ್ಗಃ

ಸಂದಿಶ್ಯ ರಾಕ್ಷಸಾನ್ಘೋರಾನ್ರಾವಣೋಽಷ್ಟೌ ಮಹಾಬಲಾನ್ ।
ಆತ್ಮಾನಂ ಬುದ್ಧಿವೈಕ್ಲವ್ಯಾತ್ಕೃತಕೃತ್ಯಮಮನ್ಯತ ॥೧॥

ಸ ಚಿನ್ತಯಾನೋ ವೈದೇಹೀಂ ಕಾಮಬಾಣೈಃ ಪ್ರಪೀಡಿತಃ ।
ಪ್ರವಿವೇಶ ಗೃಹಂ ರಮ್ಯಂ ಸೀತಾಂ ದ್ರಷ್ಟುಮಭಿತ್ವರನ್ ॥೨॥

ಸ ಪ್ರವಿಶ್ಯ ತು ತದ್ವೇಶ್ಮ ರಾವಣೋ ರಾಕ್ಷಸಾಧಿಪಃ ।
ಅಪಶ್ಯದ್ರಾಕ್ಷಸೀಮಧ್ಯೇ ಸೀತಾಂ ದುಃಖಪರಾಯಣಾಮ್ ॥೩॥

ಅಶ್ರುಪೂರ್ಣಮುಖೀಂ ದೀನಾಂ ಶೋಕಭಾರಾಭಿಪೀಡಿತಾಮ್ ।
ವಾಯುವೇಗೈರಿವಾಕ್ರಾನ್ತಾಂ ಮಜ್ಜನ್ತೀಂ ನಾವಮರ್ಣವೇ ॥೪॥

ಮೃಗಯೂಥಪರಿಭ್ರಷ್ಟಾಂ ಮೃಗೀಂ ಶ್ವಭಿರಿವಾವೃತಾಮ್ ।
ಅಧೋಗತಮುಖೀಂ ಸೀತಾಂ ತಾಮಭ್ಯೇತ್ಯ ನಿಶಾಚರಃ ॥೫॥

ತಾಂ ತು ಶೋಕಪರಾಂ ದೀನಾಮವಶಾಂ ರಾಕ್ಷಸಾಧಿಪಃ ।
ಸ ಬಲಾದ್ದರ್ಶಯಾಮಾಸ ಗೃಹಂ ದೇವಗೃಹೋಪಮಮ್ ॥೬॥

ಹರ್ಮ್ಯಪ್ರಾಸಾದಸಂಬಾಧಂ ಸ್ತ್ರೀಸಹಸ್ರನಿಷೇವಿತಮ್ ।
ನಾನಾಪಕ್ಷಿಗಣೈರ್ಜುಷ್ಟಂ ನಾನಾರತ್ನಸಮನ್ವಿತಮ್ ॥೭॥

ದಾನ್ತೈಶ್ಚ ತಾಪನೀಯೈಶ್ಚ ಸ್ಫಾಟಿಕೈ ರಾಜತೈಸ್ತಥಾ ।
ವಜ್ರವೈಡೂರ್ಯಚಿತ್ರೈಶ್ಚ ಸ್ತಮ್ಭೈರ್ದೃಷ್ಟಿಮನೋಹರೈಃ ॥೮॥

ದಿವ್ಯದುನ್ದುಭಿನಿರ್ಘೋಷಂ ತಪ್ತಕಾಞ್ಚನತೋರಣಮ್
ಸೋಪಾನಂ ಕಾಞ್ಚನಂ ಚಿತ್ರಮಾರುರೋಹ ತಯಾ ಸಹ ॥೯॥

ದಾನ್ತಿಕಾ ರಾಜತಾಶ್ಚೈವ ಗವಾಕ್ಷಾಃ ಪ್ರಿಯದರ್ಶನಾಃ ।
ಹೇಮಜಾಲಾವೃತಾಶ್ಚಾಸಂಸ್ತತ್ರ ಪ್ರಾಸಾದಪಙ್ಕ್ತಯಃ ॥೧೦॥

ಸುಧಾಮಣಿವಿಚಿತ್ರಾಣಿ ಭೂಮಿಭಾಗಾನಿ ಸರ್ವಶಃ ।
ದಶಗ್ರೀವಃ ಸ್ವಭವನೇ ಪ್ರಾದರ್ಶಯತ ಮೈಥಿಲೀಮ್ ॥೧೧॥

ದೀರ್ಘಿಕಾಃ ಪುಷ್ಕರಿಣ್ಯಶ್ಚ ನಾನಾವೃಕ್ಷಸಮನ್ವಿತಾಃ ।
ರಾವಣೋ ದರ್ಶಯಾಮಾಸ ಸೀತಾಂ ಶೋಕಪರಾಯಣಾಮ್ ॥೧೨॥

ದರ್ಶಯಿತ್ವಾ ತು ವೈದೇಹ್ಯಾಃ ಕೃತ್ಸ್ನಂ ತದ್ಭವನೋತ್ತಮಮ್ ।
ಉವಾಚ ವಾಕ್ಯಂ ಪಾಪಾತ್ಮಾ ಸೀತಾಂ ಲೋಭಿತುಮಿಚ್ಛಯಾ ॥೧೩॥

ದಶ ರಾಕ್ಷಸಕೋಟ್ಯಶ್ಚ ದ್ವಾವಿಂಶತಿರಥಾಪರಾಃ ।
ವರ್ಜಯಿತ್ವಾ ಜರಾವೃದ್ಧಾನ್ಬಾಲಾಂಶ್ಚ ರಜನೀಚರಾನ್ ॥೧೪॥

ತೇಷಾಂ ಪ್ರಭುರಹಂ ಸೀತೇ ಸರ್ವೇಷಾಂ ಭೀಮಕರ್ಮಣಾಮ್ ।
ಸಹಸ್ರಮೇಕಮೇಕಸ್ಯ ಮಮ ಕಾರ್ಯಪುರಃಸರಮ್ ॥೧೫॥

ಯದಿದಂ ರಾಜತನ್ತ್ರಂ ಮೇ ತ್ವಯಿ ಸರ್ವಂ ಪ್ರತಿಷ್ಠಿತಮ್ ।
ಜೀವಿತಂ ಚ ವಿಶಾಲಾಕ್ಷಿ ತ್ವಂ ಮೇ ಪ್ರಾಣೈರ್ಗರೀಯಸೀ ॥೧೬॥

ಬಹೂನಾಂ ಸ್ತ್ರೀಸಹಸ್ರಾಣಾಂ ಮಮ ಯೋಽಸೌ ಪರಿಗ್ರಹಃ ।
ತಾಸಾಂ ತ್ವಮೀಶ್ವರೀ ಸೀತೇ ಮಮ ಭಾರ್ಯಾ ಭವ ಪ್ರಿಯೇ ॥೧೭॥

ಸಾಧು ಕಿಂ ತೇಽನ್ಯಥಾ ಬುದ್ಧ್ಯಾ ರೋಚಯಸ್ವ ವಚೋ ಮಮ ।
ಭಜಸ್ವ ಮಾಭಿತಪ್ತಸ್ಯ ಪ್ರಸಾದಂ ಕರ್ತುಮರ್ಹಸಿ ॥೧೮॥

ಪರಿಕ್ಷಿಪ್ತಾ ಸಹಸ್ರೇಣ ಲಙ್ಕೇಯಂ ಶತಯೋಜನಾ ।
ನೇಯಂ ಧರ್ಷಯಿತುಂ ಶಕ್ಯಾ ಸೇನ್ದ್ರೈರಪಿ ಸುರಾಸುರೈಃ ॥೧೯॥

ನ ದೇವೇಷು ನ ಯಕ್ಷೇಷು ನ ಗನ್ಧರ್ವೇಷು ಪಕ್ಷಿಷು ।
ಅಹಂ ಪಶ್ಯಾಮಿ ಲೋಕೇಷು ಯೋ ಮೇ ವೀರ್ಯಸಮೋ ಭವೇತ್ ॥

ರಾಜ್ಯಭ್ರಷ್ಟೇನ ದೀನೇನ ತಾಪಸೇನ ಗತಾಯುಷಾ ।
ಕಿಂ ಕರಿಷ್ಯಸಿ ರಾಮೇಣ ಮಾನುಷೇಣಾಲ್ಪತೇಜಸಾ ॥೨೧॥

ಭಜಸ್ವ ಸೀತೇ ಮಾಮೇವ ಭರ್ತಾಹಂ ಸದೃಶಸ್ತವ ।
ಯೌವನಂ ಹ್ಯಧ್ರುವಂ ಭೀರು ರಮಸ್ವೇಹ ಮಯಾ ಸಹ ॥೨೨॥

ದರ್ಶನೇ ಮಾ ಕೃಥಾ ಬುದ್ಧಿಂ ರಾಘವಸ್ಯ ವರಾನನೇ ।
ಕಾಸ್ಯ ಶಕ್ತಿರಿಹಾಗನ್ತುಮಪಿ ಸೀತೇ ಮನೋರಥೈಃ ॥೨೩॥

ನ ಶಕ್ಯೋ ವಾಯುರಾಕಾಶೇ ಪಾಶೈರ್ಬದ್ಧುಂ ಮಹಾಜವಃ ।
ದೀಪ್ಯಮಾನಸ್ಯ ವಾಪ್ಯಗ್ನೇರ್ಗ್ರಹೀತುಂ ವಿಮಲಾಂ ಶಿಖಾಮ್ ॥

ತ್ರಯಾಣಾಮಪಿ ಲೋಕಾನಾಂ ನ ತಂ ಪಶ್ಯಾಮಿ ಶೋಭನೇ ।
ವಿಕ್ರಮೇಣ ನಯೇದ್ಯಸ್ತ್ವಾಂ ಮದ್ಬಾಹುಪರಿಪಾಲಿತಾಮ್ ॥೨೫॥

ಲಙ್ಕಾಯಾಂ ಸುಮಹದ್ರಾಜ್ಯಮಿದಂ ತ್ವಮನುಪಾಲಯ ।
ತ್ವತ್ಪ್ರೇಷ್ಯಾ ಮದ್ವಿಧಾಶ್ಚೈವ ದೇವಾಶ್ಚಾಪಿ ಚರಾಚರಾಃ ॥೨೬॥
ಅಭಿಷೇಕೋದಕಕ್ಲಿನ್ನಾ ತುಷ್ಟಾ ಚ ರಮಯಸ್ವ ಮಾಮ್ ॥೨೭॥

ದುಷ್ಕೃತಂ ಯತ್ಪುರಾ ಕರ್ಮ ವನವಾಸೇನ ತದ್ಗತಮ್ ।
ಯಚ್ಚ ತೇ ಸುಕೃತಂ ಕರ್ಮ ತಸ್ಯೇಹ ಫಲಮಾಪ್ನುಹಿ ॥೨೮॥

ಇಹ ಸರ್ವಾಣಿ ಮಾಲ್ಯಾನಿ ದಿವ್ಯಗನ್ಧಾನಿ ಮೈಥಿಲಿ ।
ಭೂಷಣಾನಿ ಚ ಮುಖ್ಯಾನಿ ಸೇವಸ್ವ ಚ ಮಯಾ ಸಹ ॥೨೯॥

ಪುಷ್ಪಕಂ ನಾಮ ಸುಶ್ರೋಣಿ ಭ್ರಾತುರ್ವೈಶ್ರವಣಸ್ಯ ಮೇ ।
ವಿಮಾನಂ ಸೂರ್ಯಸಂಕಾಶಂ ತರಸಾ ನಿರ್ಜಿತಂ ಮಯಾ ॥೩೦॥

ವಿಶಾಲಂ ರಮಣೀಯಂ ಚ ತದ್ವಿಮಾನಂ ಮನೋಜವಮ್ ।
ತತ್ರ ಸೀತೇ ಮಯಾ ಸಾರ್ಧಂ ವಿಹರಸ್ವ ಯಥಾಸುಖಮ್ ॥೩೧॥

ವದನಂ ಪದ್ಮಸಂಕಾಶಂ ವಿಮಲಂ ಚಾರುದರ್ಶನಮ್ ।
ಶೋಕಾರ್ತಂ ತು ವರಾರೋಹೇ ನ ಭ್ರಾಜತಿ ವರಾನನೇ ॥೩೨॥

ಏವಂ ವದತಿ ತಸ್ಮಿನ್ಸಾ ವಸ್ತ್ರಾನ್ತೇನ ವರಾಙ್ಗನಾ ।
ಪಿಧಾಯೇನ್ದುನಿಭಂ ಸೀತಾ ಮುಖಮಶ್ರೂಣ್ಯವರ್ತಯತ್ ॥೩೩॥

ಧ್ಯಾಯನ್ತೀಂ ತಾಮಿವಾಸ್ವಸ್ಥಾಂ ದೀನಾಂ ಚಿನ್ತಾಹತಪ್ರಭಾಮ್ ।
ಉವಾಚ ವಚನಂ ಪಾಪೋ ರಾವಣೋ ರಜನೀಚರಃ ॥೩೪॥

ಅಲಂ ವ್ರೀಡೇನ ವೈದೇಹಿ ಧರ್ಮಲೋಪಕೃತೇನ ಚ ।
ಆರ್ಷೋಽಯಂ ದೈವನಿಷ್ಯನ್ದೋ ಯಸ್ತ್ವಾಮಭಿಗಮಿಷ್ಯತಿ ॥೩೫॥

ಏತೌ ಪಾದೌ ಮಯಾ ಸ್ನಿಗ್ಧೌ ಶಿರೋಭಿಃ ಪರಿಪೀಡಿತೌ ।
ಪ್ರಸಾದಂ ಕುರು ಮೇ ಕ್ಷಿಪ್ರಂ ವಶ್ಯೋ ದಾಸೋಽಹಮಸ್ಮಿ ಚ ॥

ಇಮಾಃ ಶೂನ್ಯಾ ಮಯಾ ವಾಚಃ ಶುಷ್ಯಮಾಣೇನ ಭಾಷಿತಾಃ ।
ನ ಚಾಪಿ ರಾವಣಃ ಕಾಂಚಿನ್ಮೂರ್ಧ್ನಾ ಸ್ತ್ರೀಂ ಪ್ರಣಮೇತ ಹ ॥೩೭॥

ಏವಮುಕ್ತ್ವಾ ದಶಗ್ರೀವೋ ಮೈಥಿಲೀಂ ಜನಕಾತ್ಮಜಾಮ್ ।
ಕೃತಾನ್ತವಶಮಾಪನ್ನೋ ಮಮೇಯಮಿತಿ ಮನ್ಯತೇ ॥೩೮॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಪಞ್ಚಪಞ್ಚಾಶಃ ಸರ್ಗಃ

---

## ಷಟ್‌ಪಞ್ಚಾಶಃ ಸರ್ಗಃ

ಸಾ ತಥೋಕ್ತಾ ತು ವೈದೇಹೀ ನಿರ್ಭಯಾ ಶೋಕಕರ್ಶಿತಾ ।
ತೃಣಮನ್ತರತಃ ಕೃತ್ವಾ ರಾವಣಂ ಪ್ರತ್ಯಭಾಷತ ॥೧॥

ರಾಜಾ ದಶರಥೋ ನಾಮ ಧರ್ಮಸೇತುರಿವಾಚಲಃ ।
ಸತ್ಯಸನ್ಧಃ ಪರಿಜ್ಞಾತೋ ಯಸ್ಯ ಪುತ್ರಃ ಸ ರಾಘವಃ ॥೨॥

ರಾಮೋ ನಾಮ ಸ ಧರ್ಮಾತ್ಮಾ ತ್ರಿಷು ಲೋಕೇಷು ವಿಶ್ರುತಃ ।
ದೀರ್ಘಬಾಹುರ್ವಿಶಾಲಾಕ್ಷೋ ದೈವತಂ ಸ ಪತಿರ್ಮಮ ॥೩॥

ಇಕ್ಷ್ವಾಕೂಣಾಂ ಕುಲೇ ಜಾತಃ ಸಿಂಹಸ್ಕನ್ಧೋ ಮಹಾದ್ಯುತಿಃ ।
ಲಕ್ಷ್ಮಣೇನ ಸಹ ಭ್ರಾತ್ರಾ ಯಸ್ತೇ ಪ್ರಾಣಾನ್ಹರಿಷ್ಯತಿ ॥೪॥

ಪ್ರತ್ಯಕ್ಷಂ ಯದ್ಯಹಂ ತಸ್ಯ ತ್ವಯಾ ಸ್ಯಾಂ ಧರ್ಷಿತಾ ಬಲಾತ್ ।
ಶಯಿತಾ ತ್ವಂ ಹತಃ ಸಂಖ್ಯೇ ಜನಸ್ಥಾನೇ ಯಥಾ ಖರಃ ॥೫॥

ಯ ಏತೇ ರಾಕ್ಷಸಾಃ ಪ್ರೋಕ್ತಾ ಘೋರರೂಪಾ ಮಹಾಬಲಾಃ ।
ರಾಘವೇ ನಿರ್ವಿಷಾಃ ಸರ್ವೇ ಸುಪರ್ಣೇ ಪನ್ನಗಾ ಯಥಾ ॥೬॥

ತಸ್ಯ ಜ್ಯಾವಿಪ್ರಮುಕ್ತಾಸ್ತೇ ಶರಾಃ ಕಾಞ್ಚನಭೂಷಣಾಃ ।
ಶರೀರಂ ವಿಧಮಿಷ್ಯನ್ತಿ ಗಙ್ಗಾಕೂಲಮಿವೋರ್ಮಯಃ ॥೭॥

ಅಸುರೈರ್ವಾ ಸುರೈರ್ವಾ ತ್ವಂ ಯದ್ಯವಧ್ಯೋಽಸಿ ರಾವಣ ।
ಉತ್ಪಾದ್ಯ ಸುಮಹದ್ವೈರಂ ಜೀವಂಸ್ತಸ್ಯ ನ ಮೋಕ್ಷ್ಯಸೇ ॥೮॥

ಸ ತೇ ಜೀವಿತಶೇಷಸ್ಯ ರಾಘವೋಽನ್ತಕರೋ ಬಲೀ ।
ಪಶೋರ್ಯೂಪಗತಸ್ಯೇವ ಜೀವಿತಂ ತವ ದುರ್ಲಭಮ್ ॥೯॥

ಯದಿ ಪಶ್ಯೇತ್ಸ ರಾಮಸ್ತ್ವಾಂ ರೋಷದೀಪ್ತೇನ ಚಕ್ಷುಷಾ ।
ರಕ್ಷಸ್ತ್ವಮದ್ಯ ನಿರ್ದಗ್ಧೋ ಗಚ್ಛೇಃ ಸದ್ಯಃ ಪರಾಭವಮ್ ॥೧೦॥

ಯಶ್ಚನ್ದ್ರಂ ನಭಸೋ ಭೂಮೌ ಪಾತಯೇನ್ನಾಶಯೇತ ವಾ ।
ಸಾಗರಂ ಶೋಷಯೇದ್ವಾಪಿ ಸ ಸೀತಾಂ ಮೋಚಯೇದಿಹ ॥೧೧॥

ಗತಾಯುಸ್ತ್ವಂ ಗತಶ್ರೀಕೋ ಗತಸತ್ತ್ವೋ ಗತೇನ್ದ್ರಿಯಃ ।
ಲಙ್ಕಾ ವೈಧವ್ಯಸಂಯುಕ್ತಾ ತ್ವತ್ಕೃತೇ ನ ಭವಿಷ್ಯತಿ ॥೧೨॥

ನ ತೇ ಪಾಪಮಿದಂ ಕರ್ಮ ಸುಖೋದರ್ಕಂ ಭವಿಷ್ಯತಿ ।
ಯಾಹಂ ನೀತಾ ವಿನಾಭಾವಂ ಪತಿಪಾರ್ಶ್ವಾತ್ತ್ವಯಾ ವನೇ ॥೧೩॥

ಸ ಹಿ ದೈವತಸಂಯುಕ್ತೋ ಮಮ ಭರ್ತಾ ಮಹಾದ್ಯುತಿಃ ।
ನಿರ್ಭಯೋ ವೀರ್ಯಮಾಶ್ರಿತ್ಯ ಶೂನ್ಯೇ ವಸತಿ ದಣ್ಡಕೇ ॥೧೪॥

ಸ ತೇ ವೀರ್ಯಂ ಬಲಂ ದರ್ಪಮುತ್ಸೇಕಂ ಚ ತಥಾವಿಧಮ್ ।
ವ್ಯಪನೇಷ್ಯತಿ ಗಾತ್ರೇಭ್ಯಃ ಶರವರ್ಷೇಣ ಸಂಯುಗೇ ॥೧೫॥

ಯದಾ ವಿನಾಶೋ ಭೂತಾನಾಂ ದೃಶ್ಯತೇ ಕಾಲಚೋದಿತಃ ।
ತದಾ ಕಾರ್ಯೇ ಪ್ರಮಾದ್ಯನ್ತಿ ನರಾಃ ಕಾಲವಶಂ ಗತಾಃ ॥೧೬॥

ಮಾಂ ಪ್ರಧೃಷ್ಯ ಸ ತೇ ಕಾಲಃ ಪ್ರಾಪ್ತೋಽಯಂ ರಾಕ್ಷಸಾಧಮ ।
ಆತ್ಮನೋ ರಾಕ್ಷಸಾನಾಂ ಚ ವಧಾಯಾನ್ತಃಪುರಸ್ಯ ಚ ॥೧೭॥

ನ ಶಕ್ಯಾ ಯಜ್ಞಮಧ್ಯಸ್ಥಾ ವೇದಿಃ ಸ್ರುಗ್ಭಾಣ್ಡಮಣ್ಡಿತಾ ।
ದ್ವಿಜಾತಿಮನ್ತ್ರಸಂಪೂತಾ ಚಣ್ಡಾಲೇನಾಭಿಮರ್ಶಿತುಮ್ ॥೧೮॥

ತಥಾಹಂ ಧರ್ಮನಿತ್ಯಸ್ಯ ಧರ್ಮಪತ್ನೀ ಪತಿವ್ರತಾ ।
ತ್ವಯಾ ಸ್ಪ್ರಷ್ಟುಂ ನ ಶಕ್ಯಾಸ್ಮಿ ರಾಕ್ಷಸಾಧಮ ಪಾಪಿನಾ ॥೧೯॥

ಕ್ರೀಡನ್ತೀ ರಾಜಹಂಸೇನ ಪದ್ಮಷಣ್ಡೇಷು ನಿತ್ಯದಾ ।
ಹಂಸೀ ಸಾ ತೃಣಷಣ್ಡಸ್ಥಂ ಕಥಂ ಪಶ್ಯೇತ ಮದ್ಗುಕಮ್ ॥೨೦॥

ಇದಂ ಶರೀರಂ ನಿಃಸಜ್ಞಂ ಬನ್ಧ ವಾ ಘಾತಯಸ್ವ ವಾ ।
ನೇದಂ ಶರೀರಂ ರಕ್ಷ್ಯಂ ಮೇ ಜೀವಿತಂ ವಾಪಿ ರಾಕ್ಷಸ ।
ನ ತು ಶಕ್ಷ್ಯಾಮ್ಯುಪಕ್ರೋಶಂ ಪೃಥಿವ್ಯಾಂ ದಾತುಮಾತ್ಮನಃ ॥

ಏವಮುಕ್ತ್ವಾ ತು ವೈದೇಹೀ ಕ್ರೋಧಾತ್ಸುಪರುಷಂ ವಚಃ ।
ರಾವಣಂ ಜಾನಕೀ ತತ್ರ ಪುನರ್ನೋವಾಚ ಕಿಂಚನ ॥೨೨॥

ಸೀತಾಯಾ ವಚನಂ ಶ್ರುತ್ವಾ ಪರುಷಂ ರೋಮಹರ್ಷಣಮ್ ।
ಪ್ರತ್ಯುವಾಚ ತತಃ ಸೀತಾಂ ಭಯಸಂದರ್ಶನಂ ವಚಃ ॥೨೩॥

ಶೃಣು ಮೈಥಿಲಿ ಮದ್ವಾಕ್ಯಂ ಮಾಸಾನ್ದ್ವಾದಶ ಭಾಮಿನಿ ।
ಕಾಲೇನಾನೇನ ನಾಭ್ಯೇಷಿ ಯದಿ ಮಾಂ ಚಾರುಹಾಸಿನಿ ।
ತತಸ್ತ್ವಾಂ ಪ್ರಾತರಾಶಾರ್ಥಂ ಸೂದಾಶ್ಛೇತ್ಸ್ಯನ್ತಿ ಲೇಶಶಃ ॥೨೪॥

ಇತ್ಯುಕ್ತ್ವಾ ಪರುಷಂ ವಾಕ್ಯಂ ರಾವಣಃ ಶತ್ರುರಾವಣಃ ।
ರಾಕ್ಷಸೀಶ್ಚ ತತಃ ಕ್ರುದ್ಧ ಇದಂ ವಚನಮಬ್ರವೀತ್ ॥೨೫॥

ಶೀಘ್ರಮೇವ ಹಿ ರಾಕ್ಷಸ್ಯೋ ವಿರೂಪಾ ಘೋರದರ್ಶನಾಃ ।
ದರ್ಪಮಸ್ಯಾ ವಿನೇಷ್ಯಧ್ವಂ ಮಾಂಸಶೋಣಿತಭೋಜನಾಃ ॥ ೨೬॥

ವಚನಾದೇವ ತಾಸ್ತಸ್ಯ ಸುಘೋರಾ ರಾಕ್ಷಸೀಗಣಾಃ ।
ಕೃತಪ್ರಾಞ್ಜಲಯೋ ಭೂತ್ವಾ ಮೈಥಿಲೀಂ ಪರ್ಯವಾರಯನ್ ॥

ಸ ತಾಃ ಪ್ರೋವಾಚ ರಾಜಾಸೌ ರಾವಣೋ ಘೋರದರ್ಶನಃ ।
ಪ್ರಚಾಲ್ಯ ಚರಣೋತ್ಕರ್ಷೈರ್ದಾರಯನ್ನಿವ ಮೇದಿನೀಮ್ ॥ ೨೮॥

ಅಶೋಕವನಿಕಾಮಧ್ಯೇ ಮೈಥಿಲೀ ನೀಯತಾಮಿಯಮ್ ।
ತತ್ರೇಯಂ ರಕ್ಷ್ಯತಾಂ ಗೂಢಂ ಯುಷ್ಮಾಭಿಃ ಪರಿವಾರಿತಾ ॥ ೨೯॥

ತತ್ರೈನಾಂ ತರ್ಜನೈರ್ಘೋರೈಃ ಪುನಃ ಸಾನ್ತ್ವೈಶ್ಚ ಮೈಥಿಲೀಮ್ ।
ಆನಯಧ್ವಂ ವಶಂ ಸರ್ವಾ ವನ್ಯಾಂ ಗಜವಧೂಮಿವ ॥ ೩೦॥

ಇತಿ ಪ್ರತಿಸಮಾದಿಷ್ಟಾ ರಾಕ್ಷಸ್ಯೋ ರಾವಣೇನ ತಾಃ ।
ಅಶೋಕವನಿಕಾಂ ಜಗ್ಮುರ್ಮೈಥಿಲೀಂ ಪ್ರತಿಗೃಹ್ಯ ತು ॥ ೩೧॥

ಸರ್ವಕಾಮಫಲೈರ್ವೃಕ್ಷೈರ್ನಾನಾಪುಷ್ಪಫಲೈರ್ವೃತಾಮ್ ।
ಸರ್ವಕಾಲಮದೈಶ್ಚಾಪಿ ದ್ವಿಜೈಃ ಸಮುಪಸೇವಿತಾಮ್ ॥ ೩೨॥

ಸಾ ತು ಶೋಕಪರೀತಾಙ್ಗೀ ಮೈಥಿಲೀ ಜನಕಾತ್ಮಜಾ ।
ರಾಕ್ಷಸೀವಶಮಾಪನ್ನಾ ವ್ಯಾಘ್ರೀಣಾಂ ಹರಿಣೀ ಯಥಾ ॥ ೩೩॥

ಶೋಕೇನ ಮಹತಾ ಗ್ರಸ್ತಾ ಮೈಥಿಲೀ ಜನಕಾತ್ಮಜಾ ।
ನ ಶರ್ಮ ಲಭತೇ ಭೀರುಃ ಪಾಶಬದ್ಧಾ ಮೃಗೀ ಯಥಾ ॥ ೩೪॥

ನ ವಿನ್ದತೇ ತತ್ರ ತು ಶರ್ಮ ಮೈಥಿಲೀ
ವಿರೂಪನೇತ್ರಾಭಿರತೀವ ತರ್ಜಿತಾ ।
ಪತಿಂ ಸ್ಮರನ್ತೀ ದಯಿತಂ ಚ ದೈವತಂ
ವಿಚೇತನಾಭೂದ್ಭಯಶೋಕಪೀಡಿತಾ ॥ ೩೫॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಷಟ್‌ಪಞ್ಚಾಶಃ ಸರ್ಗಃ

## ಪ್ರಕ್ಷಿಪ್ತಃ ಸರ್ಗಃ

ಪ್ರವೇಶಿತಾಯಾಂ ಸೀತಾಯಾಂ ಲಙ್ಕಾಂ ಪ್ರತಿ ಪಿತಾಮಹಃ ।
ತದಾ ಪ್ರೋವಾಚ ದೇವೇನ್ದ್ರಂ ಪರಿತುಷ್ಟಂ ಶತಕ್ರತುಮ್ ॥೧॥

ತ್ರೈಲೋಕ್ಯಸ್ಯ ಹಿತಾರ್ಥಾಯ ರಕ್ಷಸಾಮಹಿತಾಯ ಚ ।
ಲಙ್ಕಾಂ ಪ್ರವೇಶಿತಾ ಸೀತಾ ರಾವಣೇನ ದುರಾತ್ಮನಾ ॥೨॥

ಪತಿವ್ರತಾ ಮಹಾಭಾಗಾ ನಿತ್ಯಂ ಚೈವ ಸುಖೈಧಿತಾ ।
ಅಪಶ್ಯನ್ತೀ ಚ ಭರ್ತಾರಂ ಪಶ್ಯನ್ತೀ ರಾಕ್ಷಸೀಜನಮ್ ।
ರಾಕ್ಷಸೀಭಿಃ ಪರಿವೃತಾ ಭರ್ತೃದರ್ಶನಲಾಲಸಾ ॥೩॥

ನಿವಿಷ್ಟಾ ಹಿ ಪುರೀ ಲಙ್ಕಾ ತೀರೇ ನದನದೀಪತೇಃ ।
ಕಥಂ ಜ್ಞಾಸ್ಯತಿ ತಾಂ ರಾಮಸ್ತತ್ರಸ್ಥಾಂ ತಾಮನಿನ್ದಿತಾಮ್ ॥೪॥

ದುಃಖಂ ಸಂಚಿನ್ತಯನ್ತೀ ಸಾ ಬಹುಶಃ ಪರಿದುರ್ಲಭಾ ।
ಪ್ರಾಣಯಾತ್ರಾಮಕುರ್ವಾಣಾ ಪ್ರಾಣಾಂಸ್ತ್ಯಕ್ಷ್ಯತ್ಯಸಂಶಯಮ್॥

ಸ ಭೂಯಃ ಸಂಶಯೋ ಜಾತಃ ಸೀತಾಯಾಃ ಪ್ರಾಣಸಂಕ್ಷಯೇ ।
ಸ ತ್ವಂ ಶೀಘ್ರಮಿತೋ ಗತ್ವಾ ಸೀತಾಂ ಪಶ್ಯ ಶುಭಾನನಾಮ್ ।
ಪ್ರವಿಶ್ಯ ನಗರೀಂ ಲಙ್ಕಾಂ ಪ್ರಯಚ್ಛ ಹವಿರುತ್ತಮಮ್ ॥೬॥

ಏವಮುಕ್ತೋಽಥ ದೇವೇನ್ದ್ರಃ ಪುರೀಂ ರಾವಣಪಾಲಿತಾಮ್ ।
ಆಗಚ್ಛನ್ನಿದ್ರಯಾ ಸಾರ್ಧಂ ಭಗವಾನ್ಪಾಕಶಾಸನಃ ॥೭॥

ನಿದ್ರಾಂ ಚೋವಾಚ ಗಚ್ಛ ತ್ವಂ ರಾಕ್ಷಸಾನ್ಸಂಪ್ರಮೋಹಯ ॥೮॥

ಸಾ ತಥೋಕ್ತಾ ಮಘವತಾ ದೇವೀ ಪರಮಹರ್ಷಿತಾ ।
ದೇವಕಾರ್ಯಾರ್ಥಸಿಧ್ಯರ್ಥಂ ಪ್ರಾಮೋಹಯತ ರಾಕ್ಷಸಾನ್ ॥೯॥

ಏತಸ್ಮಿನ್ನನ್ತರೇ ದೇವಃ ಸಹಸ್ರಾಕ್ಷಃ ಶಚೀಪತಿಃ ।
ಆಸಸಾದ ವನಸ್ಥಾಂ ತಾಂ ವಚನಂ ಚೇದಮಬ್ರವೀತ್ ॥೧೦॥

ದೇವರಾಜೋಽಸ್ಮಿ ಭದ್ರಂ ತೇ ಇಹ ಚಾಸ್ಮಿ ಶುಚಿಸ್ಮಿತೇ ।
ಅಹಂ ತ್ವಾಂ ಕಾರ್ಯಸಿಧ್ಯರ್ಥಂ ರಾಘವಸ್ಯ ಮಹಾತ್ಮನಃ ।
ಸಾಹಾಯ್ಯಂ ಕಲ್ಪಯಿಷ್ಯಾಮಿ ಮಾ ಶುಚೋ ಜನಕಾತ್ಮಜೇ ॥೧೧॥

ಮತ್ಪ್ರಸಾದಾತ್ಸಮುದ್ರಂ ಸ ತರಿಷ್ಯತಿ ಬಲೈಃ ಸಹ ।
ಮಯೈವೇಹ ಚ ರಾಕ್ಷಸ್ಯೋ ಮಾಯಯಾ ಮೋಹಿತಾಃ ಶುಭೇ ॥

ತಸ್ಮಾದನ್ನಮಿದಂ ಸೀತೇ ಹವಿಷ್ಯಾನ್ನಮಹಂ ಸ್ವಯಮ್ ।
ಸ ತ್ವಾಂ ಸಂಗೃಹ್ಯ ವೈದೇಹಿ ಆಗತಃ ಸಹ ನಿದ್ರಯಾ ॥೧೩॥

ಏತದತ್ಸ್ಯಸಿ ಮದ್ಧಸ್ತಾನ್ನ ತ್ವಾಂ ಬಾಧಿಷ್ಯತೇ ಶುಭೇ ।
ಕ್ಷುಧಾ ತೃಷಾ ಚ ರಮ್ಭೋರು ವರ್ಷಾಣಾಮಯುತೈರಪಿ ॥೧೪॥

ಏವಮುಕ್ತಾ ತು ದೇವೇನ್ದ್ರಮುವಾಚ ಪರಿಶಙ್ಕಿತಾ ॥೧೫॥

ಕಥಂ ಜಾನಾಮಿ ದೇವೇನ್ದ್ರಂ ತ್ವಾಮಿಹಸ್ಥಂ ಶಚೀಪತಿಮ್ ।
ದೇವಲಿಙ್ಗಾನಿ ದೃಷ್ಟಾನಿ ರಾಮಲಕ್ಷ್ಮಣಸಂನಿಧೌ ।
ತಾನಿ ದರ್ಶಯ ದೇವೇನ್ದ್ರ ಯದಿ ತ್ವಂ ದೇವರಾಟ್ ಸ್ವಯಮ್ ॥

ಸೀತಾಯಾ ವಚನಂ ಶ್ರುತ್ವಾ ತಥಾ ಚಕ್ರೇ ಶಚೀಪತಿಃ ।
ಪೃಥಿವೀಂ ನಾಸ್ಪೃಶತ್ಪದ್ಭ್ಯಾಮನಿಮೇಷೇಕ್ಷಣಾನಿ ಚ ।
ಅರಜೋಽಮ್ಬರಧಾರೀ ಚ ನಮ್ಲಾನಕುಸುಮಸ್ತಥಾ ॥೧೭॥

ತಂ ಜ್ಞಾತ್ವಾ ಲಕ್ಷಣೈಃ ಸೀತಾ ವಾಸವಂ ಪರಿಹರ್ಷಿತಾ ।
ಉವಾಚ ವಾಕ್ಯಂ ರುದತೀ ಭಗವದ್ರಾಘವಂ ಪ್ರತಿ ॥೧೮॥

ಸಹ ಭ್ರಾತ್ರಾ ಮಹಾಬಾಹುರ್ದಿಷ್ಟ್ಯಾ ಮೇ ಶ್ರುತಿಮಾಗತಃ ।
ಯಥಾ ಮೇ ಶ್ವಶುರೋ ರಾಜಾ ಯಥಾ ಚ ಮಿಥಿಲಾಧಿಪಃ ।
ತಥಾ ತ್ವಾಮದ್ಯ ಪಶ್ಯಾಮಿ ಸನಾಥೋ ಮೇ ಪತಿಸ್ತ್ವಯಾ ॥೧೯॥

ತವಾಜ್ಞಯಾ ಚ ದೇವೇನ್ದ್ರ ಪಯೋಭೂತಮಿದಂ ಹವಿಃ ।
ಅಶಿಷ್ಯಾಮಿ ತ್ವಯಾ ದತ್ತಂ ರಘೂಣಾಂ ಕುಲವರ್ಧನಮ್ ॥೨೦॥

ಇನ್ದ್ರಹಸ್ತಾದ್ಗೃಹೀತ್ವಾ ತತ್ಪಾಯಸಂ ಸಾ ಶುಚಿಸ್ಮಿತಾ ।
ನ್ಯವೇದಯತ ಭರ್ತ್ರೇ ಸಾ ಲಕ್ಷ್ಮಣಾಯ ಚ ಮೈಥಿಲೀ ॥೨೧॥

ಯದಿ ಜೀವತಿ ಮೇ ಭರ್ತಾ ಸಹ ಭ್ರಾತ್ರಾ ಮಹಾಬಲಃ ।
ಇದಮಸ್ತು ತಯೋರ್ಭಕ್ತ್ಯಾ ತದಾಶ್ನಾತ್ಪಾಯಸಂ ಸ್ವಯಮ್ ॥

ಇತೀವ ತತ್ಪ್ರಾಶ್ಯ ಹವಿರ್ವರಾನನಾ
ಜಹೌ ಕ್ಷುಧಾದುಃಖಸಮುದ್ಭವಂ ಚ ತಮ್ ।
ಇನ್ದ್ರಾತ್ಪ್ರವೃತ್ತಿಮುಪಲಭ್ಯ ಜಾನಕೀ
ಕಾಕುತ್ಸ್ಥಯೋಃ ಪ್ರೀತಮನಾ ಬಭೂವ ॥೨೩॥

ಸ ಚಾಪಿ ಶಕ್ರಸ್ತ್ರಿದಿವಾಲಯಂ ತದಾ
ಪ್ರೀತೋ ಯಯೌ ರಾಘವಕಾರ್ಯಸಿದ್ಧಯೇ ।
ಆಮನ್ತ್ರ್ಯ ಸೀತಾಂ ಸ ತತೋ ಮಹಾತ್ಮಾ
ಜಗಾಮ ನಿದ್ರಾಸಹಿತಃ ಸ್ವಮಾಲಯಮ್ ॥೨೪॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ
ಆದಿಕಾವ್ಯೇ ಅರಣ್ಯಕಾಣ್ಡೇ ಪ್ರಕ್ಷಿಪ್ತಃ ಸರ್ಗಃ

---

## ಸಪ್ತಪಞ್ಚಾಶಃ ಸರ್ಗಃ

ರಾಕ್ಷಸಂ ಮೃಗರೂಪೇಣ ಚರನ್ತಂ ಕಾಮರೂಪಿಣಮ್ ।
ನಿಹತ್ಯ ರಾಮೋ ಮಾರೀಚಂ ತೂರ್ಣಂ ಪಥಿ ನಿವರ್ತತೇ ॥೧॥

ತಸ್ಯ ಸಂತ್ವರಮಾಣಸ್ಯ ದ್ರಷ್ಟುಕಾಮಸ್ಯ ಮೈಥಿಲೀಮ್ ।
ಕ್ರೂರಸ್ವನೋಽಥ ಗೋಮಾಯುರ್ವಿನನಾದಾಸ್ಯ ಪೃಷ್ಠತಃ ॥೨॥

ಸ ತಸ್ಯ ಸ್ವರಮಾಜ್ಞಾಯ ದಾರುಣಂ ರೋಮಹರ್ಷಣಮ್ ।
ಚಿನ್ತಯಾಮಾಸ ಗೋಮಾಯೋಃ ಸ್ವರೇಣ ಪರಿಶಙ್ಕಿತಃ ॥೩॥

ಅಶುಭಂ ಬತ ಮನ್ಯೇಽಹಂ ಗೋಮಾಯುರ್ವಾಶ್ಯತೇ ಯಥಾ ।
ಸ್ವಸ್ತಿ ಸ್ಯಾದಪಿ ವೈದೇಹ್ಯಾ ರಾಕ್ಷಸೈರ್ಭಕ್ಷಣಂ ವಿನಾ ॥೪॥

ಮಾರೀಚೇನ ತು ವಿಜ್ಞಾಯ ಸ್ವರಮಾಲಮ್ಬ್ಯ ಮಾಮಕಮ್ ।
ವಿಕ್ರುಷ್ಟಂ ಮೃಗರೂಪೇಣ ಲಕ್ಷ್ಮಣಃ ಶೃಣುಯಾದ್ಯದಿ ॥೫॥

ಸ ಸೌಮಿತ್ರಿಃ ಸ್ವರಂ ಶ್ರುತ್ವಾ ತಾಂ ಚ ಹಿತ್ವಾಥ ಮೈಥಿಲೀಮ್ ।
ತಯೈವ ಪ್ರಹಿತಃ ಕ್ಷಿಪ್ರಂ ಮತ್ಸಕಾಶಮಿಹೈಷ್ಯತಿ ॥೬॥

ರಾಕ್ಷಸೈಃ ಸಹಿತೈರ್ನೂನಂ ಸೀತಾಯಾ ಈಪ್ಸಿತೋ ವಧಃ ।
ಕಾಞ್ಚನಶ್ಚ ಮೃಗೋ ಭೂತ್ವಾ ವ್ಯಪನೀಯಾಶ್ರಮಾತ್ತು ಮಾಮ್॥

ದೂರಂ ನೀತ್ವಾ ತು ಮಾರೀಚೋ ರಾಕ್ಷಸೋಽಭೂಚ್ಛರಾಹತಃ ।
ಹಾ ಲಕ್ಷ್ಮಣ ಹತೋಽಸ್ಮೀತಿ ಯದ್ವಾಕ್ಯಂ ವ್ಯಾಜಹಾರ ಹ ॥೮॥

ಅಪಿ ಸ್ವಸ್ತಿ ಭವೇತ್ತಾಭ್ಯಾಂ ರಹಿತಾಭ್ಯಾಂ ಮಹಾವನೇ ।
ಜನಸ್ಥಾನನಿಮಿತ್ತಂ ಹಿ ಕೃತವೈರೋಽಸ್ಮಿ ರಾಕ್ಷಸೈಃ ॥೯॥

ನಿಮಿತ್ತಾನಿ ಚ ಘೋರಾಣಿ ದೃಶ್ಯನ್ತೇಽದ್ಯ ಬಹೂನಿ ಚ ।
ಇತ್ಯೇವಂ ಚಿನ್ತಯನ್ರಾಮಃ ಶ್ರುತ್ವಾ ಗೋಮಾಯುನಿಃಸ್ವನಮ್ ॥

ನಿವರ್ತಮಾನಸ್ತ್ವರಿತೋ ಜಗಾಮಾಶ್ರಮಮಾತ್ಮವಾನ್ ।
ಆತ್ಮನಶ್ಚಾಪನಯನಾನ್ಮೃಗರೂಪೇಣ ರಕ್ಷಸಾ ॥೧೧॥

ಆಜಗಾಮ ಜನಸ್ಥಾನಂ ರಾಘವಃ ಪರಿಶಙ್ಕಿತಃ ॥೧೨॥

ತಂ ದೀನಮನಸೋ ದೀನಮಾಸೇದುರ್ಮೃಗಪಕ್ಷಿಣಃ ।
ಸವ್ಯಂ ಕೃತ್ವಾ ಮಹಾತ್ಮಾನಂ ಘೋರಾಂಶ್ಚ ಸಸೃಜುಃ ಸ್ವರಾನ್ ॥

ತಾನಿ ದೃಷ್ಟ್ವಾ ನಿಮಿತ್ತಾನಿ ಮಹಾಘೋರಾಣಿ ರಾಘವಃ ।
ನ್ಯವರ್ತತಾಥ ತ್ವರಿತೋ ಜವೇನಾಶ್ರಮಮಾತ್ಮನಃ ॥೧೪॥

ಸ ತು ಸೀತಾಂ ವರಾರೋಹಾಂ ಲಕ್ಷ್ಮಣಂ ಚ ಮಹಾಬಲಮ್ ।
ಆಜಗಾಮ ಜನಸ್ಥಾನಂ ಚಿನ್ತಯನ್ನೇವ ರಾಘವಃ ॥೧೫॥

ತತೋ ಲಕ್ಷ್ಮಣಮಾಯಾನ್ತಂ ದದರ್ಶ ವಿಗತಪ್ರಭಮ್ ।
ತತೋಽವಿದೂರೇ ರಾಮೇಣ ಸಮೀಯಾಯ ಸ ಲಕ್ಷ್ಮಣಃ ॥೧೬॥

ವಿಷಣ್ಣಃ ಸುವಿಷಣ್ಣೇನ ದುಃಖಿತೋ ದುಃಖಭಾಗಿನಾ ॥೧೭॥

ಸಂಜಗರ್ಹೇಽಥ ತಂ ಭ್ರಾತಾ ಜ್ಯೇಷ್ಠೋ ಲಕ್ಷ್ಮಣಮಾಗತಮ್ ।
ವಿಹಾಯ ಸೀತಾಂ ವಿಜನೇ ವನೇ ರಾಕ್ಷಸಸೇವಿತೇ ॥೧೮॥

ಗೃಹೀತ್ವಾ ಚ ಕರಂ ಸವ್ಯಂ ಲಕ್ಷ್ಮಣಂ ರಘುನನ್ದನಃ ।
ಉವಾಚ ಮಧುರೋದರ್ಕಮಿದಂ ಪರುಷಮಾರ್ತವತ್ ॥೧೯॥

ಅಹೋ ಲಕ್ಷ್ಮಣ ಗರ್ಹ್ಯಂ ತೇ ಕೃತಂ ಯಸ್ತ್ವಂ ವಿಹಾಯ ತಾಮ್ ।
ಸೀತಾಮಿಹಾಗತಃ ಸೌಮ್ಯ ಕಚ್ಚಿತ್ಸ್ವಸ್ತಿ ಭವೇದಿಹ ॥೨೦॥

ನ ಮೇಽಸ್ತಿ ಸಂಶಯೋ ವೀರ ಸರ್ವಥಾ ಜನಕಾತ್ಮಜಾ ।
ವಿನಷ್ಟಾ ಭಕ್ಷಿತಾ ವಾಪಿ ರಾಕ್ಷಸೈರ್ವನಚಾರಿಭಿಃ ।
ಅಶುಭಾನ್ಯೇವ ಭೂಯಿಷ್ಠಂ ಯಥಾ ಪ್ರಾದುರ್ಭವನ್ತಿ ಮೇ ॥೨೧॥

ಅಪಿ ಲಕ್ಷ್ಮಣ ಸೀತಾಯಾಃ ಸಾಮಗ್ರ್ಯಂ ಪ್ರಾಪ್ನುಯಾವಹೇ ।
ಜೀವನ್ತ್ಯಾಃ ಪುರುಷವ್ಯಾಘ್ರ ಸುತಾಯಾ ಜನಕಸ್ಯ ವೈ ॥೨೨॥

ಯಥಾ ವೈ ಮೃಗಸಂಘಾಶ್ಚ ಗೋಮಾಯುಶ್ಚೈವ ಭೈರವಮ್ ।
ವಾಶ್ಯನ್ತೇ ಶಕುನಾಶ್ಚಾಪಿ ಪ್ರದೀಪ್ತಾಮಭಿತೋ ದಿಶಮ್ ।
ಅಪಿ ಸ್ವಸ್ತಿ ಭವೇತ್ತಸ್ಯಾ ರಾಜಪುತ್ರ್ಯಾ ಮಹಾಬಲ ॥೨೩॥

ಇದಂ ಹಿ ರಕ್ಷೋಮೃಗಸಂನಿಕಾಶಂ
ಪ್ರಲೋಭ್ಯ ಮಾಂ ದೂರಮನುಪ್ರಯಾತಮ್ ।
ಹತಂ ಕಥಂಚಿನ್ಮಹತಾ ಶ್ರಮೇಣ
ಸ ರಾಕ್ಷಸೋಽಭೂನ್ಮ್ರಿಯಮಾಣ ಏವ ॥೨೪॥

ಮನಶ್ಚ ಮೇ ದೀನಮಿಹಾಪ್ರಹೃಷ್ಟಂ
ಚಕ್ಷುಶ್ಚ ಸವ್ಯಂ ಕುರುತೇ ವಿಕಾರಮ್ ।

ಅಸಂಶಯಂ ಲಕ್ಷ್ಮಣ ನಾಸ್ತಿ ಸೀತಾ
ಹೃತಾ ಮೃತಾ ವಾ ಪಥಿ ವರ್ತತೇ ವಾ ॥೨೫॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಅರಣ್ಯಕಾಣ್ಡೇ ಸಪ್ತಪಞ್ಚಾಶಃ ಸರ್ಗಃ

---

## ಅಷ್ಟಪಞ್ಚಾಶಃ ಸರ್ಗಃ

ಸ ದೃಷ್ಟ್ವಾ ಲಕ್ಷ್ಮಣಂ ದೀನಂ ಶೂನ್ಯೇ ದಶರಥಾತ್ಮಜಃ ।
ಪರ್ಯಪೃಚ್ಛತ ಧರ್ಮಾತ್ಮಾ ವೈದೇಹೀಮಾಗತಂ ವಿನಾ ॥೧॥

ಶ್ರೀಕೃಷ್ಣಾರ್ಪಣಮಸ್ತು ಶ್ರೀ ಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



ಸೀತಾ-ಲಕ್ಷ್ಮಣ-ಭರತ-ಶತ್ರುಘ್ನ-ಹನೂಮತ್ಸಮೇತ
ಶ್ರೀರಾಮಚಂದ್ರಾರ್ಪಣಮಸ್ತು.

ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



# ಶ್ರೀಮದ್ವಾಲ್ಮೀಕಿರಾಮಾಯಣ-ಅಯೋಧ್ಯಾಕಾಂಡ
## ನಾಲ್ಕನೆಯ ಸಂಪುಟ

ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಙ್ಗವಮ್ ॥

ಅಯೋಧ್ಯಾಕಾಂಡ — ೧೧೩ನೆಯ ಸರ್ಗ

### ಚಿತ್ರಕೂಟದಿಂದ ಹೊರಟ ಭರತನು ಮತ್ತೊಮ್ಮೆ ಭರದ್ವಾಜರನ್ನು ಸಂದರ್ಶಿಸಿ ಅಯೋಧ್ಯೆಗೆ ತೆರಳಿದುದು

ತತಃ ಶಿರಸಿ ಕೃತ್ವಾ ತು ಪಾದುಕೇ ಭರತಸ್ತದಾ ।
ಆರುರೋಹ ರಥಂ ಹೃಷ್ಟಃ ಶತ್ರುಘ್ನೇನ ಸಮನ್ವಿತಃ ॥೧॥

ಅನಂತರ ದಿವ್ಯಪಾದುಕೆಗಳು ದೊರೆತದ್ದರಿಂದ ಸಂತುಷ್ಟನಾದ ಭರತನು ಪಾದುಕೆಗಳನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ಶತ್ರುಘ್ನನೊಡನೆ ರಥವನ್ನು ಹತ್ತಿದನು.

ವಸಿಷ್ಠರೂ, ವಾಮದೇವರೂ, ದೃಢವ್ರತರಾದ ಜಾಬಾಲಿಗಳೂ, ಕಾರ್ಯಗಳನ್ನು ಸಂಪೂರ್ಣವಾಗಿ ವಿವೇಚಿಸಿ ನಿರ್ಧರಿಸುವ ನೈಪುಣ್ಯದಿಂದ ಪೂಜಿತರಾದ ಮಂತ್ರಿಗಳೂ – ರಥದ ಮುಂಭಾಗದಲ್ಲಿ ಪ್ರಯಾಣಮಾಡುತ್ತಿದ್ದರು. ಅವರೆಲ್ಲರೂ ಚಿತ್ರಕೂಟಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿ ರಮಣೀಯವಾದ ಮಂದಾಕಿನೀನದಿಯನ್ನು ದಾಟುವ ಸಲುವಾಗಿ ಪೂರ್ವಾಭಿಮುಖವಾಗಿ ಪ್ರಯಾಣಮಾಡಿದರು. ಆ ಸಮಯದಲ್ಲಿ ಭರತನು ರಮ್ಯವಾಗಿದ್ದ ಪರ್ವತದ ಮೇಲಿದ್ದ ವಿಧ-ವಿಧವಾಗಿದ್ದ ಸಾವಿರಾರು ಗೈರಿಕಾದಿ ಧಾತುಗಳನ್ನು ನೋಡುತ್ತಾ ಚಿತ್ರಕೂಟಪರ್ವತದ ಪಕ್ಕದಲ್ಲಿಯೇ ಹೋಗು

ತ್ತಿದ್ದನು. ಹಾಗೆ ಪ್ರಯಾಣಮಾಡುತ್ತಿದ್ದಾಗ ಚಿತ್ರಕೂಟಪರ್ವತಕ್ಕೆ ಸ್ವಲ್ಪ ದೂರದಲ್ಲಿಯೇ ಭರದ್ವಾಜಮಹರ್ಷಿಗಳು ವಾಸಮಾಡುತ್ತಿದ್ದ ಆಶ್ರಮವನ್ನು ನೋಡಿದನು. *

ಬುದ್ಧಿವಂತನಾದ ಭರತನು ಆಶ್ರಮದ ಬಳಿಗೆ ಬಂದು ರಥದಿಂದಿಳಿದು ಆಸನಾರೂಢರಾಗಿ ಕುಳಿತಿದ್ದ ಭರದ್ವಾಜರ ಪಾದಾರವಿಂದಗಳಿಗೆ ನಮಸ್ಕರಿಸಿದನು.

ಭರತನು ಬಂದುದನ್ನು ನೋಡಿ ಹೆಚ್ಚು ಸಂತೋಷಗೊಂಡ ಭರದ್ವಾಜರು ಪ್ರಶ್ನಿಸಿದರು :

' ಅಪಿ ಕೃತ್ಯಂ ಕೃತಂ ತಾತ ರಾಮೇಣ ಚ ಸಮಾಗತಮ್ ॥೭॥

ಮಗು ! ರಾಮನನ್ನು ಸಂದರ್ಶಿಸಿದೆಯಾ ? ನೀನು ಹೋದ ಕಾರ್ಯವು ಕೈಗೂಡಿತೇ ? '

ಭರದ್ವಾಜರು ಹೀಗೆ ಪ್ರಶ್ನಿಸಲಾಗಿ ಭ್ರಾತೃವತ್ಸಲನಾದ ಭರತನು ಉತ್ತರಿಸಿದನು :

" ಮಹರ್ಷಿಗಳೇ ! ದೃಢವಿಕ್ರಮನಾದ ನಮ್ಮಣ್ಣನನ್ನು ನಾನೂ ಮತ್ತು ಗುರುಗಳಾದ ವಸಿಷ್ಠರೂ ಅಯೋಧ್ಯೆಗೆ ಹಿಂದಿರುಗುವಂತೆ ಬಹಳವಾಗಿ ಪ್ರಾರ್ಥಿಸಿದೆವು. ಆದರಿಂದ ಪರಮಪ್ರೀತನಾದ ಶ್ರೀರಾಮನು ವಸಿಷ್ಠರಿಗೆ ಹೇಳಿದನು :

---

* ೯೨ನೆಯ ಸರ್ಗದ ೧೦ನೆಯ ಶ್ಲೋಕದಲ್ಲಿ ಭರದ್ವಾಜರು " ಭರತಾರ್ಧತೃತೀಯೇಷು " ಎಂದು ಹೇಳುತ್ತಾ ತಮ್ಮ ಆಶ್ರಮಕ್ಕೂ ಚಿತ್ರಕೂಟಪರ್ವತಕ್ಕೂ ಎರಡೂವರೆ ಯೋಜನಗಳಿವೆಯೆಂಬುದನ್ನು ಸ್ಪಷ್ಟವಾಗಿ ಹೇಳಿರುತ್ತಾರೆ. ಆದರೆ ಇಲ್ಲಿ " ಆದೂರಾಚ್ಚಿತ್ರಕೂಟಸ್ಯ " ಎಂದು ಹೇಳಿರುವುದರಿಂದ ಭರದ್ವಾಜಾಶ್ರಮವು ಚಿತ್ರಕೂಟಪರ್ವತಕ್ಕೆ ಸಮೀಪವಿರುವುದೆಂಬ ಅರ್ಥಕೊಡುತ್ತದೆ. ಇದಕ್ಕೆ ಒಬ್ಬೊಬ್ಬ ವ್ಯಾಖ್ಯಾನಕಾರರೂ ಒಂದೊಂದು ರೀತಿಯಾಗಿ ಎರಡಕ್ಕೂ ಸಮನ್ವಯಮಾಡಲು ಪ್ರಯತ್ನಿಸಿದ್ದಾರೆ. (೧) ರಾಮ-ಭರತರ ಸಂವಾದವನ್ನು ಶಿಷ್ಯರ ಮೂಲಕ ತಿಳಿಯಲೋಸುಗ ಭರದ್ವಾಜರು ಚಿತ್ರಕೂಟಪರ್ವತದ ಸಮೀಪದಲ್ಲಿದ್ದ ಒಂದು ಆಶ್ರಮದಲ್ಲಿ ತಾತ್ಕಾಲಿಕವಾಗಿ ಬಿಡಾರ ಮಾಡಿದ್ದರು. (೨) ಭರತನ ರಥವು ಚಿತ್ರಕೂಟಪರ್ವತದ ಮೇಲಿದ್ದುದರಿಂದ ಪರ್ವತದ ಬುಡದಲ್ಲಿದ್ದ ಭರದ್ವಾಜಾಶ್ರಮವು ಬಹಳ ಸಮೀಪದಲ್ಲಿರುವಂತೆ ಕಾಣುತ್ತಿದ್ದಿತು. (೩) ಚಿತ್ರಕೂಟಪರ್ವತದ ಸೌಂದರ್ಯವನ್ನು ವೀಕ್ಷಿಸುತ್ತಿದ್ದ ಭರತನಿಗೆ ಎರಡೂವರೆ

ಪಿತುಃ ಪ್ರತಿಜ್ಞಾಂ ತಾಮೇವ ಪಾಲಯಿಷ್ಯಾಮಿ ತತ್ತ್ವತಃ ।
ಚತುರ್ದಶ ಹಿ ವರ್ಷಾಣಿ ಯಾ ಪ್ರತಿಜ್ಞಾ ಪಿತುರ್ಮಮ ॥೧೦॥

"ನಮ್ಮ ತಂದೆಯು–ತಾಯಿಯಾದ ಕೈಕೇಯಿಗೆ ಯಾವ ಪ್ರತಿಜ್ಞಾ ವಚನವನ್ನಿತ್ತನೋ–ಅದೇ ಪ್ರತಿಜ್ಞೆಯನ್ನು ನಾನು ಯಥಾವತ್ತಾಗಿ ಪರಿ ಪಾಲಿಸುವೆನು. ಅದರಂತೆ ಹದಿನಾಲ್ಕು ವರ್ಷಗಳ ಕಾಲ ಅರಣ್ಯವಾಸ ಮಾಡಿಕೊಂಡಿರುವೆನು."

ಶ್ರೀರಾಮನು ಹೀಗೆ ಹೇಳಲು ಯಾರಲ್ಲಿ ಯಾವಾಗ ಹೇಗೆ ಮಾತ ನಾಡಬೇಕೆಂಬುದನ್ನು ತಿಳಿದಿದ್ದ ಮಹಾಪ್ರಾಜ್ಞರಾದ ವಸಿಷ್ಠರು ಮಾತನಾಡು ವವರಲ್ಲಿ ಕುಶಲನಾದ ನಮ್ಮಣ್ಣನಿಗೆ ಹೇಳಿದರು :

ಏತೇ ಪ್ರಯಚ್ಛ ಸಂಹೃಷ್ಟಃ ಪಾದುಕೇ ಹೇಮಭೂಷಿತೇ ।
ಅಯೋಧ್ಯಾಯಾಂ ಮಹಾಪ್ರಾಜ್ಞ ಯೋಗಕ್ಷೇಮಕರೇ ತವ ॥

"ಮಹಾಪ್ರಾಜ್ಞನೇ! ಯೋಗ-ಕ್ಷೇಮಗಳನ್ನು ನಿರ್ವಹಿಸುವ ಸಾಮರ್ಥ್ಯವುಳ್ಳ ಸುವರ್ಣಭೂಷಿತವಾದ ಈ ನಿನ್ನ ಪಾದುಕೆಗಳನ್ನು ಪ್ರಸನ್ನ ಚಿತ್ತನಾಗಿ ಭರತನಿಗೆ ದಯಪಾಲಿಸು."

ವಸಿಷ್ಠರು ಹೀಗೆ ಹೇಳಲು ಶ್ರೀರಾಮನು ಪೂರ್ವಾಭಿಮುಖವಾಗಿ ನಿಂತು ತನ್ನ ದಿವ್ಯಪಾದಾರವಿಂದಗಳಿಂದ ಸುವರ್ಣಭೂಷಿತಗಳಾದ ಈ ಪಾದುಕೆ ಗಳನ್ನು ಅಲಂಕರಿಸಿ ಅವುಗಳನ್ನು ತನ್ನ ಪ್ರತಿನಿಧಿಯ ರೂಪದಲ್ಲಿ ಇಟ್ಟು

---

ಯೋಜನಗಳಷ್ಟು ಪ್ರಯಾಣಮಾಡಿ ಭರದ್ವಾಜರ ಆಶ್ರಮದ ಸಮೀಪಕ್ಕೆ ಬಂದರೂ ಅಷ್ಟುದೂರ ಪ್ರಯಾಣಮಾಡಿದ ಅರಿವೇ ಉಂಟಾಗಲಿಲ್ಲ. ಬಹಳ ಹತ್ತಿರದಲ್ಲಿಯೇ ಭರದ್ವಾಜಾಶ್ರಮವು ಸಿಕ್ಕಿತೆಂದು ಭಾಸವಾಯಿತು.

ಗೀತಾ ಪ್ರೆಸ್, ಗೋರಖಪುರ–ಇವರ ಅಭಿಪ್ರಾಯದಂತೆ ಈಗ ಭರತನು ಕಂಡುದು ಮತ್ತು ಅಯೋಧ್ಯೆಯಿಂದ ಬರುವ ಸಮಯದಲ್ಲಿ ಶ್ರೀರಾಮ ಮತ್ತು ಭರತರು ತಂಗಿದ್ದು ಎರಡೂ ಭರದ್ವಾಜರ ಬೇರೆ ಬೇರೆ ಆಶ್ರಮಗಳು. ಭರತನು ಹಿಂದಿರುಗುವಾಗ ನೋಡಿದ ಆಶ್ರಮವು ಚಿತ್ರಕೂಟಪರ್ವತದ ಸಮೀಪದಲ್ಲಿ ಯಮುನಾನದಿಯ ದಕ್ಷಿಣದಿಕ್ಕಿನಲ್ಲಿದ್ದಿತು. ಶ್ರೀರಾಮ ಮತ್ತು ಭರತರ ಸಮಾಗಮದ ಸಮಾಚಾರವನ್ನು ಶೀಘ್ರವಾಗಿ ತಿಳಿಯುವ ಸಲುವಾಗಿ ಭರದ್ವಾಜರು ಚಿತ್ರಕೂಟಕ್ಕೆ ಹತ್ತಿರವಿದ್ದ ಆ ಆಶ್ರಮದಲ್ಲಿ ವಾಸಮಾಡಿ ಕೊಂಡಿದ್ದರು.

ಕೊಂಡು ರಾಜ್ಯಭಾರ ಮಾಡಲು ಹೇಳಿ ನನಗೆ ದಯಪಾಲಿಸಿದನು.* ಮಹಾತ್ಮನಾದ ರಾಮನ ಅನುಜ್ಞೆಯನ್ನು ಪಡೆದು ಅಲ್ಲಿಂದ ಹಿಂದಿರುಗಿದ ನಾನು, ಶುಭಾವಹವಾದ ಈ ದಿವ್ಯಪಾದುಕೆಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಹೋಗುತ್ತಿದ್ದೇನೆ."

ಮಹಾತ್ಮನಾದ ಭರತನ ಶುಭವಾಕ್ಯಗಳನ್ನು ಕೇಳಿ ಭರದ್ವಾಜರು ಅತ್ಯಂತಶುಭಕರವಾದ ಮಾತನ್ನು ಹೇಳಿದರು :

ನೈತಚ್ಚಿತ್ರಂ ನರವ್ಯಾಘ್ರ ಶೀಲವೃತ್ತವತಾಂ ವರ ।
ಯದಾರ್ಯಂ ತ್ವಯಿ ತಿಷ್ಠೇತ್ತು ನಿಮ್ನೇ ವೃಷ್ಟಿಮಿವೋದಕಮ್ ॥

" ಸೌಶೀಲ್ಯ-ಸದ್ವೃತ್ತಿಗಳಿರುವವರಲ್ಲಿ ಶ್ರೇಷ್ಠನಾದವನೇ ! ನರವ್ಯಾಘ್ರನೇ ! ತಗ್ಗಾದ ಪ್ರದೇಶದಲ್ಲಿರುವ ಜಲಾಶಯಕ್ಕೆ ಎಲ್ಲ ಕಡೆಗಳಿಂದಲೂ ನೀರು ಬಂದು ಸೇರುವಂತೆ–ಎಲ್ಲ ಸದ್ಗುಣಗಳೂ ನಿನ್ನಲ್ಲಿಯೇ ಸೇರಿಕೊಂಡಿವೆ ಯೆಂಬುವದರಲ್ಲಿ ಆಶ್ಚರ್ಯವೇನೂ ಇಲ್ಲ. ನಿನ್ನಂತಹ ಧರ್ಮಜ್ಞನಾದ, ಧರ್ಮವತ್ಸಲನಾದ ಮಗನನ್ನು ಪಡೆದು ನಿಶ್ಚಯವಾಗಿಯೂ ದಶರಥನು ಋಣಮುಕ್ತನಾದನು. "

ಹೀಗೆ ಹೇಳಿದ ಮಹಾತ್ಮರಾದ ಭರದ್ವಾಜರ ಎರಡು ಕಾಲುಗಳನ್ನೂ ಹಿಡಿದು ನಮಸ್ಕರಿಸಿದ ಭರತನು ಮುಂದೆ ಪ್ರಯಾಣಮಾಡಲು ಅನುಮತಿಯನ್ನು ಪ್ರಾರ್ಥಿಸುತ್ತಾ ಕೈಮುಗಿದುಕೊಂಡು ನಿಂತನು. ಪ್ರಯಾಣಮಾಡಬಹುದೆಂದು ಮಹರ್ಷಿಗಳು ಅನುಮತಿಸಿದ ನಂತರ ಶ್ರೀಮಂತನಾದ ಭರತನು ಅವರಿಗೆ ಪುನಃ ಪುನಃ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಮಂತ್ರಿಗಳೊಡನೆ ಅಯೋಧ್ಯಾಪಟ್ಟಣಕ್ಕೆ ಪ್ರಯಾಣಮಾಡಿದನು.

---

* ವಸಿಷ್ಠರು ರಾಮನಿಗೆ ಪಾದುಕೆಗಳನ್ನು ಕೊಡುವಂತೆ ಹೇಳಿದ ವಿಷಯವು ಹಿಂದೆ ಪ್ರಸ್ತಾಪಿತವಾಗದಿದ್ದರೂ ಅಲ್ಲಿಯ ಪ್ರಕರಣಕ್ಕೂ ಇಲ್ಲಿಯ ಪ್ರಕರಣಕ್ಕೂ ಯಾವ ವಿಧವಾದ ವಿರೋಧವೂ ಇರುವುದಿಲ್ಲ. " ಏತೇ ಪ್ರಯಚ್ಛ " ಎಂದು ವಸಿಷ್ಠರು ಹೇಳಿದನಂತರ ರಾಮನಿಗೆ ಅರ್ಪಿಸುವ ಸಲುವಾಗಿ ಅಯೋಧ್ಯೆಯಿಂದಲೇ ತಂದಿದ್ದ ಸ್ವರ್ಣಮಯವಾದ ಪಾದುಕೆಗಳನ್ನು ಮುಂದಿಟ್ಟು ಭರತನು " ಅಧಿರೋಹಾರ್ಯ ಪಾದಾಭ್ಯಾಂ " ( ಸರ್ಗ ೧೧೨ ಶ್ಲೋಕ ೨೧ ) ಎಂದು ಪ್ರಾರ್ಥಿಸಿದುದು ಸಮಂಜಸವಾಗಿಯೇ ಇದೆ.

ಭರತನನ್ನು ಹಿಂಬಾಲಿಸಿ ಚಿತ್ರಕೂಟಕ್ಕೆ ಬಂದಿದ್ದ ಬಹಳ ವಿಸ್ತಾರವಾಗಿದ್ದ ಆ ಮಹಾಸೈನ್ಯವು ರಥವೇ ಮುಂತಾದ ಯಾನಗಳಲ್ಲಿಯೂ, ಎತ್ತಿನ ಬಂಡಿಗಳಲ್ಲಿಯೂ, ಕುದುರೆಬಂಡಿಗಳಲ್ಲಿಯೂ, ಕುದುರೆ ಮತ್ತು ಆನೆಗಳ ಮೇಲೂ ಕುಳಿತು ಅಯೋಧ್ಯೆಗೆ ಹಿಂದಿರುಗಿತು. ಭರತನ ಪರಿವಾರದವರು ಅಲೆಗಳನ್ನೇ ಮಾಲಿಕೆಗಳ ರೂಪದಲ್ಲಿ ಹೊಂದಿದ್ದ ದಿವ್ಯವಾದ ಯಮುನಾ ನದಿಯನ್ನು ದಾಟಿ ಮಂಗಳಕರವಾದ ತೀರ್ಥದಿಂದ ಕೂಡಿದ್ದ ಪವಿತ್ರವಾದ ಗಂಗಾನದಿಯನ್ನು ಸಂದರ್ಶಿಸಿದರು. ಪೂರ್ಣಪ್ರವಾಹದಿಂದ ತುಂಬಿ ಬಹಳ ರಮ್ಯವಾಗಿ ಕಾಣುತ್ತಿದ್ದ ಆ ನದಿಯನ್ನು ಭರತನು ಬಂಧುಗಳೊಡನೆಯೂ ಸೈನಿಕರೊಡನೆಯೂ ದಾಟಿ ಸುಂದರವಾಗಿದ್ದ ಶೃಂಗಿಬೇರಪುರವನ್ನು* ಪ್ರವೇಶಿಸಿದನು. ಪರಿಜನರೊಡನೆ ಅಲ್ಲಿಂದಲೂ ಮುಂದಕ್ಕೆ ಪ್ರಯಾಣಮಾಡಿದ ಭರತನು ಅಯೋಧ್ಯೆಯನ್ನು ನೋಡಿದನು. ತಂದೆಯಿಂದಲೂ ಅಣ್ಣನಿಂದಲೂ ರಹಿತವಾಗಿದ್ದ ಅಯೋಧ್ಯೆಯನ್ನು ನೋಡಿ ದುಃಖದಿಂದ ಪರಿತಪಿಸುತ್ತಾ ಭರತನು ಸಾರಥಿಗೆ ಹೇಳಿದನು :

ಸಾರಥೇ ಪಶ್ಯ ವಿಧ್ವಸ್ತಾ ಸಾಯೋಧ್ಯಾ ನ ಪ್ರಕಾಶತೇ ।
ನಿರಾಕಾಶಾ ನಿರಾನನ್ದಾ ದೀನಾ ಪ್ರತಿಹತಸ್ವರಾ ॥೨೪॥

" ಸಾರಥಿಯೇ ! ಶತ್ರುಗಳಿಂದ ನಾಶಗೊಳಿಸಲ್ಪಟ್ಟಂತೆ ಕಾಣುತ್ತಿರುವ ಅಯೋಧ್ಯೆಯನ್ನು ನೋಡು. ಇದು ಹಿಂದಿನಂತೆ ಪ್ರಕಾಶಮಾನವಾಗಿ ಕಾಣುತ್ತಿಲ್ಲ. ಹಿಂದಿನ ಸುಂದರವಾದ ರೂಪವೂ ಇಲ್ಲವಾಗಿದೆ. ಆನಂದರಹಿತವಾಗಿದೆ. ದೀನವಾಗಿದೆ ಮತ್ತು ಶಬ್ದರಹಿತವಾಗಿದೆ."

೧೧೩ನೆಯ ಸರ್ಗವು ಮುಗಿಯಿತು.

---

* ಶೃಂಗಿವೇರವೆಂಬುದಕ್ಕೆ ಒಬ್ಬರು ಹೀಗೆ ವ್ಯುತ್ಪತ್ತಿಯನ್ನು ಮಾಡಿರುತ್ತಾರೆ: ಶೃಙ್ಗಿಣಾಂ ವೇರಾಣಿ ಕೃತ್ರಿಮರೂಪಾಣಿ ಯಸ್ಮಿನ್ ತತ್ ಶೃಙ್ಗಿವೇರಂ. ಅಂದರೆ ಆ ಊರಿನಲ್ಲಿರುವವರು ಮೃಗಗಳನ್ನು ಹಿಡಿಯುವುದಕ್ಕಾಗಿ ಅಯಾಯ ಮೃಗಗಳಂತೆ ಕೃತ್ರಿಮವಾದ ಆಕಾರಗಳನ್ನು ನಿರ್ಮಿಸಿ ಅವುಗಳಿಂದ ಮೃಗಗಳನ್ನು ಮರುಳುಗೊಳಿಸಿ ಬೇಟೆಯಾಡುತ್ತಿದ್ದರು. ಆದುದರಿಂದ ಆ ಪಟ್ಟಣಕ್ಕೆ ಶೃಂಗಿವೇರಪುರವೆಂದು ಹೆಸರು ಬಂದಿದೆ.

## ದುರವಸ್ಥೆಯಲ್ಲಿದ್ದ ಅಯೋಧ್ಯೆಯನ್ನು ಪ್ರವೇಶಿಸಿದ ಭರತನು ಅಂತಃಪುರಕ್ಕೆ ಹೋಗಿ ಬಹಳವಾಗಿ ದುಃಖಿಸಿದುದು

ಸ್ನಿಗ್ಧಗಮ್ಭೀರಘೋಷೇಣ ಸ್ಯನ್ದನೇನೋಪಯಾನ್ಪ್ರಭುಃ ।
ಅಯೋಧ್ಯಾಂ ಭರತಃ ಕ್ಷಿಪ್ರಂ ಪ್ರವಿವೇಶ ಮಹಾಯಶಾಃ ॥೧॥

ಮನೋಹರವಾಗಿಯೂ ಗಂಭೀರವಾಗಿಯೂ ಇದ್ದ ಶಬ್ದದಿಂದ ಕೂಡಿದ್ದ ರಥದಲ್ಲಿ ಆಗಮಿಸಿದ ಪ್ರಭುವಾದ, ಮಹಾಯಶಸ್ವಿಯಾದ ಭರತನು ಒಡನೆಯೇ ಅಯೋಧ್ಯೆಯನ್ನು ಪ್ರವೇಶಿಸಿದನು.

ಆ ಸಮಯದಲ್ಲಿ ಅಯೋಧ್ಯೆಯ ಬೀದಿಗಳಲ್ಲಿ ಬೆಕ್ಕುಗಳೂ ಗೂಬೆಗಳೂ ಸಂಚರಿಸುತ್ತಿದ್ದುವು. ಮನೆಗಳ ಬಾಗಿಲುಗಳೆಲ್ಲವೂ ಮುಚ್ಚಿದ್ದುವು. ಸುತ್ತಲೂ ಕತ್ತಲುಗವಿದ್ದಿತು. ಕೃಷ್ಣಪಕ್ಷದ ಕಾಲರಾತ್ರಿಯಂತೆ ಪ್ರಕಾಶಹೀನವಾಗಿದ್ದಿತು.

ರಾಹುಶತ್ರೋಃ ಪ್ರಿಯಾಂ ಪತ್ನೀಂ ಶ್ರಿಯಾ ಪ್ರಜ್ವಲಿತಪ್ರಭಾಮ್ ।
ಗ್ರಹೇಣಾಭ್ಯುತ್ಥಿತೇನೈಕಾಂ ರೋಹಿಣೀಮಿವ ಪೀಡಿತಾಮ್ ॥೩॥

ತನ್ನ ಕಾಂತಿಯಿಂದ ಪ್ರಜ್ವಲಿಸುವ ಪ್ರಭೆಯುಳ್ಳವಳಾಗಿದ್ದ ಚಂದ್ರನ ಪ್ರಿಯಪತ್ನಿಯಾದ ರೋಹಿಣೀದೇವಿಯು – ಉದಯಿಸಿದ ರಾಹುವು ತನ್ನ ಪತಿಯನ್ನು ನುಂಗುತ್ತಿರುವುದನ್ನು ಕಂಡು ಏಕಾಕಿನಿಯಾಗಿ ದುಃಖಪೀಡಿತಳಾದಂತೆ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.*

ಅಲ್ಪೋಷ್ಣಕ್ಷುಬ್ಧಸಲಿಲಾಂ ಘರ್ಮತಪ್ತವಿಹಂಗಮಾಮ್ ।
ಲೀನಮೀನಝಷಗ್ರಾಹಾಂ ಕೃಶಾಂ ಗಿರಿನದೀಮಿವ ॥೪॥

ಸ್ವಲ್ಪವೇ ನೀರಿದ್ದು ಸೂರ್ಯನ ತಾಪದಿಂದ ಬಿಸಿಯಾಗಿ ಕಲಕಿಹೋಗಿ

---

* ರಾಮನೆಂಬ ಪೂರ್ಣಚಂದ್ರನಿಂದ ಅಯೋಧ್ಯೆಯೆಂಬ ಪತ್ನಿಯು ವಿರಾಜಮಾನವಾಗಿದ್ದಿತು. ರಾಹುರೂಪವಾದ ಕೈಕೇಯಿಯ ವರವು ರಾಮನನ್ನು ಅಯೋಧ್ಯೆಯಲ್ಲಿ ಅದೃಶ್ಯಗೊಳಿಸಿದೊಡನೆಯೇ ಪತ್ನೀರೂಪವಾಗಿದ್ದ ಅಯೋಧ್ಯೆಯು ಕಾಂತಿಹೀನವಾಯಿತು.

ರುವ ನೀರುಳ್ಳ, ಬಿಸಿಲಿನಿಂದ ಪರಿತಪಿಸುತ್ತಿರುವ ಪಕ್ಷಿಗಳಿಂದ ಸಮಾವೃತ ವಾಗಿರುವ, ಅಲ್ಲಲ್ಲಿಯೇ ಅಡಗಿಕೊಂಡಿರುವ ಮೀನುಗಳಿಂದಲೂ, ಮೊಸಳೆ ಗಳಿಂದಲೂ ಕೂಡಿರುವ, ಬತ್ತಿಹೋಗಿರುವ ಪರ್ವತದ ನದಿಯಂತೆ ಕಾಣುತ್ತಿದ್ದ ಅಯೋಧ್ಯೆಯನ್ನು ಭರತನು ಪ್ರವೇಶಿಸಿದನು.

ಹಿಂದೆ ಹವಿಸ್ಸುಗಳ ಹೋಮದಿಂದ ಹೊಗೆಯಿಲ್ಲದೇ ಚಿನ್ನದಂತೆ ತೊಳ-ತೊಳಗಿ ಬೆಳಗುತ್ತಿದ್ದು ಈಗ ಜ್ವಾಲೆಗಳು ನಂದಿಹೋಗಿ ಕಾಂತಿಹೀನವಾಗಿದ್ದ ಅಯೋಧ್ಯೆಯನ್ನು ಭರತನು ಪ್ರವೇಶಿಸಿದನು.

ಮಹಾಯುದ್ಧದಲ್ಲಿ ನಾಶಗೊಳಿಸಲ್ಪಟ್ಟ ಕವಚಗಳಿಂದಲೂ, ಗಾಯ ಗೊಂಡ ಆನೆ-ಕುದುರೆಗಳಿಂದಲೂ, ಮುರಿದುಹೋಗಿರುವ ರಥಧ್ವಜಗಳಿಂದಲೂ, ಹತರಾದ ವೀರರಿಂದಲೂ ಕೂಡಿ ಘೋರವಾದ ಆಪತ್ತನ್ನು ಎದುರಿಸುತ್ತಿರುವ ಸೈನ್ಯದಂತಿದ್ದ ಅಯೋಧ್ಯೆಯನ್ನು ಭರತನು ಪ್ರವೇಶಿಸಿದನು.

ಚಂಡಮಾರುತದ ಅವ್ಯಾಹತವಾದ ಬಡಿತಗಳಿಂದ ಹುಟ್ಟಿದ ನೊರೆ ಯಿಂದಲೂ ಘೋರಶಬ್ದಗಳಿಂದಲೂ ಕೂಡಿದ ಸಮುದ್ರದ ಅಲೆಗಳು, ಚಂಡ ಮಾರುತವು ಪ್ರಶಾಂತವಾದಬಳಿಕ ನಿಶ್ಶಬ್ದವಾಗುವಂತೆ–ನಿಶ್ಶಬ್ದವಾಗಿಬಿಟ್ಟಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಯಜ್ಞದಲ್ಲಿ ಸೋಮರಸದ ಆಹರಣಕಾಲವು ಮುಗಿದುಹೋದ ನಂತರ ಯಾಜಕರಿಂದ ಪರಿತ್ಯಕ್ತವಾದ, ಸ್ರುಕ್-ಸ್ರುವಾದಿ ಯಜ್ಞೋಪಯೋಗಿ ಗಳಾದ ಪದಾರ್ಥಗಳಿಂದಲೂ, ವೇದಮಂತ್ರಗಳ ಕರ್ಣಾನಂದಕರವಾದ ಧ್ವನಿ ಗಳಿಂದಲೂ ವಿಹೀನವಾದ ಯಜ್ಞವೇದಿಕೆಯಂತಿದ್ದ ಅಯೋಧ್ಯಾಪಟ್ಟಣ ವನ್ನು ಭರತನು ಪ್ರವೇಶಿಸಿದನು.

ದನದ ಕೊಟ್ಟಿಗೆಯಲ್ಲಿ ಕಟ್ಟಿರುವ ಹೋರಿಯಿಂದ ಪ್ರತ್ಯೇಕಿಸಲ್ಪಟ್ಟು, ಹಸಿರು ಹುಲ್ಲನ್ನು ತಿನ್ನದಿರುವ, ಕಾಮಪೀಡಿತವಾಗಿರುವ, ಹೋರಿಯನ್ನು ಜೊತೆಗೂಡಬೇಕೆಂಬ ಉತ್ಸುಕತೆಯಿಂದ ಕೂಡಿರುವ ಅಲೆಬಂದ ಹಸುವಿ ನಂತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.*

---

* ಗವಾಂ ಪತ್ನೀಂ ಎಂಬ ಪದವನ್ನು ಉಪಯೋಗಿಸಿರುವುದರಿಂದ ಅಲೆಬಂದ ಹಸು ವೆಂದು ಅರ್ಥಮಾಡಬಹುದಾಗಿದೆ. ಹಸುಗಳಿಗೆ ಪತ್ನೀತ್ವವು ಅಲೆಬಂದಾಗ ಮಾತ್ರವೇ

ಮನೋಹರವಾದ, ಥಳ-ಥಳನೆ ಹೊಳೆಯುವ ಪದ್ಮರಾಗ-ಗೋಮೇಧಿಕ-ಪುಷ್ಯರಾಗಗಳೇ ಮೊದಲಾದ ಉತ್ತಮೋತ್ತಮವಾದ ಜಾತಿರತ್ನಗಳಿಂದ ವಿಹೀನವಾದ ಹೊಸ ಮುತ್ತಿನ ಸರದಂತೆ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಪುಣ್ಯಕ್ಷಯವಾದೊಡನೆಯೇ ಸ್ಥಾನದಿಂದ ಭ್ರಷ್ಟವಾಗಿ ಆಕಾಶದಿಂದ ಭೂಮಿಯ ಕಡೆಗೆ ಬೀಳುತ್ತಿರುವ ಸರ್ವವ್ಯಾಪಿಯಾದ ಕಾಂತಿಯಿಂದ ಹೀನವಾಗಿರುವ ನಕ್ಷತ್ರದಂತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ವಸಂತರ್ತುವು ಕಳೆದೊಡನೆಯೇ ಕಾಡುಗಿಚ್ಚಿನಿಂದ ದಗ್ಧವಾಗಿ ಹೋದ ಪುಷ್ಪಗುಚ್ಛಗಳಿಂದ ಕೂಡಿದ್ದು ದುಂಬಿಗಳಿಂದ ನಿನಾದಿತವಾಗಿದ್ದ ಅರಣ್ಯದ ಬಾಡಿದ ಬಳ್ಳಿಯಂತೆ ಕಾಂತಿಹೀನವಾಗಿ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಮೋಡಗಳಿಂದ ವ್ಯಾಪಿಸಿದ್ದು ಮುಚ್ಚಿಹೋದ ಚಂದ್ರ-ನಕ್ಷತ್ರಗಳುಳ್ಳ ಕಾಂತಿರಹಿತವಾದ ಆಕಾಶದಂತೆ – ಜನರಿಂದಲೂ, ಕ್ರಯ-ವಿಕ್ರಯಾದಿಗಳಿಂದಲೂ ರಹಿತವಾದ ರಾಜಮಾರ್ಗಗಳಿಂದ ಕೂಡಿರುವ ಕಾಂತಿಹೀನವಾಗಿದ್ದ ಅಯೋಧ್ಯೆಯನ್ನು ಭರತನು ಪ್ರವೇಶಿಸಿದನು.

ಉತ್ತಮವಾದ ಮದ್ಯಗಳಿಂದ ಶೂನ್ಯವಾಗಿರುವ, ಒಡೆದುಹೋಗಿರುವ ಪಾತ್ರೆಗಳಿಂದ ವ್ಯಾಪ್ತವಾಗಿರುವ, ಮದ್ಯಪಾಯಿಗಳಿಂದಲೂ ಮದ್ಯವನ್ನು ತಯಾರಿಸುವವರಿಂದಲೂ ಶೂನ್ಯವಾಗಿ ಅವ್ಯವಸ್ಥಿತವಾದ ರೀತಿಯಲ್ಲಿರುವ ಪಾನಗೃಹದಂತೆಯೇ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಬಿರುಕುಬಿಟ್ಟಿರುವ ಭೂಭಾಗವುಳ್ಳ, ಕುಳಿತುಕೊಳ್ಳಲೂ ಸಾಧ್ಯವಾಗ

---

ಇರುತ್ತದೆ. ಆ ಸಮಯದಲ್ಲಿ ಮಾತ್ರವೇ ಅವು ಹೋರಿಯೊಡನಿರಲು ಆಶಿಸುವುವೇ ಹೊರತು ಸರ್ವಕಾಲದಲ್ಲಿಯೂ ಹೋರಿಯೊಡನಿರಲಾರವು. ಹಸುಗಳಿಗೆ ಅಲೆ ಬಂದೊಡನೆಯೇ ಅವುಗಳನ್ನು ಕಟ್ಟಿಹಾಕುತ್ತಾರೆ. ಕಟ್ಟಿಹಾಕದಿದ್ದರೆ ಕೈಗೆ ಸಿಕ್ಕದೇ ಓಡಿಹೋಗುತ್ತವೆ. ಆ ಸಮಯದಲ್ಲಿ ಅವು ಹುಲ್ಲುತಿನ್ನುವುದಿಲ್ಲ. ಇಷ್ಟು ಕಾರಣಗಳಿಂದ ಅಲೆಬಂದ ಹಸುವೆಂದು ಅರ್ಥಮಾಡಬಹುದಾಗಿದೆ.

ದಂತೆ ಹಳ್ಳ-ತಿಟ್ಟುಪ್ರದೇಶಗಳಿಂದ ಕೂಡಿದ್ದಾಗಿ, ಭಿನ್ನವಾದ ನೀರಿನ ಪಾತ್ರೆಗಳಿಂದ ವ್ಯಾಪ್ತವಾಗಿರುವ, ನೀರಿಲ್ಲದ, ಬಿದ್ದುಹೋಗಿರುವ ಚಾವಣಿಯುಳ್ಳ ಅರವಟ್ಟಿಗೆಯಂತೆಯೇ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.*

ಬಾಣಪ್ರಯೋಗದಲ್ಲಿ ನಿಪುಣರಾದವರ ನಿಶಿತವಾದ ಬಾಣಗಳಿಂದ ಕತ್ತರಿಸಲ್ಪಟ್ಟು ಸುದೀರ್ಘವಾದ ಮತ್ತು ಹೆದೆಯೇರಿಸಿದ ಧನುಸ್ಸಿನಿಂದ ಕೆಳಕ್ಕೆ ಬಿದ್ದಿರುವ ಬಿಲ್ಲಿನ ನಾಣಿನಂತೆ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಶತ್ರುಪಕ್ಷದವರು ಸಂಹರಿಸಿ ಕೆಳಕ್ಕೆ ಬೀಳಿಸಿದ, ವೇಗವಾಗಿ ಕುದುರೆಯನ್ನೇರಿ ಯುದ್ಧಕ್ಕೆ ಹೋದ ಯುದ್ಧಕುಶಲನಾದ ಕುದುರೇ ಸವಾರನ ಕುದುರೆಯಂತೆ ಭಗ್ನವಾಗಿ ಹೋಗಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಬತ್ತಿಹೋಗಿರುವ ನೀರುಳ್ಳ, ಒಡೆದು ಹೋಗಿರುವ ದಡಗಳುಳ್ಳ, ನೈದಿಲೆಗಳಿಂದ ಶೂನ್ಯವಾದ, ದೊಡ್ಡ ದೊಡ್ಡ ಮೀನುಗಳಿಂದಲೂ, ಆಮೆಗಳಿಂದಲೂ ವ್ಯಾಪ್ತವಾಗಿರುವ ವಿಸ್ತಾರವಾದ ಸರೋವರದಂತೆ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ನಿಷಿದ್ಧವೆನಿಸಿದ ಲೇಪ್ಯಗಳಿಂದ ಲೇಪಿತವಾಗಿದ್ದ, ಅದರಿಂದಲೇ ಉರಿಯುಂಟಾಗಿ ದುಃಖಕ್ಕೆ ಕಾರಣವಾಗಿರುವ, ಯಾವುದೊಂದು ಆಭರಣವಾಗಲೀ–ಹೊದಿಕೆಯಾಗಲೀ ಇಲ್ಲದಿರುವ, ಹರ್ಷವೆಂಬುದನ್ನೇ ಕಾಣದ, ಚರ್ಮರೋಗಿಯ ಕ್ಷೀಣಿಸಿದ ಶರೀರದಂತೆ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಭರತನು ಪ್ರವೇಶಿಸಿದನು.

ಹೀಗೆ ಅತ್ಯಂತಶೋಚನೀಯವಾದ ಸ್ಥಿತಿಯಲ್ಲಿದ್ದ ಅಯೋಧ್ಯೆಯನ್ನು ಪ್ರವೇಶಿಸಿದ ನಂತರ ರಥದಲ್ಲಿ ಕುಳಿತಿದ್ದ ದಶರಥನ ಮಗನಾದ ಶ್ರೀಮಂತ

---

* ಸಾಮಾನ್ಯವಾಗಿ ನೀರು ಸಿಕ್ಕದಿರುವ ಮಾರ್ಗಗಳಲ್ಲಿ ದಾರಿಹೋಕರ ಬಾಯಾರಿಕೆಯನ್ನು ತೀರಿಸಲು ಅರವಟ್ಟಿಗೆಗಳನ್ನು ಹಿಂದೆ ಕಟ್ಟುತ್ತಿದ್ದರು. ಬಳಲಿದ ಯಾತ್ರಿಕರಿಗೆ ಸ್ವಲ್ಪ ಕಾಲ ವಿಶ್ರಮಿಸಿಕೊಳ್ಳಲು ಅಲ್ಲಿ ಆಶ್ರಯ ಸಿಕ್ಕುತ್ತಿದ್ದಿತು. ಸಂಪೂರ್ಣವಾಗಿ ಭಗ್ನವಾಗಿ ಹೋದ ಪಾನೀಯಶಾಲೆಯಂತೆ ಅಯೋಧ್ಯೆಯು ಕಾಣುತ್ತಿದ್ದಿತು.

ನಾದ ಭರತನು ಆ ಉತ್ತಮೋತ್ತಮವಾದ ರಥವನ್ನು ನಡೆಸುತ್ತಿದ್ದ ಸಾರಥಿಗೆ ಹೇಳಿದನು :

" ಸುಮಂತ್ರ ! ಈ ಅಯೋಧ್ಯಾಪಟ್ಟಣದಲ್ಲಿ ಹಿಂದೆ ಯಾವಾಗಲೂ ಕೇಳಿಸುತ್ತಿದ್ದಂತೆ ಗಂಭೀರವಾದ, ಆರೋಹಣ-ಅವರೋಹಣಗಳಿಂದ ಕೂಡಿದ ಗೀತಗಳ ಮತ್ತು ವೀಣಾ-ಭೇರಿ-ಮೃದಂಗಾದಿ ವಾದ್ಯಗಳ ಸುಮಧುರ ನಿನಾದವು ಈಗ ಕೇಳಿಸುತ್ತಿಲ್ಲವೇಕೆ ?

ಹಿಂದೆ ಗಾಳಿಯು ಉದ್ರೇಕಗೊಳಿಸುವ ವಾರುಣೀ ಎಂಬ ಮದ್ಯದ ವಾಸನೆಯಿಂದಲೂ ಮತ್ತು ಚಂದನಾಗುರುಗಳ ವಾಸನೆಗಳಿಂದಲೂ ಕೂಡಿ ಅಯೋಧ್ಯೆಯ ಸುತ್ತಲೂ ಬೀಸುತ್ತಿದ್ದಿತು. ಈಗ ಅಂತಹ ಯಾವ ವಾಸನೆಯೂ ಕಂಡುಬರುತ್ತಿಲ್ಲ. ಶ್ರೀರಾಮನು ಅರಣ್ಯಕ್ಕೆ ಹೊರಟುಹೋದ ನಂತರ ಈ ಪಟ್ಟಣದಲ್ಲಿ ಉತ್ತಮವಾದ ಯಾನಗಳ ಶಬ್ದಗಳಾಗಲೀ, ಕುದುರೆಗಳು ಸಂತೋಷದಿಂದ ಕೆನೆಯುವ ಶಬ್ದಗಳಾಗಲೀ, ಮದಿಸಿದ ಆನೆಗಳ ಘೀಂಕರಿಸುವ ಶಬ್ದಗಳಾಗಲೀ, ರಥಗಳ ಮಹಾನಿನಾದವಾಗಲೀ ಕೇಳಿಬರುತ್ತಿಲ್ಲ. ಶ್ರೀರಾಮನು ಅರಣ್ಯಕ್ಕೆ ಹೊರಟುಹೋದುದರಿಂದ ಸಂತಪ್ತರಾಗಿರುವ ಅಯೋಧ್ಯೆಯ ತರುಣರು ಚಂದನಾಗುರು-ಗಂಧಗಳನ್ನು ಮೈಗೆ ಪೂಸಿಕೊಳ್ಳುತ್ತಿಲ್ಲ. ಬಹುಮೂಲ್ಯವಾದ ಹೊಸ ರತ್ನಹಾರಗಳನ್ನು ಧರಿಸುತ್ತಿಲ್ಲ. ಚಿತ್ರಿತವಾದ ಪುಷ್ಪಮಾಲೆಗಳನ್ನು ಧರಿಸಿ ವಿಹಾರಾರ್ಥವಾಗಿ ಹೊರಗೆ ಹೋಗುವುದನ್ನೂ ನಿಲ್ಲಿಸಿಬಿಟ್ಟಿರುವರು. ಶ್ರೀರಾಮನ ವಿರಹಶೋಕದಿಂದ ಪೀಡಿತವಾಗಿರುವ ಈ ಪಟ್ಟಣದಲ್ಲೀಗ ಯಾವ ವಿಧವಾದ ಉತ್ಸವಗಳೂ ನಡೆಯುತ್ತಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ, ಸುಮಂತ್ರ !

ಸಹ ನೂನಂ ಮಮ ಭ್ರಾತ್ರಾ ಪುರಸ್ಯಾಸ್ಯ ದ್ಯುತಿರ್ಗತಾ ॥೨೪॥

ನಮ್ಮಣ್ಣನಾದ ಶ್ರೀರಾಮನೊಡನೆಯೇ ಈ ಪಟ್ಟಣದ ಶೋಭೆಯೇ ಹೊರಟುಹೋಯಿತು. ಇದು ನಿಶ್ಚಯ.

ಸತತವಾಗಿ ಬೀಳುವ ಮಳೆಯ ಕಾರಣದಿಂದ ಶುಕ್ಲಪಕ್ಷದ ರಾತ್ರಿಯು ಶೋಭಾಹೀನವಾಗುವಂತೆ-ಪ್ರಜೆಗಳು ಸತತವಾಗಿ ಸುರಿಸುತ್ತಿರುವ ಕಂಬನಿಯಿಂದ ಈ ಅಯೋಧ್ಯಾಪಟ್ಟಣವು ಶೋಭಾರಹಿತವಾಗಿದೆ.

ನಮ್ಮಣ್ಣನು ಮಹೋತ್ಸವದಂತೆ ಆಗಮಿಸಿ, ಗ್ರೀಷ್ಮರ್ತುವಿನಲ್ಲಿ ಕಾರ್ಮುಗಿಲು ಪ್ರಾದುರ್ಭವಿಸಿ ಪ್ರಜೆಗಳಿಗೆ ಸಂತೋಷವನ್ನುಂಟುಮಾಡು ವಂತೆ-ಯಾವಾಗ ಅಯೋಧ್ಯೆಯನ್ನು ಹರ್ಷಗೊಳಿಸುತ್ತಾನೆ ? *

ಸುಮಂತ್ರ ! ಈಗ ಅಯೋಧ್ಯೆಯಲ್ಲಿರುವ ರಾಜಬೀದಿಗಳು ನಯನ ಮನೋಹರವಾದ ಉಡುಪುಗಳನ್ನುಟ್ಟು ಎದೆಯನ್ನು ಚಾಚಿಕೊಂಡು ಸಂತೋಷಭರಿತರಾಗಿ ಠೀವಿಯಿಂದ ಹೋಗುತ್ತಿರುವ ಯುವಕರಿಂದ ವಿಹೀನ ವಾಗಿದ್ದು ಪ್ರಕಾಶಮಾನವಾಗಿ ಕಾಣುತ್ತಿಲ್ಲ."

ಹೀಗೆ ಅತಿದುಃಖಿತನಾಗಿದ್ದ ಭರತನು ನಾನಾಪ್ರಕಾರವಾಗಿ ತನ್ನ ದುಗುಡವನ್ನು ಸುಮಂತ್ರನೊಡನೆ ಹೇಳಿಕೊಳ್ಳುತ್ತಾ ಅಯೋಧ್ಯೆಯನ್ನು ಪ್ರವೇಶಿಸಿದನು. ಅನಂತರ ಅವನು ಸಿಂಹದಿಂದ ರಹಿತವಾದ ಗುಹೆಯಂತಿದ್ದ ರಾಜನ ಅರಮನೆಯನ್ನು ಸಾರಥಿಯೊಡನೆ ಪ್ರವೇಶಿಸಿದನು.

ದೇವತೆಗಳಿಂದ ಪರಿತ್ಯಜಿಸಲ್ಪಟ್ಟ ಸೂರ್ಯನಿಲ್ಲದ ದುರ್ದಿನದಂತೆ ದೇವ ರೂಪಿಗಳಾದ ಶ್ರೀರಾಮಾದಿಗಳಿಂದ ಪರಿತ್ಯಕ್ತವಾಗಿ ಕಾಂತಿಯನ್ನು ಕಳೆದು ಕೊಂಡಿದ್ದ ನಿರ್ಜನವಾದ ಅರಮನೆಯನ್ನು ನೋಡಿ ಮಹಾತ್ಮನಾದ ಭರತನು ಬಹಳ ದುಃಖಿತನಾಗಿ ಕಣ್ಣೀರು ಸುರಿಸಿದನು.[1]

೧೧೪ನೆಯ ಸರ್ಗವು ಮುಗಿಯಿತು.

---

* ಉರಿಯುವ ಬೇಸಿಗೆಯಲ್ಲಿ ಮೋಡವನ್ನು ಕಂಡರೆ ಜನರು ಹಿಗ್ಗುತ್ತಾರೆ. ಹಬ್ಬ-ಹರಿ ದಿನಗಳು ಬಂತೆಂದರೆ ಜನರು ಸಂತೋಷದಿಂದ ನಲಿಯುತ್ತಾರೆ. ಹಾಗೆಯೇ ಶ್ರೀರಾಮನ ಆಗಮನದಿಂದಲೇ ಪ್ರಜೆಗಳು ಅನಿರ್ವಾಚ್ಯವಾದ ಮಹಾನಂದವನ್ನು ಹೊಂದುತ್ತಾರೆ.

1 ಮೇಘಚ್ಛನ್ನೇಽಹ್ನಿ ದುರ್ದಿನಮ್ = ಮೋಡದಿಂದ ಆವರಿಸಿ ಸೂರ್ಯರಶ್ಮಿಯೇ ಕಾಣದಿರುವ ದಿನಕ್ಕೆ ದುರ್ದಿನವೆಂದು ಹೆಸರು. ಆ ದಿನಗಳಲ್ಲಿ ಶುಭಕಾರ್ಯಗಳನ್ನು ಮಾಡಕೂಡದೆಂದು ಹಿರಿಯರು ಹೇಳುತ್ತಾರೆ.

ಭರತನು ನಂದಿಗ್ರಾಮಕ್ಕೆ ಹೋಗಿ ಶ್ರೀರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ಪಟ್ಟಾಭಿಷೇಕ ಮಾಡಿದುದು : ಪಾದುಕೆಗಳಿಗೆ ಅನುದಿನವೂ ವರದಿಯನ್ನು ಒಪ್ಪಿಸುತ್ತಾ ರಾಜ್ಯಭಾರವನ್ನು ನಡೆಸಲು ತೊಡಗಿದುದು

ತತೋ ನಿಕ್ಷಿಪ್ಯ ಮಾತೃಸ್ತಾ ಅಯೋಧ್ಯಾಯಾಂ ದೃಢವ್ರತಃ ।
ಭರತಃ ಶೋಕಸಂತಪ್ತೋ ಗುರೂನಿದಮುಥಾಬ್ರವೀತ್ ॥೧॥

ಬಳಿಕ ದೃಢವ್ರತನಾದ ಭರತನು ಎಲ್ಲ ಮಾತೃಜನರನ್ನೂ ಅಯೋಧ್ಯೆಯಲ್ಲಿ ಬಿಟ್ಟು ಶೋಕಸಂತಪ್ತನಾಗಿ ತನ್ನೊಡನಿದ್ದ ವಸಿಷ್ಠರೇ ಮೊದಲಾದ ಗುರುಜನರಿಗೆ ಹೇಳಿದನು :

"ಗುರುಜನರೇ ! ನಾನಿನ್ನು ನಂದಿಗ್ರಾಮಕ್ಕೆ ಪ್ರಯಾಣಮಾಡುತ್ತೇನೆ. ಇದಕ್ಕಾಗಿ ತಮ್ಮೆಲ್ಲರ ಅನುಜ್ಞೆಯನ್ನೂ ಪ್ರಾರ್ಥಿಸುತ್ತೇನೆ. ಅಲ್ಲಿಗೆ ಹೋಗಲು ನೀವೆಲ್ಲರೂ ನನಗೆ ಅನುಮತಿಯನ್ನು ನೀಡಿರಿ. ಶ್ರೀರಾಮನಿಲ್ಲದಿರುವುದರಿಂದ ನನಗೆ ಒದಗಿರುವ ಈ ಎಲ್ಲ ದುಃಖಗಳನ್ನೂ ನಾನಲ್ಲಿ ಸಹಿಸಿಕೊಂಡಿರಲು ಪ್ರಯತ್ನಿಸುತ್ತೇನೆ.

ಅಯ್ಯೋ ! ನಾನು ದುಃಖವನ್ನು ಹೇಗೆ ಸಹಿಸಲಿ ? ಪೂಜ್ಯನಾದ ಮತ್ತು ರಾಜನಾದ ನನ್ನ ತಂದೆಯು ದಿವಂಗತನಾದನು. ಪೂಜ್ಯನಾದ ನಮ್ಮಣ್ಣ ಶ್ರೀರಾಮನು ವನವಾಸಿಯಾಗಿದ್ದಾನೆ. ಇಂತಹ ದುಃಖವನ್ನು ಸಹಿಸಿಕೊಂಡು ನಾನು ಈ ರಾಜ್ಯವನ್ನು ನಮ್ಮಣ್ಣನಾದ ಶ್ರೀರಾಮನಿಗೆ ಒಪ್ಪಿಸುವ ಸಲುವಾಗಿ ಅವನು ಬರುವ ಕಾಲವನ್ನೇ ಎದುರುನೋಡುತ್ತಿರುವೆನು. ಏಕೆಂದರೆ : ಮಹಾಯಶೋವಂತನಾದ ಆ ನನ್ನ ಅಣ್ಣ ಶ್ರೀರಾಮನೇ ನಮ್ಮೆಲ್ಲರಿಗೂ ರಾಜನು."

ಮಹಾತ್ಮನಾದ ಭರತನ ಆ ಶುಭವಾಕ್ಯವನ್ನು ಕೇಳಿ ಮಂತ್ರಿಗಳೂ ಮತ್ತು ಪುರೋಹಿತರಾದ ವಸಿಷ್ಠರೂ ಹೇಳಿದರು :

"ಭರತ ! ಭ್ರಾತೃವಾತ್ಸಲ್ಯದಿಂದ ಪ್ರೇರಿತನಾಗಿ ನೀನು ಈಗ ಹೇಳು ತ್ತಿರುವ ಮಾತು ಅತ್ಯಂತಪ್ರಶಂಸನೀಯವಾಗಿದೆ ಮತ್ತು ಭ್ರಾತೃವತ್ಸಲನಾದ ನಿನಗೆ ಅನುರೂಪವೂ ಆಗಿದೆ. ನಿನಗೆ ಶ್ರೀರಾಮನ ವಿಷಯದಲ್ಲಿ ಎಷ್ಟು ಪ್ರೀತಿ ! ಅವನ ಹಿತಸಾಧನೆಯಲ್ಲಿಯೇ ನಿರತನಾಗಿರುವೆ. ಮೇಲಾಗಿ ಶಿಷ್ಟರ ಮಾರ್ಗವನ್ನೇ ಅನುಸರಿಸುತ್ತಿರುವೆ. ಇಂತಹ ನಿನ್ನ ಪ್ರಾರ್ಥನೆಯನ್ನು ಯಾವ ಮನುಷ್ಯನು ತಾನೇ ಅನುಮೋದಿಸದೇ ಇರುವನು ? ನೀನು ನಂದಿ ಗ್ರಾಮಕ್ಕೆ ಹೋಗಲು ನಮ್ಮೆಲ್ಲರ ಅನುಮತಿಯೂ ಇದೆ."

ತಾನು ಆಶಿಸಿದ್ದಂತೆಯೇ ಮಂತ್ರಿಗಳು ಹೇಳಿದ ಪರಮಪ್ರಿಯವಾದ ಮಾತನ್ನು ಕೇಳಿ ಭರತನು ಸಾರಥಿಗೆ ರಥವನ್ನು ಸಿದ್ಧಗೊಳಿಸುವಂತೆ ಆಜ್ಞಾಪಿಸಿದನು. ಅನಂತರ ಅವನು ಅಂತಃಪುರಕ್ಕೆ ಹೋಗಿ ನಗುಮುಖದಿಂದ ತನ್ನ ಮಾತೃಜನರೊಡನೆ ಮಾತನಾಡಿ ಅವರ ಅನುಜ್ಞೆಯನ್ನೂ ಪಡೆದು ಶತ್ರುಘ್ನನೊಡನೆ ರಥವನ್ನು ಹತ್ತಿದನು. ಶತ್ರುಘ್ನ-ಭರತರು ಬಹಳ ಶೀಘ್ರವಾಗಿ ರಥವನ್ನೇರಿ ಸಂತೋಷಭರಿತರಾಗಿ ಮಂತ್ರಿಗಳಿಂದಲೂ ಪುರೋಹಿತರಿಂದಲೂ ಸಮಾವೃತರಾಗಿ ನಂದಿಗ್ರಾಮಕ್ಕೆ ಹೊರಟರು. ವಸಿಷ್ಠರೇ ಮೊದಲಾದ ಗುರುಜನರೂ ಮತ್ತು ಬ್ರಾಹ್ಮಣರೂ ಭರತನ ರಥದ ಮುಂಭಾಗದಲ್ಲಿ ಪ್ರಯಾಣಮಾಡುತ್ತಿದ್ದರು. ಅಯೋಧ್ಯೆಯಿಂದ ಪೂರ್ವ ದಿಕ್ಕಿಗೆ ಪ್ರಯಾಣಮಾಡುತ್ತಾ ನಂದಿಗ್ರಾಮದ ಮಾರ್ಗವನ್ನು ಹಿಡಿದು ಹೊರಟರು.

ಭರತನು ತನ್ನನ್ನನುಸರಿಸಿ ಬರುವಂತೆ ಚತುರಂಗಸ್ಸೈನ್ಯಕ್ಕೆ ಆಜ್ಞೆ ಮಾಡದಿದ್ದರೂ ಸ್ವಪ್ರೇರಣೆಯಿಂದಲೇ ಗಜಾಶ್ವ-ರಥಗಳಿಂದ ಸಮಾಕುಲ ವಾಗಿದ್ದ ಸೈನ್ಯವು ಭರತನ ರಥದ ಹಿಂದೆ ಹೊರಟಿತು. ಹಾಗೆಯೇ ಅಯೋಧ್ಯಾಪಟ್ಟಣದ ನಾಗರಿಕರೆಲ್ಲರೂ ಭರತನ ರಥವನ್ನು ಹಿಂಬಾಲಿಸಿದರು. ಶ್ರೀರಾಮನ ದಿವ್ಯಪಾದುಕೆಗಳನ್ನು ತಲೆಯ ಮೇಲಿಟ್ಟುಕೊಂಡೇ ರಥದಲ್ಲಿ ಕುಳಿತಿದ್ದ, ಧರ್ಮಾತ್ಮನಾದ, ಭ್ರಾತೃವತ್ಸಲನಾದ ಭರತನು ಬಹಳ ಶೀಘ್ರವಾಗಿಯೇ ನಂದಿಗ್ರಾಮವನ್ನು ಸೇರಿದನು. ರಥದಿಂದಿಳಿದು ನಂದಿ ಗ್ರಾಮವನ್ನು ಪ್ರವೇಶಿಸಿದ ಭರತನು ಗುರುಜನರಿಗೆ ಹೇಳಿದನು :

ಏತದ್ರಾಜ್ಯಂ ಮಮ ಭ್ರಾತ್ರಾ ದತ್ತಂ ಸಂನ್ಯಾಸವತ್ಸ್ವಯಮ್ ।
ಯೋಗಕ್ಷೇಮವಹೇ ಚೇಮೇ ಪಾದುಕೇ ಹೇಮಭೂಷಿತೇ ॥೧೪॥

"ಗುರುಜನರೇ! ಈ ರಾಜ್ಯವನ್ನು ನಮ್ಮಣ್ಣನು ನನ್ನಲ್ಲಿ ನ್ಯಾಸರೂಪ ವಲ್ಲಿಟ್ಟಿರುವನು. ಈ ರಾಜ್ಯದ ಯೋಗ-ಕ್ಷೇಮಗಳನ್ನು ಸುವರ್ಣಭೂಷಿತ ವಾದ ಈ ದಿವ್ಯಪಾದುಕೆಗಳೇ ವಹಿಸಿಕೊಳ್ಳಲು ಸಮರ್ಥವಾಗಿವೆ."

ಹೀಗೆ ಹೇಳಿ ಭರತನು ಅಣ್ಣನು ತನ್ನಲ್ಲಿ ನ್ಯಾಸರೂಪವಾಗಿರಿಸಿದ್ದ ರಾಜ್ಯವನ್ನು ತಲೆಬಾಗಿ ನಮಸ್ಕರಿಸುತ್ತಾ ಆ ದಿವ್ಯಪಾದುಕೆಗಳಿಗೆ ಅರ್ಪಿಸಿ ದನು. ದುಃಖತಪ್ತನಾಗಿದ್ದ ಭರತನು ತನ್ನೆಲ್ಲ ಪ್ರಜೆಗಳಿಗೂ ಹೇಳಿದನು :

ಛತ್ರಂ ಧಾರಯತ ಕ್ಷಿಪ್ರಮಾರ್ಯಪಾದಾವಿಮೌ ಮತೌ ।
ಆಭ್ಯಾಂ ರಾಜ್ಯೇ ಸ್ಥಿತೋ ಧರ್ಮಃ ಪಾದುಕಾಭ್ಯಾಂ
ಗುರೋರ್ಮಮ ॥೧೫॥

"ಪ್ರಜೆಗಳೇ! ಈ ದಿವ್ಯಪಾದುಕೆಗಳ ಮೇಲೆ ಛತ್ರವನ್ನು ಹಿಡಿಯಿರಿ. ಇವುಗಳಿಗೆ ಚಾಮರಗಳಿಂದ ಬೀಸಿರಿ. ನಾನು ಈ ಎರಡು ದಿವ್ಯಪಾದುಕೆ ಗಳನ್ನು ಶ್ರೀರಾಮನ ದಿವ್ಯಪಾದಾರವಿಂದಗಳೆಂದೇ ಭಾವಿಸಿದ್ದೇನೆ. ಆ ನನ್ನ ಗುರುವಿನ ಪಾದುಕಾರೂಪವಾಗಿರುವ ಚರಣಕಮಲಗಳಿಂದಲೇ ನಮ್ಮ ರಾಜ್ಯ ದಲ್ಲಿ ಧರ್ಮದ ಸ್ಥಾಪನೆಯಾಗುತ್ತದೆ.

ಭ್ರಾತ್ರಾ ಹಿ ಮಯಿ ಸಂನ್ಯಾಸೋ ನಿಕ್ಷಿಪ್ತಃ ಸೌಹೃದಾದಯಮ್ ।
ತಮಿಮಂ ಪಾಲಯಿಷ್ಯಾಮಿ ರಾಘವಾಗಮನಂ ಪ್ರತಿ ॥೧೬॥

ನಮ್ಮಣ್ಣನು ರಾಜ್ಯರೂಪವಾದ ಈ ನ್ಯಾಸವನ್ನು ಸೋದರಪ್ರೇಮ ದಿಂದ ನನ್ನಲ್ಲಿರಿಸಿದ್ದಾನೆ. ಅವನು ಬರುವವರೆಗೂ ಈ ನ್ಯಾಸವನ್ನು ನಾನು ಪಾದುಕೆಗಳ ಪ್ರತಿನಿಧಿಯಾಗಿದ್ದುಕೊಂಡು ರಕ್ಷಿಸುತ್ತಿರುವೆನು.

ಕ್ಷಿಪ್ರಂ ಸಂಯೋಜಯಿತ್ವಾ ತು ರಾಘವಸ್ಯ ಪುನಃ ಸ್ವಯಮ್ ।
ಚರಣೌ ತೌ ತು ರಾಮಸ್ಯ ದ್ರಕ್ಷ್ಯಾಮಿ ಸಹಪಾದುಕೌ ॥೧೭॥

ಶ್ರೀರಾಮನು ಅಯೋಧ್ಯೆಗೆ ಬಂದೊಡನೆಯೇ ಈ ದಿವ್ಯಪಾದುಕೆ ಗಳನ್ನು ಅವನ ಚರಣಾರವಿಂದಗಳಿಗೇ ತೊಡಿಸಿ ಪಾದುಕೆಗಳಿಂದ ಕೂಡಿದ ಆ ದಿವ್ಯಚರಣಾರವಿಂದಗಳ ಸೊಬಗನ್ನು ನೋಡುತ್ತೇನೆ.

ತತೋ ನಿಕ್ಷಿಪ್ತಭಾರೋಽಹಂ ರಾಘವೇಣ ಸಮಾಗತಃ ।
ನಿವೇದ್ಯ ಗುರವೇ ರಾಜ್ಯಂ ಭಜಿಷ್ಯೇ ಗುರುವೃತ್ತಿತಾಮ್ ॥೧೯॥

ಆ ಶ್ರೀರಾಘವನ ಸಮಾಗಮವಾದೊಡನೆಯೇ ನಾನು ನ್ಯಾಸರೂಪದಲ್ಲಿರುವ ಈ ರಾಜ್ಯವನ್ನು ನನ್ನ ಗುರುವಿಗೊಪ್ಪಿಸಿ ಭಾರವನ್ನು ಕಳೆದುಕೊಳ್ಳುವೆನು. ಅನಂತರ ನಾನು ನಮ್ಮಣ್ಣನು ಹೇಳಿದ ಕೆಲಸಗಳನ್ನು ಮಾಡುತ್ತಾ ಅವನ ಶಿಷ್ಯನಾಗಿದ್ದು ಬಿಡುತ್ತೇನೆ.*

ರಾಘವಾಯ ಚ ಸಂನ್ಯಾಸಂ ದತ್ತ್ವೇಮೇ ವರಪಾದುಕೇ ।
ರಾಜ್ಯಂ ಚೇದಮಯೋಧ್ಯಾಂ ಚ ಧೂತಪಾಪೋ ಭವಾಮಿ ಚ॥೨೦॥

ಶ್ರೀರಾಮನು ನ್ಯಾಸರೂಪದಲ್ಲಿ ನನ್ನಲ್ಲಿಟ್ಟಿರುವ ಈ ರಾಜ್ಯವನ್ನೂ, ಅಯೋಧ್ಯಾಪಟ್ಟಣವನ್ನೂ ಮತ್ತು ಈ ದಿವ್ಯಪಾದುಕೆಗಳನ್ನೂ ಅವನಿಗೊಪ್ಪಿಸಿ ಪಾಪದಿಂದ ಬಿಡುಗಡೆಯನ್ನು ಹೊಂದುತ್ತೇನೆ. [1]

ಅಭಿಷಿಕ್ತೇ ತು ಕಾಕುತ್ಸ್ಥೇ ಪ್ರಹೃಷ್ಟಮುದಿತೇ ಜನೇ ।
ಪ್ರೀತಿರ್ಮಮ ಯಶಶ್ಚೈವ ಭವೇದ್ರಾಜ್ಯಾಚ್ಚತುರ್ಗುಣಮ್ ॥೨೧॥

---

*ಗುರುವೃತ್ತಿಃ–ವೃತ್ತಿಃ = ಆಚಾರ್ಯನ ವಿಷಯದಲ್ಲಿ ಶಿಷ್ಯನ ನಡವಳಿಕೆ. ಗುರುವಿನ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಮನುವು ಹೇಳಿದ್ದಾನೆ. ನೋದಿತೋ ಗುರುಣಾ ನಿತ್ಯಮಪ್ರಚೋದಿತ ಏವ ವಾ । ಕುರ್ಯಾದಧ್ಯಯನೇ ಯತ್ನಮಾಚಾರ್ಯಸ್ಯ ಹಿತೇಷು ಚ । ಸ್ಥಾಸ್ಯತಾಮಿತಿ ಚೋಕ್ತಃ ಸನ್ನಾಸೀತಾಭಿಮುಖಂ ಗುರೋಃ । ಹೀನಾನ್ನವಸ್ತ್ರವೇಷಃ ಸ್ಯಾತ್ಸರ್ವದಾ ಗುರುಸಂನಿಧೌ ॥ ಗುರೋರ್ಯತ್ರ ಪರೀವಾದೋ ನಿನ್ದಾ ವಾಪಿ ಪ್ರವರ್ತತೇ । ಕರ್ಣೌ ತತ್ರ ಪಿಧಾತವ್ಯೌ ಗನ್ತವ್ಯಂ ವಾ ತತೋಽನ್ಯತಃ ॥ ಶಿಷ್ಯನು ಯಾವಾಗಲೂ ಗುರುವಿನ ಹಿತವನ್ನೇ ಬಯಸಬೇಕು. ಗುರುವು ಹೇಳದಿದ್ದರೂ ವ್ಯಾಸಂಗದಲ್ಲಿ ಆಸಕ್ತನಾಗಿರಬೇಕು. ಗುರುವಿನ ವಿಷಯದಲ್ಲಿ ತ್ರಿಕರಣಶುದ್ಧಿಯಿಂದಿರಬೇಕು. ಗುರುವಿನ ಎದುರಿನಲ್ಲಿ ಯಾವ ವಿಧವಾದ ಆಡಂಬರವನ್ನೂ ತೋರಿಸಬಾರದು. ಗುರುವಿನ ಅಪ್ಪಣೆಯಿಲ್ಲದೆ ಅವನ ಎದುರಿಗೆ ಕುಳಿತುಕೊಳ್ಳಬಾರದು. ಗುರುವಿನ ಮೇಲೆ ಯಾರಾದರೂ ಅಪಾದನೆಯನ್ನು ಹೊರೆಸುತ್ತಿದ್ದರೆ ಅಥವಾ ಗುರುವನ್ನು ನಿಂದಿಸುತ್ತಿದ್ದರೆ ಕಿವಿಗಳನ್ನು ಮುಚ್ಚಿಕೊಳ್ಳಬೇಕು ಮತ್ತು ಆ ಸ್ಥಳವನ್ನೇ ಬಿಟ್ಟು ಹೋಗಬೇಕು.

1 ಧೂತಪಾಪೋ ಭವಾಮಿ : ಇದು ಭರತನ ಮಾತು : ಪಾಪರಹಿತನಾಗುತ್ತೇನೆ. ಭರ

ನಮ್ಮಣ್ಣನು ಪಟ್ಟಾಭಿಷಿಕ್ತನಾಗಿಬಿಟ್ಟರೆ ಪ್ರಜೆಗಳೆಲ್ಲರೂ ಸಂತೋಷಭರಿತರಾಗುತ್ತಾರೆ. ಆದರಿಂದ ನನಗಾಗುವ ಸಂತೋಷವಂತೂ ರಾಜ್ಯಲಾಭಕ್ಕಿಂತಲೂ ನಾಲ್ಕುಪಾಲು ಹೆಚ್ಚಿನದು. ಅಂತೆಯೇ ರಾಜ್ಯಭಾರಮಾಡಿಗಳಿಸುವ ಯಶಸ್ಸಿಗಿಂತಲೂ ನಾಲ್ಕುಪಾಲು ಹೆಚ್ಚಾದ ಯಶಸ್ಸು ಅಣ್ಣನ ಸೇವೆಯನ್ನು ಮಾಡಿಕೊಂಡಿರುವುದರಿಂದ ದೊರೆಯುತ್ತದೆ."

ಯಶೋವಂತನಾದ ಭರತನು ದೈನ್ಯದಿಂದ ಹೀಗೆ ಹೇಳಿ ದುಃಖದಿಂದಲೇ ಮಂತ್ರಿಗಳೊಡನೆ ನಂದಿಗ್ರಾಮದಲ್ಲಿ ರಾಜ್ಯಭಾರಮಾಡಲು ಉಪಕ್ರಮಿಸಿದನು. ವೀರನಾದ, ಭರತಪ್ರಭುವು ಅಣ್ಣನಂತೆಯೇ ಜಟಾವಲ್ಕಲಧರನಾಗಿ ಋಷಿವೇಷವನ್ನು ಧರಿಸಿ ಸೇನಾಸಹಿತನಾಗಿ ನಂದಿಗ್ರಾಮದಲ್ಲಿ ವಾಸಮಾಡುತ್ತಿದ್ದನು.

ಭ್ರಾತೃಪ್ರೇಮಿಯಾದ, ಅಣ್ಣನ ಮಾತನ್ನು ನಡೆಸುವುದರಲ್ಲಿ ಉತ್ಸುಕನಾಗಿದ್ದ, ಪ್ರತಿಜ್ಞೆಯನ್ನು ಯಥಾವತ್ತಾಗಿ ಪರಿಪಾಲಿಸುತ್ತಿದ್ದ ಭರತನು ಶ್ರೀರಾಮನ ಪಾದುಕೆಗಳಿಗೆ ಪಟ್ಟಾಭಿಷೇಕವನ್ನು ಮಾಡಿ ಅಣ್ಣನ ಆಗಮನವನ್ನೇ ನಿರೀಕ್ಷಿಸುತ್ತಾ ನಂದಿಗ್ರಾಮದಲ್ಲಿ ವಾಸಮಾಡುತ್ತಿದ್ದನು. ಭರತನು ಅನುದಿನವೂ ಪಾದುಕೆಗಳಿಗೆ ಪೂಜೆ ಮಾಡಿ ತಾನೇ ಅವುಗಳಿಗೆ ಚಾಮರವನ್ನು ಬೀಸುತ್ತಿದ್ದನು. ಛತ್ರವನ್ನು ಹಿಡಿಯುತ್ತಿದ್ದನು. ಅನಂತರ ಅನುದಿನದ ರಾಜ್ಯವ್ಯವಹಾರಗಳೆಲ್ಲವನ್ನೂ ಆ ದಿವ್ಯಪಾದುಕೆಗಳಿಗೆ ಒಪ್ಪಿಸುತ್ತಿದ್ದನು. ಹೀಗೆ ಶ್ರೀಮಂತನಾದ ಭರತನು ಆರ್ಯನಾದ ಶ್ರೀರಾಮನ ಪಾದುಕೆಗಳಿಗೆ ಪಟ್ಟಾಭಿಷೇಕಮಾಡಿ, ಆ ಪಾದುಕೆಗಳನ್ನೇ ತನ್ನ ಸ್ವಾಮಿಯೆಂದು ಭಾವಿಸಿ ಅವುಗಳಿಗೆ ಅಧೀನನಾಗಿ ರಾಜ್ಯಭಾರಮಾಡುತ್ತಿದ್ದನು.

ರಾಜ್ಯ-ಕೋಶಗಳ ಸಂಬಂಧವಾಗಿ ಯಾವುದಾದರೂ ವಿಶೇಷವಾದ ಕಾರ್ಯವನ್ನು ಮಾಡಬೇಕಾಗಿ ಬಂದಾಗ ಆ ವಿಷಯವನ್ನು ಮೊದಲು

---

ತನು ಯಾವ ಪಾಪವನ್ನೂ ಮಾಡಿಲ್ಲ. ಭರತನ ತಾಯಿಯು ಭರತನಿಗಾಗಿ ಮಾಡಿದ ಪಾಪ. ಇಲ್ಲಿ ಪಾಪಶಬ್ದಕ್ಕೆ ಪರಸ್ವತ್ತನ್ನು ಅಪಹರಿಸುವುದು ಎಂದರ್ಥ. ತನಗಾಗಿ ತನ್ನ ತಾಯಿಯು ಮಾಡಿದ ಪಾಪವನ್ನು ತನ್ನ ಪಾಪವೆಂದೇ ಭರತನು ಭಾವಿಸಿಕೊಳ್ಳುತ್ತಾನೆ. ಇದನ್ನೇ ರಘುವಂಶದಲ್ಲಿ ಕಾಳಿದಾಸನು–' ಮಾತುಃ ಪಾಪಸ್ಯ ಭರತಃ ಪ್ರಾಯಶ್ಚಿತ್ತಮಿವಾಕರೋತ್ ॥ '–ಎಂದು ಹೇಳಿದ್ದಾನೆ.

ಪಾದುಕೆಗಳಿಗೆ ನಿವೇದಿಸಿ ಅನಂತರ ಆ ಕಾರ್ಯವನ್ನು ಮಾಡುತ್ತಿದ್ದನು. ಯಾರಾದರೂ ಸಾಮಂತರಾಜರು ಅನರ್ಘವಾದ ಕಪ್ಪ-ಕಾಣಿಕೆಗಳನ್ನು ಒಪ್ಪಿಸಿ



ದಲ್ಲಿ ಅವನ್ನು ಮೊದಲು ಶ್ರೀರಾಮನ ಪಾದುಕೆಗಳಿಗೆ ಸಮರ್ಪಿಸಿ ಅನಂತರ ಅವುಗಳನ್ನು ಯಥಾವತ್ತಾಗಿ ಭಂಡಾರದಲ್ಲಿಡುವ ವ್ಯವಸ್ಥೆಯನ್ನು ಮಾಡುತ್ತಿದ್ದನು.

೧೧೫ನೆಯ ಸರ್ಗವು ಮುಗಿಯಿತು.

## ವೃದ್ಧ ಕುಲಪತಿಯ ಸಂಗಡ ಋಷಿಗಳೆಲ್ಲರೂ ಚಿತ್ರಕೂಟವನ್ನು ಬಿಟ್ಟು ಹೊರಟುಹೋದುದು :

**ಪ್ರತಿಯಾತೇ ತು ಭರತೇ ವಸನ್ರಾಮಸ್ತಪೋವನೇ ।**
**ಲಕ್ಷಯಾಮಾಸ ಸೋದ್ವೇಗಮಥೌತ್ಸುಕ್ಯಂ ತಪಸ್ವಿನಾಮ್ ॥೧॥**

ಭರತನು ಅಯೋಧ್ಯೆಗೆ ಹಿಂದಿರುಗಿದನಂತರ ಶ್ರೀರಾಮನು ಚಿತ್ರಕೂಟ ಪರ್ವತದಲ್ಲಿದ್ದ ಅರಣ್ಯದಲ್ಲೇ ವಾಸಮಾಡುತ್ತಿರುವಾಗ ತನ್ನ ಸುತ್ತಲೂ ವಾಸಮಾಡಿಕೊಂಡಿದ್ದ ತಪಸ್ವಿಗಳ ಉದ್ವೇಗವನ್ನೂ ಉತ್ಸುಕತೆಯನ್ನೂ ಗಮನಿಸಿದನು.

ಹಿಂದೆ ಇದೇ ಚಿತ್ರಕೂಟಪರ್ವತದಲ್ಲಿದ್ದ ಆಶ್ರಮಗಳಲ್ಲಿ ಯಾವ ಮಹರ್ಷಿಗಳು ಶ್ರೀರಾಮನನ್ನು ಆಶ್ರಯಿಸಿಕೊಂಡು ನಿಶ್ಚಿಂತರಾಗಿ ತಪಸ್ಸಿನಲ್ಲಿಯೇ ನಿರತರಾಗಿದ್ದರೋ–ಆ ಮಹರ್ಷಿಗಳೇ ಈಗ ಭೀತರಾಗಿಯೂ ಉತ್ಸುಕರಾಗಿಯೂ ಇರುವುದನ್ನು ಶ್ರೀರಾಮನು ಗಮನಿಸಿದನು.

ಕೆಲವರು ಋಷಿಗಳು ಶ್ರೀರಾಮನ ಕಡೆಗೆ ನೋಟವನ್ನು ಬೀರಿ ತಮ್ಮ ಜೊತೆಯವರೊಡನೆ ಪಿಸುಗುಟ್ಟುತ್ತಿದ್ದರು. ಕೆಲವರು ಹುಬ್ಬುಗಳನ್ನು ತಿರುಗಿಸುತ್ತಾ ತಮ್ಮ ಮನಸ್ಸಿನಲ್ಲಿರುವ ಭಯ-ಶಂಕೆಗಳನ್ನು ತೋರ್ಪಡಿಸುತ್ತಿದ್ದರು. ಹೀಗೆ ಅನೇಕವಿಧವಾದ ಸಂಜ್ಞೆಗಳಿಂದ ತಮ್ಮ ಮನಸ್ಸಿನ ಭಾವನೆಗಳನ್ನು ಒಡನಾಡಿಗಳಲ್ಲಿ ಸೂಚಿಸುತ್ತಾ ಗುಟ್ಟನಲ್ಲಿ ಮಾತನಾಡಿಕೊಳ್ಳುತ್ತಿದ್ದರು.

ಶ್ರೀರಾಮನು ಋಷಿಗಳ ಹಾವ-ಭಾವಗಳಿಂದ ಅವರ ಉತ್ಸುಕತೆಯನ್ನು ಗಮನಿಸಿದನು. ಅವರ ಚಿಂತಾಭಯಗಳಿಗೆ ತಾನು ಕಾರಣನಾಗಿರಬಹುದೆಂದು ಶಂಕಿಸಿ * ಆಶ್ರಮಗಳಿಗೆ ಯಜಮಾನನಾದ ಋಷಿಯನ್ನು ಸಂದರ್ಶಿಸಿ ಕೈಮುಗಿದುಕೊಂಡು ಹೇಳಿದನು :

---

* ೬ನೆಯ ಶ್ಲೋಕದಲ್ಲಿ ಕುಲಪತಿಂ ಋಷಿಂ ಎಂಬುದಾಗಿದೆ. ಕುಲಪತಿ ಎಂದರೆ ಹತ್ತು ಸಾವಿರ ಮಂದಿ ವಿದ್ಯಾರ್ಥಿಗಳನ್ನು ಅಶನ-ವಸನಗಳಿಂದ ಪೋಷಿಸಿ ವಿದ್ಯಾಭ್ಯಾಸಮಾಡಿಸುವ ಮುನಿ–ಎಂದು ಅರ್ಥವಾಗುತ್ತದೆ. ಋಷಿಂ ಎಂಬ ಪ್ರತ್ಯೇಕವಾದ ಪದವಿರುವುದ

ನ ಕಚ್ಚಿದ್ಭಗವನ್ಕಿಂಚಿತ್ಪೂರ್ವವೃತ್ತಮಿದಂ ಮಯಿ ।
ದೃಶ್ಯತೇ ವಿಕೃತಂ ಯೇನ ವಿಕ್ರಿಯನ್ತೇ ತಪಸ್ವಿನಃ ॥೫॥

"ಪೂಜ್ಯರೇ ! ನನ್ನ ಪೂರ್ವಜರಲ್ಲಿದ್ದ ಯಾವುದಾದರೂ ಸದ್ಗುಣಗಳು ನನ್ನಲ್ಲಿ ಕಾಣುತ್ತಿಲ್ಲವೇ ? ಅಥವಾ ನನ್ನಲ್ಲೇನಾದರೂ ವಿಕೃತವಾದ ಸ್ವಭಾವವನ್ನು ಇವರು ಕಾಣುತ್ತಿರುವರೇ ? ಯಾವ ಕಾರಣದಿಂದ ಈ ತಪಸ್ವಿಗಳು ನನ್ನನ್ನೇ ನೋಡಿಕೊಂಡು ತಮ್ಮ ಮನಸ್ಸಿನ ಉದ್ವೇಗವನ್ನು ಹೊರಗೆಡಹುತ್ತಿದ್ದಾರೆ ?

ಪ್ರಮಾದಾಚ್ಚರಿತಂ ಕಿಂಚಿತ್ಕಚ್ಚಿನ್ನಾವರಜಸ್ಯ ಮೇ ।
ಲಕ್ಷ್ಮಣಸ್ಯರ್ಷಿಭಿರ್ದೃಷ್ಟಂ ನಾನುರೂಪಮಿವಾತ್ಮನಃ ॥೬॥

ನನ್ನ ತಮ್ಮನಾದ ಲಕ್ಷ್ಮಣನೇನಾದರೂ ಪ್ರಮಾದವಶದಿಂದ ತಮಗೆ ತಕ್ಕುದಲ್ಲದ ಯಾವುದಾದರೂ ಕುತ್ಸಿತವಾದ ಕಾರ್ಯಮಾಡಿರುವುದನ್ನು ಈ ತಪಸ್ವಿಗಳೇನಾದರೂ ಕಂಡರೇ ?

ಕಚ್ಚಿಚ್ಛುಶ್ರೂಷಮಾಣಾ ವಃ ಶುಶ್ರೂಷಣಪರಾ ಮಯಿ ।
ಪ್ರಮದಾಭ್ಯುಚಿತಾಂ ವೃತ್ತಿಂ ಸೀತಾ ಯುಕ್ತಂ ನ ವರ್ತತೇ ॥೭॥

ಯಾವಾಗಲೂ ಅರ್ಘ್ಯ-ಪಾದ್ಯಾದಿಗಳನ್ನಿತ್ತು ನಿಮ್ಮನ್ನು ಸತ್ಕರಿಸುವುದರಲ್ಲಿಯೇ ನಿರತಳಾಗಿರುವ ಸೀತಾದೇವಿಯು ನನ್ನ ಶುಶ್ರೂಷೆಯಲ್ಲಿಯೇ ನಿರತಳಾಗಿ ಶ್ರೇಷ್ಠಸ್ತ್ರೀಗೆ ಉಚಿತವಾದ ಋಷಿಸೇವೆಯನ್ನೇನಾದರೂ ಮಾಡಲಿಲ್ಲವೇ ? "

ಶ್ರೀರಾಮನು ಹೀಗೆ ಪ್ರಶ್ನಿಸಲು, ಅನೇಕವರ್ಷಗಳ ತಪಶ್ಚರ್ಯೆಯಿಂದಲೂ ಮತ್ತು ವಯಸ್ಸಿನಿಂದಲೂ ವೃದ್ಧಾಪ್ಯವನ್ನು ಹೊಂದಿದ್ದ ಕುಲಪತಿಯು, ಭಯದಿಂದ ನಡುಗುತ್ತಿರುವನೋ ಎಂಬಂತೆ ವಯಸ್ಸಿಗನುಗುಣವಾದ ಗದ್ಗದಧ್ವನಿಯಿಂದ ಭೂತದಯಾಪರನಾದ ಶ್ರೀರಾಮನಿಗೆ ಹೇಳಿದನು :

---

ರಿಂದ ಕುಲಾನಾಂ = ಆಶ್ರಮಾಣಾಂ ಪತಿಂ ಋಷಿಂ ಆಶ್ರಮಗಳಿಗೆ ಪತಿಯಾದ ಋಷಿಯನ್ನು – ಎಂದು ಅರ್ಥಮಾಡಲಾಗಿದೆ. ಕುಲಮನ್ವಯಸಂಘಾತಗೃಹೋತ್ಪತ್ತ್ಯಾಶ್ರಮೇಷು ಚ ॥ ಎಂಬ ನಾನಾರ್ಥಮಾಲಾನಿಘಂಟುವಿನ ಪ್ರಕಾರ ಕುಲಶಬ್ದಕ್ಕೆ ಆಶ್ರಮವೆಂಬ ಅರ್ಥವೂ ಇದೆ.

**ಕುತಃ ಕಲ್ಯಾಣಸತ್ತ್ವಾಯಾಃ ಕಲ್ಯಾಣಾಭಿರತೇಸ್ತಥಾ ।**
**ಚಲನಂ ತಾತ ವೈದೇಹ್ಯಾಸ್ತಪಸ್ವಿಷು ವಿಶೇಷತಃ ॥೯॥**

"ಮಗು ! ಶುಭಸ್ವಭಾವದವಳಾದ ಇತರರ ಕಲ್ಯಾಣದಲ್ಲಿಯೇ ಯಾವಾಗಲೂ ನಿರತಳಾಗಿರುವ ವೈದೇಹಿಯು ತನ್ನ ಸಾಧ್ವೀವೃತ್ತಿಯಿಂದ ಹೇಗೆ ವಿಚಲಿತಳಾಗುವಳು? ಅದರಲ್ಲಿಯೂ ವಿಶೇಷವಾಗಿ ತಪಸ್ವಿಜನರ ವಿಷಯದಲ್ಲಿ ಇವಳ ಪೂಜ್ಯಭಾವನೆಯು ಹೇಗೆತಾನೇ ವಿಚಲಿತವಾದೀತು ?

ಭಾರ್ಯಾಸಮೇತನಾಗಿ ನೀನಿಲ್ಲಿರುವ ಕಾರಣದಿಂದಲೇ ರಾಕ್ಷಸರಿಂದ ಈ ತಪಸ್ವಿಗಳಿಗೆ ಉಪದ್ರವವುಂಟಾಗಿದೆ. ಇದರಿಂದ ಉದ್ವಿಗ್ನರಾಗಿರುವ ಇವರು ಪಿಸುಮಾತುಗಳನ್ನಾಡುತ್ತಿದ್ದಾರೆ. ರಾವಣನ ತಮ್ಮನಾದ ಖರನೆಂಬ ರಾಕ್ಷಸನು ಜನಸ್ಥಾನದಲ್ಲಿ ವಾಸಮಾಡುತ್ತಿರುವ ಎಲ್ಲ ಋಷಿಗಳನ್ನೂ ಕಿತ್ತೊಗೆಯುತ್ತಾ ಎಲ್ಲೆಡೆಗಳಲ್ಲಿಯೂ ನಿರ್ಭಯದಿಂದ ತಿರುಗುತ್ತಿದ್ದಾನೆ. ಅವನು ಅತಿದುರುಳನು. ಎಲ್ಲೆಡೆಗಳಲ್ಲಿ ಜಯಗಳಿಸುತ್ತಾ ವಿಜೃಂಭಿಸುತ್ತಿದ್ದಾನೆ. ಅವನು ಮಹಾಕ್ರೂರಿಯು ; ನರಮಾಂಸಭಕ್ಷಕನು ; ಅತಿಗರ್ವಿಷ್ಠನು ; ಪಾಪಕರ್ಮಿಯು. ನಿನ್ನ ಪರಾಕ್ರಮವನ್ನು ಅವನು ಸಹಿಸತಕ್ಕವನಲ್ಲ. ನೀನು ಎಂದಿನಿಂದ ಈ ಚಿತ್ರಕೂಟದ ಆಶ್ರಮದಲ್ಲಿ ವಾಸಮಾಡುತ್ತಿರುವೆಯೋ–ಅಂದಿನಿಂದಲೂ ಆ ದುಷ್ಟರಾಕ್ಷಸನ ಅನುಯಾಯಿಗಳು ತಪಸ್ವಿಗಳಿಗೆ ಯಾವುದಾದರೂ ರೀತಿಯಲ್ಲಿ ತೊಂದರೆಯನ್ನು ಕೊಡುತ್ತಲೇ ಇದ್ದಾರೆ. ಬಹುಜುಗುಪ್ಸಿತವಾದ, ಬಹುಕ್ರೂರವಾದ, ಬಹುಭಯಾನಕವಾದ, ನೋಡಲು ದಾರುಣವಾದ ರೂಪ-ವಿರೂಪಗಳನ್ನು ಧರಿಸಿ ಆ ರಾಕ್ಷಸರು ತಪಸ್ವಿಗಳಿಗೆ ಕಾಣಿಸಿಕೊಳ್ಳುತ್ತಾರೆ. ತಮ್ಮ ಮುಂದೆ ನಿಂತಿರುವ ಮುನಿಗಳ ಮೇಲೆ ಅಪ್ರಶಸ್ತವಾದ ಮತ್ತು ಅಪವಿತ್ರವಾದ ಮದ್ಯ-ಮಾಂಸಾದಿಗಳನ್ನು ಸುರಿಯುತ್ತಾರೆ. ಅವರು ಅಶುಚಿಗಳಾದೆವೆಂಬ ಭಾವನೆಯಿಂದ ಅತ್ತಲಿತ್ತ ಪರದಾಡುತ್ತಿರುವಾಗಲೇ ಆ ಕ್ರೂರಿಗಳಾದ ರಾಕ್ಷಸರು ಬಹಳ ಬೇಗ ಇತರ ಮುನಿಗಳನ್ನೂ ನಾನಾರೀತಿಯಲ್ಲಿ ಪೀಡಿಸುತ್ತಾರೆ. ಕ್ಷುದ್ರಬುದ್ಧಿಯವರಾದ ಆ ರಾಕ್ಷಸರು ಒಂದೊಂದು ಆಶ್ರಮದಲ್ಲಿಯೂ ಯಾರಿಗೂ ತಿಳಿಯದಂತೆ ಬಚ್ಚಿಟ್ಟುಕೊಂಡಿದ್ದು ಅಜಾಗರೂಕತೆಯಿಂದಿರುವ ಮುನಿಗಳು ಕಾಣಿಸಿಕೊಂಡೊಡನೆಯೇ ಅವರನ್ನು * ಹೆದರಿಸಿ

---

* ಶ್ಲೋಕ ೧೬. ಈ ಶ್ಲೋಕದಲ್ಲಿ ತಾಪಸಾನ್ ನಾಶಯನ್ತಃ ರಮನ್ತೇ–ಎಂಬ

ಓಡಿಸುತ್ತಾ ಆನಂದಪಡುತ್ತಾರೆ. ಯಜ್ಞವು ನಡೆಯುತ್ತಿರುವಾಗ ಆ ರಾಕ್ಷಸಾಧಮರು ಸ್ರುಕ್-ಸ್ರುವಗಳನ್ನೂ, ಪುಣ್ಯಾಹಕಲಶಗಳನ್ನೂ ತೆಗೆದೆಸೆಯುತ್ತಾರೆ. ಯಜ್ಞೇಶ್ವರನ ಮೇಲೆ ನೀರುಚೆಲ್ಲುತ್ತಾರೆ. ದೇವತೆಗಳನ್ನು ಆವಾಹಿಸಿ ಸ್ಥಾಪಿಸಲ್ಪಟ್ಟಿರುವ ಕಲಶಗಳನ್ನು ಒಡೆದು ಹಾಕುತ್ತಾರೆ. ಅಂತಹ ದುರಾತ್ಮರಾದ ರಾಕ್ಷಸರಿಂದ ಸಮಾವೃತವಾಗಿರುವ ಮತ್ತು ಅವರ ದುಷ್ಟಕಾರ್ಯಗಳಿಂದ ವಿದೂಷಿತವಾಗಿರುವ ಈ ಆಶ್ರಮಗಳನ್ನು ಬಿಟ್ಟು ಹೋಗಲು ಬಯಸಿರುವ ಈ ಮುನಿಗಳು ರಾಕ್ಷಸರ ಉಪಟಳವಿಲ್ಲದ ಬೇರೆಯ ಸ್ಥಳಕ್ಕೆ ಹೋಗಲು ನನ್ನನ್ನು ಪ್ರಚೋದಿಸುತ್ತಿದ್ದಾರೆ.

ಆ ದುಷ್ಟರಾದ ರಾಕ್ಷಸರು ಶರೀರಸಂಬಂಧವಾದ ಹಿಂಸೆಯನ್ನು ಮಾಡುವುದರ ಮೊದಲೇ ನಾವು ಈ ಆಶ್ರಮವನ್ನು ಪರಿತ್ಯಜಿಸುತ್ತೇವೆ. ಕಂದ-ಮೂಲ-ಫಲಗಳಿಂದ ಸಮೃದ್ಧವಾಗಿರುವ, ಚಿತ್ರ-ವಿಚಿತ್ರವಾಗಿರುವ, ಇಲ್ಲಿಗೆ ಸ್ವಲ್ಪ ದೂರದಲ್ಲಿಯೇ ಇರುವ ಅಶ್ವಮುನಿಗಳ ಆಶ್ರಮದಲ್ಲಿ ನನ್ನ ಶಿಷ್ಯಸಮೂಹದೊಡನೆ ಆಶ್ರಯವನ್ನು ಪಡೆಯುತ್ತೇನೆ. ನಿನ್ನ ವಿಷಯದಲ್ಲಿಯೂ ಖರನು ಅಯೋಗ್ಯವಾದ ರೀತಿಯಲ್ಲಿ ನಡೆದುಕೊಳ್ಳುವುದರ ಮೊದಲೇ ಪರಿವಾರದೊಡನೆ ಬರಲು ಇಷ್ಟಪಡುವುದಾದರೆ ನೀನು ಬಂದುಬಿಡು.

ಸಕಲತ್ರಸ್ಯ ಸಂದೇಹೋ ನಿತ್ಯಂ ಯತ್ತಸ್ಯ ರಾಘವ ।
ಸಮರ್ಥಸ್ಯಾಪಿ ಹಿ ಸತೋ ವಾಸೋ ದುಃಖಮಿಹಾದ್ಯ ತೇ ॥೨೨॥

ನೀನು ಸಮರ್ಥನೇನೋ ಆಗಿರಬಹುದು ; ಸರ್ವದಾ ಯೋಗ-ಕ್ಷೇಮ

---

ವಾಗಿದೆ. ತಪಸ್ವಿಗಳನ್ನು ನಾಶಮಾಡುತ್ತಾ ಆನಂದಪಡುತ್ತಾರೆ—ಎಂದು ಸ್ವಾಭಾವಿಕವಾದ ಅರ್ಥವಾಗುತ್ತದೆ. ಆದರೆ ಮುಂದೆ.೧೯ನೆಯ ಶ್ಲೋಕದಲ್ಲಿ ತತ್ಪುರಾ ತಪಸ್ವಿಷು ಶಾರೀರಾಮುಪಹಿಂಸಾಂ ದರ್ಶಯಂತಿ—ಈ ದುಷ್ಟರಾಕ್ಷಸರು ನಮಗೆ ಶರೀರಸಂಬಂಧವಾದ ಹಿಂಸೆಕೊಡುವ ಮೊದಲೇ—ಎಂದು ಕುಲಪತಿಗಳು ಹೇಳಿದ್ದಾರೆ. ಆದುದರಿಂದ ಈ ಶ್ಲೋಕದಲ್ಲಿರುವ ನಾಶಯಂತಃ ಪದಕ್ಕೆ ತಪಸ್ವಿಗಳನ್ನು ವಿನಾಶಗೊಳಿಸುತ್ತಾ—ಎಂಬ ಅರ್ಥವು ಸರಿಹೊಂದುವುದಿಲ್ಲ. ನಾಶಶಬ್ದಕ್ಕೆ ಪಲಾಯನ ಎಂಬ ಅರ್ಥವೂ ಇದೆ. ನಾಶಃ ಪಲಾಯನೇಽಪಿ ಸ್ಯಾತ್ [ ಮೇದಿನೀ ] ತಾಪಸಾನ್ ನಾಶಯಂತಃ—ತಾಪಸರನ್ನು ಪಲಾಯನಗೊಳಿಸುತ್ತಾ – ( ಪಲಾಯನಮಾಡುವಂತೆ ಮಾಡುತ್ತಾ ) ಎಂಬ ಅರ್ಥವು ಸಮಂಜಸವಾಗಿ ಕಾಣುತ್ತದೆ.

ರಕ್ಷಣೆಯಲ್ಲಿ ಸಿದ್ಧನಾಗಿಯೂ ಇರಬಹುದು. ಆದರೂ ನೀನು ಭಾರ್ಯಾಸಮೇತನಾಗಿರುವುದರಿಂದ ನಿನ್ನ ಮುಂದಿನ ಆಗು-ಹೋಗುಗಳ ವಿಷಯದಲ್ಲಿ ಸಂದೇಹವುಂಟಾಗಿದೆ. ಇಲ್ಲಿ ನೀನು ವಾಸಮಾಡಿಕೊಂಡಿರುವುದು ಮುಂದೆ ದುಃಖದಲ್ಲಿ ಪರ್ಯವಸಾನಹೊಂದಬಹುದು."

ಹೀಗೆ ಹೇಳಿದ ಕುಲಪತಿಗೆ ಶ್ರೀರಾಮನು ನಾನಾರೀತಿಯಲ್ಲಿ ಸಮಾಧಾನ ಹೇಳಿದನು. ಆದರೂ ಪ್ರಯಾಣದಲ್ಲಿ ಉತ್ಸುಕನಾಗಿದ್ದ ಕುಲಪತಿಯನ್ನೂ ಮತ್ತು ಅವನ ಶಿಷ್ಯರನ್ನೂ ತಡೆಯಲು ಶ್ರೀರಾಮನು ಸಮರ್ಥನಾಗಲಿಲ್ಲ. ಕುಲಪತಿಯು ಶ್ರೀರಾಮನನ್ನು ಅಭಿನಂದಿಸಿ ಹೋಗಿಬರುತ್ತೇನೆಂದು ತಿಳಿಸಿ ಶ್ರೀರಾಮನಿಗೆ ಸಾಂತ್ವನದ ಮಾತುಗಳನ್ನು ಹೇಳಿ ಚಿತ್ರಕೂಟದಲ್ಲಿದ್ದ ಆಶ್ರಮವನ್ನು ಪರಿತ್ಯಜಿಸಿ ಶಿಷ್ಯಸಮೇತನಾಗಿ ಅಶ್ವಮಹರ್ಷಿಯ ಆಶ್ರಮಕ್ಕೆ ಹೊರಟುಹೋದನು. ಶ್ರೀರಾಮನು ಪ್ರಯಾಣಹೊರಟಿದ್ದ ಋಷಿಗಳ ಸಮೂಹದ ಹಿಂದೆಯೇ ಸ್ವಲ್ಪ ದೂರದವರೆಗೂ ಹೋಗಿ ಅವರನ್ನು ಬೀಳ್ಕೊಟ್ಟನು. ಹಿಂದಿರುಗುವ ಸಮಯದಲ್ಲಿ ಪುನಃ ಕುಲಪತಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರವನ್ನು ಮಾಡಿದನು. ಅತ್ಯಂತಸುಪ್ರೀತರಾದ ಋಷಿಗಳಿಂದ ಆಶೀರ್ವಾದಗಳನ್ನೂ, ಹಿಂದಿರುಗಲು ಅನುಮತಿಯನ್ನೂ ಮತ್ತು ಸಮಯೋಚಿತವಾದ ಉಪದೇಶವನ್ನೂ ಪಡೆದು ಪುಣ್ಯತಮವಾದ ತನ್ನ ಆಶ್ರಮಕ್ಕೆ ಹಿಂದಿರುಗಿದನು.

ಅಲ್ಲಿಂದ ಮುಂದಕ್ಕೆ ಶ್ರೀರಾಮನು ಋಷಿಗಳಿಂದ ರಹಿತವಾಗಿದ್ದ ಆ ಆಶ್ರಮಪ್ರದೇಶವನ್ನು ಕ್ಷಣಮಾತ್ರವಾದರೂ ಬಿಟ್ಟುಹೋಗುತ್ತಿರಲಿಲ್ಲ. ಋಷಿಗಳಿಗೆ ಉಚಿತವಾದ ನಡತೆಗಳಿಂದ, ಶಮ-ದಮಾದಿ ಗುಣಗಳಿಂದ ವಿಶಿಷ್ಟರಾಗಿದ್ದ ತಾಪಸರು ಶ್ರೀರಾಮನನ್ನು ಯಾವಾಗಲೂ ಅನುಸರಿಸಿಕೊಂಡೇ ಇರುತ್ತಿದ್ದರು. ಆದರೆ ಈಗ ಅವರೆಲ್ಲರೂ ಬೇರೆಡೆಗೆ ಹೊರಟುಹೋದರು. *

೧೧೬ನೆಯ ಸರ್ಗವು ಮುಗಿಯಿತು.

* ವಿಷಯ ಪರಿಶಿಷ್ಟದಲ್ಲಿ

ಅಯೋಧ್ಯಾಕಾಂಡ ೧೧೭ನೆಯ ಸರ್ಗ

## ಶ್ರೀರಾಮ-ಲಕ್ಷ್ಮಣ-ಸೀತೆಯರು ಅತ್ರಿಮಹರ್ಷಿಗಳ ಆಶ್ರಮಕ್ಕೆ ಹೋದುದು : ಅತ್ರಿಮಹರ್ಷಿಗಳಿಂದ ಸತ್ಕಾರ : ಅನಸೂಯೆಯು ಸೀತೆಯನ್ನು ಸತ್ಕರಿಸಿದುದು

ರಾಘವಸ್ತ್ವಥ ಯಾತೇಷು ತಪಸ್ವಿಷು ವಿಚಿನ್ತಯನ್ ।
ನ ತತ್ರಾರೋಚಯದ್ವಾಸಂ ಕಾರಣೈರ್ಬಹುಭಿಸ್ತದಾ ॥೧॥

ಕುಲಪತಿಯ ಸಂಗಡ ಎಲ್ಲ ತಪಸ್ವಿಗಳೂ ಚಿತ್ರಕೂಟದ ಆಶ್ರಮಗಳಿಂದ ಹೊರಟುಹೋದುದರಿಂದಲೂ ಇನ್ನೂ ಹಲವಾರು ಕಾರಣಗಳಿಂದಲೂ ಶ್ರೀರಾಮನು ಚಿತ್ರಕೂಟಪರ್ವತದ ಆಶ್ರಮದಲ್ಲಿ ವಾಸಮಾಡಿಕೊಂಡಿರಲು ಇಷ್ಟಪಡಲಿಲ್ಲ. (ಕಾರಣಗಳನ್ನು ಶ್ರೀರಾಮನು ಹೀಗೆ ನಿರೂಪಿಸುತ್ತಾನೆ.)

ಇಹ ಮೇ ಭರತೋ ದೃಷ್ಟೋ ಮಾತರಶ್ಚ ಸನಾಗರಾಃ ।
ಸಾ ಚ ಮೇ ಸ್ಮೃತಿರನ್ವೇತಿ ತಾಂ ನಿತ್ಯಮನುಶೋಚತಃ ॥೨॥

'ಇಲ್ಲಿಯೇ ನಾನು ಭರತನನ್ನೂ, ತಾಯಂದಿರನ್ನೂ ಮತ್ತು ನಾಗರಿಕರನ್ನೂ ನೋಡಿದೆನು. ಭರತನಿಲ್ಲಿಗೆ ಬಂದಿದ್ದು, ರಾಜ್ಯಭಾರವನ್ನು ವಹಿಸುವಂತೆ ಅಂಗಲಾಚಿ ಬೇಡಿದ್ದು, ನನ್ನ ತಾಯಂದಿರು ದುಃಖಿಸಿದುದು, ಪ್ರಜೆಗಳ ಶೋಕ, ನಮ್ಮ ತಂದೆಯ ನಿಧನವಾರ್ತೆಯನ್ನು ಕೇಳಿದುದು-ಮುಂತಾದುವೆಲ್ಲವೂ ನನ್ನ ಸ್ಮರಣೆಗೆ ಬರುತ್ತಲೇ ಇರುತ್ತವೆ. ಇದರಿಂದ ನನ್ನ ಮನಸ್ಸು ಸಮಾಧಾನವನ್ನು ಕಳೆದುಕೊಳ್ಳುತ್ತಿದೆ. ಎರಡನೆಯದಾಗಿ : ಈ ಚಿತ್ರಕೂಟದ ಪ್ರಸ್ಥಭೂಮಿಯು ಮಹಾತ್ಮನಾದ ಭರತನ ಅಪಾರವಾದ ಸೈನ್ಯಕ್ಕೆ ವಿಶ್ರಾಂತಿಸ್ಥಳವಾಗಿದ್ದುದರಿಂದ ಆನೆ-ಕುದುರೆ ಮೊದಲಾದ ವಾಹನಗಳ ಲದ್ದಿಗಳಿಂದ ತುಂಬಿಹೋಗಿದೆ. ಆದುದರಿಂದ ನಾವು ಬೇರೆಡೆಗೆ ಹೊರಟುಹೋಗುವುದೇ ಸೂಕ್ತ' – ಹೀಗೆ ಶ್ರೀರಾಮನು ಯೋಚಿಸಿ ಸೀತಾ-ಲಕ್ಷ್ಮಣರೊಡನೆ ಚಿತ್ರಕೂಟದ ಆಶ್ರಮವನ್ನು ಬಿಟ್ಟು ಹೊರಟನು.

ಹೀಗೆ ಭಾರ್ಯಾಭ್ರಾತೃಸಮೇತನಾಗಿ ಹೊರಟ ಯಶಸ್ವಿಯಾದ ಶ್ರೀರಾಮನು ಅತ್ರಿಮಹರ್ಷಿಗಳ ಆಶ್ರಮಕ್ಕೆ ಹೋಗಿ ಸುಖಾಸೀನರಾಗಿದ್ದ

ಮಹರ್ಷಿಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು. ಪೂಜ್ಯರಾದ ಅತ್ರಿಗಳು ಶ್ರೀರಾಮನನ್ನು ಮಗನನ್ನೋಪಾದಿಯಲ್ಲಿ ತಬ್ಬಿಕೊಂಡು ನೆತ್ತಿ



ಯನ್ನು ಆಘ್ರಾಣಿಸಿದರು. ಅನಂತರ ಮಹರ್ಷಿಗಳೇ ಶ್ರೀರಾಮನಿಗೆ ಆತಿಥ್ಯ ವನ್ನಿತ್ತು ಸತ್ಕರಿಸಿದರು. ಬಳಿಕ ಲಕ್ಷ್ಮಣನನ್ನೂ ಸೀತಾದೇವಿಯನ್ನೂ ಸಂತೈ ಸಿದರು. ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಆಗಮಿಸಿದ, ಸರ್ವರಿಂದಲೂ ಸತ್ಕರಿಸಲ್ಪಡುತ್ತಿದ್ದ, ಮಹಾಭಾಗ್ಯಶಾಲಿನಿಯಾದ, ಸುಶೀಲೆಯಾದ, ತಪಸ್ವಿನಿ ಯಾದ, ವೃದ್ಧೆಯಾದ ಅನಸೂಯಾದೇವಿಯನ್ನು–ಧರ್ಮಜ್ಞರಾದ, ಸರ್ವ ಪ್ರಾಣಿಗಳ ಹಿತದಲ್ಲಿಯೇ ನಿರತರಾಗಿದ್ದ, ಋಷಿಶ್ರೇಷ್ಠರಾದ ಅತ್ರಿಮಹರ್ಷಿ ಗಳು ಸವಿಮಾತುಗಳಿಂದ ಸಂತೈಸುತ್ತಾ ಹೇಳಿದರು :

" ಪ್ರತಿಗೃಹ್ಣೀಷ್ವ ವೈದೇಹೀಂ – ನಮ್ಮ ಆಶ್ರಮಕ್ಕೆ ಆಗಮಿಸಿರುವ ವೈದೇಹಿಯನ್ನು ಕರೆದುಕೊಂಡು ಹೋಗು."

ಅನಂತರ ಅತ್ರಿಮಹರ್ಷಿಗಳು ಧರ್ಮಚಾರಿಣಿಯಾದ, ತಪಸ್ವಿನಿಯಾದ ಅನಸೂಯಾದೇವಿಯನ್ನು ಶ್ರೀರಾಮನಿಗೆ ಪರಿಚಯ ಮಾಡಿಕೊಡುತ್ತಾ ಹೇಳಿದರು.

"ರಾಘವ! ಹಿಂದೊಮ್ಮೆ ಹತ್ತು ವರ್ಷಗಳ ಕಾಲ ನಿರಂತರವಾದ ಅನಾವೃಷ್ಟಿಯಿಂದಾಗಿ ಲೋಕವೆಲ್ಲವೂ ಬೆಂದು-ಬೆಂಡಾಗಿ ಹೋಗಿದ್ದಿತು. ಆ ಸಮಯದಲ್ಲಿವಳು ತನ್ನ ತಪಸ್ಸಿನ ಪ್ರಭಾವದಿಂದ ಕಂದ-ಮೂಲ-ಫಲಗಳನ್ನು ಋಷಿಗಳ ಆಹಾರಾರ್ಥವಾಗಿ ಸೃಷ್ಟಿಸಿದಳು. ಜಾಹ್ನವೀನದಿಯು ಋಷಿಗಳ ಸ್ನಾನಾರ್ಥವಾಗಿ ಆಶ್ರಮಗಳ ಮೂಲಕವಾಗಿಯೇ ಹರಿದುಹೋಗುವಂತೆ ಮಾಡಿದಳು. ಉಗ್ರವಾದ ತಪಸ್ಸನ್ನು ಮಾಡಲು ಸಂಕಲ್ಪಿಸಿ ನಿಯಮ ಬದ್ಧಳಾಗಿ ಹತ್ತು ಸಾವಿರ ವರ್ಷಗಳ ಮಹಾತಪಸ್ಸನ್ನು ಮಾಡಿದಳು. ವ್ರತಸ್ನಾತೆಯಾದ ಇವಳ ತಪಃಪ್ರಭಾವದಿಂದ ಋಷಿಗಳ ತಪಸ್ಸಿಗೆ ಉಂಟಾಗಿದ್ದ ವಿಘ್ನಗಳೆಲ್ಲವೂ ದೂರಮಾಡಲ್ಪಟ್ಟವು. ದೇವಕಾರ್ಯದ ಕಾರಣದಿಂದಾಗಿ ಈ ಅನಸೂಯಾದೇವಿಯು ಒಮ್ಮೆ ಒಂದೇ ರಾತ್ರಿಯನ್ನು ಹತ್ತು ರಾತ್ರಿಗಳಷ್ಟು ದೀರ್ಘವಾಗುವಂತೆ ಮಾಡಿದಳು. ಇಂತಹ ಮಹಾಮಹಿಮಳಾದ ಅನಸೂಯಾದೇವಿಯನ್ನು ನೀನು ನಿನ್ನ ತಾಯಿಯಂತೆಯೇ ಭಾವಿಸು, ರಾಮ!*

ಸರ್ವಪ್ರಾಣಿಗಳಿಂದಲೂ ಅನುದಿನವೂ ನಮಸ್ಕರಿಸಲ್ಪಡುತ್ತಿರುವ, ತಪಸ್ವಿನಿಯಾದ, ವೃದ್ಧೆಯಾದ, ಕ್ರೋಧರಹಿತಳಾದ ಅನಸೂಯಾದೇವಿಯ ಬಳಿಗೆ ಸೀತಾದೇವಿಯು ಹೋಗಲಿ.

---

*ಅನಸೂಯಾದೇವಿಯು ಪಾತಿವ್ರತ್ಯದಲ್ಲಿ ಹೆಸರಾಂತವಳು. ಅನಸೂಯಾಶಬ್ದಕ್ಕೆ ಅಸೂಯೆ ಇಲ್ಲದಿರುವಿಕೆ, ಇತರರ ಗುಣಗಳಲ್ಲಿ ದ್ವೇಷವಿಲ್ಲದಿರುವಿಕೆ ಎಂದರ್ಥ. ನ ಗುಣಾನ್ ಗುಣಿನೋ ಹನ್ತಿ ಸ್ತೌತಿ ಚಾನ್ಯಗುಣಾನಪಿ । ನ ಹಸೇಚ್ಚಾನ್ಯದೋಷಾಂಶ್ಚ ಸಾನಸೂಯಾ ಪ್ರಕೀರ್ತಿತಾ ॥ ಗುಣವಂತರ ಗುಣಗಳನ್ನು ತೆಗಳದೇ, ಬೇರೆಯವರ ಗುಣಗಳನ್ನು ಪೊಗಳುತ್ತಾ, ಬೇರೆಯವರ ದೋಷಗಳನ್ನು ನೋಡಿ ಅಪಹಾಸ್ಯಮಾಡದೇ ಇರುವಿಕೆಗೆ ಅನಸೂಯೆಯೆಂದು ಹೇಳುತ್ತಾರೆ.

ಅನಸೂಯಾ ಪದಕ್ಕೆ ಆಧ್ಯಾತ್ಮದ ಪರವಾಗಿ ಕೆಲವರು ಹೀಗೆ ಅರ್ಥಮಾಡುತ್ತಾರೆ: ಅಸುಃ ಅಭಾವೇನ ವರ್ತತ ಇತಿ ಅಸೂಯಾ, ಕಂಡ್ವಾದಿತ್ವಾತ್ ಯಕ್; ಅಸೂಯಾಯಾಃ ಅಭಾವಃ ಅನಸೂಯಾ. ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳ ವ್ಯಾಪಾರ ವರ್ತನೆಯಿಲ್ಲದೆ ಮನಸ್ಸಿನೊಳಗೇ ಉಂಟಾಗುವ ಕಾರ್ಯಗಳ ಸ್ವರೂಪದ ಭಾವನೆಗೆ ಶುದ್ಧಸಂಕಲ್ಪವೆಂಬ ತಾತ್ಪರ್ಯ. ಈ ಶುದ್ಧಸಂಕಲ್ಪದ ತತ್ತ್ವದವಳೇ ಅನಸೂಯಾದೇವಿ. ಅತ್ರಿ–ಅನಸೂಯೆಯರ ತಪಸ್ಸಿನಿಂದ ಸಂತುಷ್ಟರಾದ ಬ್ರಹ್ಮ-ವಿಷ್ಣು-ಮಹೇಶ್ವರರು

ಅತ್ರಿಮಹರ್ಷಿಗಳು ಹೀಗೆ ಹೇಳಲು ಹಾಗೆಯೇ ಆಗಲೆಂದು ರಾಘವನು ಅವರಿಗೆ ಪ್ರತ್ಯುತ್ತರಿಸಿ ಧರ್ಮಜ್ಞಳಾದ ಸೀತಾದೇವಿಯನ್ನು ನೋಡಿ ಹೇಳಿದನು :

" ರಾಜಪುತ್ರಿ ! ಅತ್ರಿಮುನಿಗಳು ಹೇಳಿದುದನ್ನು ನೀನು ಕೇಳಿದೆಯಲ್ಲವೇ ! ನಿನ್ನ ಶ್ರೇಯಸ್ಸಿಗಾಗಿ ನೀನೀಗಲೇ ಅನಸೂಯಾದೇವಿಯ ಬಳಿಗೆ ಹೋಗು.

ಅನಸೂಯೇತಿ ಯಾ ಲೋಕೇ ಕರ್ಮಭಿಃ ಖ್ಯಾತಿಮಾಗತಾ ।
ತಾಂ ಶೀಘ್ರಮಭಿಗಚ್ಛ ತ್ವಮಭಿಗಮ್ಯಾಂ ತಪಸ್ವಿನೀಮ್ ॥೧೩॥

ತನ್ನ ಕರ್ಮಗಳಿಂದಲೇ ಯಾವಳು ಲೋಕದಲ್ಲಿ 'ಅನಸೂಯಾ' ಎಂಬ ಖ್ಯಾತಿಯನ್ನು ಪಡೆದಿರುವಳೋ ಮತ್ತು ಸಕಲರಿಂದಲೂ ಸಂದರ್ಶಿಸಲು ಯೋಗ್ಯಳಾಗಿರುವಳೋ–ಅಂತಹ ಮಹಾತಪಸ್ವಿನಿಯಾದ ಅನಸೂಯೆಯ ಬಳಿಗೆ ನೀನೀಗಲೇ ಹೋಗು."

ಸೀತೆಯು ಹಿತೈಷಿಯಾದ ಶ್ರೀರಾಮನು ಹೇಳಿದ ಮಾತನ್ನು ಕೇಳಿ ಧರ್ಮಜ್ಞೆಯಾದ ಅನಸೂಯಾದೇವಿಯ ಬಳಿಗೆ ಹೋದಳು.

ಅನಸೂಯಾದೇವಿಯು ಅತ್ಯಂತವೃದ್ಧೆಯಾಗಿದ್ದಳು. ಆವಳ ಅಂಗಾಂಗಗಳೆಲ್ಲವೂ ಶಿಥಿಲವಾಗಿ ಹೋಗಿದ್ದುವು. ಚರ್ಮವು ಸುಕ್ಕಿದ್ದಿತು. ಮುಪ್ಪಿ

---

ಅವರ ಇಚ್ಛೆಯಂತೆ ಅವರಿಗೆ ಪುತ್ರರಾಗಿ ಜನಿಸಿದರು. ಅವರೇ ಚಂದ್ರ-ದತ್ತ ದುರ್ವಾಸರು.

ಪ್ರಕೃತಸಂದರ್ಭದಲ್ಲಿ ಹತ್ತು ರಾತ್ರಿಗಳನ್ನು ಏಕರಾತ್ರಿಯನ್ನಾಗಿ ಪರಿವರ್ತಿಸಿದಳೆಂಬುದಕ್ಕೆ ಪುರಾಣಕಥೆಯು ಹೀಗೆ ನಿರೂಪಿತವಾಗಿದೆ. ಅನಸೂಯೆಯ ಸಖಿಯಾಗಿದ್ದ ಋಷಿಪತ್ನಿಯೊಬ್ಬಳನ್ನು ಮಾಂಡವ್ಯಮುನಿಯು ಯಾವುದೋ ಕಾರಣದಿಂದ " ಬೆಳಗಾಗುವುದರೊಳಗಾಗಿ ವಿಧವೆಯಾಗಿ ಹೋಗೆ " ಎಂದು ಶಪಿಸಿದನು. ಪ್ರಾತಃಕಾಲವೇ ಆಗದಿರಲೆಂದು ಅನಸೂಯಾಸಖಿಯು ಪ್ರತಿಶಾಪವನ್ನಿತ್ತಳು. ಸೂರ್ಯನ ಉದಯಾಸ್ತಗಳು ಸ್ಥಗಿತವಾದುವು. ದೇವತೆಗಳಿಗೆ ವ್ಯಾಕುಲವುಂಟಾಯಿತು. ಅವರೆಲ್ಲರೂ ಅನಸೂಯೆಯ ಸಮೀಪಕ್ಕೆ ಧಾವಿಸಿ ಬಂದರು. ಆ ಸಮಯದಲ್ಲಿ ದಯಾಮಯಿಯಾದ ಅನಸೂಯೆಯು ಹತ್ತು ರಾತ್ರಿಗಳನ್ನೂ ಏಕರಾತ್ರಿಯಂತೆ ಪರಿವರ್ತಿಸಿ, ತನ್ನ ಸಖಿಯ ವೈಧವ್ಯವನ್ನೂ ತನ್ನ ತಪೋಬಲದಿಂದ ದೂರೀಕರಿಸಿದಳು.

ನಿಂದಾಗಿ ಅವಳ ತಲೆಗೂದಲು ಬಿಳುಪಾಗಿದ್ದಿತು. ಗಾಳಿಯು ಬೀಸುತ್ತಿರು ವಾಗ ಬಾಳೆಯು ಕಂದು ಹೊಯ್ದಾಡುವಂತೆ ಅವಳು ತೂರಾಡುತ್ತಿದ್ದಳು. ಅಂತಹ ಮಹಾಭಾಗ್ಯಶಾಲಿನಿಯಾದ, ಪತಿವ್ರತೆಯಾದ ಅನಸೂಯೆಗೆ ಸೀತಾ ದೇವಿಯು ಏಕಾಗ್ರಚಿತ್ತಳಾಗಿ ತನ್ನ ಹೆಸರನ್ನು ಹೇಳಿಕೊಂಡು ನಮಸ್ಕರಿ ಸಿದಳು. ಕಳಂಕರಹಿತೆಯಾದ, ತಪಸ್ವಿನಿಯಾದ ಅನಸೂಯಾದೇವಿಗೆ ಅಭಿ ವಾದನಮಾಡಿದನಂತರ ಸೀತಾದೇವಿಯು ಕೈಮುಗಿದುಕೊಂಡು ಋಷಿಪತ್ನಿಯ ಯೋಗ-ಕ್ಷೇಮಗಳನ್ನು ವಿಚಾರಿಸಿದಳು. ಬಳಿಕ ಧರ್ಮಚಾರಿಣಿಯಾದ ಮಹಾಭಾಗ್ಯಶಾಲಿನಿಯಾದ ಸೀತಾದೇವಿಯನ್ನು ನೋಡಿ ಪರಮಹೃಷ್ಟಳಾದ ಅನಸೂಯೆಯು ಅವಳನ್ನು ಸವಿಮಾತುಗಳಿಂದ ಸಂತೈಸುತ್ತಾ ಹೇಳಿದಳು: "ದಿಷ್ಟ್ಯಾ ಧರ್ಮಮವೇಕ್ಷಸೇ—ಸೀತಾದೇವಿ! ಧರ್ಮೈಕದೃಷ್ಟಿಯುಳ್ಳವ ಳಾಗಿರುವುದು ನಿನ್ನ ಭಾಗ್ಯವಿಶೇಷ."

ತ್ಯಕ್ತ್ವಾ ಜ್ಞಾತಿಜನಂ ಸೀತೇ ಮಾನವೃದ್ಧಿಂ ಚ ಮಾನಿನಿ ।
ಅವರುದ್ಧಂ ವನೇ ರಾಮಂ ದಿಷ್ಟ್ಯಾ ತ್ವಮನುಗಚ್ಛಸಿ ॥೨೨॥

ನಿನ್ನ ಜ್ಞಾತಿ-ಬಾಂಧವರೆಲ್ಲರನ್ನೂ ಪರಿತ್ಯಜಿಸಿ—'ನಾನು ರಾಜ ಕುಮಾರಿ'—ಎಂಬ ಅಭಿಮಾನವನ್ನೂ ತೊರೆದು, ತಂದೆಯಿಂದ ನಿರ್ದೇಶಿತ ನಾದ ರಾಮನನ್ನು ಅರಣ್ಯದಲ್ಲಿಯೂ ಅನುಸರಿಸುತ್ತಿರುವುದು ಅತ್ಯಂತ ಭಾಗ್ಯದ ವಿಷಯವೇ ಆಗಿದೆ.

ನಗರಸ್ಥೋ ವನಸ್ಥೋ ವಾ ಶುಭೋ ವಾ ಯದಿ ವಾಶುಭಃ ।
ಯಾಸಾಂ ಸ್ತ್ರೀಣಾಂ ಪ್ರಿಯೋ ಭರ್ತಾ ತಾಸಾಂ ಲೋಕಾ
ಮಹೋದಯಾಃ ॥೨೩॥

ವೈದೇಹಿ! ಪತಿಯಾದವನು ಪಟ್ಟಣದಲ್ಲಿಯೇ ಇರಲಿ; ಅರಣ್ಯ ದಲ್ಲಿಯೇ ಇರಲಿ; ಪುಣ್ಯಾತ್ಮನಾಗಿರಲಿ; ಅಶುಭಕರ್ಮವುಳ್ಳವನಾಗಿರಲಿ;— ಹೇಗಿದ್ದರೂ ಯಾವ ಸ್ತ್ರೀಯರಿಗೆ ಅವನು ಪತಿಯೆಂಬ ಕಾರಣದಿಂದಲೇ ಪ್ರಿಯ ತಮನಾಗಿರುವನೋ ಅಂತಹವರಿಗೆ ಅತ್ಯಂತಶ್ರೇಷ್ಠವಾದ ಲೋಕಗಳು ಲಭಿ ಸುತ್ತವೆ.

ದುಃಶೀಲಃ ಕಾಮವೃತ್ತೋ ವಾ ಧನೈರ್ವಾ ಪರಿವರ್ಜಿತಃ ।
ಸ್ತ್ರೀಣಾಮಾರ್ಯಸ್ವಭಾವಾನಾಂ ಪರಮಂ ದೈವತಂ ಪತಿಃ ॥೨೪॥

ಪತಿಯಾದವನು ದುಃಶೀಲನೇ ಆಗಿರಲಿ ; ಕಾಮಚಾರಿಯೇ ಆಗಿರಲಿ ; ದಟ್ಟದರಿದ್ರನೇ ಆಗಿರಲಿ – ಆರ್ಯರ ಮಾರ್ಗಾನುಸಾರಿಗಳಾದ, ಸಾತ್ತ್ವಿಕ ಸ್ವಭಾವವಿರುವ ಸ್ತ್ರೀಯರಿಗೆ ಪತಿಯೇ ಪರದೇವತೆಯಾಗಿರುವನು.

ನಾತೋ ವಿಶಿಷ್ಟಂ ಪಶ್ಯಾಮಿ ಬಾನ್ಧವಂ ವಿಮೃಶನ್ತ್ಯಹಮ್ ।
ಸರ್ವತ್ರ ಯೋಗ್ಯಂ ವೈದೇಹಿ ತಪಃ ಕೃತಮಿವಾವ್ಯಯಮ್ ॥೨೫॥

ಜನಕಪುತ್ರಿ ! ನಾನು ಬಹುಪ್ರಕಾರವಾಗಿ ವಿಮರ್ಶೆಮಾಡಿದರೂ ಪತಿಗಿಂತಲೂ ಅಧಿಕನಾದ ಬಂಧುವನ್ನು ಮೂರು ಲೋಕಗಳಲ್ಲಿಯೂ ಕಾಣದವಳಾಗಿದ್ದೇನೆ. ಮಾಡಿದ ತಪಸ್ಸಿಗೆ ಅಳಿವಿಲ್ಲದ ಫಲವು ಸಿಕ್ಕುವಂತೆ – ಪತಿಶುಶ್ರೂಷೆಯೆಂಬ ತಪಸ್ಸಿಗೆ ಅವಿನಾಶಿಯಾದ ಫಲವು ಸಿಕ್ಕುತ್ತದೆ. ಇಹ-ಪರಗಳೆರಡರಲ್ಲಿಯೂ ಸ್ತ್ರೀಯರಿಗೆ ಸುಖವನ್ನು ದೊರಕಿಸಿಕೊಡಲು ಪತಿಯೊಬ್ಬನೇ ಯೋಗ್ಯನಾಗಿರುತ್ತಾನೆ.

ನ ತ್ವೇವಮವಗಚ್ಛನ್ತಿ ಗುಣದೋಷಮಸತ್‌ಸ್ತ್ರಿಯಃ ।
ಕಾಮವಕ್ತವ್ಯಹೃದಯಾ ಭರ್ತೃನಾಥಾಶ್ಚರನ್ತಿ ಯಾಃ ॥೨೬॥

ಪ್ರಾಪ್ನುವನ್ತ್ಯಯಶಶ್ಚೈವ ಧರ್ಮಭ್ರಂಶಂ ಚ ಮೈಥಿಲಿ ।
ಅಕಾರ್ಯವಶಮಾಪನ್ನಾಃ ಸ್ತ್ರಿಯೋ ಯಾಃ ಖಲು ತದ್ವಿಧಾಃ ॥೨೭॥

ಆದರೆ ಪತಿಶುಶ್ರೂಷೆಯಲ್ಲಿರುವ ಮಹಾಗುಣಗಳನ್ನೂ, ಪತಿನಿಂದೆಯಲ್ಲಿರುವ ಮಹಾದೋಷಗಳನ್ನೂ ದುಷ್ಟರಾದ ಸ್ತ್ರೀಯರು ಅರಿಯರು. ಯಾವ ಸ್ತ್ರೀಯರು ಕಾಮಾಭಿಭೂತವಾದ ಹೃದಯವುಳ್ಳವರಾಗಿ ಪತಿಯು ತಮ್ಮ ಅಡಿಯಾಳಾಗಿರುವಂತೆ ವರ್ತಿಸುವರೋ–ಅಂತಹ ಸ್ತ್ರೀಯರು ಮಾಡಬಾರದ ಕಾರ್ಯಗಳಲ್ಲಿ ತೊಡಗಿ ಅಪಯಶಸ್ಸನ್ನು ಹೊಂದುತ್ತಾರೆ ಮತ್ತು ಧರ್ಮಭ್ರಷ್ಟರೂ ಆಗುತ್ತಾರೆ.

ತ್ವದ್ವಿಧಾಸ್ತು ಗುಣೈರ್ಯುಕ್ತಾ ದೃಷ್ಟಲೋಕಪರಾವರಾಃ ।
ಸ್ತ್ರಿಯಃ ಸ್ವರ್ಗೇ ಚರಿಷ್ಯನ್ತಿ ಯಥಾ ಧರ್ಮಕೃತಸ್ತಥಾ ॥೨೮॥

ಆದರೆ ನಿನ್ನಂತಹ ಗುಣಸಂಪನ್ನೆಯರಾದ, ಐಹಿಕ-ಆಮುಷ್ಮಿಕಫಲಗಳನ್ನು ಹೇಗೆ ಪಡೆಯಬಹುದೆಂಬುದನ್ನು ತಿಳಿದಿರುವ ಸ್ತ್ರೀಯರು–ಪುಣ್ಯಮಾಡಿದವರು ಸ್ವರ್ಗಲೋಕದಲ್ಲಿ ವಿಹರಿಸುವಂತೆ–ವಿಹರಿಸುತ್ತಾರೆ.

ತದೇವಮೇನಂ ತ್ವಮನುವ್ರತಾ ಸತೀ
ಪತಿಪ್ರಧಾನಾ ಸಮಯಾನುವರ್ತಿನೀ ।
ಭವಸ್ವ ಭರ್ತುಃ ಸಹಧರ್ಮಚಾರಿಣೀ
ಯಶಶ್ಚ ಧರ್ಮಂ ಚ ತತಃ ಸಮಾಪ್ಸ್ಯಸಿ ॥೨೯॥

ವೈದೇಹಿ ! ನೀನೂ ಇದೇ ರೀತಿಯಲ್ಲಿ ನಿನ್ನ ಪತಿಯಾದ ಶ್ರೀರಾಮ ಚಂದ್ರನನ್ನೇ ಅನುಸರಿಸಿಕೊಂಡಿರುತ್ತಾ ಸತೀಧರ್ಮವನ್ನು ಪರಿಪಾಲಿಸು. ಪತಿಯನ್ನೇ ಪ್ರಧಾನದೇವತೆಯೆಂದು ಭಾವಿಸುತ್ತಾ ಎಲ್ಲ ಆಚಾರ-ವ್ಯವಹಾರ ಗಳಲ್ಲಿಯೂ ಅವನನ್ನು ಎಡಬಿಡದೇ ಅನುಸರಿಸುತ್ತಿರು. ಅವನು ಮಾಡುವ ಧರ್ಮಕಾರ್ಯಗಳಲ್ಲಿ ಸಹಭಾಗಿನಿಯಾಗು. ಹೀಗೆ ಮಾಡುವುದರಿಂದ ನೀನು ಅಪಾರವಾದ ಯಶಸ್ಸನ್ನೂ-ಪುಣ್ಯವನ್ನೂ ಪಡೆಯುವೆ."

೧೧೭ನೆಯ ಸರ್ಗವು ಮುಗಿಯಿತು.

ಅಯೋಧ್ಯಾಕಾಂಡ ೧೧೮ನೆಯ ಸರ್ಗ

## ಸೀತಾ-ಅನಸೂಯೆಯರ ಸಂಭಾಷಣೆ: ಅನಸೂಯೆಯು ವೈದೇಹಿಗೆ ದಿವ್ಯವಾದ ಮಾಲ್ಯಾಭರಣಗಳನ್ನು ಇತ್ತುದು: ಅನಸೂಯೆಯ ಕೇಳಿಕೆಗೆ ಸೀತೆಯು ತನ್ನ ಸ್ವಯಂವರದ ಕಥೆಯನ್ನು ಹೇಳಿದುದು

ಸಾ ತ್ವೇವಮುಕ್ತಾ ವೈದೇಹೀ ತ್ವನಸೂಯಾನಸೂಯಯಾ ।
ಪ್ರತಿಪೂಜ್ಯ ವಚೋ ಮನ್ದಂ ಪ್ರವಕ್ತುಮುಪಚಕ್ರಮೇ ॥೧॥

ಅನಸೂಯಾದೇವಿಯಿಂದ ಹೀಗೆ ಉಪದಿಷ್ಟಳಾದ ಅಸೂಯಾರಹಿತ ಳಾದ ಸೀತಾದೇವಿಯು ಋಷಿಪತ್ನಿಯನ್ನು ಯಥೋಚಿತವಾಗಿ ಪೂಜಿಸಿ ಮೆಲ್ಲನೆ ಮಾತನಾಡಲು ಉಪಕ್ರಮಿಸಿದಳು.

"ದೇವಿ ! ನೀನು ಪ್ರಪಂಚದಲ್ಲಿರುವ ಸ್ತ್ರೀಯರಲ್ಲಿಯೇ ಶ್ರೇಷ್ಠಳಾ ಗಿರುವೆ. ನಿನ್ನ ಮುಖಾರವಿಂದದಿಂದ ಇಂತಹ ಮಾತುಗಳು ಬಂದುದರಲ್ಲಿ ಆಶ್ಚರ್ಯವೇನೂ ಇಲ್ಲ. ಸ್ತ್ರೀಯರಿಗೆ ಪತಿಯೇ ಗುರುವು ಎಂಬ ವಿಷಯವು ನನಗೂ ತಿಳಿದಿರುವುದು.

ಯದ್ಯಸ್ಯೈಷ ಭವೇದ್ಭರ್ತಾ ಅನಾರ್ಯೋ ವೃತ್ತವರ್ಜಿತಃ |
ಅದ್ವೈಧಮುಪಚರ್ತವ್ಯಸ್ತಥಾಪ್ಯೇಷ ಮಯಾ ಭವೇತ್ ||೩||

ಪತಿಯು ಹೇಗೇ ಇರಲಿ ; ಅನಾರ್ಯನಾಗಿರಲಿ ; ಚಾರಿತ್ರಶೂನ್ಯನಾಗಿರಲಿ–ಅವನಲ್ಲಿರುವ ಗುಣಾವಗುಣಗಳೆರಡನ್ನೂ ವಿವೇಚಿಸದೇ ಪತಿಯೇ ಪರದೈವವೆಂಬ ಏಕೈಕನಿಷ್ಠೆಯಿಂದ ಅವನ ಶುಶ್ರೂಷೆಯನ್ನು ಮಾಡುತ್ತಿರಬೇಕು. ಹಾಗೆ ಪತಿಸೇವೆಯನ್ನು ಮಾಡುವುದು ನನ್ನ ಕರ್ತವ್ಯವಾಗಿರುವುದು.

ಕಿಂ ಪುನರ್ಯೋ ಗುಣಶ್ಲಾಘ್ಯಃ ಸಾನುಕ್ರೋಶೋ ಜಿತೇನ್ದ್ರಿಯಃ |
ಸ್ಥಿರಾನುರಾಗೋ ಧರ್ಮಾತ್ಮಾ ಮಾತೃವತ್ಪಿತೃವತ್ಪ್ರಿಯಃ ||೪||

ಹೀಗಿರುವಾಗ ಯಾವನು ಪ್ರಶಂಸನೀಯವಾದ ಗುಣಗಳನ್ನು ಹೊಂದಿರುವನೋ, ದಯಾಪರನೋ, ಜಿತೇಂದ್ರಿಯನೋ, ಸ್ಥಿರವಾದ ಅನುರಾಗವುಳ್ಳವನೋ, ಧರ್ಮಾತ್ಮನೋ, ತಂದೆ-ತಾಯಿಗಳಲ್ಲಿ ಪ್ರೇಮವನ್ನು ತೋರುವನೋ, ತಂದೆ-ತಾಯಿಗಳಂತೆಯೇ ಪ್ರಿಯನಾಗಿರುವನೋ–ಅಂತಹ ಮಹಾಪುರುಷನಾದ ನನ್ನ ಪತಿಯ ವಿಷಯದಲ್ಲಿ ಹೇಳತಕ್ಕದೇನಿದೆ ? * ಇಂತಹವನ ಶುಶ್ರೂಷೆಮಾಡುವುದು ಆನಂದದಾಯಕವಲ್ಲವೇ ?

ರಾಮನ ಶ್ಲಾಘ್ಯವಾದ ಗುಣಗಳನ್ನು ಎಷ್ಟೆಂದು ವರ್ಣಿಸಲಿ !

ಯಾಂ ವೃತ್ತಿಂ ವರ್ತತೇ ರಾಮಃ ಕೌಸಲ್ಯಾಯಾಂ ಮಹಾಬಲಃ |
ತಾಮೇವ ನೃಪನಾರೀಣಾಮನ್ಯಾಸಾಮಪಿ ವರ್ತತೇ ||೫||

ಮಹಾಬಲನಾದ ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯಾದೇವಿಯ ವಿಷಯದಲ್ಲಿ ಹೇಗೆ ಆದರ-ಗೌರವಗಳಿಂದ ನಡೆದುಕೊಳ್ಳುವನೋ ಹಾಗೆಯೇ ದಶರಥರಾಜನ ಇತರ ಪತ್ನಿಯರ ವಿಷಯದಲ್ಲಿಯೂ ನಡೆದುಕೊಳ್ಳುತ್ತಾನೆ.

ಸಕೃದ್ದೃಷ್ಟಾಸ್ವಪಿ ಸ್ತ್ರೀಷು ನೃಪೇಣ ನೃಪವತ್ಸಲಃ |
ಮಾತೃವದ್ವರ್ತತೇ ವೀರೋ ಮಾನಮುತ್ಸೃಜ್ಯ ಧರ್ಮವಿತ್ ||೬||

---

* ಮಾತೃವರ್ತೀ ಪಿತೃಪ್ರಿಯಃ ಎಂಬ ಪಾಠಾಂತರದ ಪ್ರಕಾರ :– ಮಾತೃಶುಶ್ರೂಷಾನಿರತನಾಗಿರುವನೋ, ತಂದೆಗೆ ಬಹುಪ್ರಿಯನಾಗಿದ್ದನೋ–ಅಂತಹವನ ವಿಷಯದಲ್ಲಿ ಹೇಳತಕ್ಕದ್ದೇನಿದೆ ?

ದಶರಥನು ಪತ್ನೀಭಾವದಿಂದ ಯಾರಾವರೂ ಸ್ತ್ರೀಯರನ್ನು ಒಂದೇ ಒಂದು ಬಾರಿಗೆ ನೋಡಿದ್ದರೂ-ತಾನು ರಾಜಪುತ್ರನೆಂಬ ಅಭಿಮಾನವನ್ನೂ ತೊರೆದು-ತನ್ನ ತಾಯಿಯಾದ ಕೌಸಲ್ಯಾದೇವಿಯ ಶುಶ್ರೂಷೆಯನ್ನು ಮಾಡುವಂತೆಯೇ ರಾಜನಿಗೆ ಬಹುಪ್ರಿಯನಾದ ಧರ್ಮಾತ್ಮನಾದ ಈ ನನ್ನ ಶ್ರೀರಾಮನು, ಆ ಸ್ತ್ರೀಯರ ಶುಶ್ರೂಷೆಯನ್ನೂ ಮಾಡುತ್ತಾನೆ. ಇಂತಹ ಮಹಾಪುರುಷನ ಶುಶ್ರೂಷೆಯನ್ನು ಹೇಗೆ ಮಾಡಬೇಕೆಂಬುದನ್ನು ನಾನು ಚೆನ್ನಾಗಿ ತಿಳಿದಿರುವೆನು. ಮೇಲಾಗಿ ಭಯಾವಹವಾದ, ನಿರ್ಜನವಾದ ಈ ಅರಣ್ಯಕ್ಕೆ ಶ್ರೀರಾಮನೊಡನೆ ಹೊರಟಾಗ ನನ್ನ ಅತ್ತೆಯಾದ ಕೌಸಲ್ಯಾದೇವಿಯು ಹೇಳಿರುವ ಹಿತಕರವಾದ ಮಾತುಗಳೆಲ್ಲವನ್ನೂ ನಾನು ಹೃದಯದಲ್ಲಿ ಧರಿಸಿಕೊಂಡಿರುವೆನು. ನನ್ನನ್ನು ಶ್ರೀರಾಮನಿಗೆ ಧಾರೆಯೆರೆದು ಕೊಡುವ ಸಮಯದಲ್ಲಿ ಅಗ್ನಿಯ ಸಮ್ಮುಖದಲ್ಲಿ ನನ್ನ ತಾಯಿಯು ಪತಿಯ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದರ ಬಗೆಗೆ ನಿರ್ದೇಶಿಸಿದ್ದಾಳೆ. ಅದನ್ನೂ ನಾನು ನನ್ನ ಸ್ಮೃತಿಪಥದಲ್ಲಿ ಇಟ್ಟುಕೊಂಡಿದ್ದೇನೆ. ಧರ್ಮಚಾರಿಣಿಯೇ! ನಿನ್ನ ಉಪದೇಶದಿಂದಾಗಿ ನನ್ನ ಅತ್ತೆಯ ಮತ್ತು ತಾಯಿಯ ಉಪದೇಶಗಳನ್ನು ನವೀಕರಿಸಿಕೊಂಡಂತಾಗಿದೆ.

ಪತಿಶುಶ್ರೂಷಣಾನ್ನಾರ್ಯಾಸ್ತಪೋ ನಾಸ್ತ್ಯದ್ವಿಧೀಯತೇ ||೯||

ಹೆಂಗಸಿಗೆ ಪತಿಶುಶ್ರೂಷೆಯೆಂಬ ತಪಸ್ಸಿಗಿಂತಲೂ ಮಿಗಿಲಾದ ಯಾವ ತಪಸ್ಸೂ ವಿಹಿತವಾಗಿಲ್ಲ.

ಸಾವಿತ್ರೀ ಪತಿಶುಶ್ರೂಷಾಂ ಕೃತ್ವಾ ಸ್ವರ್ಗೇ ಮಹೀಯತೇ ।
ತಥಾವೃತ್ತಿಶ್ಚ ಯಾತಾ ತ್ವಂ ಪತಿಶುಶ್ರೂಷಯಾ ದಿವಮ್ ||೧೦||

ಸತ್ಯವಂತನ ಪತ್ನಿಯಾದ ಸಾವಿತ್ರಿಯು ಪತಿಶುಶ್ರೂಷಾತಪಸ್ಸಿನ ಫಲವಾಗಿಯೇ ಇಂದು ಸ್ವರ್ಗದಲ್ಲಿಯೂ ಪೂಜಿಸಲ್ಪಡುತ್ತಿದ್ದಾಳೆ. ಅದೇ ವಿಧವಾದ ವೃತ್ತಿಯುಳ್ಳ ಪತಿಶುಶ್ರೂಷಾಪರಾಯಣೆಯಾದ ನೀನೂ ಕೂಡ ಸಶರೀರಳಾಗಿಯೇ ಸ್ವರ್ಗಕ್ಕೆ ಹೋಗುವ ಸಾಮರ್ಥ್ಯವನ್ನೂ ಪಡೆದುಕೊಂಡಿರುವೆ.

ವರಿಷ್ಠಾ ಸರ್ವನಾರೀಣಾಮೇಷಾ ಚ ದಿವಿ ದೇವತಾ ।
ರೋಹಿಣೀ ನ ವಿನಾ ಚನ್ದ್ರಂ ಮುಹೂರ್ತಮಪಿ ದೃಶ್ಯತೇ ||೧೧||

ನಾರಿಯರಲ್ಲಿಯೇ ಶ್ರೇಷ್ಠಳಾದ, ಸ್ವರ್ಗದಲ್ಲಿ ದೇವತೆಯಾಗಿರುವ ರೋಹಿಣಿಯು ತನ್ನ ಪತಿಶುಶ್ರೂಷಾತಪಸ್ಸಿನ ಪ್ರಭಾವದಿಂದಾಗಿ ಪತಿಯಾದ ಚಂದ್ರನಿಂದ ವಿಹೀನಳಾಗಿ ಮುಹೂರ್ತಕಾಲಮಾತ್ರವೂ ಕಾಣಿಸಿಕೊಳ್ಳು ವುದಿಲ್ಲ.

ಇಂತಹ ಶ್ರೇಷ್ಠರಾದ ಬಹುಮಂದಿ ಸ್ತ್ರೀಯರು ಪತಿಶುಶ್ರೂಷಾ ವ್ರತದಲ್ಲಿಯೇ ದೃಢಮನಸ್ಸುಳ್ಳವರಾಗಿದ್ದು ತಮ್ಮ ಇಂತಹ ಪತಿಸೇವಾ ರೂಪವಾದ ಪುಣ್ಯಕಾರ್ಯದಿಂದ ದೇವಲೋಕದಲ್ಲಿ ಈಗಲೂ ಪೂಜಿಸಲ್ಪಡು ತ್ತಿದ್ದಾರೆ. ”

ಸೀತೆಯು ಹೇಳಿದ ಆ ಮಾತುಗಳನ್ನು ಕೇಳಿ ಅನಸೂಯೆಯು ಪರಮ ಹೃಷ್ಟಳಾದಳು. ಸೀತೆಯನ್ನು ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಸಂತೋಷಗೊಳಿಸುತ್ತಾ ಹೇಳಿದಳು :

“ ಸೀತೇ ! ನಾನಾವಿಧವಾದ ನಿಯಮಾನುಷ್ಠಾನಗಳಿಂದ ಕೂಡಿದ ತಪಶ್ಚರಣೆಯಿಂದ ಸಂಪಾದಿಸಿರುವ ತಪಶ್ಶಕ್ತಿಯು ನನ್ನಲ್ಲಿ ಬಹಳವಾಗಿದೆ. ಆ ತಪಸ್ಸಿನ ಬಲದಿಂದ ನಾನು – ನೀನು ಏನನ್ನು ಬಯಸಿದರೂ ಅದನ್ನು ಕೊಡಲು ಆಶಿಸಿದ್ದೇನೆ. ನಿನ್ನ ಮಾತು ನಿನ್ನಂತಹ ಸಾಧ್ವಿಗೆ ತಕ್ಕುದಾಗಿದೆ ಮತ್ತು ಯುಕ್ತವಾಗಿಯೂ ಇದೆ. ಇಂತಹ ನಿನ್ನ ಮನೋಜ್ಞವಾದ ಮಾತು ಗಳಿಂದ ನಾನು ತುಂಬಾ ಪ್ರೀತಳಾಗಿದ್ದೇನೆ. ನಿನಗೆ ಉಚಿತವಾದ ಯಾವ ಕಾರ್ಯವನ್ನು ಮಾಡಿಕೊಡಲಿ–ಎಂಬುದನ್ನು ಹೇಳು.”

ಅನಸೂಯಾದೇವಿಯ ಮಾತನ್ನು ಕೇಳಿ ಸೀತೆಯು ಅಚ್ಚರಿಗೊಂಡಳು. ಮಂದಹಾಸವು ಅವಳ ಮುಖದಲ್ಲಿ ಮೂಡಿಬಂದಿತು. ಸಾಧ್ವಿಯಾದ ಸೀತಾ ದೇವಿಯು ತಪೋಬಲದಿಂದ ಯುಕ್ತಳಾಗಿದ್ದ ಅನಸೂಯಾದೇವಿಗೆ “ ಕೃತಂ– ಇಷ್ಟುಮಾತ್ರದಿಂದಲೇ ನಾನು ಅನುಗ್ರಹೀತಳಾಗಿದ್ದೇನೆ. ನಿನ್ನ ಅನುಗ್ರಹ ಮಾತ್ರದಿಂದಲೇ ನನಗೆ ಎಲ್ಲವೂ ಪ್ರಾಪ್ತವಾದಂತಾಗಿದೆ ”–ಎಂದು ಮಧುರ ವಾದ ಮಾತಿನಿಂದ ಉತ್ತರಿಸಿದಳು.

ಸೀತಾದೇವಿಯ ಆ ಮಾತನ್ನು ಕೇಳಿ ಅನಸೂಯಾದೇವಿಗೆ ಸೀತೆಯ ಮೇಲಿನ ಪ್ರೀತಿಯು ಮತ್ತಷ್ಟು ಹೆಚ್ಚಿತು. ಅಂತೆಯೇ ಹೇಳಿದಳು :

**ಸಫಲಂ ಚ ಪ್ರಹರ್ಷಂ ತೇ ಹನ್ತ ಸೀತೇ ಕರೋಮ್ಯಹಮ್ ॥೧೭॥**

"ಸೀತೆ! ನನ್ನೊಡನೆ ಆದ ಸಮಾಗಮದಿಂದಲೇ ನಿನಗೆ ಅಪಾರವಾದ ಸಂತೋಷವಾಗಿರುವುದಲ್ಲವೇ! ಆ ನಿನ್ನ ಹರ್ಷವನ್ನು ನಾನು ಸಫಲಗೊಳಿಸುವೆನು"–ಎಂದೆನ್ನುತ್ತಾ ಮಾಲ್ಯಾಭರಣಗಳನ್ನು ಸೃಷ್ಟಿಸಿ ಸೀತೆಗೆ ತೋರಿಸುತ್ತಾ ಹೇಳಿದಳು:



"ನೋಡು, ವೈದೇಹಿ! ಇದು ದಿವ್ಯವಾದ ಮಾಲೆ. ಇದು ದಿವ್ಯವಾದ ವಸ್ತ್ರ. ಇವುಗಳೇ ಆಭರಣಗಳು. ಇದು ಕರ್ಪೂರ-ಅಗುರು-ಕಸ್ತೂರಿಗಳಿಂದ ಮಿಶ್ರವಾಗಿರುವ ಮಹಾಪಮೌಲ್ಯವಾದ ಮೈಗೆ ಪೂಸಿಕೊಳ್ಳಲು ಯೋಗ್ಯವಾಗಿರುವ ಅಂಗರಾಗ. ನಾನು ಕೊಡುವ ಈ ಅಲಂಕಾರವಸ್ತುಗಳು ನಿನ್ನ

ಅಂಗಾಂಗಗಳಿಗೂ ಶೋಭೆಯನ್ನುಂಟುಮಾಡುತ್ತವೆ. ಈ ಅಲಂಕಾರವಸ್ತುಗಳು ನೀನು ಧರಿಸಲು ಯೋಗ್ಯವಾಗಿವೆ. ಇವು ನಿತ್ಯನೂತನವಾಗಿಯೂ ಇರುವುವು. ಸತತವಾಗಿ ಧರಿಸಿದ್ದರೂ ಹಾಳಾಗುವುದಿಲ್ಲ. ದಿವ್ಯವಾದ ಈ ಅಂಗರಾಗವನ್ನು ಅಂಗಾಂಗಗಳಲ್ಲಿಯೂ ಪೂಸಿಕೊಳ್ಳುವ ನೀನು ನಿನ್ನ ಪತಿಯನ್ನು-ಲಕ್ಷ್ಮಿಯು ತನ್ನ ಶರೀರದ ಸುಗಂಧದಿಂದ ವಿಷ್ಣುವನ್ನು ಹೇಗೋ ಹಾಗೆ-ಉಲ್ಲಾಸಗೊಳಿಸುವೆ. ಇವೆಲ್ಲವನ್ನೂ ನೀನು ತೆಗೆದುಕೊ."

ಅನಸೂಯಾದೇವಿಯು ಪ್ರೀತಿಪೂರ್ವಕವಾಗಿ ಕೊಟ್ಟ ಉತ್ತಮೋತ್ತಮವಾದ ಆ ವಸ್ತ್ರವನ್ನೂ, ಅಂಗರಾಗವನ್ನೂ, ಒಡವೆಗಳನ್ನೂ, ಮಾಲೆಯನ್ನೂ ವೈದೇಹಿಯು ಪ್ರತಿಗ್ರಹಿಸಿದಳು. ಅನಂತರ ಯಶಸ್ವಿನಿಯಾದ ಸೀತಾದೇವಿಯು ಕೈಮುಗಿದುಕೊಂಡು ಅನಸೂಯಾದೇವಿಯ ಸಮೀಪದಲ್ಲಿಯೇ ಕುಳಿತುಕೊಂಡಳು. ಹಾಗೆ ತನ್ನ ಬಳಿಯಲ್ಲಿ ಕುಳಿತ ಸೀತಾದೇವಿಯನ್ನು ನೋಡಿ ದೃಢವ್ರತಳಾದ ಅನಸೂಯಾದೇವಿಗೆ ತನಗೆ ಅತಿಪ್ರಿಯವಾದ ಒಂದು ಕಥೆಯನ್ನು ಸೀತೆಯ ಮುಖಾರವಿಂದದಿಂದ ಕೇಳಬೇಕೆನ್ನಿಸಿತು. ಅಂತೆಯೇ ಅವಳು ಸೀತೆಯನ್ನು ಪ್ರಶ್ನಿಸಿದಳು :

"ಸೀತೆ ! ಸ್ವಯಂವರದ ಮೂಲಕವಾಗಿ ಶ್ರೀರಾಮನು ನಿನ್ನನ್ನು ಪಡೆದುಕೊಂಡನೆಂಬ ವಾರ್ತೆಯನ್ನು ನಾನು ಈ ಹಿಂದೆ ಕೇಳಿದ್ದೆನು. ಆ ಸ್ವಯಂವರದ ಕಥೆಯನ್ನು ನಾನು ವಿಸ್ತಾರವಾಗಿ ಕೇಳಲು ಅಪೇಕ್ಷಿಸುವೆನು. ಹೇಗೆ ನಡೆಯಿತೋ ಹಾಗೆಯೇ ಸಮಗ್ರವಾಗಿ ಆ ಸ್ವಯಂವರದ ಕಥೆಯನ್ನು ಹೇಳು."

ಧರ್ಮಚಾರಿಣಿಯಾದ ತಾಪಸಿಯು ಹೀಗೆ ಹೇಳಲು ಸೀತೆಯು-"ಹಾಗೆಯೇ ಆಗಲಿ. ಅದನ್ನು ಯಥಾವತ್ತಾಗಿ ಹೇಳುವೆನು. ತಾಯೇ ! ಅವಧರಿಸು "-ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿದಳು :

"ಮಿಥಿಲಾದೇಶದ ಅಧಿಪತಿಯು ಜನಕನೆಂಬ ಹೆಸರಿನಿಂದ ಖ್ಯಾತನಾಗಿದ್ದಾನೆ. ಅವನು ಪರಮಧಾರ್ಮಿಕನು ಮತ್ತು ವೀರನು. ಕ್ಷತ್ರಧರ್ಮದ ಪರಿಪಾಲನೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿರುವ ಆ ರಾಜನು ನ್ಯಾಯಸಮ್ಮತವಾದ ರೀತಿಯಲ್ಲಿ ರಾಜ್ಯವನ್ನಾಳುತ್ತಿರುವನು. ಅವನೊಮ್ಮೆ ಯಾಗ

ಭೂಮಿಯನ್ನು ನೇಗಿಲಿನಿಂದ[1] ಉಳುತ್ತಿದ್ದಾಗ ಅದೇ ಸ್ಥಳದಲ್ಲಿ ಭೂಮಿಯಲ್ಲಿ ಹುದುಗಿಕೊಂಡಿದ್ದ ನಾನು ಭೂಮಿಯನ್ನು ಭೇದಿಸಿಕೊಂಡು ಹೊರಗೆ ಬಂದೆನು. ಅದರಿಂದಲೇ ನಾನು ಜನಕರಾಜನ ಮಗಳಾದೆನು. ಮುಷ್ಟಿಯಲ್ಲಿ ಓಷಧಿಗಳನ್ನು ( ಧಾನ್ಯದ ಬೀಜಗಳನ್ನು ) ಹಿಡಿದು ಅವುಗಳನ್ನು[2] ಬಿತ್ತುವುದರಲ್ಲಿ ಆಸಕ್ತನಾಗಿದ್ದ ರಾಜನು ಧೂಳಿನಿಂದ ಆವೃತಳಾಗಿದ್ದ ನನ್ನನ್ನು ಕಂಡು ವಿಸ್ಮಿತನಾದನು. ಜನಕನಿಗೆ ಆ ಸಮಯದಲ್ಲಿ ಬೇರೆಯ ಮಕ್ಕಳಿಲ್ಲದ್ದರಿಂದ ಭೂಮಿಯಲ್ಲಿದ್ದ ನನ್ನನ್ನು ವಾತ್ಸಲ್ಯದಿಂದ ಮೇಲೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡು–' ಮಮೇಯಂ ತನಯಾ–ಇವಳು ನನ್ನ ಮಗಳು '–ಎಂದು ಉದ್ಘೋಷಿಸಿ ನನ್ನನ್ನು ಆತ್ಮಜೆಯೆಂದೇ ಭಾವಿಸಿ ಬಹಳವಾಗಿ ಪ್ರೀತಿಸತೊಡಗಿದನು. ಅದೇ ಸಮಯದಲ್ಲಿ ಅಶರೀರವಾಣಿಯೂ ಕೇಳಿಸಿತು.*

ಏವಮೇತನ್ನರಪತೇ ಧರ್ಮೇಣ ತನಯಾ ತವ ॥೩೧॥

" ಮಹಾರಾಜ ! ಇದು ಹೀಗೆಯೇ ಸರಿ. ನಿನ್ನ ಕ್ಷೇತ್ರದಲ್ಲಿಯೇ ಇವಳು ಲಭಿಸಿರುವುದರಿಂದ ಧರ್ಮದ ದೃಷ್ಟಿಯಿಂದ ಇವಳು ನಿನ್ನ ಮಗಳೇ ಆಗಿರುತ್ತಾಳೆ. "

ಅಶರೀರವಾಣಿಯ ಆ ಮಾತನ್ನು ಕೇಳಿ ನನ್ನ ತಂದೆಯಾದ ಧರ್ಮಾತ್ಮನಾದ ಜನಕನು ಆನಂದಭರಿತನಾದನು. ನನ್ನನ್ನು ಪಡೆದುಕೊಂಡ ನಂತರ ಅವನು ಸಂಪದ್ಭರಿತನೂ ಆದನು. ಪುಣ್ಯಕರ್ಮನಾದ ಜನಕನು ತನಗೆ ಬಹಳ

---

[1] ಯಾಗಮಾಡುವ ಮೊದಲು ಭೂಮಿಯನ್ನು ಆರು ಎತ್ತುಗಳನ್ನು ಕಟ್ಟಿದ ನೇಗಿಲಿನಿಂದ ಯಜಮಾನನು ಉಳಬೇಕು. " ಷಡ್ಗವೇನ ಕೃಷತಿ " ಎಂಬ ವೇದವಾಕ್ಯವು ಇದಕ್ಕೆ ಪ್ರಮಾಣವಾಗಿದೆ.

[2] " ಯಾ ಜಾತಾ ಓಷಧಯೋ ದೇವೇಭ್ಯಸ್ತ್ರಿಯುಗಂ ಪುರಾ ಇತ್ಯಾದಿಭಿಃ ಚತುರ್ದಶಭಿರೋಷಧೀರ್ವಪತಿ ". " ಯಾ ಜಾತಾಃ " ಮೊದಲಾದ ಹದಿನಾಲ್ಕು ಮಂತ್ರಗಳಿಂದ ಓಷಧಿಗಳನ್ನು ( ಬೀಜಗಳನ್ನು ) ಬಿತ್ತಬೇಕು. ಈ ಶ್ರುತಿ ಮತ್ತು ಶ್ರೌತವಚನಗಳಂತೆ ಯಜ್ಞಭೂಮಿಯನ್ನು ಉತ್ತುಕೊಂಡೇ ಹದಿನಾಲ್ಕು ವಿಧವಾದ ಓಷಧಿಗಳನ್ನು ಬಿತ್ತುತ್ತಾರೆ.

* ಈ ಶ್ಲೋಕದಲ್ಲಿರುವ–ವಾಗುಕ್ತಾ ಪ್ರತಿಮಾ ಮಾನುಷೀ–ಈ ಪದಗಳಿಗೆ ಒಬ್ಬೊಬ್ಬ ವ್ಯಾಖ್ಯಾನಕಾರರು ಒಂದೊಂದು ರೀತಿಯಲ್ಲಿ ಅರ್ಥಮಾಡಿದ್ದಾರೆ. (೧) ಪ್ರತಿಮಾ

ಇಷ್ಟಳಾಗಿದ್ದ ಹಿರಿಯ ಹೆಂಡತಿಗೆ ನನ್ನನ್ನೊಪ್ಪಿಸಿದನು. ಸ್ನೇಹಮಯಿ ಯಾಗಿದ್ದ ಅವಳು ಮಾತೃವಾತ್ಸಲ್ಯದಿಂದಲೇ ನನ್ನನ್ನು ಲಾಲಿಸಿ ಪೋಷಿಸಿದಳು. ಹಲವಾರು ವರ್ಷಗಳು ಕಳೆದನಂತರ ನನಗೆ ಪತಿಯನ್ನು ಪಡೆಯಲು ಯೋಗ್ಯವಾದ ವಯಸ್ಸಾಯಿತು. ಅದನ್ನು ಗಮನಿಸಿದ ನನ್ನ ತಂದೆಯು ಸಂಗ್ರಹಿಸಿಟ್ಟಿದ್ದ ಐಶ್ವರ್ಯವನ್ನು ಕಳೆದುಕೊಂಡು ದರಿದ್ರನಾದವನು ಚಿಂತಿಸುವಂತೆಯೇ ಚಿಂತಿಸತೊಡಗಿದನು. *

ಸದೃಶಾಚ್ಚಾಪಕೃಷ್ಟಾಚ್ಚ ಲೋಕೇ ಕನ್ಯಾಪಿತಾ ಜನಾತ್ ।
ಪ್ರಧರ್ಷಣಾಮವಾಪ್ನೋತಿ ಶಕ್ರೇಣಾಪಿ ಸಮೋ ಭುವಿ ॥ ೩೫ ॥

ಆರ್ಯೇ ! ಈ ಲೋಕದಲ್ಲಿ ಕನ್ಯಾಪಿತೃವು ಇಂದ್ರನಿಗೆ ಸಮಾನನೇ ಆಗಿದ್ದರೂ-ಸಕಾಲದಲ್ಲಿ ಮಗಳಿಗೆ ಮದುವೆಯನ್ನು ಮಾಡದಿದ್ದರೆ ತನಗೆ ಸಮಾನರಾದವರಿಂದಲೂ ಮತ್ತು ತನಗಿಂತಲೂ ಕೀಳಾದ ಜನರಿಂದಲೂ ಅವಮಾನಿತನಾಗುತ್ತಾನೆ.

ಸಕಾಲದಲ್ಲಿ ಮಗಳನ್ನು ಅನುರೂಪನಾದ ವರನಿಗೆ ಕೊಟ್ಟು ಮದುವೆ ಮಾಡದಿದ್ದರೆ ಜನರಿಂದ ತನಗೂ ಮಾನಭಂಗವು ಅತ್ಯಲ್ಪಕಾಲದಲ್ಲಿಯೇ ಆಗುವುದೆಂದು ಜನಕನು ಚಿಂತಿಸತೊಡಗಿದನು. ಈಜುಬರದವನು ನೀರಿನಲ್ಲಿ

---

ಮಾನುಷೀ = ಪ್ರತಿಮಯಾ ಸ್ವರೂಪೇಣ, ಮಾನುಷೀ ವಾಕ್ = ಮನುಷ್ಯತುಲ್ಯಾ ವಾಕ್, ಅಂತರಿಕ್ಷೇ ಉಕ್ತಾ = ಅಂತರಿಕ್ಷದಲ್ಲಿ ಮನುಷ್ಯನಾಡುವ ಮಾತಿನಂತಿರುವ ಮಾತೊಂದು ಹೇಳಲ್ಪಟ್ಟಿತು. (೨) ಅನ್ತರಿಕ್ಷೇ = ಆಕಾಶೇ, ಅಪ್ರತಿಮಾ = ಉಚ್ಚಾರಯಿತೃಸ್ವರೂಪರಹಿತಾ ಹ್ಯಮಾನುಷೀ-ಮಾನುಷವಾಕ್ಸದೃಶೀ ವಾಕ್ ಉಕ್ತಾ = ಪ್ರಾದುರ್ಭೂತಾ. ಅಂತರಿಕ್ಷದಲ್ಲಿ ಉಚ್ಚಾರಮಾಡಲು ಸ್ವರೂಪವೊಂದಿಲ್ಲದ (ಅಶರೀರವಾದ) ಮನುಷ್ಯನ ಮಾತಿಗೆ ಅನುರೂಪವಾದ ಮಾತು ಹುಟ್ಟಿತು. (೩) "ಪ್ರತಿಮಾ" ಎಂಬುದನ್ನು "ಪ್ರತಿ ಮಾ" ಎಂದು ಪದವಿಭಾಗ ಮಾಡಿ "ಮಾ ಪ್ರತಿ" ಎಂದು ಅನ್ವಯಮಾಡಿ ಒಬ್ಬರು ಅರ್ಥಮಾಡಿದ್ದಾರೆ. ಮಾ ಪ್ರತಿ = ಮಾಮುದ್ದಿಶ್ಯ ಏವಮೇತನ್ನರಪತೇ ಧರ್ಮೇಣ ತನಯಾ ತವ – ಇತಿ ಅನ್ತರಿಕ್ಷೇ ಅಮಾನುಷೀ ವಾಗುಕ್ತಾ. "ನನ್ನನ್ನು ಕುರಿತು (ಸೀತಾದೇವಿಯನ್ನುದ್ದೇಶಿಸಿ) ನೀನು ಹೇಳಿದ್ದು ನಿಜ. ನಿನ್ನ ಕ್ಷೇತ್ರದಲ್ಲಿ ಹುಟ್ಟಿರುವ ಇವಳು ಧರ್ಮದಿಂದಲೂ ನಿನ್ನ ಮಗಳೇ ಆಗಿದ್ದಾಳೆ" ಎಂಬುದಾಗಿ ಅಂತರಿಕ್ಷದಲ್ಲಿ ಅಮಾನುಷವಾದ ಮಾತು ಹೇಳಲ್ಪಟ್ಟಿತು.

* ವಿತ್ತನಾಶಾದಿವಾಧನಃ–ಎಂಬ ಉಪಮಾನವು ಪ್ರಖರವಾದ ಚಿಂತೆಯನ್ನು ಸೂಚಿಸು

ಬಿದ್ದು ದಡವನ್ನು ಸೇರಲಾಗದಂತೆ–ಚಿಂತಾಸಾಗರದಲ್ಲಿ ಮುಳುಗಿದ್ದ ಜನಕನು ಅದರ ಪಾರವನ್ನೇ ಕಾಣದಾದನು. ಮೇಲಾಗಿ ನಾನು ಅಯೋನಿಜೆಯು. ನನಗೆ ಅನುರೂಪನಾದ ವರನನ್ನೇ ರಾಜನು ಹುಡುಕಬೇಕಾಗಿದ್ದಿತು. ಎಷ್ಟೇ ಯೋಚಿಸಿದರೂ ನನಗೆ ಪತಿಯಾಗಲು ಯೋಗ್ಯನಾದ ಒಬ್ಬ ವರನೂ ನಮ್ಮ ತಂದೆಯ ಗಮನಕ್ಕೆ ಬರಲಿಲ್ಲ. ಆ ವಿಷಯವನ್ನೇ ಯಾವಾಗಲೂ ಯೋಚಿಸುತ್ತಿದ್ದ ನಮ್ಮ ತಂದೆಯ ಬುದ್ಧಿಗೆ ಒಂದು ವಿಷಯವು ಹೊಳೆಯಿತು. ಧೀಮಂತನಾದ ನನ್ನ ತಂದೆಯು ನನಗೆ ಸ್ವಯಂವರದ ಪದ್ಧತಿಯನ್ನು ಅನುಸರಿಸಿ ವಿವಾಹಮಾಡುವುದಾಗಿ ನಿಶ್ಚಯಿಸಿದನು.

ನಮ್ಮ ತಂದೆಯು ಮಹಾಯಜ್ಞವೊಂದನ್ನು ಮಾಡಿದಾಗ ಮಹಾತ್ಮನಾದ ವರುಣನು ಸುಪ್ರೀತನಾಗಿ ನಮ್ಮ ತಂದೆಗೆ ಶ್ರೇಷ್ಠವಾದ ಒಂದು ಧನುಸ್ಸನ್ನೂ–ಬಾಣಗಳಿಂದ ಯಾವಾಗಲೂ ತುಂಬಿರುತ್ತಿದ್ದ ಎರಡು ಬತ್ತಳಿಕೆಗಳನ್ನೂ ಅನುಗ್ರಹಿಸಿ ಕೊಟ್ಟಿದ್ದನು.* ಆ ಶಿವಧನುಸ್ಸು ಬಹಳ ಭಾರವಾಗಿದ್ದುದರಿಂದ ಸಾಮಾನ್ಯರಾದ ಮಾನವರಿಂದ ಬಹಳ ಪ್ರಯತ್ನದಿಂದಲೂ ಅಲ್ಲಾಡಿಸುವ ಸಾಧ್ಯತೆಯಿರಲಿಲ್ಲ. ಮಹಾವೀರರೆನಿಸಿದ ಕ್ಷತ್ರಿಯರಾಜರು ಅದನ್ನು ಪ್ರಯತ್ನಿಸಿ ಎತ್ತಬಹುದಾಗಿದ್ದರೂ ಧನುಸ್ಸನ್ನು ಬಗ್ಗಿಸಿ ಹೆದೆಯೇ

---

ತ್ತಿದೆ. ಹುಟ್ಟುದರಿದ್ರನಿಗೆ ಹೆಚ್ಚು ಚಿಂತೆಯಿರುವುದೇ ಇಲ್ಲ. ಐಶ್ವರ್ಯವನ್ನು ಸಂಪಾದಿಸಿ ಸುಖ-ಸಂತೋಷಗಳನ್ನು ಅನುಭವಿಸುತ್ತಿದ್ದವನು ಐಶ್ವರ್ಯವೆಲ್ಲವನ್ನೂ ಕಳೆದುಕೊಂಡು ದರಿದ್ರನಾಗಿಬಿಟ್ಟರೆ ಅಂತಹವನ ಚಿಂತೆಯು ಅಪಾರ. ಅದನ್ನು ಮತ್ತೊಬ್ಬರಿಂದ ಊಹಿಸಲೂ ಸಾಧ್ಯವಾಗುವುದಿಲ್ಲ. ಅಂತಹ ಚಿಂತೆಗೆ ಅಥವಾ ಸಂಕಟಕ್ಕೆ ಜನಕನು ಈಡಾದನು. ಹಿಂದೊಂದು ಕಾಲದಲ್ಲಿ ಪರಿಸ್ಥಿತಿಯು ಹಾಗೆಯೇ ಇದ್ದಿತು. ಋತುಮತಿಯಾಗುವುದರೊಳಗೆ ಕನ್ಯೆಗೆ ವಿವಾಹವಾಗಬೇಕೆಂಬ ನಿಯಮವಿದ್ದಿತು. ಆದಕ್ಕಾಗಿ ತಂದೆ-ತಾಯಿಗಳು ಬಹಳವಾಗಿ ಪ್ರಯತ್ನಿಸುತ್ತಿದ್ದರು. ಉತ್ತಮನಾದ ವರನನ್ನು ಹುಡುಕಲು ಬಹಳವಾಗಿ ಪ್ರಯತ್ನಿಸುತ್ತಿದ್ದರು. ಈಗ ಕಾಲವು ಬಹಳ ಬದಲಾಗಿದೆ. ಜನಕನಂತೆ ಯೋಚಿಸುವ ತಂದೆಯು ಈಗ ವಿರಳವೆಂದೇ ಹೇಳಬಹುದು.

*ಶಿವಧನುಸ್ಸಿನ ಕಥೆ: ದಕ್ಷನ ಯಜ್ಞಕಾಲದಲ್ಲಿ ಪಾರ್ವತಿಯು ಯಜ್ಞಕುಂಡದಲ್ಲಿ ಬಿದ್ದು ಪ್ರಾಣತೊರೆದಳು. ಶಂಕರನು ಕುಪಿತನಾದನು. ಅದೇ ಸಮಯದಲ್ಲಿ ಶತ್ರುವಿಜಯಕ್ಕೋಸ್ಕರ ದಿವ್ಯಾಯುಧವನ್ನು ಪಡೆಯಲು ತಪಸ್ಸುಮಾಡುತ್ತಿದ್ದ ನಿಮಿಯ ಜ್ಯೇಷ್ಠಪುತ್ರನಾದ ದೇವರಾತನಿಗೆ ಅಥವಾ ದೇವರಾಜನಿಗೆ ತಾನು ಧರಿಸಿರುವ ಧನುಸ್ಸನ್ನು

ರಿಸಲು ಅವರಿಗೆ ಕನಸಿನಲ್ಲೂ ಸಾಧ್ಯವಾಗುತ್ತಿರಲಿಲ್ಲ. ಅಂತಹ ಮಹಾಶಿವ ಧನುಸ್ಸನ್ನು ನಮ್ಮ ತಂದೆಯು ಸಭಾಮಂದಿರದಲ್ಲಿರಿಸಿದನು. ಎಲ್ಲ ದೇಶ ಗಳ ರಾಜರನ್ನೂ ಆಹ್ವಾನಿಸಿ ನರೇಂದ್ರರ ಮಧ್ಯದಲ್ಲಿ ಉದ್ಘೋಷಿಸಿದನು.

ಇದಂ ಚ ಧನುರುದ್ಯಮ್ಯ ಸಜ್ಯಂ ಯಃ ಕುರುತೇ ನರಃ ।
ತಸ್ಯ ಮೇ ದುಹಿತಾ ಭಾರ್ಯಾ ಭವಿಷ್ಯತಿ ನ ಸಂಶಯಃ ॥೪೨॥

"ರಾಜೇಂದ್ರರೇ! ಯಾವ ವೀರಪುರುಷನು ಈ ಧನುಸ್ಸನ್ನೆತ್ತಿ ಹೆದೆ ಯೇರಿಸುವನೋ-ಅಂತಹವನಿಗೆ ನನ್ನ ಮಗಳಾದ ಸೀತೆಯು ಪತ್ನಿಯಾಗು ತ್ತಾಳೆ. ಇದರಲ್ಲಾವ ಸಂಶಯವೂ ಇಲ್ಲ."

ಆರ್ಯೇ! ರಾಜಕುಮಾರರೆಲ್ಲರೂ ಪರ್ವತೋಪಮವಾಗಿದ್ದ ಆ ಧನುಸ್ಸನ್ನು ನೋಡಿ ಅದು ಬಹಳ ಭಾರವಾಗಿದ್ದುದರಿಂದ ಅದನ್ನು ಎತ್ತಲು ಅಶಕ್ತರಾಗಿ ಮಹಾಧನುಸ್ಸಿಗೆ ನಮಸ್ಕರಿಸಿ ತಮ್ಮ ತಮ್ಮ ದೇಶಗಳಿಗೆ ಹೊರಟುಹೋದರು. ಆದಾದ ಅನೇಕ ದಿವಸಗಳು ಕಳೆದನಂತರ ಕಾಂತಿ ಯಿಂದ ಬೆಳಗುತ್ತಿದ್ದ ರಾಘವನು ವಿಶ್ವಾಮಿತ್ರಮುನಿಗಳ ಸಮೇತನಾಗಿ ನಮ್ಮ ತಂದೆಯು ಮಾಡುತ್ತಿದ್ದ ಯಜ್ಞವನ್ನು ನೋಡಲು ಮಿಥಿಲಾಪಟ್ಟಣಕ್ಕೆ ಬಂದನು. ತಮ್ಮನಾದ ಲಕ್ಷ್ಮಣನೊಡನಿದ್ದ ಸತ್ಯಪರಾಕ್ರಮನಾದ ಶ್ರೀರಾಮ ನನ್ನೂ-ಧರ್ಮಾತ್ಮರಾದ ವಿಶ್ವಾಮಿತ್ರರನ್ನೂ ನನ್ನ ತಂದೆಯು ಯಥೋಚಿತ ವಾಗಿ ಸತ್ಕರಿಸಿದನು. ಅನಂತರ ವಿಶ್ವಾಮಿತ್ರರು ತಮ್ಮೊಡನಿದ್ದ ರಾಮ-ಲಕ್ಷ್ಮಣರನ್ನು ನನ್ನ ತಂದೆಗೆ ಪರಿಚಯಮಾಡಿಕೊಡುತ್ತಾ ಹೇಳಿದರು:

ಸುತೌ ದಶರಥಸ್ಯೇಮೌ ಧನುರ್ದರ್ಶನಕಾಂಕ್ಷಿಣೌ ।
ಧನುರ್ದರ್ಶಯ ರಾಮಾಯ ರಾಜಪುತ್ರಾಯ ದೈವಿಕಮ್ ॥೪೬॥

"ಜನಕರಾಜ! ಈ ಇಬ್ಬರೂ ದಶರಥರಾಜನ ಮಕ್ಕಳು. ನೀನು

---

ಕೊಟ್ಟುಬಿಡಬೇಕೆಂತಲೂ, ಕೋಪವನ್ನು ಬಿಟ್ಟು ಶಾಂತನಾಗಬೇಕೆಂತಲೂ ದೇವತೆಗಳು ದೈನ್ಯದಿಂದ ಶಂಕರನನ್ನು ಕೇಳಿಕೊಂಡರು. ರುದ್ರನು ಶಾಂತನಾಗಿ ತಾನು ಧರಿಸಿದ್ದ ಶ್ರೇಷ್ಠವಾದ ಶಿವಧನುಸ್ಸನ್ನೂ, ಅಕ್ಷಯತೂಣೀರಗಳನ್ನೂ ದೇವತೆಗಳಿಗೊಪ್ಪಿಸಿದನು. ಅದನ್ನು ದೇವತೆಗಳು ತಪಸ್ಸುಮಾಡುತ್ತಿದ್ದ ದೇವರಾತನಿಗೆ ವರುಣನ ಮೂಲಕ ಕೊಟ್ಟು ಕಳುಹಿಸಿದರು.

ಸ್ವಯಂವರಕ್ಕೆ ಪಣವನ್ನಾಗಿಟ್ಟಿರುವ ಧನುಸ್ಸನ್ನು ನೋಡಬಯಸಿದ್ದಾರೆ. ದೈವದತ್ತವಾದ ಆ ಧನುಸ್ಸನ್ನು ರಾಜಪುತ್ರನಾದ ರಾಮನಿಗೆ ತೋರಿಸು."

ವಿಶ್ವಾಮಿತ್ರರು ಹೀಗೆ ಹೇಳುತ್ತಲೇ ಜನಕರಾಜನು ಮಹಾಧನುಸ್ಸನ್ನು ಅನೇಕ ರಾಜಭಟರ ಮೂಲಕವಾಗಿ ಸಭಾಭವನಕ್ಕೆ ತರಿಸಿ ದೈವದತ್ತವಾದ ಆ ಶಿವಧನುಸ್ಸನ್ನು ರಾಜಪುತ್ರನಾದ ಶ್ರೀರಾಮನಿಗೆ ತೋರಿಸಿದನು.

ಮಹಾಬಾಹುವಾದ ವೀರ್ಯವಂತನಾದ ಶ್ರೀರಾಮನು ರೆಪ್ಪೆಯನ್ನು ಮುಚ್ಚಿ ತೆಗೆಯುವಷ್ಟು ಕಾಲದಲ್ಲಿಯೇ ಆ ಮಹಾಧನುಸ್ಸನ್ನೆತ್ತಿ ಬಗ್ಗಿಸಿ ನಾಣೇರಿಸಿ ಸಜ್ಜುಗೊಳಿಸಿದನು. ಆದರೆ ಅವನು ಹಾಗೆ ವೇಗದಿಂದ ನಾಣನ್ನು ಸೆಳೆದು ಕಟ್ಟುತ್ತಿದ್ದಂತೆಯೇ ಆ ಮಹಾಧನುಸ್ಸು ಮಧ್ಯಕ್ಕೆ ಸರಿಯಾಗಿ ಮುರಿದು ಎರಡು ಭಾಗವಾಯಿತು. ಆ ಸಮಯದಲ್ಲಿ ಸಿಡಿಲು ಬಡಿದಾಗ ಉಂಟಾಗುವ ಘೋರಶಬ್ದದಂತೆ ಭಯಂಕರವಾದ ಶಬ್ದವಾಯಿತು. ಹೀಗೆ ಶ್ರೀರಾಮನು ನನ್ನ ಸ್ವಯಂವರಕ್ಕೆ ಪಣವನ್ನಾಗಿಟ್ಟಿದ್ದ ಧನುಸ್ಸನ್ನು ಭಗ್ನಗೊಳಿಸಿದೊಡನೆಯೇ ಸತ್ಯಪ್ರತಿಜ್ಞನಾದ ನಮ್ಮ ತಂದೆಯು ಜಲಕುಂಭವನ್ನೆತ್ತಿಕೊಂಡು ನನ್ನನ್ನು ಶ್ರೀರಾಮನಿಗೆ ಧಾರೆಯೆರೆದು ಕೊಡಲು ಸಿದ್ಧನಾದನು. ಸ್ವಯಂವರದ ವಿಷಯದಲ್ಲಿ ತಂದೆಯಾದ, ಪ್ರಭುವಾದ ದಶರಥನ ಅಭಿಪ್ರಾಯವೇನೆಂಬುದು ತಿಳಿಯದಿದ್ದ ಕಾರಣ ಶ್ರೀರಾಮನು ಒಡನೆಯೇ ನನ್ನ ಪಾಣಿಗ್ರಹಣಮಾಡಲಿಲ್ಲ.

ಅನಂತರ ನಮ್ಮ ತಂದೆಯು ದೂತರನ್ನು ಕಳುಹಿಸಿ ವೃದ್ಧನಾದ ದಶರಥನನ್ನು ಮಿಥಿಲಾಪಟ್ಟಣಕ್ಕೆ ಕರೆಸಿಕೊಂಡನು. ಅವನ ಅನುಮತಿಯನ್ನು ಪಡೆದು ನಮ್ಮ ತಂದೆಯು ನನ್ನನ್ನು ಆತ್ಮವಿದನಾದ ಶ್ರೀರಾಮನಿಗೆ ಧಾರೆಯೆರೆದುಕೊಟ್ಟನು. ನನ್ನ ತಂಗಿಯಾದ, ಪ್ರಿಯದರ್ಶನೆಯಾದ, ಸಾಧ್ವಿಯಾದ ಊರ್ಮಿಳಾದೇವಿಯನ್ನು ಜನಕನು ಲಕ್ಷ್ಮಣನಿಗೆ ಧಾರೆಯೆರೆದುಕೊಟ್ಟನು. ತಾಯೇ ! ಹೀಗೆ ನನ್ನನ್ನು ನಮ್ಮ ತಂದೆಯು ಆ ಸ್ವಯಂವರದಲ್ಲಿ ಶ್ರೀರಾಮನಿಗೆ ವಿವಾಹಮಾಡಿಕೊಟ್ಟನು. ನಾನೂ ಕೂಡ ಧರ್ಮಕ್ಕೆ ಅನುಸಾರವಾಗಿ ವೀರರಲ್ಲಿ ಶ್ರೇಷ್ಠನಾದ ನನ್ನ ಪತಿಯಲ್ಲಿ ಸದಾ ಅನುರಕ್ತಳಾಗಿರುವೆನು."

೧೧೮ನೆಯ ಸರ್ಗವು ಮುಗಿಯಿತು.

## ಸೀತಾದೇವಿಯು ಅನಸೂಯಾದೇವಿಯ ಅಣತಿಯಂತೆ ಅವಳು ಕೊಟ್ಟ ವಸ್ತ್ರಾಭರಣಗಳನ್ನು ಧರಿಸಿ ಶ್ರೀರಾಮನ ಬಳಿಗೆ ಬಂದುದು : ಶ್ರೀರಾಮನೇ ಮೊದಲಾದವರು ಆ ರಾತ್ರಿಯಲ್ಲಿ ಆಶ್ರಮದಲ್ಲೇ ತಂಗಿದ್ದು ಪ್ರಾತಃಕಾಲವಾಗುತ್ತಲೇ ಬೇರೆಡೆಗೆ ಹೋಗಲು ಋಷಿಗಳ ಅನುಮತಿಯನ್ನು ಬೇಡಿದುದು

**ಅನಸೂಯಾ ತು ಧರ್ಮಜ್ಞಾ ಶ್ರುತ್ವಾ ತಾಂ ಮಹತೀಂ ಕಥಾಮ್।**
**ಪರ್ಯಷ್ವಜತ ಬಾಹುಭ್ಯಾಂ ಶಿರಸ್ಯಾಘ್ರಾಯ ಮೈಥಿಲೀಮ್ ॥೧॥**

ಧರ್ಮಜ್ಞಳಾದ ಅನಸೂಯಾದೇವಿಯು ಸೀತೆಯು ಹೇಳಿದ ಸ್ವಯಂವರದ ಮಹಾಕಥೆಯನ್ನು ಕೇಳಿ ಸಂತೋಷಭರಿತಳಾಗಿ ತನ್ನೆರಡು ತೋಳುಗಳಿಂದಲೂ ಸೀತೆಯನ್ನು ಬಾಚಿತಬ್ಬಿಕೊಂಡು ನೆತ್ತಿಯನ್ನು ಆಘ್ರಾಣಿಸುತ್ತಾ ಹೇಳಿದಳು :

"ಸೀತೆ ! ನಿನ್ನ ಸ್ವಯಂವರದ ಕಥೆಯನ್ನು ಯಥಾವತ್ತಾಗಿ ನಾನು ಈ ಹಿಂದೆಯೇ ಕೇಳಿದ್ದೆನು. ಆದರೆ ನೀನು ಅದನ್ನು ಇಷ್ಟು ಸ್ಪಷ್ಟವಾದ ಶಬ್ದಗಳಿಂದ ಅದ್ಭುತವಾದ ರೀತಿಯಲ್ಲಿ ಎಷ್ಟು ಮಧುರವಾಗಿ ಆಡಿದ್ದೀಯೇ ! ಮಧುರಭಾಷಿಣಿಯೇ ! ನೀನು ಹೇಳಿದ ಈ ಕಥೆಯು ನನಗೆ ಅತ್ಯಂತ ಆನಂದವನ್ನುಂಟುಮಾಡಿದೆ. ಜಾನಕೀ ! ಸೂರ್ಯನು ಮಂಗಳಕರವಾದ ರಾತ್ರಿಯನ್ನು ಸಮೀಪಿಸಿ ಅಸ್ತನಾಗಿದ್ದಾನೆ. ಬೆಳಗಾದೊಡನೆಯೇ ಆಹಾರಾರ್ಥವಾಗಿ ಚೆಲ್ಲಾಪಿಲ್ಲಿಯಾಗಿ ನಾಲ್ಕು ದಿಕ್ಕುಗಳಿಗೂ ಹಾರಿ ಹೋಗಿದ್ದ ಪಕ್ಷಿಗಳು ಸಾಯಂಕಾಲವಾಗುತ್ತಲೇ ನಿದ್ರಾರ್ಥವಾಗಿ ತಮ್ಮ ತಮ್ಮ ಗೂಡುಗಳನ್ನು ಸೇರಿಕೊಂಡು ಚಿಲಿಪಿಲಿಗುಟ್ಟುವ ಶಬ್ದವು ಕೇಳಿ ಬರುತ್ತಿದೆ. ಈ ಮಹರ್ಷಿಗಳು ಸಾಯಂಕಾಲದ ಸ್ನಾನವನ್ನು ಮುಗಿಸಿ ಒದ್ದೆಬಟ್ಟೆಯನ್ನುಟ್ಟು ಹೆಗಲಮೇಲೆ ನೀರಿನ ಬಿಂದಿಗೆಯನ್ನು ಹೊತ್ತು ಜೊತೆ-ಜೊತೆಯಲ್ಲಿ ತಮ್ಮ ತಮ್ಮ ಆಶ್ರಮಗಳಿಗೆ ಹಿಂದಿರುಗುತ್ತಿದ್ದಾರೆ. ಋಷಿಗಳು ಸಾಯಂಕಾಲದ ಅಗ್ನಿಹೋತ್ರಕ್ಕೆ ಸಂಬಂಧಿಸಿದ ಹೋಮಕರ್ಮವನ್ನು ಮುಗಿಸುತ್ತಿದ್ದಾರೆ. ಗಾಳಿಯಿಂದ ಮೇಲೇರುತ್ತಿರುವ ಹೋಮಧೂಮವು ಕಪೋತಪಕ್ಷಿಯ ಕುತ್ತಿಗೆ

ಖುಲ್ಲಿರುವ ಕಪ್ಪು ಬೆರೆತ ಕೆಂಪುಬಣ್ಣದಂತೆ ಪ್ರಕಾಶಿಸುತ್ತಿದೆ. ಕಣ್ಣಿಗೆ ಬಹಳ ದೂರದಲ್ಲಿರುವ ವೃಕ್ಷಗಳಲ್ಲಿ ಸ್ವಲ್ಪವೇ ಎಲೆಗಳಿದ್ದರೂ ಕತ್ತಲು ಕವಿಯು ತ್ತಿರುವುದರಿಂದ ಅವು ಹಸಿರೆಲೆಗಳಿಂದ ತುಂಬಿ ದಟ್ಟವಾಗಿರುವಂತೆಯೇ ಕಾಣು ತ್ತಿವೆ. ಈ ವೇಳೆಯಲ್ಲಿ ಯಾವ ದಿಕ್ಕುಗಳೂ ಪ್ರಕಾಶಮಾನವಾಗಿ ಕಾಣುತ್ತಿಲ್ಲ. ರಾತ್ರಿಯಲ್ಲಿ ಸಂಚರಿಸುವ ಪ್ರಾಣಿಗಳು (ಭೂತ-ಪ್ರೇತಾದಿಗಳು) ತಿರು ಗಾಡಲು ಪ್ರಾರಂಭಿಸಿವೆ. ತಪೋವನಪ್ರದೇಶದಲ್ಲಿರುವ ಈ ಸಾಕುಪ್ರಾಣಿ ಗಳು ಪುಣ್ಯಕ್ಷೇತ್ರಕ್ಕೆ ಸಮಾನವಾಗಿರುವ ಯಜ್ಞವೇದಿಗಳ ಸಮೀಪದಲ್ಲಿ ಮಲಗುತ್ತಿವೆ. ನಕ್ಷತ್ರಗಳಿಂದ ಸಮಲಂಕೃತಳಾದ ನಿಶಾದೇವಿಯು ಉಪ ಸ್ಥಿತಳಾಗಿದ್ದಾಳೆ. ಬೆಳದಿಂಗಳ ಆವರಣವನ್ನು ಹೊಂದಿರುವ ಚಂದ್ರನು ಆಕಾಶದಲ್ಲಿ ಉದಯಿಸುತ್ತಿರುವುದು ಕಾಣುತ್ತಿದೆ. ಸೀತೆ ! ವೇಳೆಯಾಯಿತು. ನೀನಿನ್ನು ಹೋಗಬಹುದು. ಶ್ರೀರಾಮನನ್ನೇ ಯಾವಾಗಲೂ ಅನುಸರಿಸಿ ಕೊಂಡಿರುತ್ತಾ ಅವನನ್ನು ಶುಶ್ರೂಷೆಮಾಡು. ನೀನು ಹೇಳಿದ ಸುಮಧುರ ವಾಕ್ಯಗಳಿಂದ ನಾನೂ ಸಂತುಷ್ಟಳಾಗಿದ್ದೇನೆ. ರಾಮನ ಬಳಿಗೆ ಹೋಗುವ ಮೊದಲು ಮತ್ತೊಂದು ಕಾರ್ಯವನ್ನು ನೀನು ಮಾಡಬೇಕಾಗಿದೆ. ನಾನು ಕೊಟ್ಟಿರುವ ವಸ್ತ್ರಾಭರಣಗಳೆಲ್ಲವನ್ನೂ ನನ್ನೆದುರಿನಲ್ಲಿಯೇ ನೀನು ತೊಟ್ಟು ಕೊಳ್ಳಬೇಕು. ಅಲಂಕರಿಸಿಕೊಳ್ಳಬೇಕು. ದಿವ್ಯಾಲಂಕಾರಗಳಿಂದ ಸುಶೋ ಭಿತೆಯಾಗಿ ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡು."*

ದೇವಕನ್ಯೆಯಂತೆಯೇ ಇದ್ದ ಸೀತಾದೇವಿಯು ಅನಸೂಯಾದೇವಿಯು ಹೇಳಿದಂತೆಯೇ ಋಷಿಪತ್ನಿಯು ಕೊಟ್ಟಿದ್ದ ವಸ್ತ್ರಾಭರಣಗಳಿಂದ ಸಿಂಗರಿಸಿ ಕೊಂಡು ಅನಸೂಯಾದೇವಿಯನ್ನು ಕಾಲು ಮುಟ್ಟಿ ನಮಸ್ಕರಿಸಿ ಶ್ರೀರಾಮ ನಿದ್ದೆಡೆಗೆ ಬಂದಳು. ತಪಸ್ವಿನಿಯಾದ ಅನಸೂಯಾದೇವಿಯು ಪ್ರೀತಿಪೂರ್ವಕ ವಾಗಿ ಕೊಟ್ಟ ಆಭರಣಗಳಿಂದ ಸಮಲಂಕೃತೆಯಾಗಿದ್ದ ಸೀತಾದೇವಿಯನ್ನು ವಾಗ್ಮಿಗಳಲ್ಲಿ ಶ್ರೇಷ್ಠನಾದ ಶ್ರೀರಾಮನು ನೋಡಿ ಸಂತೋಷಿಸಿದನು.

---

* ವ್ಯಾಖ್ಯಾನಕಾರರು ಅನಸೂಯಾದೇವಿಯ ಇಂಗಿತವನ್ನು ಹೀಗೆ ವಿವರಿಸಿದ್ದಾರೆ: "ನಿನ್ನ ಸಂತೋಷಕ್ಕಾಗಿ ನೀನೀ ವಸ್ತುಗಳನ್ನು ತೊಡಬೇಕಾದುದಿಲ್ಲ. ಈ ದಿವ್ಯಾ ಭರಣ-ವಸ್ತ್ರ-ಮಾಲೆಗಳಿಂದ ಅಲಂಕೃತೆಯಾದ ನಿನ್ನನ್ನು ನಾನು ನೋಡಿ ಆನಂದಿಸ ಬೇಕೆಂದಿರುವೆನು."

ಅನಸೂಯಾದೇವಿಯು ಪ್ರೀತಿಪೂರ್ವಕವಾಗಿ ವಸ್ತ್ರಾಭರಣ-ಮಾಲೆಗಳನ್ನು ಕೊಟ್ಟಳೆಂಬ ವಿಷಯವನ್ನೂ ಮತ್ತು ತನಗೂ ಋಷಿಪತ್ನಿಗೂ ನಡೆದ ಸಂಭಾಷಣೆಯನ್ನೂ ಸೀತಾದೇವಿಯು ಆಮೂಲಾಗ್ರವಾಗಿ ಶ್ರೀರಾಮನಿಗೆ ಹೇಳಿದಳು. ಅನಸೂಯಾದೇವಿಯು ಸೀತಾದೇವಿಗೆ ಮಾಡಿದ, ಮನುಷ್ಯಮಾತ್ರದವರಿಗೆ ಸುದುರ್ಲಭವಾದ ಮಹಾಸತ್ಕಾರವನ್ನು ನೋಡಿ ಶ್ರೀರಾಮನೂ ಮಹಾರಥನಾದ ಲಕ್ಷ್ಮಣನೂ ಸಂತೋಷಭರಿತರಾದರು. ಅಲ್ಲಿದ್ದ ಎಲ್ಲ ತಪಸ್ವಿಗಳಿಂದಲೂ ಸತ್ಕೃತನಾದ ಶ್ರೀರಾಮನು ಅನಸೂಯಾದೇವಿಯಿಂದ ಕೊಡಲ್ಪಟ್ಟ ವಸ್ತ್ರಾಭರಣ-ಮಾಲೆಗಳಿಂದ ಸಮಲಂಕೃತಳಾಗಿದ್ದ, ಚಂದ್ರಸದೃಶವಾದ ಮುಖಕಾಂತಿಯಿಂದ ಬೆಳಗುತ್ತಿದ್ದ ಸೀತಾದೇವಿಯನ್ನು ನೋಡಿ ಪರಮಸಂತುಷ್ಟನಾಗಿ ಆ ಶುಭರಾತ್ರಿಯನ್ನು ಆಶ್ರಮದಲ್ಲಿಯೇ ಕಳೆದನು. ರಾತ್ರಿಯು ಕಳೆದು ಸುಪ್ರಭಾತವಾಗಲಾಗಿ ನರಶ್ರೇಷ್ಠರಾದ ರಾಮ-ಲಕ್ಷ್ಮಣರು ತಮ್ಮ ನಿತ್ಯಕರ್ಮಗಳನ್ನು ಮುಗಿಸಿ, ಸ್ನಾನಮಾಡಿ ಅಗ್ನಿಹೋತ್ರವೇ ಮೊದಲಾದ ನಿತ್ಯಕರ್ಮಗಳಲ್ಲಿ ತೊಡಗಿದ್ದ ಅರಣ್ಯವಾಸಿಗಳಾದ ತಪಸ್ವಿಗಳನ್ನು ಸಂದರ್ಶಿಸಿ, ಮುಂದಿನ ಪ್ರಯಾಣಕ್ಕಾಗಿ ಅವರ ಅನುಮತಿಯನ್ನು ಪ್ರಾರ್ಥಿಸಿದರು. ಶ್ರೀರಾಮನ ಪ್ರಯಾಣಕ್ಕೆ ಅನುಮತಿಸುವ ಮೊದಲು ಅರಣ್ಯವಾಸಿಗಳಾದ, ಧರ್ಮಚಾರಿಗಳಾದ ತಾಪಸರು ರಾಮನಿಗೆ ಹೇಳಿದರು:

"ರಾಘವ! ಈ ಅರಣ್ಯದ ಸಂಚಾರಮಾರ್ಗಗಳೆಲ್ಲವೂ ರಾಕ್ಷಸರಿಂದ ತುಂಬಿಹೋಗಿವೆ. ನಾನಾವಿಧವಾದ ರೂಪಗಳನ್ನು ಧರಿಸುವ ನರಭಕ್ಷಕರಾದ ರಾಕ್ಷಸರು ಈ ಅರಣ್ಯದಲ್ಲಿ ವಾಸಮಾಡುತ್ತಿದ್ದಾರೆ. ರಕ್ತವೇ ಆಹಾರವಾಗಿರುವ ಅನೇಕಹಿಂಸ್ರಮೃಗಗಳೂ ಇಲ್ಲಿ ವಾಸವಾಗಿವೆ. ತಪಸ್ವಿಯೇ ಆಗಿರಲಿ; ಬ್ರಹ್ಮಚಾರಿಯೇ ಆಗಿರಲಿ – ಅವನು ಅಶುಚಿಯೋ ಅಜಾಗರೂಕನೋ–ಆಗಿದ್ದರೆ ಅಂತಹವನನ್ನು ಈ ಮಹಾರಣ್ಯದಲ್ಲಿ ರಾಕ್ಷಸರು ತಿಂದುಹಾಕುತ್ತಾರೆ. ಈ ಉಪಟಳವನ್ನು ನೀನು ನಿವಾರಿಸು.

ಹಣ್ಣು-ಹಂಪಲುಗಳನ್ನು ತರಲು ಕಾಡಿಗೆ ಹೋಗಿಬರುವ ತಪಸ್ವಿಗಳ ಹಾದಿಯು ಇದೇ ಆಗಿರುವುದು. ಈ ಮಾರ್ಗದಿಂದಲೇ ನೀನು ದುರ್ಗಮವಾದ ಅರಣ್ಯವನ್ನು ಪ್ರವೇಶಿಸುವುದು ಯುಕ್ತವಾಗಿದೆ."

ಹೀಗೆ ಅರಣ್ಯವಾಸಿಗಳಾದ ತಪಸ್ವಿಗಳೂ ಮತ್ತು ಬ್ರಾಹ್ಮಣರೂ

ಶ್ರೀರಾಮನಿಗೆ ಕೈಮುಗಿದು ಪ್ರಾರ್ಥಿಸಿ ಸುಖಪ್ರಯಾಣಕ್ಕಾಗಿ ಸ್ವಸ್ತಿವಾಚನವನ್ನು ಮಾಡಿದರು. ಬಳಿಕ ಶತ್ರುತಾಪಕನಾದ ಶ್ರೀರಾಮನು–ನಭೋಮಂಡಲವನ್ನು ಸೂರ್ಯನು ಪ್ರವೇಶಿಸುವಂತೆ – ಸೀತಾ-ಲಕ್ಷ್ಮಣರೊಡನೆ ಅರಣ್ಯಮಂಡಲವನ್ನು ಪ್ರವೇಶಿಸಿದನು.

ಗಿಗಿ೯ನೆಯ ಸರ್ಗವು ಮುಗಿಯಿತು.

ಅಯೋಧ್ಯಾಕಾಂಡವು ಮುಗಿಯಿತು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಶ್ರೀಕೃಷ್ಣಾರ್ಪಣಮಸ್ತು

ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್

ಶ್ರೀ ಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀ ಸದ್ಗುರವೇ ನಮಃ



ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥



## ತಪಸ್ವಿಗಳ ಆಶ್ರಮಮಂಡಲದಲ್ಲಿ ರಾಮ-ಲಕ್ಷ್ಮಣ-ಸೀತೆಯರಿಗೆ ಸತ್ಕಾರ

ಪ್ರವಿಶ್ಯ ತು ಮಹಾರಣ್ಯಂ ದಣ್ಡಕಾರಣ್ಯಮಾತ್ಮವಾನ್ ।
ರಾಮೋ ದದರ್ಶ ದುರ್ಧರ್ಷಸ್ತಾಪಸಾಶ್ರಮಮಣ್ಡಲಮ್ ॥೧॥

ಮಹಾಧೈರ್ಯಶಾಲಿಯಾದ, ಶತ್ರುಗಳಿಂದ ಎದುರಿಸಲು ಅಸಾಧ್ಯನಾದ ಶ್ರೀರಾಮನು ದೊಡ್ಡ ಕಾಡಾದ ದಂಡಕಾರಣ್ಯವನ್ನು ಪ್ರವೇಶಿಸಿ ಅಲ್ಲಿ ತಪಸ್ವಿಗಳು ವಾಸಮಾಡುತ್ತಿದ್ದ ಆಶ್ರಮಗಳ ಮಂಡಲವನ್ನು ಸಂದರ್ಶಿಸಿದನು.*

ದರ್ಭೆಗಳಿಂದಲೂ ಸ್ನಾನವಾದ ಬಳಿಕ ಒಗೆದು ಒಣಗಲು ಹಾಕಿದ್ದ ಮಹರ್ಷಿಗಳ ನಾರುಮಡಿಗಳಿಂದಲೂ ವ್ಯಾಪ್ತವಾಗಿದ್ದ, ಅಂತರ್ಮುಖಿಗಳಾದ ಬ್ರಹ್ಮರ್ಷಿಗಳ ದಿವ್ಯಪ್ರಭೆಯಿಂದ ಬೆಳಗುತ್ತಿದ್ದ, ಆಕಾಶದಲ್ಲಿ ದೇದೀಪ್ಯಮಾನ ವಾಗಿ ಕಾಣುವ ಸೂರ್ಯಮಂಡಲದಂತೆಯೇ ಸಾಮಾನ್ಯರಿಂದ ನೋಡಲು ಕೂಡ ಅಶಕ್ಯವಾಗಿದ್ದ ಆ ಆಶ್ರಮಮಂಡಲವನ್ನು ಶ್ರೀರಾಮನು ನೋಡಿದನು.[1] ಸಮಸ್ತಪ್ರಾಣಿಗಳಿಗೂ ಆಶ್ರಯಸ್ಥಾನವಾಗಿದ್ದ, ಸಾರಿಸಿ–ಶುದ್ಧಿಗೊಳಿಸಿದ ಬಯಲುಪ್ರದೇಶಗಳಿಂದ ಕೂಡಿದ್ದ, ಹಲವಾರು ಮೃಗ-ಪಕ್ಷಿಗಳ ಸಮೂಹಗಳಿಂದ ವ್ಯಾಪ್ತವಾಗಿದ್ದ ಆಶ್ರಮಮಂಡಲವನ್ನು ಶ್ರೀರಾಮನು

---

* ದಣ್ಡಕಾರಣ್ಯಂ–ದಂಡಕವೆಂಬುದು ದಂಡಕನೆಂಬ ರಾಜನಿಗೆ ಸೇರಿದ ರಾಜ್ಯವಾಗಿದ್ದಿತು. ಶುಕ್ರಾಚಾರ್ಯರ ಶಾಪದ ಕಾರಣದಿಂದ ದಂಡಕನ ರಾಜ್ಯವು ಅರಣ್ಯವಾಗಿ ಪರಿವರ್ತಿತವಾಯಿತು.

1 ಮಂದೇಹ ಎಂಬ ರಾಕ್ಷಸರಿಗೆ ಪ್ರದೀಪ್ತವಾದ ಮಧ್ಯಾಹ್ನಕಾಲದ ಸೂರ್ಯಮಂಡಲವನ್ನು ನೋಡಲು ಹೇಗೆ ಅಶಕ್ಯವೋ–ಅದೇ ರೀತಿಯಲ್ಲಿ ಭೂಮಿಯಲ್ಲಿದ್ದ ಬ್ರಾಹ್ಮೀಲಕ್ಷ್ಮಿ

ನೋಡಿದನು. ಅಪ್ಸರೆಯರ ಸಮೂಹಗಳಿಂದ ಅನುದಿನವೂ ನೃತ್ಯರೂಪ ದಲ್ಲಿ ಪೂಜಿಸಲ್ಪಡುತ್ತಿದ್ದ ಮತ್ತು ಸ್ರುಗ್ಭಾಂಡಗಳಿಂದಲೂ, ಫಲ-ಮೂಲಾದಿ ಗಳಿಂದಲೂ, ದರ್ಭೆಗಳಿಂದಲೂ, ಕೃಷ್ಣಾಜಿನಗಳಿಂದಲೂ, ಸಮಿತ್ತು ಗಳಿಂದಲೂ, ಜಲಕುಂಭಗಳಿಂದಲೂ ಸುಶೋಭಿತವಾಗಿದ್ದ ಆಶ್ರಮಮಂಡಲವು ಶ್ರೀರಾಮನಿಗೆ ಗೋಚರಿಸಿತು.

ರುಚಿಕರವಾದ ಹಣ್ಣುಗಳು ತುಂಬಿರುವ ಪುಣ್ಯಕರವಾದ ದೊಡ್ಡ-ದೊಡ್ಡದಾದ ಕಾಡುಮರಗಳಿಂದ ವ್ಯಾಪ್ತವಾಗಿದ್ದ, ಬಲಿ-ವೈಶ್ವದೇವಾದಿ ಗಳಿಂದಲೂ ಹೋಮಗಳಿಂದಲೂ ಸಮರ್ಚಿತವಾಗಿದ್ದ, ವೇದಘೋಷಗಳಿಂದ ನಿನಾದಿತವಾಗಿದ್ದ, ಕಮಲಪುಷ್ಪಗಳಿಂದ ಕೂಡಿದ ಸರೋವರದಿಂದ ಕಂಗೊಳಿ ಸುತ್ತಿದ್ದ, ಇತರ ಅನೇಕಪುಷ್ಪಗಳಿಂದ ವ್ಯಾಪ್ತವಾಗಿದ್ದ ಪುಣ್ಯತಮವಾದ ಆಶ್ರಮಮಂಡಲವನ್ನು ಶ್ರೀರಾಮನು ನೋಡಿದನು. ಹಣ್ಣು-ಹಂಪಲಗಳನ್ನೂ ಗೆಡ್ಡೆ-ಗೆಣಸುಗಳನ್ನೂ ತಿಂದು ಜೀವಿಸುತ್ತಿದ್ದ, ಜಿತೇಂದ್ರಿಯರಾದ, ನಾರು ಮಡಿಯನ್ನೂ ಕೃಷ್ಣಾಜಿನವನ್ನೂ ಧರಿಸಿರುವ, ಸೂರ್ಯಾಗ್ನಿಗಳ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ, ಪುರಾತನರಾದ ತಪಸ್ವಿ ಗಳಿಂದ ತುಂಬಿಹೋಗಿದ್ದ ಆಶ್ರಮಮಂಡಲವನ್ನು ಶ್ರೀರಾಮನು ನೋಡಿದನು. ನಿಯತವಾದ ಆಹಾರವುಳ್ಳ ಪುಣ್ಯಾತ್ಮರಾದ ಮಹರ್ಷಿಗಳಿಂದ ಶೋಭಾಯ ಮಾನವಾಗಿ ಕಾಣುತ್ತಿದ್ದ, ವೇದಗಳ ಸತತಘೋಷಗಳಿಂದ ನಿನಾದಿತವಾಗಿ ಬ್ರಹ್ಮಲೋಕವೋ ಎಂಬಂತೆ ಕಾಣುತ್ತಿದ್ದ ಆಶ್ರಮಮಂಡಲವನ್ನು ಶ್ರೀರಾಮನು ವೀಕ್ಷಿಸಿದನು.

ಬ್ರಹ್ಮವಿದರಾದ, ಮಹಾಭಾಗ್ಯಶಾಲಿಗಳಾದ ಬ್ರಾಹ್ಮಣರಿಂದ ಪರಿ ಶೋಭಿಸುತ್ತಿದ್ದ ತಪಸ್ವಿಗಳ ಆಶ್ರಮಮಂಡಲವನ್ನು ನೋಡಿ, ಶ್ರೀಮಂತನಾದ ಮಹಾತೇಜಸ್ವಿಯಾದ ಶ್ರೀರಾಮನು ಧನುಸ್ಸಿನ ಹಗ್ಗವನ್ನು ಬಿಚ್ಚಿ ತಪಸ್ವಿಗಳ ಬಳಿಗೆ ಸೀತಾ-ಲಕ್ಷ್ಮಣರೊಡನೆ ಹೋದನು.*

---

ಯಿಂದ ಸಮಾವೃತವಾಗಿದ್ದ ಆಶ್ರಮಮಂಡಲವನ್ನು ನೋಡಲು ರಾಕ್ಷಸರಿಗೆ ಅಶಕ್ಯ ವಾಗಿತ್ತು-ಹೀಗೂ ಒಬ್ಬರು ವ್ಯಾಖ್ಯೆಮಾಡಿರುತ್ತಾರೆ.

* ಪರಮಪವಿತ್ರವಾದ ಮತ್ತು ಬ್ರಹ್ಮಜ್ಞಾನಿಗಳೂ ಮಹರ್ಷಿಗಳೂ ಇರುವ ಸ್ಥಳಕ್ಕೆ ವಿನೀತನಾಗಿ ಹೋಗಬೇಕೆಂಬ ಅಭಿಪ್ರಾಯದಿಂದ ಶ್ರೀರಾಮನು ಧನುಸ್ಸಿನ ಮೌರ್ವಿ-

ದಿವ್ಯದೃಷ್ಟಿಯಿಂದ ಸಂಪನ್ನರಾಗಿದ್ದ ಆ ಮಹರ್ಷಿಗಳು ಶ್ರೀರಾಮನನ್ನೂ, ಯಶಸ್ವಿನಿಯಾದ ಸೀತಾದೇವಿಯನ್ನೂ ನೋಡಿ ಪರಮಪ್ರೀತರಾಗಿ ಅವರನ್ನು ಸ್ವಾಗತಿಸಲು ಅವರಿಗೆ ಅಭಿಮುಖರಾಗಿ ಹೋದರು. ಪೂರ್ವದಲ್ಲಿ ಉದಯಿಸಿ ಕ್ಷಣ-ಕ್ಷಣಕ್ಕೂ ಮೇಲೇರುತ್ತಾ ರಸಿಕರ ಮನಸ್ಸನ್ನು ಉಲ್ಲಾಸಗೊಳಿಸುವ ಪೂರ್ಣಚಂದ್ರನಂತೆ–ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಿದ್ದ ಧರ್ಮಿಷ್ಠನಾದ ಶ್ರೀರಾಮನನ್ನೂ, ಲಕ್ಷ್ಮಣನನ್ನೂ ಮತ್ತು ಯಶಸ್ವಿನಿಯಾದ ಸೀತಾದೇವಿಯನ್ನೂ ಸಂದರ್ಶಿಸಿ ದೃಢವ್ರತರಾದ ಆ ಬ್ರಾಹ್ಮಣರು ಮಂಗಳಾಶಾಸನವನ್ನು ಹೇಳುತ್ತಾ ಸ್ವಾಗತಿಸಿದರು. ಶ್ರೀರಾಮನ ರೂಪ, ಶರೀರದ ಮೈಕಟ್ಟು, ಮುಖದ ಕಾಂತಿ, ಸೌಕುಮಾರ್ಯ, ಸುಂದರವಾದ ವೇಷ–ಇವುಗಳನ್ನು ವನವಾಸಿಗಳಾದ ಋಷಿಗಳು ಆಶ್ಚರ್ಯಚಕಿತರಾಗಿ ನೋಡಿದರು. ಹಿಂದೆಂದೂ ಕಾಣದಿದ್ದ ಅನುಪಮವಾದ ಸೌಂದರ್ಯದಿಂದ ಕೂಡಿದ್ದು ತಪಸ್ವಿಗಳ ಆಶ್ಚರ್ಯಕ್ಕೆ ಕಾರಣಭೂತರಾಗಿದ್ದ ಸೀತಾ-ರಾಮ-ಲಕ್ಷ್ಮಣರನ್ನು ಮೃಗ-ಪಕ್ಷಿಗಳೇ ಆದಿಯಾಗಿ ಎಲ್ಲ ವನವಾಸಿಗಳೂ ರೆಪ್ಪೆಗಳೇ ಇಲ್ಲದ ಕಣ್ಣುಗಳುಳ್ಳವರಂತೆ ಎವೆಯಿಕ್ಕದೇ ನೋಡುತ್ತಿದ್ದರು. ಮಹಾಭಾಗ್ಯಶಾಲಿಗಳಾಗಿದ್ದ ಆ ಮಹರ್ಷಿಗಳು ಸಕಲಪ್ರಾಣಿಗಳ ಹಿತದಲ್ಲಿಯೂ ಆಸಕ್ತನಾಗಿದ್ದ ಶ್ರೀರಾಮನನ್ನು ತಮ್ಮ ಪರ್ಣಶಾಲೆಗೆ ಅತಿಥಿಯನ್ನಾಗಿ ಬರಮಾಡಿಕೊಂಡರು.* ಅನಂತರ ಅಗ್ನಿಸದೃಶರಾದ, ಧರ್ಮನಿಷ್ಠರಾದ, ಮಹಾಭಾಗ್ಯಶಾಲಿಗಳಾದ ಆ ಮಹರ್ಷಿಗಳು ಶ್ರೀರಾಮನಿಗೆ ವಿಧಿಪೂರ್ವಕವಾಗಿ ಸ್ವಾಗತವನ್ನಿತ್ತು ಉಚಿತಾಸನದಲ್ಲಿ ಕುಳ್ಳಿರಿಸಿ ಅರ್ಘ್ಯ-ಪಾದ್ಯಾದಿಗಳನ್ನರ್ಪಿಸಲು ಶುದ್ಧೋದಕವನ್ನು ತಂದರು. ಅರ್ಘ್ಯ-

---

ಯನ್ನು ಬಿಚ್ಚಿದನು ಅಥವಾ ಯಾವ ವಿಧವಾದ ಭಯವೂ ಇಲ್ಲದೇ ಪರಸ್ಪರವೈರವೂ ಇಲ್ಲದೇ ವಿಹರಿಸುತ್ತಿದ್ದ ಮೃಗ-ಪಕ್ಷಿಗಳು ಭಯಪಟ್ಟಾವೆಂಬ ಅಭಿಪ್ರಾಯದಿಂದ ರಾಮನು ಧನುಸ್ಸಿನ ಮೌರ್ವಿಯನ್ನು ಬಿಚ್ಚಿದನು.

* ಅತಿಥಿಃ = ಮಾರ್ಗಮಧ್ಯದಲ್ಲಿರುವವನು. "ಅಧ್ವನೀನೋಽತಿಥಿರ್ಜ್ಞೇಯಃ" [ಸ್ಮೃತಿಃ] ಏಕರಾತ್ರಂ ಹಿ ನಿವಸನ್ ಅತಿಥಿರ್ಬ್ರಾಹ್ಮಣಃ ಸ್ಮೃತಃ । ಅನಿತ್ಯಾಸ್ಯ ಸ್ಥಿತಿರ್ಯಸ್ಮಾತ್ ತಸ್ಮಾದತಿಥಿರುಚ್ಯತೇ ॥ ಒಬ್ಬ ಗೃಹಸ್ಥನ ಮನೆಯಲ್ಲಿ ಒಂದು ರಾತ್ರಿ ಮಾತ್ರ ಇರತಕ್ಕ ಬ್ರಾಹ್ಮಣನು ಅತಿಥಿಯೆನಿಸಿಕೊಳ್ಳುತ್ತಾನೆ. ಅವನ ಇರುವಿಕೆಯು (ಸ್ಥಿತಿ) ಅನಿತ್ಯವಾದುದರಿಂದ ಅತಿಥಿಯೆನಿಸಿಕೊಳ್ಳುತ್ತಾನೆ. "ನ ವಿದ್ಯತೇ ದ್ವಿತೀಯಾ ತಿಥಿಃ ಯಸ್ಯ

ಪಾದ್ಯಗಳನ್ನು ಸಮರ್ಪಿಸಿದನಂತರ ಸಂತೋಷಭರಿತರಾದ, ಧರ್ಮಜ್ಞರಾದ, ಮಹಾತ್ಮರಾದ ಆ ಮುನಿಗಳು ಮಂಗಳಾಶಾಸನಮಾಡುತ್ತಾ ತಮ್ಮಲ್ಲಿದ್ದ ಕಂದ-ಮೂಲ-ಫಲ-ಪುಷ್ಪಗಳನ್ನೂ, ಆಶ್ರಮಗಳನ್ನೂ ಶ್ರೀರಾಮನಿಗೆ ಸಮರ್ಪಿಸಿ ಕೈಮುಗಿದುಕೊಂಡು ಹೇಳಿದರು :

ಧರ್ಮಪಾಲೋ ಜನಸ್ಯಾಸ್ಯ ಶರಣ್ಯಶ್ಚ ಮಹಾಯಶಾಃ ।
ಪೂಜನೀಯಶ್ಚ ಮಾನ್ಯಶ್ಚ ರಾಜಾ ದಣ್ಡಧರೋ ಗುರುಃ ॥೧೭॥

"ರಾಘವ ! ನೀನು ಧರ್ಮದ ರಕ್ಷಕನಾಗಿರುವೆ. ಅರಣ್ಯದಲ್ಲಿರುವ ಮುನಿಜನಕ್ಕೆ ಶರಣ್ಯನಾಗಿರುವೆ. ಯಶಸ್ವಿಯೂ, ಪೂಜನೀಯನೂ, ಮಾನ್ಯನೂ ಆಗಿರುವೆ. ದಂಡಧರನಾದ ರಾಜನೂ ಮತ್ತು ಗುರುವೂ ನೀನೇ ಆಗಿರುವೆ. ನೀನು ದಂಡಧರನಾದ ರಾಜನಾಗಿರುವುದರಿಂದ ಮಾನ್ಯನೂ-ಗುರುವಾಗಿರುವುದರಿಂದ ಪೂಜನೀಯನೂ ಆಗಿರುವೆ.

ಇನ್ದ್ರಸ್ಯೇಹ ಚತುರ್ಭಾಗಃ ಪ್ರಜಾ ರಕ್ಷತಿ ರಾಘವ ।
ರಾಜಾ ತಸ್ಮಾದ್ವರಾನ್ಭೋಗಾನ್ಭುಙ್ಕ್ತೇ ಲೋಕನಮಸ್ಕೃತಃ ॥

ರಾಮ ! ರಾಜನು ತ್ರೈಲೋಕ್ಯಾಧಿಪತಿಯಾದ ಇಂದ್ರನ ನಾಲ್ಕನೆಯ ಒಂದು ಅಂಶದಿಂದ ಹುಟ್ಟಿ ಭೂಮಂಡಲದ ಪ್ರಜೆಗಳನ್ನು ರಕ್ಷಿಸುತ್ತಾನೆ. ಈ ಕಾರಣದಿಂದಲೇ ರಾಜನು ಎಲ್ಲರಿಂದಲೂ ನಮಸ್ಕೃತನಾಗಿ ಉತ್ತಮವಾದ ಮತ್ತು ರಮಣೀಯವಾದ ಭೋಗಗಳನ್ನು ಉಪಭೋಗಿಸುತ್ತಾನೆ.*

---

ಸಃ ಅತಿಥಿಃ ॥ " ಒಂದು ಮನೆಯಲ್ಲಿ ಅವನಿಗೆ ಎರಡನೆಯ ತಿಥಿಯು (ದಿನವು) ಇರುವುದಿಲ್ಲ. ಆದುದರಿಂದ ಅವನು ಅತಿಥಿ. ಅತಿಥಿಪೂಜೆಯು ಗೃಹಸ್ಥನ ಧರ್ಮ. ಆದುದರಿಂದ ಇಲ್ಲಿ ವ್ಯಾಖ್ಯಾನಕಾರರು ' ಅತಿಥಿಂ ' ಎಂಬುದಕ್ಕೆ ಪರ್ಯಾಯವಾಗಿ ' ಪೂಜಾರ್ಹಂ' ಎಂದು ವ್ಯಾಖ್ಯೆಮಾಡಿದ್ದಾರೆ.

ಅಜ್ಞಾತಪೂರ್ವಸ್ತ್ವತಿಥಿರ್ವಿಜ್ಞಾತೋಽಭ್ಯಾಗತಃ ಸ್ಮೃತಃ । ಇಂತಹ ದಿವಸದಲ್ಲಿಯೇ ಬರುತ್ತಾನೆ–ಎಂದು ಯಾವನು ಬರುವ ದಿವಸವು ನಿರ್ದಿಷ್ಟವಾಗಿರುವುದಿಲ್ಲವೋ ಅವನು ಅತಿಥಿಯು. ನ ವಿದ್ಯತೇ ತಿಥಿರ್ಯಸ್ಯ ಸಃ । ಅತಿಥಿದೇವೋಭವ । ವೈಶ್ವಾನರಃ ಪ್ರವಿಶತ್ಯತಿಥಿರ್ಬ್ರಾಹ್ಮಣೋ ಗೃಹಾನ್ । ಎಂಬಂತೆ ಅವನು ಅತ್ಯಂತಪೂಜ್ಯನು.

* ' ಇಂದ್ರಸ್ಯ ಚತುರ್ಭಾಗಃ ' ಎಂದು ಹೇಳಿರುವುದು ಉಳಿದ ಲೋಕಪಾಲಕರ ಚತುರ್ಥಾಂಶಕ್ಕೂ ಉಪಲಕ್ಷಣ. " ಇಂದ್ರಸ್ಯೇಹ ಚತುರ್ಭಾಗಃ " ಎಂಬುದು ಸ್ಮೃತಿಸಮ್ಮತ

**ತೇ ವಯಂ ಭವತಾ ರಕ್ಷ್ಯಾ ಭವದ್ವಿಷಯವಾಸಿನಃ ।**
**ನಗರಸ್ಥೋ ವನಸ್ಥೋ ವಾ ತ್ವಂ ನೋ ರಾಜಾ ಜನೇಶ್ವರಃ ॥೧೮॥**

ನಿನ್ನ ದೇಶದಲ್ಲಿ ವಾಸಮಾಡುತ್ತಿರುವ ನಮ್ಮನ್ನು ನೀನೇ ರಕ್ಷಿಸಬೇಕು. ನೀನು ನಗರದಲ್ಲಿಯಾದರೂ ಇರು; ಅರಣ್ಯದಲ್ಲಿಯಾದರೂ ಇರು. ನೀನೇ ನಮಗೆ ರಾಜನು ಮತ್ತು ಈಶ್ವರನು.

**ನ್ಯಸ್ತದಣ್ಡಾ ವಯಂ ರಾಜನ್ ಜಿತಕ್ರೋಧಾ ಜಿತೇನ್ದ್ರಿಯಾಃ ।**
**ರಕ್ಷಣೀಯಾಸ್ತ್ವಯಾ ಶಶ್ವದ್ಗರ್ಭಭೂತಾಸ್ತಪೋಧನಾಃ ॥೧೯॥**

'ನಿಮಗೆ ಶಾಪಾನುಗ್ರಹಶಕ್ತಿಯಿರುವಾಗ ನಿಮ್ಮನ್ನು ನೀವೇ ರಕ್ಷಿಸಿಕೊಳ್ಳಬಹುದಲ್ಲವೇ?'–ಎಂದೂ ನೀನು ಪ್ರಶ್ನಿಸಬಹುದು. ನಾವು ಶಾಪದ ಮೂಲಕವಾಗಿ ಶಿಕ್ಷಿಸುವುದನ್ನು ತ್ಯಜಿಸಿದ್ದೇವೆ. ಕೋಪವನ್ನೂ ಇಂದ್ರಿಯಗಳನ್ನೂ ಜಯಿಸಿದ್ದೇವೆ. ತಪಸ್ಸೊಂದನ್ನೇ ನಾವು ಪರಮೈಶ್ವರ್ಯವನ್ನಾಗಿ ಭಾವಿಸಿದ್ದೇವೆ. ಈಗ ನಾವು ನಿನ್ನ ರಕ್ಷಣೆಯಲ್ಲಿದ್ದೇವೆ. ತಾಯಿಯಾದವಳು ಗರ್ಭವನ್ನು ಸಂರಕ್ಷಿಸುವಂತೆ ನೀನು ನಮ್ಮನ್ನು ರಕ್ಷಿಸಬೇಕಾಗಿದೆ."

ತಪಸ್ವಿಗಳು ಹೀಗೆ ಪ್ರಾರ್ಥಿಸುತ್ತಾ ಫಲ-ಮೂಲಗಳಿಂದಲೂ, ಪುಷ್ಪಗಳಿಂದಲೂ, ಅರಣ್ಯದಲ್ಲಿ ಸಿಕ್ಕುವ ಮಧುವೇ ಮೊದಲಾದ ಇತರ ವಸ್ತುಗಳಿಂದಲೂ ಸೀತಾ-ಲಕ್ಷ್ಮಣಸಮೇತನಾದ ಶ್ರೀರಾಮನನ್ನು ಸತ್ಕರಿಸಿದರು.

ಅಗ್ನಿಸದೃಶರಾದ, ಸಕಲಸಿದ್ಧಿಗಳನ್ನೂ ಪಡೆದಿದ್ದ, ನ್ಯಾಯಮಾರ್ಗಾವಲಂಬಿಗಳಾದ ಇತರ ಮುನಿಗಳೂ ಈಶ್ವರಸ್ವರೂಪನಾದ ಶ್ರೀರಾಮನನ್ನು ಯಥಾಯೋಗ್ಯವಾಗಿ ಸತ್ಕರಿಸಿದರು.*

ಒನೆಯ ಸರ್ಗವು ಮುಗಿಯಿತು.

---

ವಾಗಿದೆ. ಅಷ್ಟಾಭಿರ್ಲೋಕಪಾಲಾನಾಂ ಮಾತ್ರಾಭಿಃ ಕಲ್ಪಿತೋ ನೃಪಃ । ಇಂದ್ರಾದಿಲೋಕಪಾಲಕರುಗಳ ಮಾತ್ರೆಗಳಿಂದ (ಅಂಶಗಳಿಂದ) ರಾಜನು ಸೃಷ್ಟಿಸಲ್ಪಟ್ಟಿದ್ದಾನೆ.

*ಕಾಯಿಕಕೈಂಕರ್ಯವನ್ನು ಮಾಡಲು ಅಶಕ್ತರಾದವರು ಸ್ತೋತ್ರಪ್ರಣಾಮಾದಿಗಳಿಂದ ಶ್ರೀರಾಮನನ್ನು ತೃಪ್ತಿಪಡಿಸಿದರು–ಎಂದು ಈ ಶ್ಲೋಕಕ್ಕೆ ಒಬ್ಬರು ವ್ಯಾಖ್ಯಾನ ಮಾಡಿರುತ್ತಾರೆ. ತಪಸ್ವಿಗಳಲ್ಲಿಯೂ ಎರಡು ವಿಧದವರು ಇದ್ದರೆಂಬುದು ಈ ಶ್ಲೋಕಗಳಿಂದ ಸ್ಪಷ್ಟವಾಗಿದೆ. ಶ್ರೀರಾಮನನ್ನು ದುಷ್ಟಶಿಕ್ಷಕನೂ-ಶಿಷ್ಟಪರಿಪಾಲಕನೂ ಆದ

## ಶ್ರೀರಾಮ-ಲಕ್ಷ್ಮಣ-ಸೀತೆಯರ ಮೇಲೆ ವಿರಾಧನ ಆಕ್ರಮಣ

ಕೃತಾತಿಥ್ಯೋಽಥ ರಾಮಸ್ತು ಸೂರ್ಯಸ್ಯೋದಯನಂ ಪ್ರತಿ ।
ಆಮನ್ತ್ರ್ಯ ಸ ಮುನೀನ್ಸರ್ವಾನ್ವನಮೇವಾನ್ವಗಾಹತ ॥೧॥

ಶ್ರೀರಾಮನು ಸಿದ್ಧರಿಂದಲೂ ಮುನಿಗಳಿಂದಲೂ ಯಥಾಯೋಗ್ಯವಾದ ಆತಿಥ್ಯವನ್ನು ಸ್ವೀಕರಿಸಿ, ಸೂರ್ಯೋದಯವಾಗುತ್ತಲೇ ಋಷಿ-ಮುನಿಗಳ ಅಪ್ಪಣೆಯನ್ನು ಪಡೆದು ಅರಣ್ಯದಲ್ಲಿಯೇ ತನ್ನ ಪ್ರಯಾಣವನ್ನು ಮುಂದು ವರಿಸಿದನು. ಅವನು ಪ್ರಯಾಣಮಾಡುತ್ತಿದ್ದ ಅರಣ್ಯವು ನಾನಾವಿಧವಾದ ಮೃಗಗಳಿಂದ ವ್ಯಾಪ್ತವಾಗಿದ್ದಿತು. ಕರಡಿಗಳಿಂದಲೂ ಶಾರ್ದೂಲಗಳಿಂದಲೂ ಸೇವಿಸಲ್ಪಡುತ್ತಿದ್ದಿತು. ಅಲ್ಲಿದ್ದ ಲತೆಗಳೂ ಪೊದೆಗಳೂ ಧ್ವಂಸವಾಗಿದ್ದುವು. ಆ ಪ್ರದೇಶದಲ್ಲಿ ಜಲಾಶಯಗಳೇ ಎಲ್ಲೂ ಕಾಣುತ್ತಿರಲಿಲ್ಲ. ಪಕ್ಷಿಗಳೂ ಚಿಲಿ-ಪಿಲಿಗುಟ್ಟುತ್ತಿರಲಿಲ್ಲ. ಮಿಡತೆಗಳ ಧ್ವನಿಯು ಮಾತ್ರ ಎಲ್ಲೆಡೆಗಳಲ್ಲಿಯೂ ಕೇಳಿಬರುತ್ತಿದ್ದಿತು.

ಹುಲಿ, ಸಿಂಹ-ಇವೇ ಮುಂತಾದ ಘೋರಮೃಗಗಳಿಂದ ನಿಬಿಡವಾಗಿದ್ದ ಆ ಮಹಾರಣ್ಯದಲ್ಲಿ ಸೀತಾಸಮೇತನಾದ ರಾಮನು-ಪರ್ವತಶಿಖರದಂತಿದ್ದ, ಕರ್ಕಶವಾಗಿ ನಿನಾದಮಾಡುತ್ತಿದ್ದ, ಆಳವಾದ ಕಣ್ಣುಗಳಿಂದ ಕೂಡಿದ್ದ, ವಿಶಾಲವಾದ ಮುಖವುಳ್ಳ, ವಿಕಟಾಕಾರನಾದ, ವಿಶಾಲವಾದ ಹೊಟ್ಟೆಯುಳ್ಳವ ನಾಗಿದ್ದ, ಮಹಾಭಯಂಕರನಾಗಿ ಕಾಣುತ್ತಿದ್ದ, ಅಸಮಾನವಾದ ಅವಯವ ಗಳುಳ್ಳ, ದೀರ್ಘಾಕಾರನಾದ, ವಿಕಾರಾಕೃತಿಯ, ಘೋರದರ್ಶನನಾದ, ನರ ಮಾಂಸಭಕ್ಷಕನಾದ ಒಬ್ಬ ರಾಕ್ಷಸನನ್ನು ನೋಡಿದನು. ಆ ರಾಕ್ಷಸನು

---

ರಾಜನೆಂದು ಭಾವಿಸಿದ್ದವರು ಕೆಲವರು. ಅವರೆಲ್ಲರೂ ಶ್ರೀರಾಮನಿಗೆ ಶ್ರೇಷ್ಠವಾದ ಕಂದ-ಮೂಲ-ಫಲಹಾರಗಳನ್ನಿತ್ತು ಸತ್ಕರಿಸಿದರು. ಸಿದ್ಧರಾದ ಮಹರ್ಷಿಗಳು ಯಥಾ ಯೋಗ್ಯವಾಗಿ ಸತ್ಕರಿಸಿದರು ಎಂದರೆ: ಜ್ಞಾನಿಗಳಾದ ಅವರು ರಾಮನು ಪರಮಾತ್ಮ ನೆಂಬುವನ್ನು ಕಂಡುಕೊಂಡವರಾಗಿ ಈಶ್ವರಸ್ವರೂಪನಾದ ಶ್ರೀರಾಮನನ್ನು ಧ್ಯಾನಿಸುತ್ತಾ ತನ್ಮೂಲಕವಾಗಿ ತಮ್ಮನ್ನೇ ಅವನಿಗೆ ಅರ್ಪಿಸಿಕೊಂಡರು.

ಮೇದಸ್ಸಿನಿಂದಲೂ ರಕ್ತದಿಂದಲೂ ನೆನೆದಿದ್ದ ಹುಲಿಯ ಚರ್ಮವನ್ನು ಹೊದೆದಿದ್ದನು. ಅಂತಕನೋಪಾದಿಯಲ್ಲಿ ಬಾಯ್ದೆರೆದುಕೊಂಡು ಸಮಸ್ತಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಿದ್ದನು. ತನ್ನ ಶೂಲದಲ್ಲಿ ಮೂರು ಸಿಂಹಗಳನ್ನೂ, ನಾಲ್ಕು ಹುಲಿಗಳನ್ನೂ, ಎರಡು ತೋಳಗಳನ್ನೂ, ಮೈಮೇಲೆ ಚುಕ್ಕಿಗಳಿದ್ದ ಹತ್ತು ಜಿಂಕೆಗಳನ್ನೂ, ದಂತದಿಂದ ಕೂಡಿ ಮದೋದಕದಿಂದ ತೋಯ್ದುಹೋಗಿದ್ದ ಒಂದು ದೊಡ್ಡ ಆನೆಯ ತಲೆಯನ್ನೂ ಸಿಕ್ಕಿಸಿಕೊಂಡು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದ ಆ ರಾಕ್ಷಸನನ್ನು ಶ್ರೀರಾಮನು ನೋಡಿದನು.

ಅವನು ರಾಮ-ಲಕ್ಷ್ಮಣ-ಸೀತೆಯರನ್ನು ಕಂಡು ಬಹಳ ಕುಪಿತನಾಗಿ ಪ್ರಳಯಕಾಲದಲ್ಲಿ ಅಂತಕನು ಪ್ರಜೆಗಳನ್ನು ಸಂಹರಿಸಲು ಧಾವಿಸಿಬರುವಂತೆ ಮುನ್ನುಗ್ಗಿ ಬಂದನು. ಭೂಮಿಯನ್ನೇ ನಡುಗಿಸಿಬಿಡುವನೋ ಎಂಬಂತೆ-ಭಯಂಕರವಾಗಿ ಶಬ್ದಮಾಡುತ್ತಾ ವೈದೇಹಿಯನ್ನು ಸೊಂಟದಲ್ಲಿ ಇರುಕಿಕೊಂಡು ಮುಂದೆಹೋಗುತ್ತಾ ರಾಮ-ಲಕ್ಷ್ಮಣರಿಗೆ ಹೇಳಿದನು :

ಯುವಾಂ ಜಟಾಚೀರಧರೌ ಸಭಾರ್ಯೌ* ಕ್ಷೀಣಜೀವಿತೌ ।
ಪ್ರವಿಷ್ಟೌ ದಣ್ಡಕಾರಣ್ಯಂ ಶರಚಾಪಾಸಿಧಾರಿಣೌ ॥೧೦॥

ಕಥಂ ತಾಪಸಯೋರ್ವಾಂ ಚ ವಾಸಃ ಪ್ರಮದಯಾ ಸಹ ।
ಅಧರ್ಮಚಾರಿಣೌ ಪಾಪೌ ಕೌ ಯುವಾಂ ಮುನಿದೂಷಕೌ ॥೧೧॥

ಅಹಂ ವನಮಿದಂ ದುರ್ಗಂ ವಿರಾಧೋ ನಾಮ ರಾಕ್ಷಸಃ ।
ಚರಾಮಿ ಸಾಯುಧೋ ನಿತ್ಯಮೃಷಿಮಾಂಸಾನಿ ಭಕ್ಷಯನ್ ॥೧೨॥

ಇಯಂ ನಾರೀ ವರಾರೋಹಾ ಮಮ ಭಾರ್ಯಾ ಭವಿಷ್ಯತಿ ।
ಯುವಯೋಃ ಪಾಪಯೋಶ್ಚಾಹಂ ಪಾಸ್ಯಾಮಿ ರುಧಿರಂ ಮೃಧೇ ॥

"ಪಾಪಿಷ್ಠರೇ ! ನೀವಿಬ್ಬರೂ ಜಟೆಯನ್ನು ಧರಿಸಿರುವಿರಿ. ತಾಪಸರಂತೆ

---

* ಸಭಾರ್ಯೌ = ಸ್ತ್ರೀಸಹಿತೌ. ಭಾರ್ಯಾಶಬ್ದೋ ಯೋಷಿನ್ಮಾತ್ರವಾಚೀ-ಸ್ತ್ರೀಯೊಬ್ಬಳ ಸಮೇತರಾಗಿ ಎಂದರ್ಥಮಾಡಿ ಭಾರ್ಯಾಶಬ್ದವು ಸ್ತ್ರೀಶಬ್ದಸೂಚಕವಾಗಿದೆಯೇ ಹೊರತು-"ಒಬ್ಬ ಹೆಂಗಸನ್ನು ಇಬ್ಬರು ಮದುವೆಮಾಡಿಕೊಂಡಿದ್ದೀರಿ"-ಎಂಬ ಅರ್ಥದಲ್ಲಿಲ್ಲವೆಂದು ಒಬ್ಬ ವ್ಯಾಖ್ಯಾನಕಾರರು ಹೇಳುತ್ತಾರೆ.

ನಾರುಮಡಿಯನ್ನುಟ್ಟಿರುವಿರಿ. ಆದರೆ ಈ ನಿಮ್ಮ ವೇಷಕ್ಕೆ ವಿರುದ್ಧವಾಗಿ ಧನುರ್ಬಾಣಗಳನ್ನು ಹಿಡಿದಿರುವಿರಿ. ಭಾರ್ಯಾಸಮೇತರಾಗಿ ಈ ದಂಡಕಾರಣ್ಯವನ್ನು ಪ್ರವೇಶಿಸಿರುವಿರಿ. ಇದರಿಂದಲೇ ನಿಮ್ಮ ಜೀವಿತವು ಕ್ಷೀಣಿಸಿದೆಯೆಂಬುದು ನಿಶ್ಚಯ. ನನ್ನ ಕೈಗೆ ಸಿಕ್ಕಿದ ಮೇಲಂತೂ ನೀವು ಉಳಿದುಕೊಳ್ಳುವ ಸಾಧ್ಯತೆಯೇ ಇಲ್ಲ. ನಿಮ್ಮಂತಹ ಜಟಾಧಾರಿಗಳಾದ ತಪಸ್ವಿಗಳಿಗೆ ಸುಂದರಿಯಾದ ಯುವತಿಯೊಡನೆ ವಾಸಮಾಡಲು ಹೇಗೆ ಸಾಧ್ಯವಾಗುವುದು? ನಿಮ್ಮ ವೇಷ ಮತ್ತು ವೇಷಕ್ಕೂ ವಿರುದ್ಧವಾಗಿ ನೀವು ಹೊಂದಿರುವ ಧನುರ್ಬಾಣಗಳು, ಇದಕ್ಕಿಂತಲೂ ಮಿಗಿಲಾಗಿ ಈ ಯುವತಿಯೊಡನೆ ನಿಮ್ಮ ಸಹವಾಸ–ಇವುಗಳನ್ನು ನೋಡಿದರೆ ನೀವು ಅಧರ್ಮಚಾರಿಗಳೆಂಬುದು ಸ್ಪಷ್ಟವಾಗಿ ಕಾಣುತ್ತಿದೆ. ಪಾಪಿಷ್ಠರಾದ ನೀವು ನಿಮ್ಮ ಈ ವೇಷದಿಂದ ಋಷಿಗಳ ಸಮೂಹಕ್ಕೇ ಕಳಂಕಪ್ರಾಯರಾಗಿರುವಿರಿ. ನಾನು ಯಾರೆಂಬ ಅರಿವು ನಿಮಗಿರಲಾರದು. ನಾನು ವಿರಾಧನೆಂಬ ಹೆಸರಿನ ರಾಕ್ಷಸನು. ಆಯುಧಪಾಣಿಯಾಗಿ ಎದುರಿಗೆ ಸಿಕ್ಕಿದ ಋಷಿಗಳನ್ನು ಸಂಹರಿಸಿ ಅವರ ಮಾಂಸವನ್ನು ತಿನ್ನುತ್ತಾ ದುರ್ಗಮವಾದ ಈ ಅರಣ್ಯದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿರುತ್ತೇನೆ. ಇನ್ನು ಮುಂದೆ ಸುಂದರವಾದ ಕಟಿಪ್ರದೇಶದಿಂದ ಕೂಡಿರುವ ಈ ಹೆಂಗಸು ನನ್ನ ಪತ್ನಿಯಾಗುತ್ತಾಳೆ. ನಿಮ್ಮೊಡನೆ ನಾನೀಗ ಯುದ್ಧಮಾಡಿ ಪಾಪಿಷ್ಠರಾದ ನಿಮ್ಮಿಬ್ಬರ ರಕ್ತವನ್ನು ಕುಡಿಯುತ್ತೇನೆ."

ಹೀಗೆ ಅತಿದುಷ್ಟವಾದ ಮಾತುಗಳನ್ನು ಹೇಳುತ್ತಿದ್ದ ದುರಾತ್ಮನಾದ ವಿರಾಧನ ಅಹಂಕಾರಯುಕ್ತವಾದ ಆ ಮಾತುಗಳನ್ನು ಕೇಳಿ ಭ್ರಾಂತಳಾದ, ಜನಕನ ಮಗಳಾದ ಸೀತಾದೇವಿಯು ಬಿರುಗಾಳಿಗೆ ಸಿಕ್ಕಿದ ಬಾಳೆಯ ಕಂದಿನಂತೆ ಭಯದಿಂದ ನಡುಗಿದಳು.

ವಿರಾಧನ ಸೊಂಟದಲ್ಲಿದ್ದ ಮಂಗಳಸ್ವರೂಪಳಾದ ಸೀತಾದೇವಿಯನ್ನು ಕಂಡು ಶ್ರೀರಾಮನ ಮುಖವು ಬಾಡಿಹೋಯಿತು. ದುಃಖತಪ್ತನಾದ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು:

ಪಶ್ಯ ಸೌಮ್ಯ ನರೇನ್ದ್ರಸ್ಯ ಜನಕಸ್ಯಾತ್ಮಸಂಭವಾಮ್ ।
ಮಮ ಭಾರ್ಯಾಂ ಶುಭಾಚಾರಾಂ ವಿರಾಧಾಙ್ಕೇ ಪ್ರವೇಶಿತಾಮ್
ಅತ್ಯನ್ತಸುಖಸಂವೃದ್ಧಾಂ ರಾಜಪುತ್ರೀಂ ಯಶಸ್ವಿನೀಮ್ ॥೧೬॥

ಯದಭಿಪ್ರೇತಮಸ್ಮಾಸು ಪ್ರಿಯಂ ವರವೃತಂ ಚ ಯತ್ ।
ಕೈಕೇಯ್ಯಾಸ್ತು ಸುಸಂಪನ್ನಂ ಕ್ಷಿಪ್ರಮದ್ಯೈವ ಲಕ್ಷ್ಮಣ ॥೧೭॥
ಯಾ ನ ತುಷ್ಯತಿ ರಾಜ್ಯೇನ ಪುತ್ರಾರ್ಥೇ ದೀರ್ಘದರ್ಶಿನೀ ।
ಯಯಾಹಂ ಸರ್ವಭೂತಾನಾಂ ಪ್ರಿಯಃ ಪ್ರಸ್ಥಾಪಿತೋ ವನಮ್ ॥೧೮॥
ಅದ್ಯೇದಾನೀಂ ಸಕಾಮಾ ಸಾ ಯಾ ಮಾತಾ ಮಧ್ಯಮಾ ಮಮ ।
ಪರಸ್ಪರ್ಶಾತ್ತು ವೈದೇಹ್ಯಾ ನ ದುಃಖತರಮಸ್ತಿ ಮೇ ।
ಪಿತುರ್ವಿಯೋಗಾತ್ಸೌಮಿತ್ರೇ ಸ್ವರಾಜ್ಯಹರಣಾತ್ತಥಾ ॥೧೯॥

"ನರೇಂದ್ರನಾದ ಜನಕನ ಪುತ್ರಿಯಾದ, ಶುಭಾಚಾರಳಾದ, ಅತ್ಯಂತ ಸುಖದಲ್ಲಿ ಬೆಳೆದ, ರಾಜಪುತ್ರಿಯಾದ, ನನ್ನ ಭಾರ್ಯೆಯಾದ ಸೀತೆಯು ವಿರಾಧನ ಸೊಂಟದಲ್ಲಿರುವುದನ್ನಾದರೂ ನೋಡು! ಲಕ್ಷ್ಮಣ! ಯಾವ ಕೈಕೇಯಿಗೆ ನಾವು ಈ ಅರಣ್ಯದಲ್ಲಿ ದುಃಖಪಡುವುದು ಬಹಳ ಇಷ್ಟವಾಗಿದ್ದಿತೋ ಮತ್ತು ಇದೇ ಕಾರಣದಿಂದಲೇ ತನಗೆ ಪ್ರಿಯವಾದ ವರವನ್ನು ಪಡೆದುಕೊಂಡಳೋ – ಅದರ ಸಾರ್ಥಕತೆಯು ಈಗಲೇ ಪ್ರಾಪ್ತವಾಗಲಿದೆ. *ಮುಂದಾಗುವುದನ್ನು ತಿಳಿಯುವುದರಲ್ಲಿ ಬಹಳ ನಿಪುಣೆಯಾದ ಅವಳು ಮಗನ ಸಲುವಾಗಿ ರಾಜ್ಯವನ್ನು ಪಡೆದುಕೊಳ್ಳುವುದರಲ್ಲಿಯೇ ತೃಪ್ತಳಾಗಲಿಲ್ಲ. ನಾನು ಎಲ್ಲರಿಗೂ ಪ್ರಿಯನಾಗಿದ್ದೆನು. ಹಾಗಿದ್ದರೂ ಅವಳು ನನ್ನನ್ನು ಅರಣ್ಯಕ್ಕಟ್ಟಿದಳು. ಈಗಲೇ ಆ ನನ್ನ ನಡುತಾಯಿಯ ಮನೋರಥವು ಸಂಪೂರ್ಣವಾಗಿ ಫಲಿಸುತ್ತದೆ. ಅವಳ ಕಾಮನೆಯು ಪೂರ್ಣವಾಗುತ್ತದೆ.

* ಕೈಕೇಯಿಯನ್ನು 'ದೀರ್ಘದರ್ಶಿನೀ' ಎಂದು ಶ್ರೀರಾಮನು ಕರೆದಿದ್ದಾನೆ. ಆದುದರಿಂದಲೇ ಭರತನಿಗೆ ರಾಜ್ಯದ ಪಟ್ಟಾಭಿಷೇಕಮಾಡಬೇಕೆಂಬುವುದರ ಜೊತೆಗೆ ಸರ್ವಲೋಕಪ್ರಿಯನಾದ ರಾಮನು ಹದಿನಾಲ್ಕು ವರ್ಷಗಳ ಕಾಲ ಅರಣ್ಯವಾಸವನ್ನು ಮಾಡಬೇಕೆಂದು ಎರಡನೆಯ ವರವನ್ನೂ ಕೇಳಿದುದು ದೀರ್ಘದರ್ಶಿತ್ವದ ದ್ಯೋತಕವಾಗಿದೆ, ಒಂದು ವೇಳೆ ಸಕಲಲೋಕಪ್ರಿಯನಾದ ರಾಮನು ಅಯೋಧ್ಯೆಯಲ್ಲೇ ಇದ್ದಿದ್ದರೆ ರಾಜನಾಗದಿದ್ದರೂ ಜನಪ್ರಿಯತೆಯು ತಪ್ಪುತ್ತಿರಲಿಲ್ಲ. ರಾಮನನ್ನು ಕಾಡಿಗೆ ಕಳುಹಿಸುವುದರಿಂದ ಜನಪ್ರಿಯತೆಯು ತಾನಾಗಿಯೇ ಕಮ್ಮಿಯಾಗಿಹೋಗುವುದು. ಹದಿನಾಲ್ಕು ವರ್ಷಗಳ ಅವಧಿಯಲ್ಲಿ ಭರತನೂ ಜನಪ್ರಿಯನಾಗಬಹುದು. ಅರಣ್ಯವು ರಾಕ್ಷಸಭೂಯಿಷ್ಠವಾಗಿರುವುದರಿಂದ ಹದಿನಾಲ್ಕು ವರ್ಷಗಳ ಪರ್ಯಂತವಾಗಿ ಅರಣ್ಯದಲ್ಲಿ ರಾಮನು

ಲಕ್ಷ್ಮಣ! ವೈದೇಹಿಯನ್ನು ನನ್ನ ಕಣ್ಣೆದುರಿನಲ್ಲಿಯೇ ಪರಪುರುಷನು ಮುಟ್ಟಿದುದರಿಂದ ಉಂಟಾಗಿರುವ ಈ ದುಃಖಕ್ಕಿಂತಲೂ ಮಿಗಿಲಾದ ದುಃಖವು ನನಗೆ ಬೇರೊಂದಿಲ್ಲ. ಈ ದುಃಖವು ಪಿತೃವಿಯೋಗದ ದುಃಖಕ್ಕಿಂತಲೂ ಮತ್ತು ರಾಜ್ಯಾಪಹರಣದ ದುಃಖಕ್ಕಿಂತಲೂ ಮಿಗಿಲಾದುದು. ಇದನ್ನಂತೂ ನನಗೆ ಸಹಿಸಿಕೊಳ್ಳಲೇ ಸಾಧ್ಯವಿಲ್ಲವಾಗಿದೆ."*

ಶೋಕದಿಂದ ಕಂಬನಿಗರೆಯುತ್ತಿದ್ದ ಶ್ರೀರಾಮನು ಹೀಗೆ ಹೇಳಲು ಲಕ್ಷ್ಮಣನು ಅತಿಕ್ರುದ್ಧನಾಗಿ ಮಂತ್ರದಿಂದ ನಿರುದ್ಧವಾದ ಸರ್ಪದಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಅಣ್ಣನಿಗೆ ಹೇಳಿದನು:

ಅನಾಥ ಇವ ಭೂತಾನಾಂ ನಾಥಸ್ತ್ವಂ ವಾಸವೋಪಮಃ !
ಮಯಾ ಪ್ರೇಷ್ಯೇಣ ಕಾಕುತ್ಸ್ಥ ಕಿಮರ್ಥಂ ಪರಿತಪ್ಯಸೇ ॥೨೧॥

"ಅಣ್ಣ! ನೀನು ಇಂದ್ರನಿಗೆ ಸಮಾನನು. ಮೂರು ಲೋಕಗಳನ್ನೂ ಆಳಲು ಸಮರ್ಥನಾದವನು. ಸಕಲಪ್ರಾಣಿಗಳಿಗೂ ಒಡೆಯನು. ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಡೆಸಿಕೊಡಲು ಸಿದ್ಧನಾಗಿರುವ ಸೇವಕನು ಇಲ್ಲಿಯೇ ಇದ್ದೇನೆ. ಹೀಗಿದ್ದೂ ನೀನು ಕೇವಲ ಒಬ್ಬ ಅನಾಥನಂತೆ ಏಕೆ ಪರಿತಾಪಪಡುತ್ತಿರುವೆ?

---

* ತನ್ನ ಪತ್ನಿಯನ್ನು ಬೇರೊಬ್ಬರು ಕಣ್ಣೆತ್ತಿ ನೋಡಿದ ಮಾತ್ರಕ್ಕೇ ಮನುಷ್ಯನು ಖತಿಗೊಳ್ಳುತ್ತಾನೆ. ಅಶಾಂತನಾಗುತ್ತಾನೆ. ಈ ಕಾರಣದಿಂದಲೇ ಎಷ್ಟೆಷ್ಟೋ ಪ್ರಮಾದಗಳೂ ಆಗಿಹೋಗಿವೆ. ಹಾಗಿರುವಾಗ ತನ್ನೆದುರಿನಲ್ಲಿಯೇ ತನ್ನ ಪತ್ನಿಯನ್ನು ಮತ್ತೊಬ್ಬನು ಬಲಾತ್ಕಾರವಾಗಿ ಸೆಳೆದುಕೊಂಡರೆ ಪತ್ನಿಯನ್ನು ಕಳೆದುಕೊಂಡವನ ಮನಸ್ಸಿನಲ್ಲುಂಟಾಗುವ ಪರಿಣಾಮವನ್ನು ವಿವರಿಸುವ ಸಾಧ್ಯತೆಯಿಲ್ಲ. ಈ ಕಾರಣದಿಂದಲೇ ಶ್ರೀರಾಮನು ಕೈಕೇಯಿಯ ವಿಷಯವಾಗಿಯೂ ಇಲ್ಲಿ ಬಿರುನುಡಿಗಳನ್ನಾಡುತ್ತಾನೆ.

---

ಉಳಿವೂ ಕಷ್ಟವೇ ಸರಿ. ಈ ದೀರ್ಘದರ್ಶಿತ್ವವು ಕೈಕೇಯಿಗಿತ್ತೆಂಬ ಅಭಿಪ್ರಾಯದಿಂದಲೇ ರಾಮನು ಲಕ್ಷ್ಮಣನಿಗೆ ಹೀಗೆ ಹೇಳಿದ್ದಾನೆ.

ದೀರ್ಘದರ್ಶಿನೀ ಎಂಬುದಕ್ಕೆ ಒಬ್ಬ ವ್ಯಾಖ್ಯಾನಕಾರರು ರಾಕ್ಷಸವಧೆಯಾಗಬೇಕಾದುದನ್ನು ಮುಂದಾಗಿ ಆಲೋಚಿಸಿ ಕೈಕೇಯಿಯು ರಾಮನ ವನವಾಸವನ್ನು ಅಪೇಕ್ಷಿಸಿದಳೆಂದು ಬಹುಕಷ್ಟದಿಂದ ವ್ಯಾಖ್ಯಾನಮಾಡಿದ್ದಾರೆ. 'ಅದ್ಯೇದಾನಿಂ ಸಕಾಮಾ ಸಾ' ಎಂಬುದಕ್ಕೂ ಸಹ "ಅಸ್ಮಿನ್ ದಿನೇ ಇದಾನೀಂ ರಾಕ್ಷಸವಧಸಮಯೇ ಸಕಾಮಾ ಪೂರ್ಣಮನೋರಥಾ ಭವಿಷ್ಯತಿ= ಈ ದಿವಸ ರಾಕ್ಷಸವಧೆಯ ಸಮಯದಲ್ಲಿ ಆ ನನ್ನ ತಾಯಿ ಕೈಕೇಯಿಯು

ಶರೇಣ ನಿಹತಸ್ಯಾದ್ಯ ಮಯಾ ಕ್ರುದ್ಧೇನ ರಕ್ಷಸಃ ।
ವಿರಾಧಸ್ಯ ಗತಾಸೋರ್ಹಿ ಮಹೀ ಪಾಸ್ಯತಿ ಶೋಣಿತಮ್ ॥೨೨॥

ಕೋಪಗೊಂಡಿರುವ ನನ್ನಿಂದ ಸಂಹರಿಸಲ್ಪಟ್ಟು ಅಸುನೀಗುವ ಈ ವಿರಾಧರಾಕ್ಷಸನ ರಕ್ತವನ್ನು ಭೂದೇವಿಯು ಈಗಲೇ ಪಾನಮಾಡುತ್ತಾಳೆ.

ರಾಜ್ಯಕಾಮೇ ಮಮ ಕ್ರೋಧೋ ಭರತೇ ಯೋ ಬಭೂವ ಹ ।
ತಂ ವಿರಾಧೇ ವಿಮೋಕ್ಷ್ಯಾಮಿ ವಜ್ರೀ ವಜ್ರಮಿವಾಚಲೇ ॥೨೩॥

ಭರತನು ರಾಜ್ಯಕಾಮನೆಯಿಂದ ತನ್ನ ತಾಯಿಯ ಮೂಲಕವಾಗಿ ರಾಜ್ಯವನ್ನು ಪಡೆದುಕೊಳ್ಳಲು ಹವಣಿಸಿದನೆಂಬ ಅಭಿಪ್ರಾಯದಿಂದಾಗಿ ನನ್ನಲ್ಲಿ ಭರತನ ಮೇಲೆ ಉಂಟಾಗಿದ್ದ ಕೋಪವನ್ನೇ ನಾನೀಗ–ಇಂದ್ರನು ವಜ್ರಾಯುಧವನ್ನು ಪರ್ವತದ ಮೇಲೆ ಪ್ರಯೋಗಿಸಿದಂತೆ–ವಿರಾಧನ ಮೇಲೆ ಪ್ರಯೋಗಿಸುತ್ತೇನೆ. ಈ ಕೋಪಾಗ್ನಿಯಿಂದಲೇ ವಿರಾಧನನ್ನು ದಹಿಸಿ ಬಿಡುತ್ತೇನೆ.

ನನ್ನ ಭುಜಬಲದ ವೇಗದಿಂದ ವೇಗವಾಗಿ ಹೊರಚಿಮ್ಮಿದ ಬಾಣವು ರಾಕ್ಷಸನ ವಿಶಾಲವಾದ ವಕ್ಷಸ್ಥಳದಲ್ಲಿ ನಾಟಿಕೊಳ್ಳಲಿ. ಹಾಗೆ ನಾಟಿದ ಆ ನನ್ನ ಬಾಣವು ಅವನ ಶರೀರದಲ್ಲಿರುವ ಪ್ರಾಣವನ್ನು ಹೊರತೆಗೆಯಲಿ. ಒಡನೆಯೇ ಆ ಪಾಪಿಷ್ಠನು ತೂರಾಡುತ್ತಾ ನೆಲದ ಮೇಲೆ ಬೀಳಲಿ."*

೨ನೆಯ ಸರ್ಗವು ಮುಗಿಯಿತು.

---

ಪೂರ್ಣಮನೋರಥಳಾಗುತ್ತಾಳೆ." ಎಂದೇ ಅರ್ಥಮಾಡಿದ್ದಾರೆ. ಆದರೆ ವಾಲ್ಮೀಕಿಗಳ ಹೃದಯವು ಇದಲ್ಲವೆಂದು ಇಲ್ಲಿಯ ಸನ್ನಿವೇಶದಿಂದ ಬಹುಸ್ಪಷ್ಟವಾಗಿ ಹೇಳಬಹುದಾಗಿದೆ. ಮಾತಾ ಮಧ್ಯಮಾ ಮಮ–ಕೈಕೇಯಿಯು ರಾಮನಿಗೆ ಚಿಕ್ಕತಾಯಿ. ಈ ಹಿಂದೆ ಮಾತಾ ಮಮ ಕನೀಯಸೀ ಎಂದೇ ಶ್ರೀರಾಮನು ಹೇಳಿದ್ದಾನೆ. ಮಧ್ಯಮಾ ಮಾತಾ ಎಂದು ಇಲ್ಲಿ ಹೇಳಿರುವುದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದಾಗಿದೆ. ಕೈಕೇಯಿಯು ಕೌಸಲ್ಯಾ-ಸುಮಿತ್ರೆಯರಿಗಿಂತಲೂ ಕಿರಿಯಳೇ ಹೊರತು ದಶರಥನ ಪತ್ನಿಯರಲ್ಲೇ ಕಿರಿಯಳಲ್ಲ. ದಶರಥನಿಗೆ ಈ ಮೂವರಲ್ಲದೇ ಇನ್ನೂ ಅನೇಕ ಪತ್ನಿಯರಿದ್ದರೆಂದು ನಾವು ಈ ಹಿಂದೆ ತಿಳಿದಿದ್ದೇವೆ. ಆದುದರಿಂದ ದಶರಥನ ಪತ್ನಿಯರಲ್ಲಿ ಇವಳು ಮಧ್ಯಮಳಾಗಬಹುದು. ಈ ದೃಷ್ಟಿಯಿಂದ ರಾಮನು ಹೇಳಿರುವುದು ಸಮಂಜಸವಾಗಿದೆ.

* ಈ ಮೊದಲೇ ಭರತನು ರಾಜ್ಯವನ್ನು ಪುನಃ ರಾಮನಿಗೊಪ್ಪಿಸಲು ಅಯೋಧ್ಯಾ

ಅರಣ್ಯಕಾಂಡ

೩ನೆಯ ಸರ್ಗ

## ಶ್ರೀರಾಮ-ವಿರಾಧರ ಸಂಭಾಷಣೆ : ರಾಮ-ಲಕ್ಷ್ಮಣರಿಬ್ಬರೂ ವಿರಾಧನನ್ನು ಕತ್ತಿಯಿಂದ ಪ್ರಹರಿಸಿದುದು : ವಿರಾಧನು ರಾಮ-ಲಕ್ಷ್ಮಣರನ್ನೆತ್ತಿಕೊಂಡು ಬೇರೆಡೆಗೆ ಧಾವಿಸಿದುದು :

ಇತ್ಯುಕ್ತ್ವಾ ಲಕ್ಷ್ಮಣಃ ಶ್ರೀಮಾನ್ರಾಕ್ಷಸಂ ಪ್ರಹಸನ್ನಿವ ।
ಕೋ ಭವಾನ್ವನಮಭ್ಯೇತ್ಯ ಚರಿಷ್ಯತಿ ಯಥಾಸುಖಮ್ ॥೧॥

ಅಣ್ಣನೊಡನೆ ಹೀಗೆ ಹೇಳಿದನಂತರ ಶ್ರೀಮಂತನಾದ ಲಕ್ಷ್ಮಣನು ವಿರಾಧನ ಕಡೆಗೆ ತಿರುಗಿ ಅವನ ಮಾತುಗಳಿಗೆ ತಿರಸ್ಕಾರಸೂಚಕವಾದ ಮಂದ ಹಾಸವನ್ನು ಬೀರುತ್ತಿರುವನೋ ಎಂಬಂತೆ ನಸುನಗುತ್ತಾ ಪ್ರಶ್ನಿಸಿದನು :

"ಈ ಅರಣ್ಯಕ್ಕೆ ಬಂದು ಸ್ವೇಚ್ಛೆಯಿಂದ ಸಂಚರಿಸುತ್ತಿರುವ ನೀನು ಯಾರು ಮತ್ತು ನಿನ್ನ ಕುಲ-ಗೋತ್ರಗಳೇನು ?"

ಲಕ್ಷ್ಮಣನ ಆ ಮಾತನ್ನು ಕೇಳಿ ವಿರಾಧನು ಅರಣ್ಯವನ್ನೇ ತನ್ನ ಧ್ವನಿಯಿಂದ ಮೊಳಗಿಸುತ್ತಾ ಹೇಳಿದನು : "ಮೊದಲು ನೀವು ಯಾರೆಂಬುದನ್ನೂ, ಎಲ್ಲಿಗೆ ಹೋಗುತ್ತಿರುವಿರೆಂಬುದನ್ನೂ ಹೇಳಿರಿ." ಹೀಗೆ ಮರುಪ್ರಶ್ನಿಸಿದ ಪ್ರಜ್ವಲಿಸುತ್ತಿದ್ದ ಮುಖದಿಂದ ಕೂಡಿದ್ದ ರಾಕ್ಷಸನಿಗೆ ಮಹಾತೇಜಸ್ವಿಯಾದ ಶ್ರೀರಾಮನು ಯಥೋಚಿತವಾಗಿ ಉತ್ತರಿಸಿದನು :

"ಈ ಅರಣ್ಯದಲ್ಲಿ ಸಂಚರಿಸುತ್ತಿರುವ ನಾವು ಇಕ್ಷ್ವಾಕುಕುಲಸಂಭೂತರು. ಕ್ಷತ್ರಿಯರು. ನಮ್ಮ ವಂಶಕ್ಕೆ ಯೋಗ್ಯವಾದ ಧರ್ಮದಲ್ಲಿ ನಿಷ್ಠೆಯುಳ್ಳವರು. ಈಗಲಾದರೂ ನೀನು ಯಾರೆಂಬುದನ್ನು ಹೇಳು. ನಿನ್ನ

---

ಪುರದ ಜನರೊಡನೆ ಅರಣ್ಯಕ್ಕೆ ಆಗಮಿಸಿದ್ದನು. ಆ ವೇಳೆಗೆ ಕೈಕೇಯಿಗೂ ತಾನು ಮಾಡಿದ್ದು ತಪ್ಪೆಂಬ ಅರಿವಾಗಿದ್ದರೂ ಆಗಿರಬಹುದು. ಮಗನ ಜೊತೆಯಲ್ಲಿಯೇ ಅವಳೂ ಅರಣ್ಯಕ್ಕೆ ಬಂದಿದ್ದಳು. ಹೀಗಿದ್ದರೂ ಶ್ರೀರಾಮನು ಈ ಸಂದರ್ಭದಲ್ಲಿ ಕೈಕೇಯಿಯನ್ನು ಎತ್ತಿ ಮಾತನಾಡಿದನೇಕೆ ? ಮಹಾಪುರುಷನಾದ ರಾಮನು ಹೀಗೆ ಮಾತನಾಡಿದುದು ಸಾಧುವೇ ? ಎಂಬ ಪ್ರಶ್ನೆಯು ಹುಟ್ಟುವುದು ಸಹಜ. ಎಂತಹ ವಿವೇಕಿಯೂ ಸಮಯಗಳಲ್ಲಿ ಹೇಗೆ ಅಧೀರನಾಗುವನೆಂಬುದನ್ನು ಸೂಚಿಸುವ ತೋರಿಕೆಯು ರಾಮನದೆಂದು ಕೆಲವು ವ್ಯಾಖ್ಯಾನಕಾರರು ಅಭಿಪ್ರಾಯಪಡುತ್ತಾರೆ.

ವಿಷಯವನ್ನು ತಿಳಿದುಕೊಳ್ಳುವ ಆಶಯವಿದೆ. ಈ ದಂಡಕಾರಣ್ಯದಲ್ಲಿ ಮನ ಬಂದಂತೆ ಸಂಚರಿಸುತ್ತಿರುವ ನೀನು ಯಾರು ?"

ಸತ್ಯಪರಾಕ್ರಮನಾದ ಶ್ರೀರಾಮನಿಗೆ ವಿರಾಧನು ತನ್ನ ಪೂರ್ವ ವೃತ್ತಾಂತವನ್ನು ಹೇಳಲು ಉಪಕ್ರಮಿಸಿದನು.

"ರಾಘವ ! ನಾನಾರೆಂಬುದನ್ನು ಹೇಳುವೆನು : ಕೇಳು. ನಾನು ಜಯನೆಂಬುವವನ ಮಗ. ಶತಹ್ರದಾ ಎಂಬುವಳು ನನ್ನ ತಾಯಿ. ಈ ಪೃಥ್ವಿಯಲ್ಲಿರುವ ಎಲ್ಲ ರಾಕ್ಷಸರೂ ನನ್ನನ್ನು 'ವಿರಾಧ' ಎಂದು ಕರೆಯುತ್ತಾರೆ. ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದುದರ ಫಲವಾಗಿ ಶಸ್ತ್ರಗಳಿಂದ ನಾನು ಕೊಲ್ಲಲ್ಪಡತಕ್ಕವನಲ್ಲ. ಬಂಡೆಗಳಿಂದ ಭೇದಿಸಲ್ಪಡತಕ್ಕವನೂ ಅಲ್ಲ.

ಉತ್ಸೃಜ್ಯ ಪ್ರಮದಾಮೇನಾಮನಪೇಕ್ಷೌ ಯಥಾಗತಮ್ ।
ತ್ವರಮಾಣೌ ಪಲಾಯೇಥಾಂ ನ ವಾಂ ಜೀವಿತಮಾದದೇ ॥೮॥

ಈ ಹೆಂಗಸಿನಲ್ಲಿ ಅಪೇಕ್ಷೆಯನ್ನು ತೊರೆದು ಇವಳನ್ನಿಲ್ಲಿಯೇ ಬಿಟ್ಟು ವೇಗದಿಂದ ಓಡಿ ಹೋಗಿರಿ. ಹಾಗೆ ಮಾಡಿದಲ್ಲಿ ನಿಮ್ಮನ್ನು ಸಂಹರಿಸುವುದಿಲ್ಲ."

ರಾಕ್ಷಸನ ಆ ಮಾತನ್ನು ಕೇಳಿ ಶ್ರೀರಾಮನು ಕ್ರುದ್ಧನಾದನು. ಅವನ ಕಣ್ಣುಗಳು ರಕ್ತದಂತೆ ಕೆಂಪಾದುವು. ಪಾಪಬುದ್ಧಿಯವನಾದ ವಿಕಾರವಾದ ಆಕಾರವನ್ನು ಹೊಂದಿದ್ದ ವಿರಾಧರಾಕ್ಷಸನಿಗೆ ಅವನು ಹೇಳಿದನು :

ಕ್ಷುದ್ರ ಧಿಕ್ತ್ವಾಂ ತು ಹೀನಾರ್ಥಂ ಮೃತ್ಯುಮನ್ವೇಷಸೇ ಧ್ರುವಮ್ ।
ರಣೇ ಸಂಪ್ರಾಪ್ಸ್ಯಸೇ ತಿಷ್ಠ ನ ಮೇ ಜೀವನ್ಗಮಿಷ್ಯಸಿ ॥೧೦॥

"ಕ್ಷುದ್ರನೇ ! ಕುತ್ಸಿತವಾದ ವ್ಯವಹಾರವುಳ್ಳ ನಿನಗೆ ಧಿಕ್ಕಾರವಿರಲಿ. ನೀನಿಂದು ನಿಶ್ಚಯವಾಗಿಯೂ ಮೃತ್ಯುದೇವತೆಯನ್ನು ಹುಡುಕಿಕೊಂಡು ಹೊರಟಿರುವೆ. ನಿಲ್ಲು ! ನಿಲ್ಲು. ನೀನು ಹುಡುಕಿಕೊಂಡು ಹೋಗುತ್ತಿರುವ ಮೃತ್ಯುವನ್ನು ನನ್ನೊಡನೆ ಮಾಡಲಿರುವ ಯುದ್ಧದಲ್ಲಿ ಪಡೆದುಕೊಳ್ಳುವೆ. ಜೀವಸಹಿತವಾಗಿ ನನ್ನಿಂದ ತಪ್ಪಿಸಿಕೊಂಡು ಹೋಗಲಂತೂ ನಿನಗೆ ಸಾಧ್ಯವೇ ಇಲ್ಲ."

ಶ್ರೀರಾಮನು ಹೀಗೆ ಹೇಳಿ ಮರುಕ್ಷಣದಲ್ಲಿಯೇ ಧನುಸ್ಸಿಗೆ ಹೆದೆಯ

ನ್ನೇರಿಸಿ ನಿಶಿತವಾದ ಬಾಣಗಳನ್ನು ಅತ್ಯಂತಶೀಘ್ರವಾಗಿ ಧನುಸ್ಸಿನಲ್ಲಿ ಅನುಸಂಧಾನಮಾಡಿ ರಾಕ್ಷಸನನ್ನು ಪ್ರಹರಿಸಿದನು. ಸ್ವರ್ಣಮಯವಾದ ರೆಕ್ಕೆಗಳಿಂದ ಕೂಡಿದ್ದ, ಗರುಡ-ವಾಯುಗಳಿಗೆ ಸಮಾನವಾದ ವೇಗವುಳ್ಳ ಏಳು ಬಾಣಗಳನ್ನು ನಾಣೇರಿಸಲ್ಪಟ್ಟಿದ್ದ ಧನುಸ್ಸಿನ ಮೂಲಕವಾಗಿ ಶ್ರೀರಾಮನು ವಿರಾಧನ ಮೇಲೆ ಪ್ರಯೋಗಿಸಿದನು. ನವಿಲುಗರಿಗಳ ರೆಕ್ಕೆಗಳನ್ನು ಹೊಂದಿದ್ದ ಆ ಏಳು ಬಾಣಗಳೂ ವಿರಾಧನ ಶರೀರವನ್ನು ಭೇದಿಸಿ ಒಳಹೊಕ್ಕು ರಕ್ತದಿಂದ ಶೋಯುದ್ದವುಗಳಾಗಿ ಕೆಂಪಾದ ಅಗ್ನಿಯ ರೂಪಗಳನ್ನು ಧರಿಸಿ ಶರೀರದಿಂದ ಹೊರಬಂದು ನೆಲದ ಮೇಲೆ ಬಿದ್ದುವು. ಹೀಗೆ ಶ್ರೀರಾಮನ ಬಾಣಗಳಿಂದ ಪ್ರಹೃತನಾದ ವಿರಾಧನು ಒಡನೆಯೇ ಸೀತಾದೇವಿಯನ್ನು ಕೆಳಗಿಳಿಸಿ ಬಹುಕುಪಿತನಾಗಿ ಶೂಲವನ್ನು ಮೇಲೆತ್ತಿಕೊಂಡು ರಾಮ-ಲಕ್ಷ್ಮಣರ ಕಡೆಗೆ ಧಾವಿಸಿದನು. ಅಗಲವಾಗಿ ಬಾಯ್ದೆರೆದು ಗಟ್ಟಿಯಾಗಿ ಗರ್ಜಿಸುತ್ತಾ ಇಂದ್ರನ ಧ್ವಜಸ್ತಂಭಕ್ಕೆ ಸಮಾನವಾದ ಶೂಲಾಯುಧವನ್ನು ಹಿಡಿದು ನಿಂತಿದ್ದ ಆ ರಾಕ್ಷಸನು ಬಾಯ್ದೆರೆದು ನಿಂತಿರುವ ಅಂತಕನಂತೆಯೇ ಕಾಣುತ್ತಿದ್ದನು. ಪ್ರಳಯಕಾಲದ ಯಮನೋಪಾದಿಯಲ್ಲಿ ಕಾಣುತ್ತಿದ್ದ ವಿರಾಧನ ಮೇಲೆ ರಾಮ-ಲಕ್ಷ್ಮಣರಿಬ್ಬರೂ ದೇದೀಪ್ಯಮಾನವಾದ ಬಾಣಗಳ ಮಳೆಯನ್ನೇ ಸುರಿಸಿದರು.

ಮಹಾಭಯಂಕರನಾದ ವಿರಾಧನು ಪ್ರಜ್ವಲಿಸುವ ಬಾಣಗಳು ಸತತವಾಗಿ ತನ್ನ ಮೇಲೆ ಬೀಳುತ್ತಿದ್ದರೂ ಲೆಕ್ಕಿಸದೇ ತಿರಸ್ಕಾರಪೂರ್ವಕವಾಗಿ ಗಹಗಹಿಸಿ ನಗುತ್ತಾ ಆಕಳಿಸಿದನು. ಹಾಗೆ ಆಕಳಿಸಿ ಮೈಮುರಿಯುತ್ತಿದ್ದಂತೆಯೇ ಅವನ ಶರೀರದಲ್ಲಿ ನೆಟ್ಟುಕೊಂಡಿದ್ದ ರಾಮ-ಲಕ್ಷ್ಮಣರಿಂದ ಪ್ರಯುಕ್ತವಾದ ಬಾಣಗಳು ತೊಪತೊಪನೆ ಕೆಳಗುದುರಿದುವು. ರಾಮ-ಲಕ್ಷ್ಮಣರ ಬಾಣಗಳ ಸ್ಪರ್ಶಮಾತ್ರದಿಂದಲೇ ಹೊರಬರಬೇಕಾಗಿದ್ದ ಪ್ರಾಣಗಳನ್ನು ವಿರಾಧನು ವರದಾನದ ಬಲದಿಂದ ತಡೆಹಿಡಿದು ಶೂಲವನ್ನೆತ್ತಿ ರಾಮ-ಲಕ್ಷ್ಮಣರ ಕಡೆಗೆ ಧಾವಿಸಿದನು.

ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಶ್ರೀರಾಮನು ವಜ್ರಾಯುಧಕ್ಕೆ ಸಮಾನವಾಗಿದ್ದ, ಧಗ-ಧಗಿಸುವ ಅಗ್ನಿಯಂತೆಯೇ ಜಾಜ್ವಲ್ಯಮಾನವಾಗಿದ್ದ ರಾಕ್ಷಸನೆತ್ತಿ ಹಿಡಿದಿದ್ದ ಶೂಲಾಯುಧವನ್ನು ಎರಡು ಬಾಣಗಳಿಂದ ಕತ್ತರಿಸಿ

ಹಾಕಿದನು. ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟು ಕೆಳಗುರುಳಿದ ಮೇರುಪರ್ವತದ ಶಿಖರದಂತೆ – ಶ್ರೀರಾಮನ ಬಾಣಗಳಿಂದ ಕತ್ತರಿಸಲ್ಪಟ್ಟ ವಿರಾಧನ ಶೂಲಾಯುಧವು ಭೂಮಿಯಲ್ಲಿ ಬಿದ್ದಿತು. ಮರುಕ್ಷಣದಲ್ಲಿಯೇ ರಾಮ-ಲಕ್ಷ್ಮಣರು ಕರಿಯ ನಾಗರಹಾವುಗಳಂತಿದ್ದ ಕತ್ತಿಗಳನ್ನು ಒರೆಗಳಿಂದ ತೆಗೆದು ವಿರಾಧನ ಸಮೀಪಕ್ಕೆ ಹೋಗಿ ಅವನನ್ನು ಕತ್ತಿಗಳಿಂದ ಬಲವಾಗಿ ಪ್ರಹರಿಸಿದರು. ಹೀಗೆ ಭಯಂಕರನಾದ ವಿರಾಧನು ಕತ್ತಿಗಳಿಂದ ಕತ್ತರಿಸಲ್ಪಡುತ್ತಿರಲಾಗಿ, ಅಲ್ಲಾಡಿಸಲು ಕೂಡ ಅಸಾಧ್ಯರಾದ ಪುರುಷಸಿಂಹರಾದ ರಾಮ-ಲಕ್ಷ್ಮಣರನ್ನು ಎರಡು ಕೈಗಳಿಂದಲೂ ಹಿಡಿದೆತ್ತಿ ಹೆಗಲುಗಳ ಮೇಲಿಟ್ಟುಕೊಂಡು ಹೊರಡಲು ಉದ್ಯುಕ್ತನಾದನು. ತಮ್ಮನ್ನೆತ್ತಿಕೊಂಡು ಬೇರೆಡೆಗೆ ಹೋಗಬೇಕೆನ್ನುವ ವಿರಾಧನ ಇಂಗಿತವನ್ನರಿತ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು. " ಲಕ್ಷ್ಮಣ ! ರಾಕ್ಷಸನು ನಮ್ಮನ್ನು ಇದೇ ಮಾರ್ಗದಲ್ಲಿಯೇ ಎತ್ತಿಕೊಂಡು ಹೋಗಲಿ. ಎಲ್ಲಿಯವರೆಗೆ ನಮ್ಮನ್ನು ಎತ್ತಿಕೊಂಡು ಹೋಗಲು ಬಯಸುವನೋ ಅಲ್ಲಿಯವರೆಗೂ ಕರೆದುಕೊಂಡು ಹೋಗಲಿ. ಅವನೀಗ ಹೋಗುತ್ತಿರುವ ಮಾರ್ಗವೇ ನಾವು ಹೋಗಬೇಕಾಗಿರುವ ಮಾರ್ಗವೂ ಆಗಿದೆ. ನಾವು ಹೋಗಬೇಕಾಗಿರುವ ಕಡೆಗೇ ಇವನೂ ನಮ್ಮನ್ನು ಎತ್ತಿಕೊಂಡು ಹೋಗುತ್ತಿದ್ದಾನೆ."

ಅತಿಯಾದ ಬಲದಿಂದ ಉದ್ಧತನಾಗಿದ್ದ ವಿರಾಧನಾದರೋ – ತನ್ನ ವೀರ್ಯಾತಿಶಯದಿಂದ ರಾಮ-ಲಕ್ಷ್ಮಣರಿಬ್ಬರನ್ನೂ ಏಕಕಾಲದಲ್ಲಿ ಮಕ್ಕಳನ್ನೆತ್ತಿಕೊಳ್ಳುವಂತೆ ಹೆಗಲುಗಳಲ್ಲಿ ಕುಳ್ಳಿರಿಸಿಕೊಂಡನು. ರಜನೀಚರನಾದ ವಿರಾಧನು ರಾಘವರಿಬ್ಬರನ್ನು ಹೆಗಲುಗಳ ಮೇಲೆ ಕುಳ್ಳಿರಿಸಿಕೊಂಡು ಘೋರವಾಗಿ ಗರ್ಜಿಸುತ್ತಾ ಅರಣ್ಯಾಭಿಮುಖವಾಗಿ ಹೊರಟೇಬಿಟ್ಟನು.

ವಿರಾಧನು ಹೋಗುತ್ತಿದ್ದ ಅರಣ್ಯವು ಮಹಾಮೇಘಗಳ ಸಮೂಹದಂತೆ ದಟ್ಟವಾಗಿದ್ದಿತು. ನಾನಾವಿಧವಾದ ಮಹಾವೃಕ್ಷಗಳಿಂದ ಕೂಡಿದ್ದಿತು. ನಾನಾವಿಧವಾದ ಪಕ್ಷಿಗಳ ಸಮೂಹಗಳಿಂದ ವ್ಯಾಪ್ತವಾಗಿದ್ದು ವಿಚಿತ್ರವಾಗಿ ಕಾಣುತ್ತಿದ್ದಿತು. ನರಿಯೇ ಮೊದಲಾದುವುಗಳಿಂದಲೂ, ಸರ್ಪವೇ ಮೊದಲಾದ ವಿಷಜಂತುಗಳಿಂದಲೂ ಮತ್ತು ದುಷ್ಟಮೃಗಗಳಿಂದಲೂ

ಆ ಕಾಡು ನಿಬಿಡವಾಗಿದ್ದಿತು. ಅಂತಹ ಅರಣ್ಯಪ್ರದೇಶಕ್ಕೆ ವಿರಾಧನು ರಾಮ-ಲಕ್ಷ್ಮಣರನ್ನೆತ್ತಿಕೊಂಡು ಧಾವಿಸಿದನು.

೩ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೪ನೆಯ ಸರ್ಗ

## ಸೀತೆಯ ಆಕ್ರೋಶ: ರಾಮ-ಲಕ್ಷ್ಮಣರಿಂದ ವಿರಾಧನ ವಧೆ: ವಿರಾಧನ ಶಾಪವಿಮೋಚನೆ

ಹ್ರಿಯಮಾಣೌ ತು ಕಾಕುತ್ಸ್ಥೌ ದೃಷ್ಟ್ವಾ ಸೀತಾ ರಘೂತ್ತಮೌ ।
ಉಚ್ಚೈಃಸ್ವರೇಣ ಚುಕ್ರೋಶ ಪ್ರಗೃಹ್ಯ ಸುಮಹಾಭುಜೌ ॥೧॥

ರಾಕ್ಷಸನಿಂದ ಒಯ್ಯಲ್ಪಡುತ್ತಿದ್ದ ರಘುವಂಶಪ್ರದೀಪರಾದ ರಾಮ-ಲಕ್ಷ್ಮಣರನ್ನು ನೋಡಿ ವೈದೇಹಿಯು ಸುಂದರವಾದ ತನ್ನೆರಡು ತೋಳುಗಳನ್ನೂ ಮೇಲೆತ್ತಿ ಗಟ್ಟಿಯಾಗಿ ಕಿರುಚಿಕೊಂಡಳು.

ಏಷ ದಾಶರಥೀ ರಾಮಃ ಸತ್ಯವಾನ್ ಶೀಲವಾನ್ ಶುಚಿಃ ।
ರಕ್ಷಸಾ ರೌದ್ರರೂಪೇಣ ಹ್ರಿಯತೇ ಸಹಲಕ್ಷ್ಮಣಃ ॥೨॥
ಮಾಂ ವೃಕಾ ಭಕ್ಷಯಿಷ್ಯನ್ತಿ ಶಾರ್ದೂಲಾ ದ್ವೀಪಿನಸ್ತಥಾ ।
ಮಾಂ ಹರೋತ್ಸೃಜ್ಯ ಕಾಕುತ್ಸ್ಥೌ ನಮಸ್ತೇ ರಾಕ್ಷಸೋತ್ತಮ ॥

"ಅಯ್ಯೋ! ದಶರಥನ ಮಗನಾದ ಈ ಶ್ರೀರಾಮನು ಸತ್ಯವಂತನು, ಶೀಲವಂತನು ಮತ್ತು ಪರಮಪವಿತ್ರನು. ಇಂತಹವನನ್ನು ತಮ್ಮನಾದ ಲಕ್ಷ್ಮಣನೊಡನೆ ಭಯಂಕರಾಕಾರನಾದ ರಾಕ್ಷಸನು ನನ್ನ ಕಣ್ಣೆದುರಿನಲ್ಲಿಯೇ ಎತ್ತಿಕೊಂಡು ಹೋಗುತ್ತಿದ್ದಾನೆ. ಅಯ್ಯೋ! ರಾಮ-ಲಕ್ಷ್ಮಣರಿಲ್ಲದಿದ್ದ ಮೇಲೆ ಇಲ್ಲಿ ಯಾರು ತಾನೇ ನನ್ನನ್ನು ರಕ್ಷಿಸುವರು? ತೋಳಗಳೋ, ಹುಲಿಗಳೋ ಅಥವಾ ಚಿರತೆಗಳೋ ನನ್ನನ್ನು ತಿಂದುಹಾಕಿಬಿಡುತ್ತವೆ. ಇದರಿಂದಾಗಿ ನಾನೂ ಉಳಿಯಲಾರೆನು. ರಾಕ್ಷಸನ ಹಿಡಿತಕ್ಕೆ ಸಿಕ್ಕಿರುವ ಅವರೂ ಉಳಿಯಲಾರರು. ಸರ್ವನಾಶವಾಗಿ ಬಿಡುತ್ತದೆ." ಹೀಗೆ ಹಲುಬುತ್ತಾ— "ಎಲೈ ರಾಕ್ಷಸಶ್ರೇಷ್ಠನೇ! ನಿನಗೆ ನಮಸ್ಕಾರ ಮಾಡುತ್ತೇನೆ. ರಾಮ-

ಲಕ್ಷ್ಮಣರನ್ನು ಕೆಳಗಿಳಿಸಿ ನನ್ನನ್ನಾದರೂ ಎತ್ತಿಕೊಂಡುಹೋಗು "–ಎಂದು ಕೂಗಿ ಹೇಳಿದಳು.

ವೈದೇಹಿಯ ಆ ಮಾತುಗಳನ್ನು ಕೇಳಿ ರಾಮ-ಲಕ್ಷ್ಮಣರು ದುರಾತ್ಮನಾದ ವಿರಾಧನ ಸಂಹಾರವನ್ನು ಸಾಧ್ಯವಾದಷ್ಟು ಬೇಗ ಮಾಡಿಮುಗಿಸಲು ಉಪಕ್ರಮಿಸಿದರು. ಲಕ್ಷ್ಮಣನು ಮುಷ್ಟಿಪ್ರಹಾರದಿಂದ ಭಯಂಕರನಾದ ಆ ರಾಕ್ಷಸನ ಎಡತೋಳನ್ನು ಮುರಿದು ಹಾಕಿದನು. ಶ್ರೀರಾಮನೂ ಮುಷ್ಟಿಪ್ರಹಾರದಿಂದಲೇ ಆ ರಾಕ್ಷಸನ ಬಲತೋಳನ್ನು ಮುರಿದನು.* ಹೀಗೆ ಎರಡು ತೋಳುಗಳನ್ನೂ ಕಳೆದುಕೊಂಡು ಮೇಘಸದೃಶನಾದ ವಿರಾಧನು ವಜ್ರಾಯುಧದಿಂದ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದ ಪರ್ವತದೋಪಾದಿಯಲ್ಲಿ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು. ಹಾಗೆ ಬಿದ್ದ ರಾಕ್ಷಸನನ್ನು ರಾಮ-ಲಕ್ಷ್ಮಣರು ಮುಷ್ಟಿಗಳಿಂದಲೂ ಮೊಣಕಾಲುಗಳಿಂದಲೂ ಗುದ್ದಿದರು. ಕಾಲುಗಳಿಂದ ಒದೆದರು. ಪುನಃ ಪುನಃ ಮುಷ್ಟಿಗಳನ್ನು ಮೇಲಕ್ಕೆತ್ತಿ ರಭಸದಿಂದ ಪ್ರಹರಿಸುತ್ತಾ ನೆಲದ ಮೇಲೆ ಬಿದ್ದಿದ್ದ ಅವನನ್ನು ಜಜ್ಜಿ ಮೂಳೆಗಳನ್ನೂ ಪುಡಿ-ಪುಡಿ ಮಾಡಿಬಿಟ್ಟರು. ಆದರೆ ಆ ರಾಕ್ಷಸನು ರಾಮ-ಲಕ್ಷ್ಮಣರ ನಿಶಿತವಾದ ಬಾಣಗಳಿಂದ ಚುಚ್ಚಲ್ಪಟ್ಟಿದ್ದರೂ, ಕತ್ತಿಗಳಿಂದ ಕತ್ತರಿಸಲ್ಪಟ್ಟಿದ್ದರೂ, ಮುಷ್ಟಿ ಮತ್ತು ಮೊಣಕಾಲುಗಳಿಂದ ಜಜ್ಜಲ್ಪಟ್ಟರೂ ಸಾಯಲೇ ಇಲ್ಲ.

ಅವಧ್ಯನಾಗಿದ್ದ, ಪರ್ವತೋಪಮನಾಗಿದ್ದ ವಿರಾಧನನ್ನು ಶ್ರೀರಾಮನು ದಿಟ್ಟಿಸಿ ನೋಡಿದನು. ಬಳಿಕ ಭಯವುಂಟಾದಾಗ ಅಭಯವನ್ನು ನೀಡುವ ಶ್ರೀಮಂತನಾದ ಶ್ರೀರಾಮನು ಲಕ್ಷ್ಮಣನಿಗೆ ಹೇಳಿದನು :

ತಪಸಾ ಪುರುಷವ್ಯಾಘ್ರ ರಾಕ್ಷಸೋಽಯಂ ನ ಶಕ್ಯತೇ ।
ಶಸ್ತ್ರೇಣ ಯುಧಿ ನಿರ್ಜೇತುಂ ರಾಕ್ಷಸಂ ನಿಖನಾವಹೇ ॥೧೦॥

" ಪುರುಷವ್ಯಾಘ್ರನೇ ! ಇವನು ಮಾಡಿರುವ ತಪಸ್ಸಿನಿಂದಲೂ ಮತ್ತು

---

*ಮೂರನೆಯ ಸರ್ಗದ ೬ನೆಯ ಶ್ಲೋಕದಲ್ಲಿ ವಿರಾಧನು ತನಗೆ ಅಚ್ಛೇದ್ಯತ್ವ-ಅಭೇದ್ಯತ್ವಗಳಿವೆಯೆಂದು ಹೇಳಿಕೊಂಡಿದ್ದಾನೆ. ಅದು ಅವನಿಗೆ ಬ್ರಹ್ಮನ ವರಪ್ರಸಾದದಿಂದ ಪ್ರಾಪ್ತವಾದದ್ದು. ಹೀಗಿರುವಾಗ ಇಲ್ಲಿ ರಾಮನೂ ಮತ್ತು ಲಕ್ಷ್ಮಣನೂ ಎರಡು ತೋಳುಗಳನ್ನೂ ಮುರಿದರು ; ಬಭಞ್ಜ ಎಂದು ಸ್ಪಷ್ಟವಾಗಿ ಹೇಳಿದೆ. ಇದು ಹೇಗೆ

ಪಡೆದುಕೊಂಡಿರುವ ವರದಿಂದಲೂ ನಾವು ಇವನನ್ನು ಯುದ್ಧದಲ್ಲಿ ಶಸ್ತ್ರಾಸ್ತ್ರಗಳ ಮೂಲಕವಾಗಿ ಜಯಿಸಲಾರೆವು. ಆದುದರಿಂದ ನಾವು ಇವನನ್ನು ಭೂಮಿಯಲ್ಲಿ ಹೂತುಬಿಡೋಣ. ಮದಿಸಿದ ಆನೆಯಂತಿರುವ ಭಯಂಕರಾಕಾರನಾದ, ಭಯಂಕರವಾದ ತೇಜಸ್ಸಿನಿಂದಲೂ ಪ್ರಜ್ವಲಿಸುತ್ತಿರುವ ಈ ರಾಕ್ಷಸನನ್ನು ಹೂಳಲು ಈ ಅರಣ್ಯದಲ್ಲಿ ಒಂದು ದೊಡ್ಡದಾದ ಹಳ್ಳವನ್ನು ತೋಡು."

ಮಹಾವೀರ್ಯನಾದ ಶ್ರೀರಾಮನು ಲಕ್ಷ್ಮಣನಿಗೆ ವಿಶಾಲವಾದ ಹಳ್ಳವನ್ನು ತೋಡುವಂತೆ ಹೇಳಿ ವಿರಾಧನ ಕುತ್ತಿಗೆಯ ಮೇಲೆ ಕಾಲಿಟ್ಟುಕೊಂಡು ತಾನೊಬ್ಬನೇ ಅವನನ್ನು ಮೆಟ್ಟಿ ನಿಂತನು.

ರಾಘವನು ಲಕ್ಷ್ಮಣನಿಗೆ ಹೇಳಿದ ಮಾತನ್ನು ಕೇಳಿಸಿಕೊಂಡ ವಿರಾಧನು ಪುರುಷರ್ಷಭನಾದ, ಕಕುತ್ಸ್ಥವಂಶಪ್ರದೀಪನಾದ ಶ್ರೀರಾಮನಿಗೆ ವಿನಯಪೂರ್ವಕವಾಗಿ ಹೇಳಿದನು :

" ಇಂದ್ರನಿಗೆ ಸದೃಶವಾದ ಬಲವುಳ್ಳ ನೀನು ನನ್ನನ್ನು ಸಂಹರಿಸಿರುವೆ. ಮೋಹಾವಿಷ್ಟನಾಗಿದ್ದ ನಾನು ಈ ಮೊದಲು ನೀನಾರೆಂಬುದನ್ನು ತಿಳಿದುಕೊಳ್ಳಲಿಲ್ಲ. ಕೌಸಲ್ಯಾದೇವಿಯ ಸುಪುತ್ರನಾದ ಶ್ರೀರಾಮನೇ ನೀನೆಂದು ನಾನೀಗ ತಿಳಿದುಕೊಂಡೆನು. ಮಹಾಭಾಗ್ಯಶಾಲಿನಿಯಾದ ಇವಳು ವೈದೇಹಿಯೆಂಬುದನ್ನೂ–ಯಶೋವಂತನಾದ ಇವನು ಲಕ್ಷ್ಮಣನೆಂಬುದನ್ನೂ ನಾನೀಗಲೇ ತಿಳಿದೆನು. ನಾನು ರಾಕ್ಷಸವಂಶದಲ್ಲಿ ಹುಟ್ಟಿದವನಲ್ಲ. ತುಂಬುರು ಎಂಬ ಹೆಸರಿನ ಗಂಧರ್ವನು. ಕುಬೇರನ ಶಾಪಕ್ಕೊಳಗಾದೆನು. ಕುಬೇರನಿತ್ತ ಶಾಪದ ಕಾರಣದಿಂದಾಗಿ ನಾನು ಈ ಘೋರವಾದ ರಾಕ್ಷಸಶರೀರವನ್ನು ಹೊಂದಬೇಕಾಯಿತು. ಶಾಪದ ವಿಮೋಚನೆಗಾಗಿ ನಾನು ಕುಬೇರನನ್ನು

---

ಸಾಧ್ಯವೆಂಬುದಕ್ಕೆ ಸಮಾಧಾನವನ್ನು ಒಬ್ಬ ವ್ಯಾಖ್ಯಾನಕಾರರು ಹೀಗೆ ಕೊಟ್ಟಿರುತ್ತಾರೆ : ಪ್ರಾಣಹಾರಿಯಾದ ಭೇದನ-ಛೇದನಗಳಾಗಕೂಡದೆಂಬುದು ಇಲ್ಲಿನ ತತ್ತ್ವವಾಗಿದೆ. ಇಲ್ಲಿ ರಾಮ-ಲಕ್ಷ್ಮಣರು ವಿರಾಧನ ತೋಳುಗಳನ್ನು ಮುರಿದರೇ ಹೊರತು ಅವನನ್ನು ಸಂಹರಿಸಲಿಲ್ಲ. ಭಞ್ಜನ ಮತ್ತು ಛೇದನಗಳು ಶಸ್ತ್ರದಿಂದ ಆಗಕೂಡದೆಂದು ವಿರಾಧನು ವರಪಡೆದಿದ್ದನೇ ಹೊರತು ಬೇರೆ ರೀತಿಯಲ್ಲಿ ಆಗಕೂಡದೆಂದು ಅವನು ವರ ಪಡೆದಿರಲಿಲ್ಲ.

ಬಹಳವಾಗಿ ಪ್ರಾರ್ಥಿಸಿದೆನು. ಮಹಾಯಶೋವಂತನಾದ ಕುಬೇರನು ನನ್ನ ಪ್ರಾರ್ಥನೆಯನ್ನು ಮನ್ನಿಸುತ್ತಾ ಹೇಳಿದ್ದನು :

ಯದಾ ದಾಶರಥೀ ರಾಮಸ್ತ್ವಾಂ ವಧಿಷ್ಯತಿ ಸಂಯುಗೇ ।
ತದಾ ಪ್ರಕೃತಿಮಾಪನ್ನೋ ಭವಾನ್ಸ್ವರ್ಗಂ ಗಮಿಷ್ಯತಿ ॥೧೭॥

"ದಶರಥನ ಮಗನಾದ ಶ್ರೀರಾಮನು ಯಾವಾಗ ನಿನ್ನನ್ನು ಯುದ್ಧದಲ್ಲಿ ಸಂಹರಿಸುವನೋ – ಆಗ ನೀನು ಘೋರವಾದ ರಾಕ್ಷಸಶರೀರವನ್ನು ತೊರೆದು ನಿಜರೂಪವನ್ನು ತಾಳಿ ಸ್ವರ್ಗಕ್ಕೆ ಹೋಗುವೆ."

ರಾಘವ ! ಕುಬೇರನು ನನಗೆ ಶಾಪವನ್ನೀಯಲು ಕಾರಣವೇನೆಂದರೆ : ಒಮ್ಮೆ ನಾನು ಅವನ ಸೇವೆಯಲ್ಲಿ ಅಲಕ್ಷ್ಯದಿಂದಿದ್ದುಬಿಟ್ಟೆನು. ಅಲ್ಲದೇ ಅದೇ ಸಮಯದಲ್ಲೇ ನಾನು ರಂಭೆಯ ಜೊತೆಯಲ್ಲಿ ವಿಹರಿಸುತ್ತಲೂ ಇದ್ದೆನು. ನಾನು ಮಾಡಿದ ಆ ಅಪರಾಧಕ್ಕಾಗಿ ಕೋಪಗೊಂಡ ಕುಬೇರನು ನನಗೆ ಘೋರವಾದ ರಾಕ್ಷಸರೂಪವು ಬರುವಂತೆ ಶಾಪವನ್ನಿತ್ತನು.

ಪರಂತಪನೇ ! ನಿನ್ನ ಅನುಗ್ರಹದಿಂದಾಗಿ ನಾನಿಂದು ನನ್ನ ಒಡೆಯನಿತ್ತ ದಾರುಣವಾದ ಶಾಪದಿಂದ ಬಿಡುಗಡೆಹೊಂದಿದೆನು. ನಾನಿನ್ನು ನನ್ನ ಲೋಕಕ್ಕೆ ಪ್ರಯಾಣಮಾಡುತ್ತೇನೆ. ನಿನಗೆ ಮಂಗಳವಾಗಲಿ. ಇಲ್ಲಿಗೆ ಒಂದೂವರೆ ಯೋಜನದಷ್ಟು ದೂರದಲ್ಲಿ ಸೂರ್ಯಸದೃಶರಾದ, ಪ್ರತಾಪವಂತರಾದ, ಧರ್ಮಾತ್ಮರಾದ ಶರಭಂಗಮಹರ್ಷಿಗಳ ಆಶ್ರಮವಿದೆ. ಅಲ್ಲವರು ವಾಸಮಾಡುತ್ತಾರೆ. ನೀನು ಈ ಹಿಂದೆಯೇ ಯೋಚಿಸಿದ್ದಂತೆ ನನ್ನನ್ನು ಲಕ್ಷ್ಮಣನು ಸಿದ್ಧಗೊಳಿಸುವ ಹಳ್ಳದಲ್ಲಿ ಹೂತು ನೆಮ್ಮದಿಯಿಂದ ಪ್ರಯಾಣಮಾಡು. ರಾಕ್ಷಸರ ಶವಕ್ಕೆ ಹೀಗೆಯೇ ಸಂಸ್ಕಾರಮಾಡಬೇಕೆಂಬುದು ಸನಾತನಧರ್ಮವಾಗಿದೆ.

ಅವಟೇ ಯೇ ನಿಧೀಯನ್ತೇ ತೇಷಾಂ ಲೋಕಾಃ ಸನಾತನಾಃ ॥೨೨॥

ಸತ್ತುಹೋದನಂತರ ಯಾರು ಹಳ್ಳದಲ್ಲಿ ಹೂಳಲ್ಪಡುವರೋ ಅಂತಹವರಿಗೆ ಸನಾತನವಾದ ಪುಣ್ಯಲೋಕಗಳು ಲಭಿಸುತ್ತವೆ." *

---

* ಸತ್ತವರನ್ನು ಹೂಳುವ ಪದ್ಧತಿಯೂ ಬಹಳ ಹಿಂದಿನಿಂದಲೂ ನಡೆದುಬಂದಿರುವುದೆಂಬುದು ಈ ಶ್ಲೋಕದಿಂದ ವಿದಿತವಾಗುತ್ತದೆ.

ಹೀಗೆ ಹೇಳಿ ಮಹಾಬಲನಾದ ಶರಪೀಡಿತನಾದ ವಿರಾಧನು ರಾಕ್ಷಸ ಶರೀರವನ್ನು ಬಿಟ್ಟು ಸ್ವರ್ಗವನ್ನು ಹೊಂದಿದೆನೆಂದೇ ಭಾವಿಸಿಕೊಂಡನು.

* ವಿರಾಧನ ಆ ಮಾತನ್ನು ಕೇಳಿ ರಾಮನು ಪುನಃ ಲಕ್ಷ್ಮಣನಿಗೆ ಆಜ್ಞಾಪಿಸಿದನು.

"ಲಕ್ಷ್ಮಣ ! ನಾನು ಹಿಂದೆ ಹೇಳಿದಂತೆ ಮದಿಸಿದ ಆನೆಯಂತಿರುವ ಭಯಂಕರಕರ್ಮನಾದ, ಭಯಂಕರಾಕಾರನಾದ ಈ ರಾಕ್ಷಸನಿಗೆ ಈ ಅರಣ್ಯದಲ್ಲಿ ಒಂದು ದೊಡ್ಡ ಹಳ್ಳವನ್ನು ತೋಡು." ಹೀಗೆ ಹೇಳಿ ಶ್ರೀರಾಮನು ಹಿಂದಿನಂತೆಯೇ ವಿರಾಧನ ಕುತ್ತಿಗೆಯ ಮೇಲೆ ಕಾಲಿಟ್ಟು ಅವನನ್ನು ಅಕ್ರಮಿಸಿ ನಿಂತುಕೊಂಡನು. ಬಳಿಕ ಲಕ್ಷ್ಮಣನು ಗುದ್ದಲಿಯನ್ನು ತೆಗೆದುಕೊಂಡು ಮಹಾತ್ಮನಾದ ವಿರಾಧನ ಪರ್ವತಾಕಾರವಾದ ಶರೀರದ ಪಕ್ಕದಲ್ಲಿಯೇ ದೊಡ್ಡದಾದ ಮತ್ತು ಆಳವಾದ ಹಳ್ಳವನ್ನು ತೋಡಿದನು. ಅನಂತರ ಶ್ರೀರಾಮನು ವಿರಾಧನ ಕುತ್ತಿಗೆಯ ಪ್ರದೇಶದಿಂದ ತನ್ನ ಕಾಲನ್ನು ಹಿಂದಕ್ಕೆ ತೆಗೆದುಕೊಂಡನು. ಹೀಗೆ ಶ್ರೀರಾಮನ ಆಕ್ರಮಣದಿಂದ ವಿಮುಕ್ತನಾದ, ಕೀಲಿನಂತೆ (ಗೂಟದಂತೆ) ಕಿವಿಗಳನ್ನು ಹೊಂದಿದ್ದ, ಭಯಂಕರವಾಗಿ ಶಬ್ದಮಾಡುತ್ತಿದ್ದ, ಗಟ್ಟಿಯಾಗಿ ಕಿರುಚಿಕೊಳ್ಳುತ್ತಿದ್ದ ವಿರಾಧನನ್ನು ಮೇಲೆತ್ತಿ ಲಕ್ಷ್ಮಣನು ಹಳ್ಳದಲ್ಲಿ ಹಾಕಿದನು.

---

* ಇಲ್ಲಿ ಬಂದಿರುವ ಎರಡು ಶ್ಲೋಕಗಳು ಹಿಂದೆಯೂ ಬಂದಿವೆ. ಈ ಶ್ಲೋಕಗಳಿಲ್ಲದಿದ್ದರೂ ಅರ್ಥವು ಹೊಂದಿಕೊಳ್ಳುತ್ತದೆ. ವಿರಾಧನು ತಾನಾರೆಂಬುದನ್ನು ಹೇಳಿದ ಮೇಲೆ ಶ್ರೀರಾಮನು ಅವನ ಕತ್ತಿನಲ್ಲಿ ಕಾಲಿಟ್ಟು ಅಕ್ರಮಿಸಿದನೆಂದು ಹೇಳುವುದು ಸ್ವಲ್ಪ ಅಸಂಗತವಾಗಿಯೂ ಕಾಣುತ್ತದೆ. ಈ ಶ್ಲೋಕಗಳನ್ನು ಬಿಟ್ಟು-ಬಳಿಕ ಲಕ್ಷ್ಮಣನು ಗುದ್ದಲಿಯನ್ನು ತೆಗೆದುಕೊಂಡು ತತಃ ಖನಿತ್ರಮಾದಾಯ-ಎಂದು ಸೇರಿಸಿಕೊಂಡರೆ ಅರ್ಥವೂ ಸಮಂಜಸವಾಗುತ್ತದೆ. ಪುನರುಕ್ತಿಯೂ ಇರುವುದಿಲ್ಲ. ಆದರೆ ಎಲ್ಲ ವ್ಯಾಖ್ಯಾನಕಾರರೂ ಈ ಪುನರುಕ್ತಿಯ ಶ್ಲೋಕಗಳಿಗೂ ವ್ಯಾಖ್ಯಾನ ಮಾಡಿರುತ್ತಾರೆ. ಬರೋಡಾದ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟಿನವರು ಪ್ರಕಟಿಸಿರುವ ಪುಸ್ತಕದಲ್ಲಿ ಈ ಎರಡು ಶ್ಲೋಕಗಳೂ ಮತ್ತು ೨೯ನೆಯ ಶ್ಲೋಕದಿಂದ ೩೩ನೆಯ ಶ್ಲೋಕದವರೆಗೂ ಇರುವ ಶ್ಲೋಕಗಳೂ ಇರುವುದಿಲ್ಲ. ೨೯ ರಿಂದ ೩೩ರವರೆಗಿನ ಶ್ಲೋಕಗಳಲ್ಲಿ ಹಿಂದಿನ ಕಥಾಭಾಗವನ್ನು ವೃತ್ತಾಂತರದ ಶ್ಲೋಕಗಳಿಂದ ನಿರೂಪಿಸಲಾಗಿದೆ.

ಅಚಲರಾಗಿ ನಿಂತು ಯುದ್ಧಮಾಡುವ ಸ್ವಭಾವವುಳ್ಳ, ಬಹುಶೀಘ್ರ ವಾಗಿ ತಮ್ಮ ಪರಾಕ್ರಮವೆಷ್ಟೆಂಬುದನ್ನು ಶತ್ರುವಿಗೆ ತೋರುವ ರಾಮ-ಲಕ್ಷ್ಮಣರು ಭಯಂಕರನಾದ ಬಾರಿ-ಬಾರಿಗೂ ಗರ್ಜನೆಮಾಡುತ್ತಿದ್ದ ವಿರಾಧ ರಾಕ್ಷಸನನ್ನು ಯುದ್ಧದಲ್ಲಿ ಸೋಲಿಸಿ ಆನಂದಭರಿತರಾಗಿ ತಮ್ಮ ಬಾಹುಗಳಿಂದಲೇ ಅವನನ್ನು ಮೇಲಕ್ಕೆತ್ತಿ ಹಳ್ಳದಲ್ಲಿ ಹಾಕಿದರು. ಶತ್ರುವಿನಾಶ ಕಾರ್ಯದಲ್ಲಿ ನಿಪುಣರಾದ ನರಶ್ರೇಷ್ಠರಾದ ರಾಮ-ಲಕ್ಷ್ಮಣರು ನಿಶಿತವಾದ ಶಸ್ತ್ರಾಸ್ತ್ರಗಳಿಂದಲೂ ವಿರಾಧನು ಅವಧ್ಯನೆಂಬುದನ್ನು ತಿಳಿದು ಬಹಳ ಆಳವಾದ ಹಳ್ಳವನ್ನು ತೋಡಿ ವಿರಾಧನನ್ನು ಆ ಹಳ್ಳದಲ್ಲಿ ಹಾಕಿ ಅನಂತರ ಮಣ್ಣು-ಕಲ್ಲುಗಳಿಂದ ಮುಚ್ಚಿ ಸಂಹರಿಸಿದರು.

ವಾಸ್ತವವಾಗಿ ಶ್ರೀರಾಮನಿಂದಲೇ ಬಲಪೂರ್ವಕವಾಗಿ ತಾನು ಸಂಹರಿಸಲ್ಪಡಬೇಕೆಂಬ ಆಶಯವು ವಿರಾಧನಿಗಿದ್ದಿತು. ಶ್ರೀರಾಮನಿಂದಲೇ ಮರಣವನ್ನು ಹೊಂದಬೇಕೆನ್ನುವ ತನ್ನ ಮನೋವಾಂಛಿತವಾದ ಉದ್ದೇಶದಿಂದಲೇ ವನಚರನಾದ ವಿರಾಧನು ಶ್ರೀರಾಮನಿಗೆ –' ನ ಮೇ ವಧಃ ಶಸ್ತ್ರಕೃತೋ ಭವೇತ್-ನನ್ನ ವಧೆಯು ಶಸ್ತ್ರಘಾತದಿಂದ ಸಾಧ್ಯವಾಗುವುದಿಲ್ಲ '–ಎಂದು ತನ್ನ ಮರಣದ ರಹಸ್ಯವನ್ನು ಹೇಳಿದನು. ವಿರಾಧನು ಹೇಳಿದ ಮಾತನ್ನು ಕೇಳಿ ಶ್ರೀರಾಮನು ಅವನನ್ನು ಹಳ್ಳದಲ್ಲಿ ಹಾಕಿ ಮುಚ್ಚಬೇಕೆಂದು ನಿಶ್ಚಯಿಸಿದನು. ಮಹಾಬಲನಾದ ವಿರಾಧನನ್ನೆತ್ತಿ ಹಳ್ಳದಲ್ಲಿ ಹಾಕಿದಾಗ ಉಂಟಾದ ಶಬ್ದದಿಂದ ಅರಣ್ಯವೇ ಪ್ರತಿಧ್ವನಿತವಾಯಿತು. ಹೆಚ್ಚು ಸಂತೋಷಗೊಂಡವರಂತೆ ಕಾಣುತ್ತಿದ್ದ ರಾಮ-ಲಕ್ಷ್ಮಣರು ವಿರಾಧನನ್ನು ಹಳ್ಳದಲ್ಲಿ ಹಾಕಿ ನಿರ್ಭೀತರಾಗಿ ಕಲ್ಲು-ಮಣ್ಣುಗಳಿಂದ ಮುಚ್ಚಿಬಿಟ್ಟರು ಮತ್ತು ಈ ಕಾರ್ಯದಿಂದ ಆನಂದಭರಿತರಾದರು. ರಾಕ್ಷಸನನ್ನು ಈ ರೀತಿಯಲ್ಲಿ ಸಂಹರಿಸಿದ ನಂತರ ಕಾಂಚನಮಯವಾದ ಮತ್ತು ವಿಚಿತ್ರವಾದ ಧನುಸ್ಸುಗಳನ್ನು ಹೊಂದಿದ್ದ ರಾಮ-ಲಕ್ಷ್ಮಣರು ಸೀತೆಯನ್ನು ಕರೆದುಕೊಂಡು ಆನಂದಭರಿತರಾಗಿ ಆಕಾಶದಲ್ಲಿ ಪ್ರಕಾಶಿಸುವ ಸೂರ್ಯ-ಚಂದ್ರರಂತೆ ಆ ಮಹಾರಣ್ಯದಲ್ಲಿ ವಿರಾಜಿಸಿದರು.

೪ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೫ನೆಯ ಸರ್ಗ

## ಸೀತಾ-ರಾಮ-ಲಕ್ಷ್ಮಣರು ಶರಭಂಗರ ಆಶ್ರಮಕ್ಕೆ ಹೋದುದು : ದೇವತೆಗಳ ಸಂದರ್ಶನ : ಮುನಿಗಳಿಂದ ಸನ್ಮಾನ : ಶರಭಂಗರು ಬ್ರಹ್ಮಲೋಕಕ್ಕೆ ತೆರಳಿದುದು

ಹತ್ವಾ ತು ತಂ ಭೀಮಬಲಂ ವಿರಾಧಂ ರಾಕ್ಷಸಂ ವನೇ ।
ತತಃ ಸೀತಾಂ ಪರಿಷ್ವಜ್ಯ ಸಮಾಶ್ವಾಸ್ಯ ಚ ವೀರ್ಯವಾನ್ ।
ಅಬ್ರವೀದ್ಭ್ರಾತರಂ ರಾಮೋ ಲಕ್ಷ್ಮಣಂ ದೀಪ್ತತೇಜಸಮ್ ॥೧॥

ವೀರ್ಯವಂತನಾದ ಶ್ರೀರಾಮನು ಅರಣ್ಯದಲ್ಲಿ ಭೀಮಬಲನಾದ ವಿರಾಧನನ್ನು ಸಂಹರಿಸಿ, ಬಹುಭೀತಳಾಗಿದ್ದ ಸೀತಾದೇವಿಯನ್ನು ಆಲಿಂಗನ ಮಾಡಿಕೊಂಡು ಸಮಾಧಾನಪಡಿಸಿ, ಮಹಾತೇಜಸ್ವಿಯಾದ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ ! ಈ ಅರಣ್ಯವು ಅತ್ಯಂತ ಪೀಡಾಜನಕವಾದುದು. ಮೇಲಾಗಿ ನಾವು ಈ ಹಿಂದೆ ಯಾವಾಗಲೂ ಇಂತಹ ಅರಣ್ಯದಲ್ಲಿ ಸಂಚಾರ ಮಾಡಿಲ್ಲ. ಆದುದರಿಂದ ವಿರಾಧನು ಹೇಳಿದಂತೆ ನಾವು ಶೀಘ್ರವಾಗಿ ಶರಭಂಗ ಮಹರ್ಷಿಗಳ ಆಶ್ರಮಕ್ಕೇ ಹೋಗೋಣ."

ಶ್ರೀರಾಮನು ಹೀಗೆ ಲಕ್ಷ್ಮಣನಿಗೆ ಹೇಳಿ ಅವರಿಬ್ಬರೊಡನೆ ಶರಭಂಗರ ಆಶ್ರಮಕ್ಕೆ ಪ್ರಯಾಣಮಾಡಿದನು. ದೇವತಾಪ್ರಭಾವದಿಂದ ಸಂಪನ್ನರಾಗಿದ್ದ, ತಪಸ್ಸಿನಿಂದ ಶುದ್ಧಾತ್ಮರಾಗಿದ್ದ ಶರಭಂಗಮಹರ್ಷಿಗಳ ಸಮೀಪದಲ್ಲಿ ಶ್ರೀರಾಮನು ಮಹಾದ್ಭುತವಾದ ಒಂದು ದೃಶ್ಯವನ್ನು ಕಂಡನು.

ಶರೀರದ ಕಾಂತಿಯಿಂದ ದೇದೀಪ್ಯಮಾನವಾಗಿ ಬೆಳಗುತ್ತಿದ್ದ, ಸೂರ್ಯಾಗ್ನಿಗಳ ಪ್ರಭೆಗೆ ಅನುರೂಪವಾದ ಪ್ರಭೆಯುಳ್ಳವನಾಗಿದ್ದ, ದೇವತೆಗಳಿಂದ ಅನುಸೃತನಾಗಿ ಆಕಾಶದಲ್ಲಿದ್ದ ರಥದಿಂದ ಕೆಳಗಿಳಿದು ಬರುತ್ತಿದ್ದ, ಶರಭಂಗರ ಆಶ್ರಮದ ಬಳಿಗೆ ಬಂದಿದ್ದರೂ ಭೂಮಿಯನ್ನು ಸ್ಪರ್ಶಿಸದೇ ಆಕಾಶದಲ್ಲಿಯೇ ನಿಂತಿದ್ದ, ದೇವತೆಗಳ ಒಡೆಯನಾದ ಇಂದ್ರನನ್ನು ಶ್ರೀರಾಮನು ನೋಡಿದನು. ಆ ಸಮಯದಲ್ಲಿ ಇಂದ್ರನು ಒಳ್ಳೆಯ ಕಾಂತಿಯಿಂದ ಕೂಡಿದ್ದ

ಆಭರಣಗಳನ್ನು ಧರಿಸಿದ್ದನು. ಧೂಳಿನಿಂದ ರಹಿತವಾದ ವಸ್ತ್ರಗಳನ್ನುಟ್ಟಿದ್ದನು. ಅವನಂತೆಯೇ ವೇಷ-ಭೂಷಣಗಳನ್ನು ಧರಿಸಿದ್ದ ಮಹಾತ್ಮರು ಇಂದ್ರದೇವನನ್ನು ಸ್ತುತಿ-ಪ್ರಶಂಸಾವಚನಗಳಿಂಧ ಪೂಜಿಸುತ್ತಿದ್ದರು. ಬಳಿಕ ರಾಮನು ಅಂತರಿಕ್ಷದ ಕಡೆಗೆ ನೋಡುತ್ತಾ ತನಗೆ ಬಹಳ ಹತ್ತಿರದಲ್ಲಿಯೇ ಇದ್ದ ರಥವನ್ನು ಕಂಡನು. ಆ ರಥಕ್ಕೆ ಹಸಿರುಬಣ್ಣದ ಕುದುರೆಗಳನ್ನು



ಕಟ್ಟಿದ್ದರು. ಬಾಲಸೂರ್ಯನಂತೆ ಆ ರಥವು ಪ್ರಕಾಶಿಸುತ್ತಿದ್ದಿತು. ಅಲ್ಲಿಯೇ ಶ್ರೀರಾಮನು ದಟ್ಟವಾದ ಬಿಳಿಯಮೋಡದಂತಿದ್ದ, ಚಂದ್ರಮಂಡಲಸದೃಶವಾಗಿದ್ದ, ಚಿತ್ರ-ವಿಚಿತ್ರವಾದ ಮಾಲೆಗಳಿಂದ ಸಮಲಂಕೃತವಾಗಿದ್ದ ಶ್ವೇತಛತ್ರವನ್ನು ಕಂಡನು. ಸ್ವರ್ಣಮಯವಾದ ಹಿಡಿಯಿಂದ ಕೂಡಿದ್ದ ಬಹುಮೂಲ್ಯವಾಗಿದ್ದ ಚಾಮರ-ವ್ಯಜನಗಳನ್ನು ಶ್ರೇಷ್ಠರಾದ ಸ್ತ್ರೀಯರು ಹಿಡಿದು

ರಥದ ಮುಂದುಗಡೆ ನಿಂತು ಬೀಸುತ್ತಿದ್ದುದನ್ನು ನೋಡಿದನು. ದೇವ-ಗಂಧರ್ವರೂ, ಸಿದ್ಧರೂ, ಅನೇಕಮಹರ್ಷಿಗಳೂ ಅಂತರಿಕ್ಷದಲ್ಲಿದ್ದ ದೇವೇಂದ್ರನನ್ನು ಉತ್ಕೃಷ್ಟವಾದ ಸ್ತೋತ್ರಗಳಿಂದ ಸ್ತುತಿಸುತ್ತಿದ್ದರು.

ಇಂದ್ರನು ಶರಭಂಗಮಹರ್ಷಿಗಳೊಡನೆ ಮಾತನಾಡುತ್ತಿರುವಾಗ ಆ ಎಲ್ಲ ದೃಶ್ಯಗಳನ್ನೂ ನೋಡಿದ ಶ್ರೀರಾಮನು ಲಕ್ಷ್ಮಣನಿಗೂ ಇಂದ್ರನನ್ನು ತೋರಿಸಿದನು. ಬಳಿಕ ಆಕಾಶದಲ್ಲಿದ್ದ ಇಂದ್ರನ ರಥವನ್ನು ತೋರಿಸುತ್ತಾ ಹೇಳಿದನು :

"ಲಕ್ಷ್ಮಣ! ಅದೋ ಅಂತರಿಕ್ಷದಲ್ಲಿರುವ ಇಂದ್ರನ ರಥವನ್ನು ನೋಡು! ಆ ರಥವು ಕಿರಣಗಳಿಂದ ಬೆಳಗುತ್ತಾ ಕಾಂತಿಯುಕ್ತವಾಗಿದೆ. ಪರಮಾದ್ಭುತವಾಗಿದೆ. ಪ್ರಜ್ವಲಿಸುತ್ತಿರುವ ಸೂರ್ಯನಂತೆಯೇ ಕಾಣುತ್ತಿದೆ. ನಾವು ಈ ಹಿಂದೆ ಇಂದ್ರನ ಯಾವ ಕುದುರೆಗಳ ವಿಷಯವಾಗಿ ಕೇಳಿದ್ದೆವೋ–ಆ ದಿವ್ಯವಾದ ಹಸಿರು ಕುದುರೆಗಳೇ ಇವು. ದಿವ್ಯವಾದ ಕರ್ಣಕುಂಡಲಗಳನ್ನು ಧರಿಸಿರುವ, ಕೈಯಲ್ಲಿ ಕತ್ತಿಯನ್ನು ಝಳಪಿಸುತ್ತಿರುವ, ವಿಶಾಲವಾದ ವಕ್ಷಸ್ಥಳದಿಂದ ಕೂಡಿರುವ, ಕಬ್ಬಿಣದ ಸರಳುಗಳಂತೆ ನೀಳವಾದ ತೋಳುಗಳುಳ್ಳ, ಕೆಂಪುಬಣ್ಣದ ಸಮವಸ್ತ್ರಗಳನ್ನು ಧರಿಸಿರುವ, ಹುಲಿಗಳೋಪಾದಿಯಲ್ಲಿ ಶತ್ರುಗಳಿಂದ ಎದುರಿಸಲು ದುಃಸಾಧ್ಯರಾದ ನೂರಾರು ಯುವಕರು ಆ ರಥದ ಸುತ್ತಲೂ ನಿಂತಿದ್ದಾರೆ. ಆ ಎಲ್ಲ ಯುವಕರ ಹೃದಯಪ್ರದೇಶಗಳಲ್ಲಿರುವ ದಿವ್ಯವಾದ ಹಾರಗಳು ಅಗ್ನಿಯಂತೆ ಜಾಜ್ವಲ್ಯಮಾನವಾಗಿ ಬೆಳಗುತ್ತಿವೆ. ಅವರೆಲ್ಲರೂ ಇಪ್ಪತ್ತೈದು ವರ್ಷವಯಸ್ಸಿನ ಯುವಕರ ಸೌಂದರ್ಯವನ್ನು ಹೊಂದಿದ್ದಾರೆ. ದೇವತೆಗಳಿಗೆ ಈ ವಯಸ್ಸಿನ ಯೌವನವೇ ಶಾಶ್ವತವಾಗಿರುತ್ತದೆ. ಅವರಿಗೆ ಮುಪ್ಪೆಂಬುದಿಲ್ಲ. ಈಗ ಕಾಣುತ್ತಿರುವಂತೆಯೇ ಪುರುಷಶ್ರೇಷ್ಠರಾದ ಅವರು ಯಾವಾಗಲೂ ಎಲ್ಲರಿಗೂ ಪ್ರಿಯದರ್ಶನರಾಗಿಯೇ ಇರುತ್ತಾರೆ. ಲಕ್ಷ್ಮಣ! ಈ ಸ್ಥಳದಲ್ಲಿಯೇ ನೀನು ಸೀತೆಯೊಡನೆ ಮುಹೂರ್ತಕಾಲದವರೆಗೆ ನಿಂತಿರು. ಅಷ್ಟರಲ್ಲಿ ನಾನು ಆ ದಿವ್ಯರಥದಲ್ಲಿ ಕುಳಿತಿದ್ದ ಕಾಂತಿಮಂತನಾದ ಪುರುಷನು ಯಾರೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಂಡು ಬರುತ್ತೇನೆ."

ಹೀಗೆ ಶ್ರೀರಾಮನು ಲಕ್ಷ್ಮಣನಿಗೆ ಅಲ್ಲಿಯೇ ಇರಲು ಹೇಳಿ ಶರಭಂಗ ಮಹರ್ಷಿಗಳ ಆಶ್ರಮಕ್ಕೆ ತೆರಳಿದನು.

ಶ್ರೀರಾಮನು ಶರಭಂಗಮಹರ್ಷಿಗಳ ಆಶ್ರಮದ ಸಮೀಪಕ್ಕೆ ಬರುತ್ತಿರುವುದನ್ನು ಕಂಡು ಇಂದ್ರನು ಶರಭಂಗರನ್ನು ಏಕಾಂತದಲ್ಲಿ ಸಂಧಿಸಿ ಹೇಳಿದನು :

ಇಹೋಪಯಾತ್ಯಸೌ ರಾಮೋ ಯಾವನ್ಮಾಂ ನಾಭಿಭಾಷತೇ ।
ನಿಷ್ಠಾಂ ನಯತು ತಾವತ್ತು ತತೋ ಮಾಂ ದ್ರಷ್ಟುಮರ್ಹತಿ ॥ ೨೧॥

" ರಾಮನು ಇಲ್ಲಿಗೆ ಆಗಮಿಸುತ್ತಿದ್ದಾನೆ. ಅವನ ಪ್ರತಿಜ್ಞೆಯು ಪೂರ್ಣವಾಗುವವರೆಗೆ ಅವನು ನನ್ನೊಡನೆ ಮಾತನಾಡದಿರಲಿ. ನನ್ನೊಡನೆ ಮಾತನಾಡದೆಯೇ ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಲಿ. ಪ್ರತಿಜ್ಞೆಯು ಪೂರ್ಣವಾದನಂತರ ಅವನು ನನ್ನನ್ನು ನೋಡಲು ಅರ್ಹನಾಗುತ್ತಾನೆ. *

ರಾವಣನನ್ನು ಜಯಿಸಿ ದೇವತೆಗಳ ಕಾರ್ಯವನ್ನು ಮುಗಿಸಿ ಕೃತಾರ್ಥನಾಗುವ ಈ ಶ್ರೀರಾಮನನ್ನು ನಾನು ಬಹಳ ಬೇಗ ನೋಡುತ್ತೇನೆ. ಇತರರಾರಿಂದಲೂ ಸಾಧ್ಯವಾಗದ ಆ ಮಹಾಕಾರ್ಯವನ್ನು ಇವನೇ ಮಾಡಿಮುಗಿಸಬೇಕಾಗಿದೆ. ಆ ಮಹಾಕಾರ್ಯವನ್ನು ಮುಗಿಸಿದ ನಂತರ ಇವನು ನನ್ನನ್ನು ನೋಡಲು ಅರ್ಹನಾಗುತ್ತಾನೆ. "

ಹೀಗೆ ಶತ್ರುದಮನನಾದ ಇಂದ್ರನು ಶರಭಂಗಮಹರ್ಷಿಗಳಿಗೆ ಹೇಳಿ ಅವರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಅವರ ಅನುಮತಿಯನ್ನು ಪಡೆದು

---

*ಮೇಲಿನ ಶ್ಲೋಕಕ್ಕೆ ಒಬ್ಬೊಬ್ಬ ವ್ಯಾಖ್ಯಾನಕಾರರು ಒಂದೊಂದು ವಿಧವಾಗಿ ಅರ್ಥ ಮಾಡಿರುವುದರಿಂದ ಈ ಶ್ಲೋಕಕ್ಕೂ ಎರಡು ವಿಧವಾಗಿ ಅರ್ಥಮಾಡಿರುತ್ತಾರೆ. ' ರಾಮನಿಲ್ಲಿಗೆ ಬರುತ್ತಿದ್ದಾನೆ. ರಾಮನು ಎಲ್ಲಿಯವರೆಗೆ ನನ್ನೊಡನೆ ಮಾತನಾಡುವುದಿಲ್ಲವೋ ಅಲ್ಲಿಯವರೆಗೆ ನನ್ನನ್ನು ಬೇರೆಯ ಸ್ಥಳಕ್ಕೆ ಕರೆದೊಯ್ಯಿರಿ.' ( ಪ್ರಸ್ತುತಸಂದರ್ಭದಲ್ಲಿ ) ರಾಮನು ನನ್ನನ್ನು ನೋಡಲು ( ಮಾತನಾಡಲು ) ಅರ್ಹನಾಗಿಲ್ಲ. ( ರಾಮನಿಲ್ಲಿಗೆ ಆಗಮಿಸುತ್ತಿದ್ದಾನೆ. ಯಾವತ್ತಿನವರೆಗೆ ನನ್ನೊಡನೆ ರಾಮನು ಮಾತನಾಡುವುದಿಲ್ಲವೋ ಅಂದಿನವರೆಗೆ ( ಅಷ್ಟರೊಳಗಾಗಿ ) ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡಲಿ. ಅರ್ಥಾತ್ ರಾಮನು ಮಾಡಿರುವ ಪ್ರತಿಜ್ಞೆಯು ಪೂರ್ಣವಾಗುವವರೆಗೆ ಅವನು ನನ್ನೊಡನೆ ಮಾತನಾಡದಿರಲಿ. ನನ್ನೊಡನೆ ಮಾತನಾಡದೆಯೇ ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿ

ಕುದುರೆಗಳಿಂದ ಸಜ್ಜಾಗಿದ್ದ ದಿವ್ಯರಥದಲ್ಲಿ ಕುಳಿತು ಸ್ವರ್ಗಕ್ಕೆ ಹೊರಟು ಹೋದನು.

ರಥದಲ್ಲಿ ಕುಳಿತಿರುವವನು ಯಾರೆಂಬುದನ್ನು ತಿಳಿಯಲು ರಾಮನು ರಥದ ಬಳಿಗೆ ಹೋಗುವುದರೊಳಗಾಗಿ ಇಂದ್ರನು ಪರಿವಾರದೊಡನೆ ಸ್ವರ್ಗಕ್ಕೆ ಹೊರಟುಹೋಗಿದ್ದನು. ಪುನಃ ರಾಮನು ಹಿಂದಿರುಗಿಬಂದು ಸೀತಾ-ಲಕ್ಷ್ಮಣರನ್ನು ಜೊತೆಯಲ್ಲಿ ಕರೆದುಕೊಂಡು ಅಗ್ನಿಹೋತ್ರದಲ್ಲಿ ತೊಡಗಿದ್ದ ಶರಭಂಗ ಮಹರ್ಷಿಗಳ ಬಳಿಗೆ ಹೋದನು. ಸೀತಾ-ರಾಮ-ಲಕ್ಷ್ಮಣರು ಮಹರ್ಷಿಗಳ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದರು. ಮಹರ್ಷಿಗಳು ಅವರನ್ನು ಆದರದಿಂದ ಸ್ವಾಗತಿಸಿ ಅಲ್ಲಿಯೇ ತಂಗಲು ಹೇಳಿದರು. ಅವರ ಅಪ್ಪಣೆಯಂತೆ ಸೀತಾ-ರಾಮ-ಲಕ್ಷ್ಮಣರು ಅಲ್ಲಿಯೇ ಇದ್ದರು. ಅನಂತರ ಶ್ರೀರಾಮನು ಇಂದ್ರನ ಆಗಮನದ ಕಾರಣವನ್ನು ಶರಭಂಗರನ್ನು ಪ್ರಶ್ನಿಸಿದನು. ಮಹರ್ಷಿಗಳು ಅದರ ಕಾರಣವನ್ನು ಯಥಾವತ್ತಾಗಿ ರಾಮನಿಗೆ ಹೇಳಿದರು :

**ಮಾಮೇಷ ವರದೋ ರಾಮ ಬ್ರಹ್ಮಲೋಕಂ ನಿನೀಷತಿ ।**
**ಜಿತಮುಗ್ರೇಣ ತಪಸಾ ದುಷ್ಪ್ರಾಪಮಕೃತಾತ್ಮಭಿಃ ॥೨೭॥**

"ರಾಮಚಂದ್ರ ! ಉಗ್ರವಾದ ತಪಸ್ಸಿನಿಂದ ಜಯಿಸಲ್ಪಟ್ಟಿರುವ

---

ಕೊಳ್ಳಲಿ. ಪ್ರತಿಜ್ಞೆಯು ಪೂರ್ಣವಾದನಂತರ ಅವನು ನನ್ನನ್ನು ನೋಡಲು ಅರ್ಹನಾಗುತ್ತಾನೆ.) 'ನಿಷ್ಠಾನಿಷ್ಪತ್ತಿನಾಶಾನ್ತಾಃ' ಎಂಬ ಅಮರಕೋಶವನ್ನು ಕೊಟ್ಟು ತಮ್ಮ ಅರ್ಥವನ್ನು ಸಮರ್ಥಿಸಿಕೊಂಡಿದ್ದಾರೆ. ನಿಷ್ಠಾಂ ಎಂಬುದಕ್ಕೆ ಒಬ್ಬ ವ್ಯಾಖ್ಯಾನಕಾರರು ಸ್ಥಾನಾನ್ತರಂ= ಸ್ವರ್ಗಂ ವಾ= ಸ್ಥಾನಾಂತರವನ್ನು ಅಥವಾ ಸ್ವರ್ಗವನ್ನು ಎಂಬುದಾಗಿಯೂ ಅರ್ಥಮಾಡಿದ್ದಾರೆ. ಈ ವ್ಯಾಖ್ಯಾನಕಾರರು ನಯತು ಎಂಬುದನ್ನು ನಯತ ಎಂಬುದಾಗಿ ಪಾಠಾಂತರಮಾಡಿ ಹೇಳಿದ್ದಾರೆ. ನಿಷ್ಠಾಂ= ಎಂಬುದಕ್ಕೆ ಸ್ಥಾನಾಂತರಂ ಎಂದು ಅರ್ಥಮಾಡುವುದು ಸ್ವಲ್ಪ ಕಷ್ಟಸಾಧ್ಯ. ಸ್ಥಾನ ಎಂಬ ಅರ್ಥವು ಬರುವುದೇ ಹೊರತು ಸ್ಥಾನಾಂತರ ಎಂಬ ಅರ್ಥವು ಬರುವುದಿಲ್ಲ. ನಿಷ್ಠಾಂ= ಎಂಬುದಕ್ಕೆ ಸ್ಥಾನಾನ್ತರಂ ಎಂದು ವ್ಯಾಖ್ಯಾನಮಾಡಿರುವ ವ್ಯಾಖ್ಯಾನಕಾರರು ಮಾದ್ರಷ್ಟುಮರ್ಹತಿ= ಮಾ ಅದ್ರಷ್ಟುಂ ಅರ್ಹತಿ ಎಂದು ಪದವಿಭಾಗಮಾಡಿ ಮಾ= ನನ್ನನ್ನು·ಅದ್ರಷ್ಟುಂ ಅರ್ಹತಿ= ನೋಡಲು ಅರ್ಹನಾಗಿಲ್ಲ ಎಂದು ಅರ್ಥವಡಿಾರುತ್ತಾರೆ. ಮತ್ತೊಬ್ಬರು ಮಾ ದ್ರಷ್ಟುಮರ್ಹತಿ ನನ್ನನ್ನು ನೋಡಲು ಅರ್ಹನಾಗುತ್ತಾನೆ–ಎಂದು ಸ್ವಾಭಾವಿಕವಾದ ಅರ್ಥವನ್ನೇ

ಮತ್ತು ಜಿತೇಂದ್ರಿಯರಲ್ಲದವರಿಗೆ ಸುದುರ್ಲಭವಾದ ಬ್ರಹ್ಮಲೋಕಕ್ಕೆ ನನ್ನನ್ನು ಕರೆದೊಯ್ಯಲು ಆಶಿಸಿ ವರದನಾದ ಇಂದ್ರನು ಇಲ್ಲಿಗೆ ಬಂದಿದ್ದನು.

ಅಹಂ ಜ್ಞಾತ್ವಾ ನರವ್ಯಾಘ್ರ ವರ್ತಮಾನಮದೂರತಃ ।
ಬ್ರಹ್ಮಲೋಕಂ ನ ಗಚ್ಛಾಮಿ ತ್ವಾಮದೃಷ್ಟ್ವಾ ಪ್ರಿಯಾತಿಥಿಮ್ ॥

ನೀನು ನಮ್ಮ ಆಶ್ರಮಕ್ಕೆ ಬಹಳ ಸಮೀಪದಲ್ಲಿಯೇ ಇರುವೆಯೆಂಬ ವಿಷಯವನ್ನು ತಿಳಿದು, ಪ್ರಿಯಾತಿಥಿಯಾದ ನಿನ್ನನ್ನು ಸಂದರ್ಶಿಸದೇ ಬ್ರಹ್ಮ ಲೋಕಕ್ಕೆ ಹೋಗಬಾರದೆಂದು ನಾನು ನಿಶ್ಚಯಿಸಿದೆನು.

ತ್ವಯಾಹಂ ಪುರುಷವ್ಯಾಘ್ರ ಧಾರ್ಮಿಕೇಣ ಮಹಾತ್ಮನಾ ।
ಸಮಾಗಮ್ಯ ಗಮಿಷ್ಯಾಮಿ ತ್ರಿದಿವಂ ದೇವಸೇವಿತಮ್ ॥೨೯॥

ಪುರುಷಸಿಂಹನೇ ! ಮಹಾತ್ಮನಾದ, ಧಾರ್ಮಿಕನಾದ ನಿನ್ನ ಸಮಾಗಮವಾದ ನಂತರವೇ ನಾನು ದೇವಸೇವಿತವಾದ ಸ್ವರ್ಗಕ್ಕೆ ಹೋಗುತ್ತೇನೆ. (ನಾನು ಜಯಿಸಿರುವ ಲೋಕಗಳು ಎಂದಾದರೂ ನನ್ನವೇ. ಆದರೆ ಧಾರ್ಮಿಕನಾದ ನಿನ್ನೊಡನೆ ಸಮಾಗಮವು ಸುದುರ್ಲಭವಾದುದು.)

ಅಕ್ಷಯಾ ನರಶಾರ್ದೂಲ ಮಯಾ ಲೋಕಾ ಜಿತಾಃ ಶುಭಾಃ ।
ಬ್ರಾಹ್ಮ್ಯಾಶ್ಚ ನಾಕಪೃಷ್ಠ್ಯಾಶ್ಚ ಪ್ರತಿಗೃಹ್ಣೀಷ್ವ ಮಾಮಕಾನ್ ॥

ನರಶ್ರೇಷ್ಠನೇ ! ಶುಭಾವಹಗಳಾದ, ಅಕ್ಷಯಗಳಾದ ಅನೇಕ ಬ್ರಹ್ಮಲೋಕಗಳನ್ನೂ ಸ್ವರ್ಗಲೋಕಗಳನ್ನೂ ನಾನು ಜಯಿಸಿದ್ದೇನೆ. ಉಗ್ರವಾದ ತಪಸ್ಸಿನಿಂದ ನಾನು ಸಂಪಾದಿಸಿರುವ ಆ ಲೋಕಗಳೆಲ್ಲವನ್ನೂ ನೀನೇ ಪ್ರತಿಗ್ರಹಿಸು."

ಶರಭಂಗಮಹರ್ಷಿಗಳು ಹೀಗೆ ಹೇಳಲು ಸರ್ವಶಾಸ್ತ್ರವಿಶಾರದನಾದ ಶ್ರೀರಾಮನು ಯಥೋಚಿತವಾಗಿ ಪ್ರತ್ಯುತ್ತರಿಸಿದನು :

---

ಮಾಡುತ್ತಾರೆ. ನಿಷ್ಠಾಂ ನಯತು–ಸಮಾಪ್ತಿಯನ್ನು ಮಾಡಲಿ ಎಂಬುದಕ್ಕೆ ಪ್ರತಿಜ್ಞಾಂ ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕಾಗಿದೆ. ಪ್ರತಿಜ್ಞಾಂ ಎಂಬುದಕ್ಕಿಂತಲೂ ರಾವಣಂ ಎಂಬುದನ್ನು ಅಧ್ಯಾಹಾರಮಾಡಿಕೊಳ್ಳುವುದು ಪ್ರಸಕ್ತಸಂದರ್ಭದಲ್ಲಿ ಸೂಕ್ತವಾಗಿ ಕಾಣುತ್ತದೆ. 'ರಾವಣಂ ನಿಷ್ಠಾಂ= ನಾಶಂ ನಯತು ಅನಂತರ ಇವನು ನನ್ನೊಡನೆ ಮಾತನಾಡಲು ಅರ್ಹನಾಗುತ್ತಾನೆ.' ಮುಂದಿನ ಶ್ಲೋಕಗಳಲ್ಲಿ ಈ ವಿಷಯವನ್ನೇ ವಿವರಿಸಿ ಇಂದ್ರನು ಹೇಳುತ್ತಾನೆ.

ಅಹಮೇವಾಹರಿಷ್ಯಾಮಿ ಸರ್ವಲೋಕಾನ್ಮಹಾಮುನೇ ।
ಆವಾಸಂ ತ್ವಹಮಿಚ್ಛಾಮಿ ಪ್ರದಿಷ್ಟಮಿಹ ಕಾನನೇ ॥೩೨॥

"ಮಹಾಮುನಿಗಳೇ! ತಾವು ಹೇಳಿದ ಲೋಕಗಳೆಲ್ಲವನ್ನೂ ನಾನೇ ಸ್ವಪ್ರಯತ್ನದಿಂದ ಪಡೆದುಕೊಳ್ಳುತ್ತೇನೆ. ಈಗ ನಾನು ಈ ಅರಣ್ಯದಲ್ಲಿ ತಮ್ಮಿಂದ ನಿರ್ದೇಶಿಸಲ್ಪಡುವ ಒಂದು ವಾಸಸ್ಥಳವನ್ನು ಅಪೇಕ್ಷಿಸಿ ತಮ್ಮ ಬಳಿಗೆ ಬಂದಿರುತ್ತೇನೆ. ನಾನು ವಾಸಮಾಡಿಕೊಂಡಿರಲು ಯಾವ ಸ್ಥಳವು ಪ್ರಶಸ್ತವಾಗಿರುವುದೆಂಬುದನ್ನು ಹೇಳಿರಿ." *

ಇಂದ್ರನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವಿರುವ ಶ್ರೀರಾಮನು ಹೀಗೆ ಹೇಳಲು ಮಹಾಪ್ರಾಜ್ಞರಾದ ಶರಭಂಗರು ಪುನಃ ಈ ಮಾತನ್ನು ಹೇಳಿದರು:

"ರಾಘವ! ಈ ಅರಣ್ಯದಲ್ಲಿ ಮಹಾತೇಜಸ್ವಿಯಾದ, ಪರಮಧಾರ್ಮಿಕನಾದ, ನಿಯತವಾದ ವ್ರತಾನುಷ್ಠಾನಗಳುಳ್ಳ ಸುತೀಕ್ಷ್ಣನೆಂಬ ಹೆಸರಿನ ಮುನಿಯಿದ್ದಾನೆ. ಅವನು ನಿನಗೆ ಶ್ರೇಯಸ್ಸನ್ನುಂಟುಮಾಡುತ್ತಾನೆ. ರಮಣೀಯವಾದ ಪರಿಶುದ್ಧವಾದ ವನಪ್ರದೇಶದಲ್ಲಿ ಆಶ್ರಮವನ್ನು ಮಾಡಿಕೊಂಡು ವಾಸವಾಗಿರುವ ಸುತೀಕ್ಷ್ಣನ ಬಳಿಗೆ ನೀನು ಈಗಲೇ ಹೋಗು. ಅವನು ನಿನಗೆ ವಾಸಕ್ಕೂ ಅನುಕೂಲಮಾಡಿಕೊಡುತ್ತಾನೆ. ಇಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುತ್ತಿರುವ ಮಂದಾಕಿನೀನದಿಗೆ ಅಭಿಮುಖವಾಗಿ ಪ್ರಯಾಣ ಮಾಡು. ಸ್ವಲ್ಪದೂರ ಪ್ರಯಾಣಮಾಡಿದನಂತರ ಪುಷ್ಪೋಡುಪವಹಾ ಎಂಬ ನದಿಯು ಸಿಕ್ಕುತ್ತದೆ. ಆ ನದಿಯನ್ನು ಅನುಸರಿಸಿ ಹೋದರೆ ನಿನಗೆ ಸುತೀಕ್ಷ್ಣನ ಆಶ್ರಮವು ಸಿಕ್ಕುತ್ತದೆ.[1]

---

* ಈ ಶ್ಲೋಕಕ್ಕೆ ಕೆಲವರು ಹೀಗೂ ಅರ್ಥಮಾಡಿರುತ್ತಾರೆ: "ನೀವು ಕೊಡಲಿರುವ ಲೋಕಗಳೆಲ್ಲವನ್ನೂ ನಾನೇ ತೆಗೆದುಕೊಳ್ಳುತ್ತೇನೆ"– ಎಂದು ಪೂರ್ವಾರ್ಧಕ್ಕೆ ಅರ್ಥ ಮಾಡಿರುತ್ತಾರೆ. ಹೀಗೂ ಅರ್ಥಮಾಡಬಹುದಾದರೂ ಪುರುಷೋತ್ತಮನಾದ ರಾಮನು ಬೇರೆಯವರು ತಪಸ್ಸಿನಿಂದ ಗಳಿಸಿದ ಲೋಕಗಳನ್ನು ದಾನರೂಪವಾಗಿ ಪಡೆದುಕೊಳ್ಳಲಾರನು. ಆದುದರಿಂದ ಮೇಲಿನ ಅರ್ಥವೇ ಸಾಧು ಎಂದು ನಮ್ಮ ಅಭಿಪ್ರಾಯವಾಗಿದೆ.

1 ಪುಷ್ಪೋಡುಪವಹಾಂ ಎಂಬುದನ್ನು ಮಂದಾಕಿನೀ ಎಂಬುದಕ್ಕೆ ವಿಶೇಷಣಮಾಡಿ

ರಾಘವ ! ಅಲ್ಲಿ ಕಾಣುತ್ತಿರುವ ಹಾದಿಯಲ್ಲಿಯೇ ನೀನು ಪ್ರಯಾಣ ಮಾಡಬೇಕು. ಆದರೆ ನೀನಿಲ್ಲಿ ಮುಹೂರ್ತಕಾಲವಿದ್ದು ಅನಂತರ ಪ್ರಯಾಣ ಮಾಡಬೇಕು. ಹಾವು ಪೊರೆಯನ್ನು ಕಳಚುವಂತೆ ನಾನೀಗ ಈ ದೇಹವನ್ನು ತ್ಯಾಗಮಾಡುತ್ತೇನೆ. ಅಲ್ಲಿಯವರೆಗೂ ನೀನಿಲ್ಲಿಯೇ ಇರಬೇಕು."

ಮಂತ್ರವಿದರಾದ ಮಹಾತೇಜಸ್ವಿಗಳಾದ ಶರಭಂಗರು ಶ್ರೀರಾಮನಿಗೆ ಹೀಗೆ ಹೇಳಿ ಆಶ್ರಮದಲ್ಲಿದ್ದ ಯಜ್ಞೇಶ್ವರನನ್ನು ಹುತಮಾಡಿ ಆಜ್ಯಾಹುತಿಗಳನ್ನಿತ್ತು ಅಗ್ನಿಯನ್ನು ಪ್ರವೇಶಿಸಿದರು.[1]

ಮಹಾತ್ಮರಾದ ಶರಭಂಗರ ರೋಮ-ಕೇಶಗಳನ್ನೂ, ಸುಕ್ಕು-ಸುಕ್ಕಾಗಿದ್ದ ಚರ್ಮವನ್ನೂ, ಮೂಳೆಗಳನ್ನೂ, ರಕ್ತ-ಮಾಂಸಗಳನ್ನೂ ಯಜ್ಞೇಶ್ವರನು ಕ್ಷಣಮಾತ್ರದಲ್ಲಿ ದಹಿಸಿಬಿಟ್ಟನು. ಸೀತಾ-ಲಕ್ಷ್ಮಣಸಮೇತನಾದ ಶ್ರೀರಾಮನು ಆ ಅದ್ಭುತದೃಶ್ಯವನ್ನು ಕಂಡು ವಿಸ್ಮಿತನಾದನು.

**ಸ ಚ ಪಾವಕಸಂಕಾಶಃ ಕುಮಾರಃ ಸಮಪದ್ಯತ ।**
**ಉತ್ಥಾಯಾಗ್ನಿಚಯಾತ್ತಸ್ಮಾಚ್ಛರಭಙ್ಗೋ ವ್ಯರೋಚತ ॥೪೦॥**

---

ಹೂವಿನಂತೆ ಹಗುರವಾದ ದೋಣಿಗಳ ಸಂಚಾರಕ್ಕೆ ಯೋಗ್ಯವಾದ ಮಂದಾಕಿನೀನದಿಯನ್ನು-ಎಂದು ಒಬ್ಬರು ವ್ಯಾಖ್ಯಾನಮಾಡಿರುತ್ತಾರೆ.

1 ಕೆಲವು ಸಂದರ್ಭಗಳಲ್ಲಿ ಅಗ್ನಿಯನ್ನು ಸಂಸ್ಕರಿಸಿ ಅಗ್ನಿಪ್ರವೇಶಮಾಡಿ ಶರೀರವನ್ನು ತ್ಯಜಿಸಲು ಅವಕಾಶವಿದೆ. ಅದರ ವಿಧಿಯನ್ನು ಹೀಗೆ ಹೇಳುತ್ತಾರೆ:
ವೃದ್ಧಃ ಶೌಚಕ್ರಿಯಾಲುಪ್ತಃ ಪ್ರತ್ಯಾಖ್ಯಾತಭಿಷಕ್ಕ್ರಿಯಃ ।
ಆತ್ಮಾನಂ ಘಾತಯೇದ್ಯಸ್ತು ಭೃಗ್ವಗ್ನ್ಯನಶನಾಮ್ಬುಭಿಃ ॥
ಅನುಷ್ಠಾನಾಸಮರ್ಥಸ್ಯ ವಾನಪ್ರಸ್ಥಸ್ಯ ಜೀರ್ಯತಃ ।
ಭೃಗ್ವಗ್ನಿಜಲಪಾತೈಶ್ಚ ಪ್ರಣಿಪಾತೋ ವಿಧೀಯತೇ ॥ (ಸ್ಮೃತಿವಚನ)
"ಮುದುಕನಾಗಿ ಶೌಚವನ್ನೂ ನಿತ್ಯಕ್ರಿಯೆಗಳನ್ನೂ ಮಾಡಲು ಅಶಕ್ತನಾದ ವಾನಪ್ರಸ್ಥನು ವೈದ್ಯಚಿಕಿತ್ಸೆಯನ್ನು ನಿರಾಕರಿಸಿ – ಭೃಗು (ಆಳವಾದ ಹಳ್ಳ), ಅಗ್ನಿ, ಉಪವಾಸ, ನೀರು ಇವುಗಳಿಂದ ಮರಣವನ್ನು ಪಡೆಯಬಹುದು."
ಯದ್ಯುತ್ಕಣ್ಠಾ ತದಾವಾಪ್ತೌ ಬ್ರಹ್ಮಮೇಧಾನಲಂ ವ್ರಜೇತ್ ।
ನಾಭಿವಕ್ತ್ರಾತ್ಮಗಾನಗ್ನೀನವರೋಪ್ಯ ಯಥಾಸ್ಥಲಮ್ ॥
ಬ್ರಹ್ಮಲೋಕಪ್ರಾಪ್ತಿಯಲ್ಲಿ ಉತ್ಕಟೇಚ್ಛೆಯಿದ್ದರೆ ಬ್ರಹ್ಮಮೇಧಮಂತ್ರಗಳಿಂದ

ಶರಭಂಗರು ಯಜ್ಞೇಶ್ವರನಿಗೆ ಸದೃಶನಾದ ಮಹಾತೇಜಸ್ವಿಯಾದ ಕುಮಾರನ ರೂಪವನ್ನು ತಾಳಿ ಯಜ್ಞೇಶ್ವರನಿಂದ ಹೊರಬಂದು ಬಹಳವಾಗಿ ಪ್ರಕಾಶಿಸಿದರು.

ಶರಭಂಗರು ಆ ದಿವ್ಯಶರೀರದಿಂದ ಆಹಿತಾಗ್ನಿಗಳ, ಮಹಾತ್ಮರಾದ ಋಷಿಗಳ ಮತ್ತು ದೇವತೆಗಳ ಲೋಕಗಳನ್ನೂ ಅತಿಕ್ರಮಿಸಿ ಬ್ರಹ್ಮಲೋಕವನ್ನು ಸೇರಿದರು. ಪುಣ್ಯಕರ್ಮರಾದ ಶರಭಂಗರು ಬ್ರಹ್ಮಲೋಕದಲ್ಲಿ ಸಪರಿವಾರನಾದ ಬ್ರಹ್ಮನನ್ನು ಸಂದರ್ಶಿಸಿದರು. ಪಿತಾಮಹನೂ ಕೂಡ ತಪಃಫಲದಿಂದ ತನ್ನ ಲೋಕಕ್ಕಾಗಮಿಸಿದ ಬ್ರಾಹ್ಮಣನನ್ನು ನೋಡಿ ಸಂತೋಷಿಸಿ ಮಹರ್ಷಿಗಳನ್ನು ಕುರಿತು 'ಸುಸ್ವಾಗತಂ'-ನಿನಗೆ ಸುಸ್ವಾಗತವು-ಎಂದು ಹೇಳಿದನು.

೫ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೬ನೆಯ ಸರ್ಗ

## ವನವಾಸಿಗಳಾದ ಮುನಿಗಳು ರಾಕ್ಷಸರ ಉಪಟಳದಿಂದ ಸಂರಕ್ಷಿಸುವಂತೆ ಶ್ರೀರಾಮನನ್ನು ಪ್ರಾರ್ಥಿಸಿದುದು

ಶರಭಙ್ಗೇ ದಿವಂ ಪ್ರಾಪ್ತೇ ಮುನಿಸಂಘಾಃ ಸಮಾಗತಾಃ ।
ಅಭ್ಯಗಚ್ಛನ್ತ ಕಾಕುತ್ಸ್ಥಂ ರಾಮಂ ಜ್ವಲಿತತೇಜಸಮ್ ॥೧॥

ಶರಭಂಗರು ಸ್ವರ್ಗಾರೋಹಣಮಾಡಿದನಂತರ ಆ ಅರಣ್ಯಪ್ರದೇಶದಲ್ಲಿದ್ದ ಮುನಿಗಳು ಮಹಾತೇಜಸ್ವಿಯಾದ ಕಕುತ್ಸ್ಥವಂಶಪ್ರದೀಪನಾದ ಶ್ರೀರಾಮನ ಬಳಿಗೆ ಗುಂಪು-ಗುಂಪಾಗಿ ಬಂದರು.

ಹಾಗೆ ಬಂದವರಲ್ಲಿ ಬ್ರಹ್ಮನ ಉಗುರುಗಳಿಂದ ಹುಟ್ಟಿದ ವೈಖಾನಸರು, ಕೂದಲುಗಳಿಂದ ಹುಟ್ಟಿದ ವಾಲಖಿಲ್ಯರು, ಸರ್ವದಾ ಶರೀರವನ್ನು ಪ್ರಕ್ಷಾಲನಮಾಡುತ್ತಲೇ ಇದ್ದ ಸಂಪ್ರಕ್ಷಾಲರು, ಸೂರ್ಯ-ಚಂದ್ರರ ಕಿರಣಗಳನ್ನೇ

---

ಹೋಮಮಾಡಿದ ಅಗ್ನಿಯನ್ನು ಪ್ರವೇಶಿಸಬೇಕು. ನಾಭಿ, ವಕ್ತ್ರ (ಮುಖ), ಆತ್ಮ-ಇವುಗಳಲ್ಲಿರುವ ಅಗ್ನಿಗಳನ್ನು ಆವರೋಹಣಮಾಡಿ, ತ್ರೇತಾಗ್ನಿಯ ಸ್ಥಳದಲ್ಲಿಟ್ಟು, ಸಂಸ್ಕರಿಸಿ, ಬಳಿಕ ಅಗ್ನಿಪ್ರವೇಶಮಾಡಬೇಕು.

ಹೀರಿ ಜೀವಿಸುತ್ತಿದ್ದ ಮರೀಚಿಪರು, ಕಲ್ಲಿನಿಂದ ಕುಟ್ಟಿದ ಆಹಾರವನ್ನು ಮಾತ್ರವೇ ಸೇವಿಸುತ್ತಿದ್ದ ಅಶ್ಮಕುಟ್ಟರು, ತರಗೆಲೆಗಳನ್ನೇ ತಿಂದು ಜೀವಿಸುತ್ತಿದ್ದ ಪತ್ರಾಹಾರರು, ಹಲ್ಲುಗಳನ್ನೇ ಕುಟ್ಟುವ ಪಾತ್ರೆಯನ್ನಾಗಿ ಮಾಡಿಕೊಂಡಿದ್ದ ದಂತೋಲೂಖರು, ಕುತ್ತಿಗೆಯವರೆಗೆ ನೀರಿನಲ್ಲಿ ನಿಂತು ತಪಸ್ಸು ಮಾಡುತ್ತಿದ್ದ ಉನ್ಮಜ್ಜಕರು, ಕುಳಿತುಕೊಂಡೇ ನಿದ್ರೆಮಾಡುತ್ತಿದ್ದ ಗಾತ್ರಶಯ್ಯರು, ಯಾವಾಗಲೂ ನಿದ್ರೆಮಾಡದೆಯೇ ಇದ್ದ (ನಿದ್ರೆಯನ್ನು ಜಯಿಸಿದ್ದ) ಅಶಯ್ಯರು, ಮಳೆ-ಗಾಳಿ-ಚಳಿ-ಬಿಸಿಲುಗಳಲ್ಲಿಯೂ ಶರೀರಕ್ಕೆ ಯಾವ ವಿಧವಾದ ಆಚ್ಛಾದನೆಯನ್ನೂ ಮಾಡಿಕೊಳ್ಳದೇ ಆಕಾಶವನ್ನೇ ಹೊದ್ದಿಕೆಯನ್ನಾಗಿ ಹೊಂದಿದ್ದ ಅಭ್ರಾವಕಾಶರು, ಬರೀ ನೀರನ್ನೇ ಆಹಾರವನ್ನಾಗಿ ಸೇವಿಸುತ್ತಿದ್ದ ಸಲಿಲಾಹಾರರು, ಗಾಳಿಯನ್ನೇ ಆಹಾರವನ್ನಾಗಿ ಮಾಡಿಕೊಂಡಿದ್ದ ವಾಯುಭಕ್ಷರು, ವೃಕ್ಷಗಳ ಮೇಲ್ಭಾಗವೇ ನಿವಾಸಸ್ಥಾನವಾಗಿರುವ ಆಕಾಶನಿಲಯರು, ಸರ್ವದಾ ನೆಲದ ಮೇಲೆಯೇ ಮಲಗುತ್ತಿದ್ದ ಸ್ಥಂಡಿಲಶಾಯಿಗಳು, ಯಾವಾಗಲೂ ಪರ್ವತಗಳ ಶಿಖರಪ್ರದೇಶದಲ್ಲಿಯೇ ವಾಸಮಾಡುತ್ತಿದ್ದ ಊರ್ಧ್ವವಾಸಿಗಳು, ಯಾವಾಗಲೂ ಒದ್ದೆಯ ಬಟ್ಟೆಯನ್ನೇ ಉಡುತ್ತಿದ್ದ ಜಿತೇಂದ್ರಿಯರಾದ ಆರ್ದ್ರಪಟವಾಸರು–ಇವರೇ ಮುಂತಾದ ನಾನಾ ವರ್ಗಗಳ ತಪಸ್ವಿಮುಖ್ಯರಿದ್ದರು. ಅವರೆಲ್ಲರೂ ಸರ್ವದಾ ಜಪಮಾಡುವವರಾಗಿಯೂ, ತಪೋನಿಷ್ಠರಾಗಿಯೂ, ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ತಪಸ್ಸುಮಾಡುವವರೂ ಆಗಿದ್ದರು. ಆ ಎಲ್ಲ ತಪಸ್ವಿಗಳೂ ಬ್ರಹ್ಮತೇಜಸ್ಸಿನಿಂದ ಸಂಪನ್ನರಾಗಿದ್ದರು. ದೃಢವಾದ ಯೋಗಾಭ್ಯಾಸದಿಂದ ಎಲ್ಲರೂ ತಪಸ್ಸಿನಲ್ಲಿಯೇ ಏಕಾಗ್ರಚಿತ್ತರಾಗಿದ್ದರು. ಅವರೆಲ್ಲರೂ ಶರಭಂಗಾಶ್ರಮದಲ್ಲಿದ್ದ ಶ್ರೀರಾಮನ ಬಳಿಗೆ ಬಂದರು. ಧರ್ಮಜ್ಞರಾದ ಮಹರ್ಷಿಗಳು ಧರ್ಮಾತ್ಮರಲ್ಲಿ ಶ್ರೇಷ್ಠನಾದ ಪರಮಧರ್ಮಜ್ಞನಾದ ಶ್ರೀರಾಮನನ್ನು ಸಂಧಿಸಿ ಹೇಳಿದರು :

"ಮಹಾರಥನೇ! ನೀನು ಸುಪ್ರಸಿದ್ಧವಾದ ಇಕ್ಷ್ವಾಕುಕುಲಕ್ಕೆ ಪ್ರಧಾನಭೂತನಾಗಿರುವೆ. ಇಂದ್ರನು ದೇವತೆಗಳಿಗೆ ನಾಥನಾಗಿರುವಂತೆ ನೀನು ಈ ಲೋಕದ ಜನರಿಗೆ ನಾಥನಾಗಿರುವೆ. ಯಶಸ್ಸಿನಿಂದಲೂ ಮತ್ತು ಪರಾಕ್ರಮದಿಂದಲೂ ನೀನು ಮೂರು ಲೋಕಗಳಲ್ಲಿಯೂ ವಿಖ್ಯಾತನಾಗಿರುವೆ.

ಪಿತೃಭಕ್ತಿ, ಸತ್ಯ ಮತ್ತು ಧರ್ಮಗಳು ನಿನ್ನಲ್ಲಿ ಪುಷ್ಕಳವಾಗಿವೆ. ನೀನು ಪಿತೃಭಕ್ತನು, ಸತ್ಯನಿಷ್ಠನು ಮತ್ತು ಧರ್ಮಮೂರ್ತಿಯು.



ಸ್ವಾಮಿಯೇ! ಧರ್ಮಜ್ಞನಾದ, ಧರ್ಮವತ್ಸಲನಾದ, ಮಹಾತ್ಮನಾದ ನಿನ್ನ ಬಳಿಗೆ ಯಾಚಕರಾಗಿ ಬಂದಿರುವ ನಾವು ಒಂದೆರಡು ಮಾತುಗಳನ್ನಾಡುತ್ತೇವೆ. ಇದನ್ನು ನೀನು ಕ್ಷಮಿಸುವುದು ಯೋಗ್ಯವಾಗಿದೆ. *

*" ತಚ್ಛ ನಃ ಕ್ಷನ್ತುಮರ್ಹಸಿ " ಎಂದು ಹೇಳಿರುವುದಕ್ಕೆ ಕಾರಣವನ್ನು ಹೀಗೆ ಹೇಳಬಹುದಾಗಿದೆ. ಋಷಿಗಳು ಇಲ್ಲಿ ಧರ್ಮಜ್ಞ, ಸತ್ಯಸಂಧ, ಮಹಾತ್ಮ ಇವೇ ಮುಂತಾಗಿ ರಾಮನನ್ನು ಪ್ರಶಂಸಿಸಿದರೂ ಪ್ರಜಾರಕ್ಷಣೆಯ ವಿಷಯದಲ್ಲಿ ರಾಮನಿಗೆ ಎಚ್ಚರಿಕೆಯನ್ನೂ ನೀಡುತ್ತಾರೆ. ತಮ್ಮ ರಕ್ಷಣೆಯನ್ನು ಸರಿಯಾಗಿ ಮಾಡುತ್ತಿಲ್ಲವೆಂಬ ಅಭಿಪ್ರಾಯವಿರುವುದು ಅವರ ಮಾತಿನಿಂದ ಕಂಡುಬರುತ್ತದೆ. ಆ ವಿಷಯವನ್ನು ಬಹುಸ್ಪಷ್ಟವಾಗಿ

ಅಧರ್ಮಃ ಸುಮಹಾನ್ನಾಥ ಭವೇತ್ತಸ್ಯ ಮಹೀಪತೇಃ ।
ಯೋ ಹರೇದ್ಬಲಿಷಡ್ಭಾಗಂ ನ ಚ ರಕ್ಷತಿ ಪುತ್ರವತ್ ॥೧೧॥

ಯಾವ ರಾಜನು ಪ್ರಜೆಗಳ ಸಂಪಾದನೆಯಲ್ಲಿ ಆರನೆಯ ಒಂದು ಭಾಗ ರಾಜಾದಾಯವನ್ನು ಪಡೆದೂ ಪ್ರಜೆಗಳನ್ನು ಮಕ್ಕಳಂತೆ ರಕ್ಷಿಸುವುದಿಲ್ಲವೋ-ಅಂತಹ ರಾಜನಿಗೆ ಮಹಾಪಾಪವು ಅಂಟಿಕೊಳ್ಳುತ್ತದೆ.

ಯುಂಜಾನಃ ಸ್ವಾನಿವ ಪ್ರಾಣಾನ್ಪ್ರಾಣೈರಿಷ್ಟಾನ್ಸುತಾನಿವ ।
ನಿತ್ಯಯುಕ್ತಃ ಸದಾ ರಕ್ಷನ್ಸರ್ವಾನ್ವಿಷಯವಾಸಿನಃ ॥೧೨॥
ಪ್ರಾಪ್ನೋತಿ ಶಾಶ್ವತೀಂ ರಾಮ ಕೀರ್ತಿಂ ಸ ಬಹುವಾರ್ಷಿಕೀಮ್ ।
ಬ್ರಹ್ಮಣಃ ಸ್ಥಾನಮಾಸಾದ್ಯ ತತ್ರ ಚಾಪಿ ಮಹೀಯತೇ ॥೧೩॥

ರಾಜನಾದವನು ಅನುದಿನವೂ ಬಹಳ ಜಾಗರೂಕತೆಯಿಂದಿದ್ದು ಪ್ರಜೆಗಳ ಹಿತರಕ್ಷಣೆಗಾಗಿ ಸತತವಾಗಿ ಪ್ರಯತ್ನಿಸುತ್ತಲೇ ಇದ್ದು ತನ್ನ ಪ್ರಾಣಗಳನ್ನು ಕಾಪಾಡಿಕೊಳ್ಳುವಂತೆಯೇ ಪ್ರಜೆಗಳನ್ನೂ ಕಾಪಾಡಬೇಕು. ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯರಾದ ತನ್ನ ಮಕ್ಕಳಂತೆಯೇ ಪ್ರಜೆಗಳನ್ನು ಕಾಣುತ್ತಾ ಅವರನ್ನು ಸರ್ವಕಾಲದಲ್ಲಿಯೂ ರಕ್ಷಿಸುತ್ತಿರಬೇಕು. ಅಂತಹ ರಾಜನು ಈ ಲೋಕದಲ್ಲಿ ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತಾನೆ. ಪ್ರಜೆಗಳನ್ನು ಮಕ್ಕಳಂತೆ ಸಂರಕ್ಷಿಸುವ ರಾಜನು ಅವಸಾನಾನಂತರದಲ್ಲಿ ಬ್ರಹ್ಮಲೋಕವನ್ನು ಸೇರಿ ಅಲ್ಲಿಯೂ ಸಕಲರಿಂದಲೂ ಪೂಜಿಸಲ್ಪಡುತ್ತಾನೆ.

ಯತ್ಕರೋತಿ ಪರಂ ಧರ್ಮಂ ಮುನಿರ್ಮೂಲಫಲಾಶನಃ ।
ತತ್ರ ರಾಜ್ಞಶ್ಚತುರ್ಭಾಗಃ ಪ್ರಜಾ ಧರ್ಮೇಣ ರಕ್ಷತಃ ॥೧೪॥

ಕಂದ-ಮೂಲ-ಫಲಗಳನ್ನು ತಿಂದು ಜೀವಧಾರಣೆ ಮಾಡಿಕೊಂಡಿರುವ ಮುನಿಯೊಬ್ಬನು ಯಾವ ಶ್ರೇಷ್ಠವಾದ ತಪಸ್ಸನ್ನಾಚರಿಸುವನೋ – ಆ ತಪಸ್ಸಿನ ಫಲದಲ್ಲಿಯೂ ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವ ರಾಜನಿಗೆ

---

ಸೂಚಿಸುವ ಸಲುವಾಗಿಯೇ ಮೊದಲು ಋಷಿ-ಮಹರ್ಷಿಗಳು ರಾಮನಲ್ಲಿ ಕ್ಷಮೆ ಬೇಡುತ್ತಾರೆ. ಶ್ರೀರಾಮನ ವಿಷಯದಲ್ಲಿ ಋಷಿಗಳಿಗೆ ಅತಿಶಯವಾದ ಭಕ್ತಿ-ಗೌರವಗಳಿದ್ದರೂ ರಾಮನನ್ನು ಕಾರ್ಯೋನ್ಮುಖನನ್ನಾಗಿ ಮಾಡಲು ಈ ಮಾತುಗಳನ್ನು ಅವರು ಹೇಳಿರಬಹುದೆಂದೂ ಭಾವಿಸಬಹುದಾಗಿದೆ.

ನಾಲ್ಕನೆಯ ಒಂದು ಭಾಗ ಫಲವು ಸೇರುತ್ತದೆ. (ಆದುದರಿಂದ ವನವಾಸಿಗಳನ್ನು ರಕ್ಷಿಸುವುದು ಕೂಡ ರಾಜನ ಕರ್ತವ್ಯವಾಗಿರುತ್ತದೆ.)

ಸೋಽಯಂ ಬ್ರಾಹ್ಮಣಭೂಯಿಷ್ಠೋ ವಾನಪ್ರಸ್ಥಗಣೋ ಮಹಾನ್
ತ್ವನ್ನಾಥೋಽನಾಥವದ್ರಾಮ ರಾಕ್ಷಸೈರ್ಹನ್ಯತೇ ಭೃಶಮ್ ||೧೫||

ಬ್ರಾಹ್ಮಣರಿಂದ ಸಮೃದ್ಧವಾಗಿರುವ ವಾನಪ್ರಸ್ಥಾಶ್ರಮಿಗಳ ಈ ಮಹಾಸಮೂಹವು ನಿನ್ನನ್ನೇ ನಾಥನನ್ನಾಗಿ ಪಡೆದಿದ್ದರೂ ನಾಥನೇ ಇಲ್ಲದಂತೆ ರಾಕ್ಷಸರಿಂದ ವಿನಾಶಗೊಳಿಸಲ್ಪಡುತ್ತಿದೆ.

ಏಹಿ ಪಶ್ಯ ಶರೀರಾಣಿ ಮುನೀನಾಂ ಭಾವಿತಾತ್ಮನಾಮ್ ।
ಹತಾನಾಂ ರಾಕ್ಷಸೈರ್ಘೋರೈರ್ಬಹೂನಾಂ ಬಹುಧಾ ವನೇ ||೧೬||

ರಾಘವ ! ಭಯಂಕರರಾದ ರಾಕ್ಷಸರಿಂದ ಹತರಾಗಿರುವ ಧ್ಯಾನಾಸಕ್ತರಾಗಿದ್ದ ಅನೇಕಮುನಿಗಳ ಶರೀರಗಳು ಅರಣ್ಯದ ಸುತ್ತಲೂ ಬಿದ್ದಿರುವುದನ್ನು ನೀನೇ ಬಂದು ಪ್ರತ್ಯಕ್ಷವಾಗಿ ನೋಡು.

ಪಂಪಾನದಿಯ ತೀರದಲ್ಲಿ, ಮಂದಾಕಿನೀನದಿಯ ಸಮೀಪದಲ್ಲಿ ಮತ್ತು ಚಿತ್ರಕೂಟಪರ್ವತದಲ್ಲಿ ವಾಸಮಾಡುತ್ತಿರುವ ಮುನಿಗಳೆಲ್ಲರಿಗೂ ರಾಕ್ಷಸರು ಉಪಟಳವನ್ನು ಕೊಡುತ್ತಲೇ ಇದ್ದಾರೆ. ಭಯಂಕರಕರ್ಮರಾದ ರಾಕ್ಷಸರು ಈ ರೀತಿಯಲ್ಲಿ ಮಹರ್ಷಿಗಳಿಗೆ ಕೊಡುತ್ತಿರುವ ಘೋರವಾದ ಹಿಂಸೆಯನ್ನು ನಾವು ಸಹಿಸಿಕೊಂಡಿರಲಾರೆವು. ಆದುದರಿಂದ ಶರಣ್ಯನಾದ ನಿನ್ನನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸಲು ಬಂದಿರುವೆವು. ನಿಶಾಚರರಿಂದ ಹಿಂಸಿಸಲ್ಪಡುತ್ತಿರುವ ನಮ್ಮನ್ನು ಸಂರಕ್ಷಿಸು. ರಾಜಕುಮಾರ ! ಈ ಭೂಮಂಡಲದಲ್ಲಿ ನಮ್ಮನ್ನು ರಕ್ಷಿಸಲು ನಿನ್ನೊಬ್ಬನನ್ನು ಬಿಟ್ಟರೆ ಬೇರೆ ಯಾರೂ ನಮಗೆ ರಕ್ಷಕರೇ ಇಲ್ಲ. ಆದುದರಿಂದ ನಮ್ಮೆಲ್ಲರನ್ನೂ ರಾಕ್ಷಸರಿಂದ ಸಂರಕ್ಷಿಸು."

ತಪಸ್ಸಿನಲ್ಲಿಯೇ ನಿರತರಾಗಿರುವ ಆ ತಪಸ್ವಿಗಳು ಹೇಳಿದ ಮಾತುಗಳನ್ನು ಕೇಳಿ ಧರ್ಮಾತ್ಮನಾದ ಶ್ರೀರಾಮನು ಹೇಳಿದನು :

ನೈವಮರ್ಹಥ ಮಾಂ ವಕ್ತುಮಾಜ್ಞಾಪ್ಯೋಽಹಂ ತಪಸ್ವಿನಾಮ್ ।
ಕೇವಲೇನಾತ್ಮಕಾರ್ಯೇಣ ಪ್ರವಿಷ್ಟೋಽಹಮಿದಂ ವನಮ್ ||೨೨||

ವಿಪ್ರಕಾರಮಪಾಕ್ರಷ್ಟುಂ ರಾಕ್ಷಸೈರ್ಭವತಾಮಿಮಮ್ ।
ಪಿತುಸ್ತು ನಿರ್ದೇಶಕರಃ ಪ್ರವಿಷ್ಟೋಽಹಮಿದಂ ವನಮ್ ॥೨೩॥
ಭವತಾಮರ್ಥಸಿದ್ಧ್ಯರ್ಥಮಾಗತೋಽಹಂ ಯದೃಚ್ಛಯಾ ।
ತಸ್ಯ ಮೇಽಯಂ ವನೇ ವಾಸೋ ಭವಿಷ್ಯತಿ ಮಹಾಫಲಃ ॥೨೪॥



ತಪಸ್ವಿನಾಂ ರಣೇ ಶತ್ರೂನ್ ಹನ್ತುಮಿಚ್ಛಾಮಿ ರಾಕ್ಷಸಾನ್ ।
ಪಶ್ಯನ್ತು ವೀರ್ಯಮೃಷಯಃ ಸಭ್ರಾತುರ್ಮೇ ತಪೋಧನಾಃ ॥೨೫॥

"ಮಹರ್ಷಿಗಳೇ! ನೀವು ರಕ್ಷಣೆಗಾಗಿ ನನ್ನನ್ನು ಪ್ರಾರ್ಥಿಸುವುದು ಸರಿಯಲ್ಲ. ನೀವು ನನಗೆ ಆಜ್ಞಾಪಿಸಬೇಕು. ಯಾವಾಗಲೂ ನಾನು ತಪಸ್ವಿಗಳ ಆಜ್ಞಾಧಾರಕನಾಗಿರುವೆನು. ನಾನು ಕೇವಲ ಸ್ವಕಾರ್ಯಕ್ಕಾಗಿ ಈ ವನಪ್ರದೇಶವನ್ನು ಪ್ರವೇಶಿಸಿದೆನು. ರಾಕ್ಷಸರಿಂದ ನಿಮಗಾಗುತ್ತಿರುವ ತೊಂದರೆಯನ್ನು ದೂರೀಕರಿಸುವುದಕ್ಕಾಗಿ ಮತ್ತು ತಂದೆಯ ನಿರ್ದೇಶವನ್ನು ಪರಿಪಾಲಿಸುವುದಕ್ಕಾಗಿ ನಾನು ಈ ಅರಣ್ಯಕ್ಕೆ ಪ್ರವೇಶಿಸಿದೆನೆಂದು ತಿಳಿಯುತ್ತೇನೆ. ನಿಮ್ಮ ಪ್ರಯೋಜನಸಿದ್ಧಿಗಾಗಿಯೇ ನಾನು ದೈವಯೋಗದಿಂದ ಇಲ್ಲಿಗೆ ಬಂದಿರುವೆನು. ನಿಮ್ಮ ಸೇವೆಯಿಂದಾಗಿ ನನಗೆ ಈ ವನವಾಸವೂ ಮಹಾಫಲದಾಯಕವೇ ಆಗುತ್ತದೆ. ತಪಸ್ವಿಗಳ ಶತ್ರುಗಳನ್ನು ಯುದ್ಧದಲ್ಲಿ ಸಂಹರಿಸಲು ನಿರ್ಧರಿಸಿದ್ದೇನೆ. ಲಕ್ಷ್ಮಣಸಹಿತನಾದ ನನ್ನ ಪರಾಕ್ರಮವೆಷ್ಟೆಂಬುದನ್ನು ಈ ಋಷಿಸ್ತೋಮವು ಅವಲೋಕಿಸಲಿ."

ಧರ್ಮದಲ್ಲಿಯೇ ನಿಯತವಾದ ಮನಸ್ಸುಳ್ಳ, ವೀರನಾದ ಶ್ರೀರಾಮನು ಈ ವಿಧವಾಗಿ ಅಭಯವನ್ನಿತ್ತು, ಸೀತಾ-ಲಕ್ಷ್ಮಣಸಮೇತನಾಗಿ ತಪೋಧನರಿಂದಲೂ ಸುತ್ತುವರಿಯಲ್ಪಟ್ಟವನಾಗಿ ಸುತೀಕ್ಷ್ಣಮುನಿಗಳ ಆಶ್ರಮದ ಕಡೆಗೆ ಪ್ರಯಾಣಮಾಡಿದನು.

೬ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೭ನೆಯ ಸರ್ಗ

## ಸೀತಾ-ರಾಮ-ಲಕ್ಷ್ಮಣರು ಸುತೀಕ್ಷ್ಣರ ಆಶ್ರಮಕ್ಕೆ ಬಂದುದು : ಮುನಿಗಳೊಡನೆ ಸಂಭಾಷಣೆ : ಮುನಿಗಳಿಂದ ಸತ್ಕೃತರಾಗಿ ರಾತ್ರಿ ಅಲ್ಲಿಯೇ ತಂಗಿದುದು

ರಾಮಸ್ತು ಸಹಿತೋ ಭ್ರಾತ್ರಾ ಸೀತಯಾ ಚ ಪರಂತಪಃ ।
ಸುತೀಕ್ಷ್ಣಸ್ಯಾಶ್ರಮಪದಂ ಜಗಾಮ ಸಹ ತೈರ್ದ್ವಿಜೈಃ ॥೧॥

ಪರಂತಪನಾದ ಶ್ರೀರಾಮನು ಸೀತಾ-ಲಕ್ಷ್ಮಣರೊಡನೆಯೂ ಬ್ರಾಹ್ಮಣರೊಡನೆಯೂ ಸುತೀಕ್ಷ್ಣಮುನಿಗಳ ಆಶ್ರಮಪ್ರದೇಶಕ್ಕೆ ಹೋದನು.

ಬಹಳ ದೂರ ಪ್ರಯಾಣಮಾಡಿ ಪ್ರವಾಹಪೂರ್ಣವಾಗಿದ್ದ ಹಲವಾರು

ನದಿಗಳನ್ನು ದಾಟಿ, ಮಹಾಮೇರುಪರ್ವತದಂತೆ ಬಹಳ ಎತ್ತರವಾಗಿದ್ದ ಮತ್ತು ಶುಭ್ರವಾಗಿದ್ದ ಪರ್ವತವೊಂದನ್ನು ಪರಿವಾರಸಮೇತನಾಗಿ ಶ್ರೀರಾಮನು ನೋಡಿದನು. ಬಳಿಕ ರಾಮ-ಲಕ್ಷ್ಮಣರು ನಾನಾವಿಧವಾದ ವೃಕ್ಷಗಳಿಂದ ಪರಿವೃತವಾಗಿದ್ದ ಅರಣ್ಯವನ್ನು ಸೀತೆಯೊಡನೆ ಪ್ರವೇಶಿಸಿದರು. ಫಲ-ಪುಷ್ಪ ಭರಿತವಾಗಿದ್ದ ವೃಕ್ಷಗಳಿಂದ ನಿಬಿಡವಾಗಿದ್ದ ಭಯಾನಕವಾದ ಅರಣ್ಯದ ಏಕಾಂತವಾದ ಸ್ಥಳದಲ್ಲಿ ನಾರುಮಡಿಗಳ ಸಾಲುಗಳಿಂದ ಸಮಲಂಕೃತವಾಗಿದ್ದ ಆಶ್ರಮವನ್ನು ಶ್ರೀರಾಮನು ನೋಡಿದನು. ಅಲ್ಲಿ ಶ್ರೀರಾಮನು ಬೆವರಿನಿಂದ ತೋಯ್ದು ಕೆಸರಾಗಿರುವಂತೆ ಕಾಣುತ್ತಿದ್ದ ಜಟೆಯನ್ನು ಧರಿಸಿದ್ದ ಆಶ್ರಮದಲ್ಲಿ ಸುಖಾಸೀನರಾಗಿದ್ದ, ತಪೋಧನರಾದ ಸುತೀಕ್ಷ್ಣಮುನಿಗಳನ್ನು ವಿಧಿವತ್ತಾಗಿ ಮಾತನಾಡಿಸಿದನು.*

ರಾಮೋಽಹಮಸ್ಮಿ ಭಗವನ್ಭವನ್ತಂ ದ್ರಷ್ಟುಮಾಗತಃ ।
ತ್ವಂ ಮಾಭಿವದ ಧರ್ಮಜ್ಞ ಮಹರ್ಷೇ ಸತ್ಯವಿಕ್ರಮ ॥೬॥

"ಪೂಜ್ಯರೇ ! ನಾನು ರಾಮನು. ನಿಮ್ಮನ್ನು ಸಂದರ್ಶಿಸಲು ಬಂದಿರುವೆನು. ಧರ್ಮಜ್ಞರೇ ! ಮಹರ್ಷಿಗಳೇ ! ಸತ್ಯವಿಕ್ರಮರೇ ! ನನ್ನೊಡನೆ ಮಾತನಾಡಿರಿ."

ಶ್ರೀರಾಮನು ಹೀಗೆ ಹೇಳಲು ಧೀರರಾದ ಸುತೀಕ್ಷ್ಣರು ಧರ್ಮಾತ್ಮರಲ್ಲಿ ಶ್ರೇಷ್ಠನಾದ ಶ್ರೀರಾಮನನ್ನು ದಿಟ್ಟಿಸಿ ನೋಡಿ ಎರಡು ತೋಳುಗಳಿಂದಲೂ ಅವನನ್ನು ಆಲಿಂಗಿಸಿಕೊಂಡು ಈ ಮಾತನ್ನು ಹೇಳಿದರು :

---

*ಈ ಶ್ಲೋಕದಲ್ಲಿ ' ಮಲಪಙ್ಕಜಟಾಧರಂ ' ಎಂಬ ವಿಶೇಷಣವನ್ನು ಸುತೀಕ್ಷ್ಣರಿಗೆ ಕೊಟ್ಟಿರುತ್ತಾರೆ. ಇದಕ್ಕೆ ಮಲಪಙ್ಕಜಧಾರಿಣಮ್ ಎಂಬ ಪಾಠಾಂತರವೂ ಇರುವುದು. ಕಲ್ಮಷದಿಂದಲೂ ಕೆಸರಿನಿಂದಲೂ ಕೂಡಿದ್ದ ಜಟೆಯನ್ನು ಧರಿಸಿದ್ದ—ಎಂದು ಸ್ವಾಭಾವಿಕವಾದ ಅರ್ಥವನ್ನು ಹೇಳಬಹುದಾಗಿದೆ. ತಪಸ್ವಿಗಳ ತಲೆಯು ಕಲ್ಮಷದಿಂದಲೂ ಕೆಸರಿನಿಂದಲೂ ಕೂಡಿರುವುದು ಹೇಗೆಂಬುದಕ್ಕೂ ಸ್ವಲ್ಪದೂರ ಸಮಾಧಾನ ಹೇಳಬಹುದಾಗಿದೆ. ಒಬ್ಬ ವ್ಯಾಖ್ಯಾನಕಾರರು ಹೇಳಿರುವಂತೆ ನಿತ್ಯನಿಷ್ಕಲತಪೋಯೋಗೇನ ವಿಚ್ಛಿತ್ತಿಯೇ ಇಲ್ಲದೆ ಅನೇಕವರ್ಷಗಳ ಪರ್ಯಂತವಾಗಿ ತಪಸ್ಸುಮಾಡುತ್ತಿದ್ದುದರಿಂದ ತಲೆಯು ಕೊಳೆಯಾಗಿದ್ದಿತು. ಜಡೆಗಟ್ಟಿದ್ದಿತು ಎಂದು ಹೇಳಬಹುದಾಗಿದೆ. ಹೀಗೆ ಅವಿಚ್ಛಿನ್ನವಾಗಿ ತಪಸ್ಸುಮಾಡುತ್ತಿರುವವರ ಮೇಲೆ ಹುತ್ತವೂ ಬೆಳೆಯುವುದೆಂದು ನಾವು

"ಸತ್ಯವಂತರಲ್ಲಿ ಶ್ರೇಷ್ಠನೇ ! ರಘುವಂಶೀಯರಲ್ಲಿ ಶ್ರೇಷ್ಠನಾದವನೇ ! ನಿನಗೆ ಸ್ವಾಗತವನ್ನು ಬಯಸುತ್ತೇನೆ. ನೀನು ಬಂದಿರುವುದರಿಂದ ಆಶ್ರಮವೀಗ ಸನಾಥವಾಗಿದೆ. ಇದುವರೆಗೂ ನಾಥರಿಲ್ಲದೇ ಅನಾಥವಾಗಿದ್ದ ಆಶ್ರಮವು ನಿನ್ನ ಸಾನ್ನಿಧ್ಯದಿಂದಾಗಿ ಸನಾಥವಾಗಿದೆ. ಮಹಾಶಯನೇ ! ನಿನ್ನ ಆಗಮನವನ್ನೇ ಪ್ರತಿಕ್ಷಣದಲ್ಲಿಯೂ ನಿರೀಕ್ಷಿಸುತ್ತಿದ್ದ ನಾನು ಭೂಮಿಯಲ್ಲಿ ಈ ದೇಹವನ್ನು ಪರಿತ್ಯಜಿಸಿ ದೇವಲೋಕಕ್ಕಿನ್ನೂ ಪಯಣಿಸಿರುವುದಿಲ್ಲ. ನೀನು ಚಿತ್ರಕೂಟಕ್ಕೆ ಬಂದನಂತರ ರಾಜ್ಯಭ್ರಷ್ಟನಾಗಿ ಅರಣ್ಯಕ್ಕೆ ಆಗಮಿಸಿರುವೆಯೆಂಬ ವಿಷಯವು ತಿಳಿಯಿತು. ದೇವರಾಜನಾದ ಇಂದ್ರನೂ ಇಲ್ಲಿಗೆ ಬಂದಿದ್ದನು. ನನ್ನ ಬಳಿಗೆ ಬಂದು ಮಹಾದೇವನಾದ ಸುರೇಶ್ವರನು–"ನಿನ್ನ ಪುಣ್ಯಕರ್ಮಗಳಿಂದ ಎಲ್ಲ ಪುಣ್ಯಲೋಕಗಳನ್ನೂ ಜಯಿಸಿರುವೆ"–ಎಂದು ನನಗೆ ಹೇಳಿದನು. ನನ್ನ ತಪಸ್ಸಿನಿಂದ ಜಯಿಸಲ್ಪಟ್ಟಿರುವ, ದೇವರ್ಷಿಗಳಿಂದ ಸಂಸೇವಿಸಲ್ಪಡುತ್ತಿರುವ ಆ ಲೋಕಗಳಲ್ಲಿ ನೀನು ಭಾರ್ಯೆ ಮತ್ತು ತಮ್ಮಂದಿರೊಂದಿಗೆ ನನ್ನ ಅನುಗ್ರಹವನ್ನು ಪಡೆದು ವಿಹರಿಸು."

ಸುತೀಕ್ಷ್ಣರು ಹೀಗೆ ಹೇಳಲು ಉಗ್ರತಪಸ್ವಿಗಳಾದ, ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿದ್ದ ಮಹರ್ಷಿಗಳಿಗೆ ಆತ್ಮವಂತನಾದ ರಾಮನು–ಬ್ರಹ್ಮನನ್ನು ಕುರಿತು ದೇವೇಂದ್ರನು ವಿಜ್ಞಾಪಿಸಿಕೊಳ್ಳುವಂತೆ – ವಿಜ್ಞಾಪಿಸಿಕೊಂಡನು.

---

ಕೇಳಿದ್ದೇವೆ. ಅಂತಹ ಸಂದರ್ಭದಲ್ಲಿ ಜಟೆಯು ಮಾತ್ರವಲ್ಲ ; ಶರೀರವೆಲ್ಲವೂ ಮೃಣ್ಮಯವಾಗುವುದು. ಮತ್ತೊಂದು ಪಾಠಾಂತರದ ಪ್ರಕಾರ ಮಲಪಙ್ಕಜಧಾರಿಣಂ ಎಂಬುದಕ್ಕೆ ವ್ಯಾಖ್ಯಾನಕಾರರು ಕಷ್ಟಪಟ್ಟು ಅರ್ಥಮಾಡಿರುತ್ತಾರೆ. ಏಕೆಂದರೆ ಈ ಪದದಲ್ಲಿ ಕಂಡು ಬರುವ ಸ್ವಾಭಾವಿಕವಾದ ಅರ್ಥದಿಂದ ಸಮನ್ವಯಮಾಡುವುದು ಬಹಳ ಕಷ್ಟವಾಗುವುದು. ಮಲ = ಕಲ್ಮಷವಾದ ಪಙ್ಕಜಧಾರಿಣಂ = ಕಮಲವನ್ನು ಧರಿಸಿರುವ–'ಕಲ್ಮಷವಾದ ಕಮಲವನ್ನು ಧರಿಸಿರುವ'–ಎಂಬುದು ಸ್ವಾಭಾವಿಕವಾದ ಅರ್ಥವಾಗುತ್ತದೆ. ಇಂತಹ ಕಮಲವನ್ನು ಮಹರ್ಷಿಯು ಏಕೆ ಧರಿಸಿದನು ? ಎಲ್ಲಿ ಧರಿಸಿದನು ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವು ಸುಲಭವಾಗಿ ಸಿಕ್ಕುವುದಿಲ್ಲ. ತಪಸ್ವಿಯು ಮಲಪಙ್ಕವನ್ನು ಧಾರಣೆಮಾಡುವುದು ಅಸ್ವಾಭಾವಿಕವೆನಿಸುತ್ತದೆ. ಇದಕ್ಕಾಗಿ ಒಬ್ಬ ವ್ಯಾಖ್ಯಾನಕಾರರು ಮಲಸ್ಯ ಸರ್ವಾಘಸ್ಯ ಶಾನ್ತಯೇ = ಎಲ್ಲ ಪಾಪಗಳ ಪರಿಹಾರಕ್ಕಾಗಿ ಪಙ್ಕಜೇ = ಪದ್ಮಾಸನೇ

"ಮಹರ್ಷಿಗಳೇ ! ಆ ಎಲ್ಲ ಲೋಕಗಳನ್ನೂ ನಾನೇ ಸ್ವತಃ ಸಂಪಾದನೆ ಮಾಡಿಕೊಳ್ಳುತ್ತೇನೆ. ಆದರೆ ಈಗ ನಾನು ಈ ಅರಣ್ಯದಲ್ಲಿ ನೀವು



ನಿರ್ದೇಶಿಸುವ ಒಂದು ವಾಸಸ್ಥಳವನ್ನು ಅಪೇಕ್ಷಿಸಿ ನಿಮ್ಮ ಬಳಿಗೆ ಬಂದಿರುವೆನು. ನೀವು ಎಲ್ಲ ವಿಷಯಗಳಲ್ಲಿಯೂ ಕುಶಲರೆಂದೂ ಸರ್ವಪ್ರಾಣಿಗಳ

---

ಸ್ಥಿತ್ವಾ = ಪದ್ಮಾಸನದಲ್ಲಿ ಕುಳಿತು ಧಾರಿಣಮ್ = ಧಾರಣಶೀಲಂ ಧಾರಣಶೀಲನಾದ ಧ್ಯಾನ-ಧಾರಣಾದಿಗಳನ್ನು ಅನುಷ್ಠಾನಮಾಡುವ. ಮತ್ತೊಬ್ಬರ ವ್ಯಾಖ್ಯಾನವು ಮತ್ತೂ ವಿಚಿತ್ರವಾಗಿದೆ. "'ಮಸ್ಯ = ಪರಮಾತ್ಮನಃ 'ಲಃ' ಪೂರ್ವಂ ಗ್ರಹಣಂ ಯಸ್ಮಿನ್ ತದೇವ ಪಙ್ಕಜಂ = ಕಮಲಂ ತದ್ಧಾರಿಣಂ ಹೃದಯಕಮಲಪುಷ್ಪಧರನಾದ ಎಂದು ಅರ್ಥ ಮಾಡಿದ್ದಾರೆ.

ಮನುವು ಹೇಳಿರುವಂತೆ ವಸಾ ಶುಕ್ರಮಸೃಜಙ್ ಮಜ್ಜಾ ಮೂತ್ರವಿಡ್ ಘ್ರಾಣಕರ್ಣ

ಹಿತದಲ್ಲಿ ಸರ್ವದಾ ನಿರತರಾಗಿರುವಿರೆಂದೂ ಮಹಾತ್ಮರಾದ ಗೌತಮವಂಶೋದ್ಭವರಾದ ಶರಭಂಗರು ಹೇಳಿರುವರು.”

ಶ್ರೀರಾಮನು ಹೀಗೆ ಹೇಳಲು ಲೋಕವಿಖ್ಯಾತರಾದ ಸುತೀಕ್ಷ್ಣರು ಆನಂದಭರಿತರಾಗಿ ಸುಮಧುರವಾದ ಈ ಮಾತುಗಳನ್ನು ಹೇಳಿದರು :

“ ರಾಘವ ! ಋಷಿಸಮೂಹಗಳಿಂದ ಸಂಸೇವ್ಯಮಾನವಾಗಿರುವ ಮತ್ತು ಕಂದ-ಮೂಲ-ಫಲಾದಿಗಳಿಂದ ಸಮೃದ್ಧವಾಗಿರುವ ಈ ದಂಡಕಾರಣ್ಯಾಶ್ರಮವು ಸಕಲಗುಣಗಳಿಂದಲೂ ಕೂಡಿದೆ. ಇಲ್ಲಿಯೇ ನೀನು ಸುಖವಾಗಿರಬಹುದು.

ಇಮಮಾಶ್ರಮಮಾಗಮ್ಯ ಮೃಗಸಙ್ಘಾ ಮಹಾಯಶಃ ।
ಅಟಿತ್ವಾ ಪ್ರತಿಗಚ್ಛನ್ತಿ ಲೋಭಯಿತ್ವಾಕುತೋಭಯಾಃ ।
ನಾನ್ಯೋ ದೋಷೋ ಭವೇದತ್ರ ಮೃಗೇಭ್ಯೋಽನ್ಯತ್ರ ವಿದ್ಧಿ ವೈ ॥

ಯಶೋವಂತನೇ ! ಜಿಂಕೆಯ ಗುಂಪುಗಳು ಯಾವ ವಿಧವಾದ ಭಯವೂ ಇಲ್ಲದೇ ಈ ಆಶ್ರಮಪ್ರದೇಶಕ್ಕೆ ಬಂದು ಇಲ್ಲಿರುವ ಮಹರ್ಷಿಗಳ ಮನಸ್ಸನ್ನು – ಮುಗ್ಧಗೊಳಿಸುವ ತಮ್ಮ ನಡಿಗೆಗಳಿಂದಲೂ, ಚಂಚಲವಾದ ಕಣ್ಣುಗಳಿಂದಲೂ ವ್ಯಾಮೋಹಗೊಳಿಸಿ ಸ್ವೇಚ್ಛೆಯಿಂದ ಹೊರಟುಹೋಗುತ್ತವೆ. ಈ ಒಂದು ದೋಷದ ಹೊರತಾಗಿ ಈ ದಂಡಕಾರಣ್ಯದ ಆಶ್ರಮದಲ್ಲಿ ಬೇರಾವ ದೋಷವೂ ಇಲ್ಲ. ” *

ಸುತೀಕ್ಷ್ಣಮುನಿಗಳಾಡಿದ ಮಾತನ್ನು ಕೇಳಿ ಧೀರನಾದ ಲಕ್ಷ್ಮಣಾಗ್ರಜನು ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು ಹೇಳಿದನು :

---

ವಿಟ್ । ಶ್ಲೇಷ್ಮಾಶ್ರುದೂಷಿಕಾ ಸ್ವೇದೋ ದ್ವಾದಶೈತೇ ನೃಣಾಂ ಮಲಾಃ ॥ ವಸೆ ( ದೇಹದಲ್ಲಿರುವ ಒಂದು ವಿಧವಾದ ರಸ ), ವೀರ್ಯ, ರಕ್ತ, ಕೊಬ್ಬು, ಮೂತ್ರ, ಮಲ, ಮೂಗಿನ ಮಲ ( ಸಿಂಬಳ ), ಕಿವಿಯ ಮಲ ( ಗುಗ್ಗೆ ), ಶ್ಲೇಷ್ಮ, ಕಣ್ಣೀರು, ಕಣ್ಣಿನ ಪಿಸುರು ಮತ್ತು ಬೆವರು ಇವು ಹನ್ನೆರಡು ಮಲಗಳು. ಮನುವು ಹೇಳಿರುವ ಪ್ರಕಾರ ಬೆವರಿಗೂ ಮಲವೆಂಬ ಹೆಸರಿದೆ. ಬೆವರಿನಿಂದುಂಟಾದ ಕೆಸರಿನಿಂದ ಕೂಡಿರುವ ಜಟೆಯನ್ನು ಹೊಂದಿರುವ ಎಂದು ಅರ್ಥಮಾಡಬಹುದಾಗಿದೆ.

*ಈ ಶ್ಲೋಕವು ಮುಂದೆ ಮಾರೀಚನು ಮೃಗರೂಪವನ್ನು ಧರಿಸಿ ಬರುವನೆಂಬುದಕ್ಕೆ ಸೂಚಕವಾಗಿದೆಯೆಂದು ಒಬ್ಬ ವ್ಯಾಖ್ಯಾನಕಾರರು ಅಭಿಪ್ರಾಯಪಡುತ್ತಾರೆ.

"ಮಹಾಭಾಗರೇ! ಹಾಗೆ ಇಲ್ಲಿಗೆ ಬಂದು ಋಷಿಗಳ ಮನಸ್ಸನ್ನು ಆಕರ್ಷಿಸಿ ತಪಸ್ಸಿಗೆ ವಿಘ್ನವನ್ನುಂಟುಮಾಡುವ ಜಿಂಕೆಗಳ ಸಮೂಹವನ್ನು ವಜ್ರಾಯುಧಕ್ಕೆ ಸಮಾನವಾದ ತೀಕ್ಷ್ಣವಾದ ಅಲುಗುಳ್ಳ ನನ್ನೀ ಬಾಣಗಳಿಂದ ಕೊಂದುಹಾಕುತ್ತೇನೆ. ಆದರೆ ನಾನು ಹಾಗೆ ಮಾಡುವುದರಿಂದ ನಿಮಗೆ ತೊಂದರೆಯಾಗುವುದಾದರೆ ಅದಕ್ಕಿಂತಲೂ ಪೀಡಾಕರವಾದುದು ಮತ್ತಾವುದಿದೆ? ಆದುದರಿಂದ ಈ ಆಶ್ರಮದಲ್ಲಿ ಹೆಚ್ಚುಕಾಲ ಇರಲು ನಾನು ಇಷ್ಟ ಪಡುವುದಿಲ್ಲ."

ಶ್ರೀರಾಮನು ಸುತೀಕ್ಷ್ಣರಿಗೆ ಹೀಗೆ ಹೇಳಿ ಸಾಯಂಸಂಧ್ಯೋಪಾಸನೆ ಮಾಡಿ ರಮ್ಯವಾಗಿದ್ದ ಆ ಆಶ್ರಮದಲ್ಲಿಯೇ ಸೀತಾ-ಲಕ್ಷ್ಮಣರೊಡನೆ ಆ ರಾತ್ರಿಯನ್ನು ಕಳೆಯಲು ನಿಶ್ಚಯಿಸಿದನು.

ಸಂಧ್ಯಾಕಾಲವು ಕಳೆದು ರಾತ್ರಿಯಾದುದನ್ನು ಕಂಡು ಮಹಾತ್ಮರಾದ ಸುತೀಕ್ಷ್ಣರು ತಪಸ್ವಿಗಳು ಭೋಜನಮಾಡಲು ಯೋಗ್ಯವಾದ ಶುಭಾವಹವಾದ ಕಂದ-ಮೂಲ-ಫಲಗಳನ್ನು ತಾವೇ ತಂದು ನಿವೇದಿಸಿ ರಾಮ-ಲಕ್ಷ್ಮಣರನ್ನು ಯಥಾಯೋಗ್ಯವಾಗಿ ಸತ್ಕರಿಸಿದರು. ರಾಮ-ಲಕ್ಷ್ಮಣರು ಭೋಜನ ಮಾಡಿದನಂತರ ಸೀತಾದೇವಿಯೂ ಭೋಜನಮಾಡಿದಳು.

೭ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೮ನೆಯ ಸರ್ಗ

## ಸೀತಾ-ರಾಮ-ಲಕ್ಷ್ಮಣರು ಪ್ರಾತಃಕಾಲದಲ್ಲಿ ಸುತೀಕ್ಷ್ಣರ ಅನುಜ್ಞೆಯನ್ನು ಪಡೆದು ಮುಂದೆ ಪ್ರಯಾಣಮಾಡಿದುದು

**ರಾಮಸ್ತು ಸಹ ಸೌಮಿತ್ರಿಃ ಸುತೀಕ್ಷ್ಣೇನಾಭಿಪೂಜಿತಃ ।**
**ಪರಿಣಾಮ್ಯ ನಿಶಾಂ ತತ್ರ ಪ್ರಭಾತೇ ಪ್ರತ್ಯಬುಧ್ಯತ ॥೧॥**

ಸುತೀಕ್ಷ್ಣಮುನಿಗಳಿಂದ ಸತ್ಕೃತನಾದ ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ರಾತ್ರಿಯನ್ನು ಕಳೆದು ಪ್ರಾತಃಕಾಲವಾಗುತ್ತಲೇ ಎಚ್ಚರಗೊಂಡನು. *

* ಪರಿಣಾಮ್ಯ ಎಂಬುದಕ್ಕೆ ಅತಿವಾಹ್ಯ ಎಂದೂ, ಶಯಿತ್ವಾ ಎಂದೂ ವ್ಯಾಖ್ಯಾನ

ರಾಘವನು ಸೀತೆಯೊಡನೆ ಯಥೋಚಿತವಾದ ಕಾಲದಲ್ಲಿ ಎದ್ದು ಶೀತಲವಾದ ಮತ್ತು ನೀಲಕಮಲಗಳ ಸುವಾಸನೆಯಿಂದ ಕೂಡಿದ್ದ ನೀರಿನಲ್ಲಿ ಸ್ನಾನಮಾಡಿದನು. ಬೆಳಗಾದೊಡನೆಯೇ ವೈದೇಹೀ-ರಾಮ-ಲಕ್ಷ್ಮಣರು ತಪಸ್ವಿಗಳಿಗೆ ಆಶ್ರಯಸ್ಥಾನವಾಗಿದ್ದ ಆ ಅರಣ್ಯದಲ್ಲಿ ಅಗ್ನಿಯನ್ನು ಹೋಮಾದಿಗಳಿಂದಲೂ, ದೇವತೆಗಳನ್ನು ಪೂಜಾದಿಗಳಿಂದಲೂ ವಿಧಿವತ್ತಾಗಿ ಪೂಜಿಸಿದರು. ಬಳಿಕ ಉದಯಿಸುತ್ತಿದ್ದ ಸೂರ್ಯನನ್ನು ನೋಡಿ ನಮಸ್ಕರಿಸಿ ಪಾಪರಹಿತರಾಗಿ, ನಿರ್ಮಲವಾದ ಮನಸ್ಸಿನಿಂದ ಕೂಡಿದವರಾಗಿ ಸುತೀಕ್ಷ್ಣಮುನಿಗಳ ಬಳಿಗೆ ಹೋಗಿ ಅವರೊಡನೆ ಮೃದುವಾದ ಈ ಮಾತನ್ನು ಹೇಳಿದರು :

"ಪೂಜ್ಯರೇ ! ಮಹಾಮಹಿಮರಾದ ನಿಮ್ಮಿಂದ ಸತ್ಕೃತರಾದ ನಾವು ರಾತ್ರಿಯನ್ನು ಸುಖವಾಗಿ ಕಳೆದೆವು. ಮುಂದೆ ಪ್ರಯಾಣಮಾಡಲು ಅನುಮತಿಯನ್ನು ಪ್ರಾರ್ಥಿಸುತ್ತಿದ್ದೇವೆ. ನಮ್ಮೊಡನೆ ಬರುವ ಮುನಿಗಳು ಹೊರಡಲು ಅವಸರಪಡಿಸುತ್ತಿದ್ದಾರೆ. ಪುಣ್ಯಶೀಲರಾದ, ದಂಡಕಾರಣ್ಯವಾಸಿಗಳಾದ ಋಷಿಗಳ ಸಮಗ್ರವಾದ ಆಶ್ರಮಮಂಡಲವನ್ನು ನೋಡಲು ನಾವೂ ಉತ್ಸುಕರಾಗಿದ್ದೇವೆ. ನಿತ್ಯವೂ ಧರ್ಮಮಾರ್ಗದಲ್ಲಿಯೇ ವ್ಯವಹರಿಸುವ, ತಪಸ್ಸಿನ ಮೂಲಕವಾಗಿ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವ, ಜ್ವಾಲೆಗಳಿಲ್ಲದ ಯಜ್ಞೇಶ್ವರನಂತೆ ಮಹಾತೇಜಸ್ವಿಗಳಾಗಿರುವ ಈ ಮುನಿಪುಂಗವರೊಡನೆ ಪ್ರಯಾಣಮಾಡಲು ನಿಮ್ಮ ಅನುಮತಿಯನ್ನು ಪ್ರಾರ್ಥಿಸುತ್ತೇವೆ.

ಅವಿಷಹ್ಯಾತಪೋ ಯಾವತ್ಸೂರ್ಯೋ ನಾತಿವಿರಾಜತೇ ।
ಅಮಾರ್ಗೇಣಾಗತಾಂ ಲಕ್ಷ್ಮೀಂ ಪ್ರಾಪ್ಯೇವಾನ್ವಯವರ್ಜಿತಃ ॥೮॥

ತಾವದಿಚ್ಛಾಮಹೇ ಗನ್ತುಮಿತ್ಯುಕ್ತ್ವಾ ಚರಣೌ ಮುನೇಃ ।
ವವನ್ದೇ ಸಹಸೌಮಿತ್ರಿಃ ಸೀತಯಾ ಸಹ ರಾಘವಃ ॥೯॥

ಸೂರ್ಯನು ಸಹಿಸಲು ಅಸಾಧ್ಯವಾದ ಬಿಸಿಲಿನಿಂದ ನಮ್ಮನ್ನು ಸುಡು

---

ಕಾರರು ಅರ್ಥಮಾಡಿರುತ್ತಾರೆ: ಪರಿಣಮ್ ಎಂಬ ಧಾತುವಿನಿಂದ ಪರಿಣಾಮ್ಯ ಎಂಬ ಪದವಾಗಿ ಪರಿಣಾಮಹೊಂದಿಸಿ ಎಂದರೆ ಕಡೆಗಾಣಿಸಿ, ರಾತ್ರಿಯನ್ನು ಕಳೆದು ಎಂದು ಅರ್ಥವಾಗುತ್ತದೆ. ಮಲಗಿ ಎಂದು ನೇರವಾದ ಅರ್ಥಬರುವುದಿಲ್ಲ.

ವಷ್ಟು ಪ್ರಕಾಶವನ್ನು ಬೀರುವುದರೊಳಗೆ (ಬಿಸಿಲೇರುವುದರೊಳಗಾಗಿ) ನಾವು ಇಲ್ಲಿಂದ ಪ್ರಯಾಣಮಾಡಲು ಇಚ್ಛಿಸಿದ್ದೇವೆ. ಕುತ್ಸಿತವಾದ ಮಾರ್ಗದಿಂದ ಐಶ್ವರ್ಯವನ್ನು ಪಡೆದುಕೊಂಡ ಕುಲಗೆಟ್ಟವನೊಬ್ಬನು ಎಲ್ಲರಿಗೂ ಅಸಹ್ಯನಾಗುವಂತೆ-ಸೂರ್ಯನು ಅಸಹ್ಯನಾಗುವುದರೊಳಗಾಗಿ ನಾವು ಇಲ್ಲಿಂದ ಪ್ರಯಾಣಮಾಡಲು ಬಯಸಿದ್ದೇವೆ."* ಹೀಗೆ ಹೇಳಿ ಸೀತಾ-ಸೌಮಿತ್ರಿಯರೊಡನೆ ಶ್ರೀರಾಮನು ಸುತೀಕ್ಷ್ಣಮುನಿಗಳ ಕಾಲುಗಳನ್ನು ಮುಟ್ಟಿ ನಮಸ್ಕಾರಮಾಡಿದನು. ಹಾಗೆ ನಮಸ್ಕರಿಸಿದ ರಾಮ-ಲಕ್ಷ್ಮಣರನ್ನು ಮುನಿಪುಂಗವರಾದ ಸುತೀಕ್ಷ್ಣರು ಮೇಲೆತ್ತಿ ಗಾಢವಾಗಿ ಆಲಿಂಗನಮಾಡಿಕೊಂಡು ಸ್ನೇಹಯುಕ್ತವಾದ ಈ ಮಾತನ್ನು ಹೇಳಿದರು :

"ರಾಘವ ! ಲಕ್ಷ್ಮಣನೊಡನೆಯೂ, ನೆಳಲಿನಂತೆಯೇ ನಿನ್ನನ್ನು ಎಡಬಿಡದೆ ಅನುಸರಿಸಿ ಬರುತ್ತಿರುವ ಸೀತೆಯೊಡನೆಯೂ ನೀನು ಪ್ರಯಾಣಮಾಡು. ನಿನ್ನ ಹಾದಿಯಲ್ಲಿ ಯಾವ ಉಪದ್ರವವೂ ತಲೆದೋರದಿರಲಿ. ದಂಡಕಾರಣ್ಯವಾಸಿಗಳಾದ, ತಪಸ್ಸಿನಿಂದ ಆತ್ಮವನ್ನು ಸಾಕ್ಷಾತ್ಕರಿಸಿಕೊಂಡಿರುವ ತಪಸ್ವಿಗಳ ರಮ್ಯವಾದ ಆ ಆಶ್ರಮಮಂಡಲವನ್ನು ನೋಡು. ದೃಷ್ಟಿಗೆ ರಮ್ಯವಾಗಿ ಕಾಣುವ, ನೇತ್ರಾನಂದಕರವಾದ, ಯಥೇಚ್ಛವಾದ ಫಲ-ಮೂಲಾದಿಗಳನ್ನೂ ನೀನಲ್ಲಿ ಕಾಣುವೆ. ಪುಷ್ಪಭರಿತವಾದ ವನಗಳನ್ನೂ ಕಾಣುವೆ. ಪ್ರಶಸ್ತವಾದ ಮೃಗಗಳ ಸಮೂಹಗಳನ್ನೂ, ಶಾಂತಸ್ವಭಾವದಿಂದ ಕೂಡಿದ

---

* ಅವಿಷಹ್ಯಃ-ಸಹಿಸಲು ಅಶಕ್ಯವಾದ, ಸಹಿಸಲಾಗದ, ನ ವಿಶೇಷೇಣ ಸಹ್ಯಃ ಅವಿಷಹ್ಯ | ಅನ್ವಯವರ್ಜಿತಃ ಅನ್ವಯ ಎಂದರೆ ಕುಲ ಅಥವಾ ವಂಶ ಆದರಿಂದ ವರ್ಜಿತನಾದವನು ಎಂದರೆ ದುಷ್ಕಾರ್ಯಕ್ಕಾಗಿ ಕುಲದಿಂದ ತಳ್ಳಲ್ಪಟ್ಟವನು ; ಬಹಿಷ್ಕೃತನಾದವನು. ಇಷ್ಟರಿಂದಲೇ ಅವನು ಎಲ್ಲರಿಗೂ ಅಸಹ್ಯನಾಗಿರುತ್ತಾನೆ. ಇದರ ಜೊತೆಗೆ ಅವನು ಅನ್ಯಾಯಮಾರ್ಗದಲ್ಲಿ ಹಣಸಂಪಾದನೆ ಮಾಡಿರುತ್ತಾನೆ. ಇದರಿಂದವನು ಸತ್ಪುರುಷರಿಗೆ ಮತ್ತಷ್ಟು ಅಸಹ್ಯನಾಗುತ್ತಾನೆ. ಹಣವಿದ್ದಮಾತ್ರಕ್ಕೆ ಅವನು ಗ್ರಾಹ್ಯನಾಗುವುದಿಲ್ಲ. ವಂಶಭ್ರಷ್ಟನಾದವನು ದುರ್ಮಾರ್ಗದಲ್ಲಿ ಹಣಸಂಪಾದನೆ ಮಾಡಿದ್ದರಿಂದ ಜನಗಳು ಅವನನ್ನು ಮತ್ತಷ್ಟು ದೂರವಿಡುತ್ತಾರೆ. ಮಧ್ಯಾಹ್ನದ ಉರಿಬಿಸಿಲು ದಾರಿಹೋಕರಿಗೆ ಎಷ್ಟೊಂದು ದಾರುಣವಾಗಿರುತ್ತೆಂಬ ಭಾವ. ಸಹಿಸಲು ಆಗದೇ ಇರುವಿಕೆಯಲ್ಲಿ ಅನ್ವಯವರ್ಜಿತನಿಂದ ಅಥವಾ ಮಧ್ಯಾಹ್ನದ ಸೂರ್ಯನಿಂದ ದೂರಸರಿದು ನಿಲ್ಲುವುದರಲ್ಲಿ ಮಾತ್ರವೇ ಉಪಮಾನ.

ಪಕ್ಷಿಗಳ ಸಮೂಹಗಳನ್ನೂ ಕಾಣುವೆ. ಅರಳಿದ ಕಮಲಗಳ ಸಮೂಹಗಳಿಂದ ಕೂಡಿರುವ ಸ್ವಚ್ಛವಾದ ಸರೋವರಗಳನ್ನೂ, ಹಂಸಗಳಿಂದ ವ್ಯಾಪ್ತವಾದ ತಟಾಕಗಳನ್ನೂ, ಸರಸ್ಸುಗಳನ್ನೂ ನೀನಲ್ಲಿ ಕಾಣುವೆ. ಹೆಚ್ಚು ಸುಂದರವಾಗಿ ಕಾಣುವ ಗಿರಿಗಳ ಝರಿಗಳನ್ನೂ, ನವಿಲುಗಳು ಗರಿಗೆದರಿ ಕೇಕೆಹಾಕುತ್ತಿರುವ ರಮಣೀಯವಾದ ಅರಣ್ಯಗಳನ್ನೂ ನೀನಲ್ಲಿ ಕಾಣುವೆ. ವತ್ಸ, ರಾಮ! ಹೋಗಿಬಾ. ಲಕ್ಷ್ಮಣ! ನೀನೂ ನಿಮ್ಮಣ್ಣನ ಜೊತೆಯಲ್ಲಿ ಹೋಗು. ಆದರೆ ಒಂದು ನಿಬಂಧನೆ. ನೀನು ದಂಡಕಾರಣ್ಯವನ್ನು ನೋಡಿಕೊಂಡು ಪುನಃ ನನ್ನ ಈ ಆಶ್ರಮಕ್ಕೇ ಬರಬೇಕು."

ಶ್ರೀರಾಮನು ಹಾಗೆಯೇ ಆಗಲೆಂದು ಮುನಿಗಳಿಗೆ ಪ್ರತ್ಯುತ್ತರಿಸಿ, ಲಕ್ಷ್ಮಣನೊಡನೆ ಸುತೀಕ್ಷ್ಣಮುನಿಗಳಿಗೆ ಪುನಃ ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಿ ಹೊರಡಲನುವಾದನು. ವಿಶಾಲಾಕ್ಷಿಯಾದ ಸೀತಾದೇವಿಯು ಮಂಗಳ ಕರವಾದ ಬತ್ತಳಿಕೆಗಳನ್ನೂ, ಧನುಸ್ಸುಗಳನ್ನೂ ಮತ್ತು ಬಹಳ ಸ್ವಚ್ಛ ವಾಗಿದ್ದ ಥಳ-ಥಳನೆ ಹೊಳೆಯುತ್ತಿದ್ದ ಕತ್ತಿಗಳನ್ನೂ ಇಬ್ಬರು ಸೋದರ ರಿಗೂ ಕೊಟ್ಟಳು.

ಸೀತಾದೇವಿಯು ಕೊಟ್ಟ ಬತ್ತಳಿಕೆಗಳನ್ನು ರಾಮ-ಲಕ್ಷ್ಮಣರು ಬೆನ್ನಿಗೆ ಬಿಗಿದುಕೊಂಡರು. ಟಂಕಾರಶಬ್ದದಿಂದ ಕೂಡಿದ್ದ ಧನುಸ್ಸು ಗಳನ್ನೂ ತೆಗೆದುಕೊಂಡು ಆಶ್ರಮದಿಂದ ಹೊರಡುವ ಸಲುವಾಗಿ ಅಡಿಗಳನ್ನು ಮುಂದಿಟ್ಟರು. ಕಾಂತಿರೂಪಸಂಪನ್ನರಾದ ರಾಘವರು ಧನುಸ್ಸನ್ನೂ ಕತ್ತಿ ಯನ್ನೂ ಧರಿಸಿ ಸುತೀಕ್ಷ್ಣಮುನಿಗಳ ಅನುಜ್ಞೆಯನ್ನು ಪಡೆದು ಸೀತೆ ಯೊಡನೆ ಪ್ರಯಾಣಹೊರಟರು.

೮ನೆಯ ಸರ್ಗವು ಮುಗಿಯಿತು.

## ಸೀತೆಯು ನಿರಪರಾಧಿಗಳನ್ನು ಕೊಲ್ಲದಿರುವಂತೆಯೂ ಅಹಿಂಸಾ ವ್ರತವನ್ನು ಪರಿಪಾಲಿಸುವಂತೆಯೂ ಶ್ರೀರಾಮನಿಗೆ ಹೇಳಿದುದು

ಸುತೀಕ್ಷ್ಣೇನಾಭ್ಯನುಜ್ಞಾತಂ ಪ್ರಸ್ಥಿತಂ ರಘುನನ್ದನಮ್ ।
ಹೃದ್ಯಯಾ ಸ್ನಿಗ್ಧಯಾ ವಾಚಾ ಭರ್ತಾರಮಿದಮಬ್ರವೀತ್ ॥೧॥

ಸುತೀಕ್ಷ್ಣಮುನಿಗಳ ಅನುಮತಿಯನ್ನು ಪಡೆದು ದಂಡಕಾರಣ್ಯವಾಸಿಗಳಾದ ಋಷಿಗಳ ಆಶ್ರಮಮಂಡಲವನ್ನು ಸಂದರ್ಶಿಸುವ ಸಲುವಾಗಿ ಹೊರಟಿದ್ದ ಪತಿಯಾದ ಶ್ರೀರಾಮನನ್ನು ಕುರಿತು ಸೀತಾದೇವಿಯು ಹೃದಯಂಗಮವಾಗಿಯೂ ಸ್ನೇಹಯುಕ್ತವಾಗಿಯೂ ಇದ್ದ ಈ ಮಾತನ್ನು ಹೇಳಿದಳು :

ಅಯಂ ಧರ್ಮಃ ಸುಸೂಕ್ಷ್ಮೇಣ ವಿಧಿನಾ ಪ್ರಾಪ್ಯತೇ ಮಹಾನ್ ।
ನಿವೃತ್ತೇನ ಚ ಶಕ್ಯೋಽಯಂ ವ್ಯಸನಾತ್ಕಾಮಜಾದಿಹ ॥೨॥

"ರಾಮಭದ್ರ ! ನೀನು ಮಹಾಪುರುಷನು. ಅಧರ್ಮವೆಂಬುದು ಅತ್ಯಂತಸೂಕ್ಷ್ಮವಾದ ರೀತಿಯಲ್ಲಿ ಮನುಷ್ಯನಿಗೆ ಬಂದುಬಿಡುತ್ತದೆ. ಕಾಮಜನ್ಯವಾದ ವ್ಯಸನಗಳಿಂದ ನಿವೃತ್ತನಾದವನಿಗೆ ಮಾತ್ರ ಈ ಅಧರ್ಮದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತ್ತದೆ.

ತ್ರೀಣ್ಯೇವ ವ್ಯಸನಾನ್ಯತ್ರ ಕಾಮಜಾನಿ ಭವನ್ತ್ಯುತ ।
ಮಿಥ್ಯಾ ವಾಕ್ಯಂ ಪರಮಕಂ ತಸ್ಮಾದ್ಗುರುತರಾವುಭೌ ॥೩॥

ಕಾಮಜನ್ಯವಾದ ವ್ಯಸನಗಳು ಮೂರು. ಇವುಗಳಲ್ಲಿ–'ಸುಳ್ಳು ಹೇಳುವುದು'– ಎಂಬುದು ಸಾಮಾನ್ಯವ್ಯಸನಗಳಿಗಿಂತಲೂ ಮುಖ್ಯವಾದುದು. ಆದರೆ ಉಳಿದ ಎರಡು ವ್ಯಸನಗಳು ಸುಳ್ಳುಹೇಳುವುದಕ್ಕಿಂತಲೂ ಗುರುತರವಾದುವುಗಳು.

ಪರದಾರಾಭಿಗಮನಂ ವಿನಾ ವೈರಂ ಚ ರೌದ್ರತಾ ।
ಮಿಥ್ಯಾವಾಕ್ಯಂ ನ ತೇ ಭೂತಂ ನ ಭವಿಷ್ಯತಿ ರಾಘವ ॥೪॥

ಪರಸ್ತ್ರೀಯರೊಡನೆ ಸಮಾಗಮ, ವೈರಕ್ಕೆ ಕಾರಣವೇ ಇಲ್ಲದೆಡೆಯಲ್ಲಿ ರೌದ್ರಭಾವವನ್ನು ತಾಳುವುದು-ಇವು ಕಾಮಜನ್ಯವಾದ ಮತ್ತೆರಡು ವ್ಯಸನಗಳು. ಮೊದಲನೆಯದಾದ ಸುಳ್ಳುಹೇಳುವಿಕೆಯು ನಿನಗೆ ಹಿಂದೆಯೂ ಇರಲಿಲ್ಲ. ಮುಂದೆಯೂ ಬರುವುದಿಲ್ಲ.

ಕುತೋಽಭಿಲಾಷಣಂ ಸ್ತ್ರೀಣಾಂ ಪರೇಷಾಂ ಧರ್ಮನಾಶನಮ್ ।
ತವ ನಾಸ್ತಿ ಮನುಷ್ಯೇನ್ದ್ರ ನ ಚಾಭೂತ್ತೇ ಕದಾಚನ ॥೫॥
ಮನಸ್ಯಪಿ ತಥಾ ರಾಮ ನ ಚೈತದ್ವಿದ್ಯತೇ ಕ್ವಚಿತ್ ।
ಸ್ವದಾರನಿರತಸ್ತ್ವಂ ಚ ನಿತ್ಯಮೇವ ನೃಪಾತ್ಮಜ ॥೬॥

ಧರ್ಮನಾಶಕವಾದ ಪರಸ್ತ್ರೀಯರ ಮೇಲಿನ ಅಭಿಲಾಷೆಯು ಧರ್ಮಮೂರ್ತಿಯಾದ ನಿನಗೆ ಹೇಗೆತಾನೇ ಇದ್ದೀತು? ಆ ದೋಷವು ನಿನ್ನಲ್ಲಿ ಈಗಲೂ ಇಲ್ಲ. ಹಿಂದೆಯೂ ಇರಲಿಲ್ಲ. ಆ ಅಭಿಲಾಷೆಯು ನಿನಗೆ ಮನಸ್ಸಿನಲ್ಲಿ ಕೂಡ ಒಮ್ಮೆಯೂ ಸುಳಿಯುವುದಿಲ್ಲ. ರಾಜಕುಮಾರನೇ! ನೀನು ಯಾವಾಗಲೂ ನಿನ್ನ ಪತ್ನಿಯಲ್ಲಿಯೇ ಅನುರಕ್ತನಾಗಿರತಕ್ಕವನು. ಆದುದರಿಂದ ಮಿಥ್ಯಾವಾಕ್ಯದ ದೋಷವಾಗಲೀ – ಪರದಾರಾಭಿಗಮನದ ದೋಷವಾಗಲೀ ನಿನ್ನಲ್ಲಿರುವುದಿಲ್ಲ.

ಸತ್ಯಸಂಧನೇ! ಮಹಾಭಾಗನೇ! ಲಕ್ಷ್ಮಣಾಗ್ರಜನೇ! ನೀನು ಸತ್ಯಸಂಧನು. ತಂದೆಯ ನಿದೇಶದಂತೆ ನಡೆಯತಕ್ಕವನು. ನಿನ್ನಲ್ಲಿ ಸತ್ಯ-ಧರ್ಮ ಮುಂತಾದ ಸದ್ಗುಣಗಳೆಲ್ಲವೂ ಮೂರ್ತಿಮತ್ತಾಗಿ ನೆಲೆಸಿವೆ. ಜಿತೇಂದ್ರಿಯರಾದವರು ಮಾತ್ರವೇ ಈ ಸದ್ಗುಣಗಳನ್ನು ಹೊಂದಿರುತ್ತಾರೆ. ಶುಭದರ್ಶನನೇ! ನೀನು ಇಂದ್ರಿಯಗಳನ್ನು ನಿನ್ನ ವಶದಲ್ಲಿಟ್ಟುಕೊಂಡಿರುವೆಯೆಂಬ ವಿಷಯವನ್ನು ನಾನೂ ಚೆನ್ನಾಗಿ ಬಲ್ಲೆನು.

ತೃತೀಯಂ ಯದಿದಂ ರೌದ್ರಂ ಪರಪ್ರಾಣಾಭಿಹಿಂಸನಮ್ ।
ನಿರ್ವೈರಂ ಕ್ರಿಯತೇ ಮೋಹಾತ್ತಚ್ಚ ತೇ ಸಮುಪಸ್ಥಿತಮ್ ॥೯॥

ವೈರವೇ ಇಲ್ಲದೆ ಒಬ್ಬನ ಮೇಲೆ ಕ್ರೌರ್ಯದಿಂದ ವರ್ತಿಸುವುದು ಕಾಮಜನ್ಯವಾದ ಮೂರನೆಯ ಗುಣವಾಗಿದೆ. ಇದು ಇತರರ ಪ್ರಾಣಹಿಂಸಕ

ವಾದುದು. ಮೋಹದ ಕಾರಣದಿಂದಾಗಿ ಈ ಮೂರನೆಯ ವ್ಯಸನವು ನಿನ್ನಲ್ಲಿ ಈಗ ಉಂಟಾಗಿದೆ. *

ದಂಡಕಾರಣ್ಯವಾಸಿಗಳಾದ ಋಷಿಗಳ ರಕ್ಷಣಾರ್ಥವಾಗಿ ಯುದ್ಧದಲ್ಲಿ ನೀನು ರಾಕ್ಷಸರನ್ನು ವಧಿಸುವುದಾಗಿ ಪ್ರತಿಜ್ಞೆಯನ್ನು ಮಾಡಿರುವೆ. ಈ ಕಾರಣದಿಂದಲೇ ನೀನು ಧನುರ್ಬಾಣಗಳನ್ನು ಹಿಡಿದು ತಮ್ಮನೊಡನೆ ದಂಡಕಾರಣ್ಯಕ್ಕೆ ಹೊರಟಿರುವೆ. ಹೀಗೆ ಹೊರಟಿರುವುದನ್ನು ನೋಡಿ ನನ್ನ ಮನಸ್ಸು ಚಿಂತಾಕುಲವಾಗಿದೆ. ಸತ್ಯನಿಷ್ಠೆ; ಆಶ್ರಿತವಾತ್ಸಲ್ಯ; ಮಾಡಿದ ಪ್ರತಿಜ್ಞೆಯನ್ನು ಯಾವುದೇ ಕಷ್ಟಬಂದರೂ ಪೂರ್ಣಗೊಳಿಸುವ ದೃಢತೆ ಇವೇ ಮುಂತಾದ ಸದ್ವೃತ್ತಿಗಳು ನಿನ್ನಲ್ಲಿ ನೆಲೆಸಿರುವುದನ್ನು ಸ್ಮರಿಸುತ್ತಿರುವ ನಾನು ಈ ಸಮಯದಲ್ಲಿ ನಿನಗೆ ಶ್ರೇಯಸ್ಸು ಮತ್ತು ಹಿತವು ಹೇಗೆ ಲಭಿಸುವುದೆಂಬುದರ ಬಗೆಗೆ ವಿವೇಚಿಸುತ್ತಿದ್ದೇನೆ. ನೀನು ದಂಡಕಾರಣ್ಯಕ್ಕೆ ಪ್ರಯಾಣ ಮಾಡುವುದು ನನಗೆ ಅಷ್ಟಾಗಿ ರುಚಿಸದು. ಇದಕ್ಕೆ ಕಾರಣವನ್ನೂ ಹೇಳುತ್ತೇನೆ. ನಾನು ಹೇಳುವುದನ್ನು ಕೇಳು; ನೀನಾದರೋ ಧನುಷ್ಪಾಣಿಯಾಗಿ ತಮ್ಮನೊಡನೆ ದಂಡಕಾರಣ್ಯಕ್ಕೆ ಹೋಗುವೆ. ಎದುರಿಗೆ ಸಿಕ್ಕುವ ಕಾಡು ಪ್ರಾಣಿಗಳನ್ನು ನೋಡಿ ಅವುಗಳ ಮೇಲೆ ಬಾಣಗಳ ವ್ಯಯವನ್ನು ಮಾಡಿಬಿಡಬಹುದು. ಕೈಯಲ್ಲಿ ಧನುರ್ಬಾಣಗಳಿರುವಾಗ ಕ್ಷತ್ರಿಯನಿಗೆ ಮೃಗಗಳನ್ನು ಬೇಟೆಯಾಡುವ ಮನಸ್ಸು ಸ್ವಾಭಾವಿಕವಾಗಿಯೇ ಉಂಟಾಗುತ್ತದೆ.

ಕ್ಷತ್ರಿಯಾಣಾಂ ಚ ಹಿ ಧನುರ್ಹುತಾಶಸ್ಯೇನ್ಧನಾನಿ ಚ ।
ಸಮೀಪತಃ ಸ್ಥಿತಂ ತೇಜೋ ಬಲಮುಚ್ಛ್ರಯತೇ ಭೃಶಮ್ ॥೧೫॥

ಅಗ್ನಿಯ ಸಮೀಪದಲ್ಲಿ ಕಟ್ಟಿಗೆಗಳಿದ್ದುಬಿಟ್ಟರೆ ಜ್ವಾಲೆಗಳನ್ನು ವೃದ್ಧಿಪಡಿಸುತ್ತಾ ಅದು ಮುಂದು-ಮುಂದಕ್ಕೆ ಹೋಗುತ್ತಲೇ ಇರುತ್ತದೆ. ಅದೇ

---

* ಕಾಮಜವ್ಯಸನಗಳು ಹತ್ತೆಂದು ಮನುಸ್ಮೃತಿಯಲ್ಲಿ ಹೇಳಿದ್ದಾರೆ. ಮೃಗಯಾಕ್ಷೋ ದಿವಾಸ್ವಾಪಃ ಪರೀವಾದಃ ಸ್ತ್ರಿಯೋ ಮದಃ । ತೌರ್ಯತ್ರಿಕಂ ವೃಥಾ ಚಾಟ್ಯಾ ಕಾಮಜೋ ದಶಕೋ ಗಣಃ ॥ ೪೭ (ಮನುಸ್ಮೃತಿಃ) ಬೇಟೆ, ಜೂಜಾಟ, ಹಗಲುನಿದ್ರೆ, ಇತರರ ದೂಷಣೆ, ಸ್ತ್ರೀಲೋಲುಪತೆ, ಮದ್ಯಪಾನದಿಂದುಂಟಾಗುವ ಅಮಲು, ನೃತ್ಯ-ಸಂಗೀತ-ವಾದ್ಯ ಈ ಮೂರರಲ್ಲಿ ಹೆಚ್ಚಿನ ಆಸಕ್ತಿ, ವ್ಯರ್ಥವಾದ ಸಂಚಾರ-ಇವು ಹತ್ತು ಕಾಮಜನವಾದ ದೋಷಗಳು.

ರೀತಿಯಲ್ಲಿ ಕ್ಷತ್ರಿಯರ ಹತ್ತಿರ ಧನುರ್ಬಾಣಗಳಿದ್ದರೆ ಅವು ಕ್ಷತ್ರಿಯರ ತೇಜಸ್ಸನ್ನೂ ಬಲವನ್ನೂ ಬಹುಶೀಘ್ರವಾಗಿಯೇ ಹೆಚ್ಚಿಸುತ್ತವೆ. ಈ ವಿಧವಾದ ತೇಜೋವೃದ್ಧಿಯೇ ಪ್ರಾಣಿಹಿಂಸೆಗೆ ಉತ್ತೇಜನ ನೀಡುತ್ತದೆ. ಬಹಳ ಹಿಂದೆ ನಡೆದ ಕಥೆಯಿದು. ಸತ್ಯನಿಷ್ಠನೂ ಪರಿಶುದ್ಧನೂ ಆಗಿದ್ದ ತಪಸ್ವಿಯೊಬ್ಬನು ಕಾಡಿನಲ್ಲಿ ತಪಸ್ಸುಮಾಡುತ್ತಿದ್ದನು. ಆ ಅರಣ್ಯವು ಸಂತುಷ್ಟವಾದ ಮೃಗ-ಪಕ್ಷಿಗಳಿಂದ ನಿಬಿಡವಾಗಿದ್ದಿತು. ಘೋರವಾಗಿ ತಪಸ್ಸುಮಾಡುತ್ತಿದ್ದ ಆ ತಪಸ್ವಿಯ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಶಚೀಪತಿಯಾದ ಇಂದ್ರನು ಭಟನೊಬ್ಬನ ವೇಷವನ್ನು ಧರಿಸಿ ಖಡ್ಗಪಾಣಿಯಾಗಿ ಆಶ್ರಮದ ಬಳಿಗೆ ಬಂದನು. ಪುಣ್ಯಕರವಾದ ತಪಸ್ಸಿನಲ್ಲಿ ನಿರತನಾಗಿದ್ದ ತಪಸ್ವಿಯ ಬಳಿಯಲ್ಲಿ ಭಟನ ರೂಪದಲ್ಲಿದ್ದ ಇಂದ್ರನು ತಾನು ತಂದಿದ್ದ ಬಹಳ ಹರಿತವಾಗಿದ್ದ ಉತ್ತಮೋತ್ತಮವಾದ ಕತ್ತಿಯನ್ನು ನ್ಯಾಸರೂಪವಾಗಿಟ್ಟನು.* ತಪಸ್ವಿಯು ಭಟನಿಂದ ಆ ಕತ್ತಿಯನ್ನು ಪಡೆದುಕೊಂಡು ನ್ಯಾಸರೂಪವಾಗಿಟ್ಟಿದ್ದ ಕತ್ತಿಯ ರಕ್ಷಣೆಯಲ್ಲಿಯೇ ಜಾಗರೂಕನಾಗಿರುತ್ತಾ, ರಾಜಭಟನು ತನ್ನ ಮೇಲಿಟ್ಟಿದ್ದ ನಂಬಿಕೆಯನ್ನು ರಕ್ಷಣೆಮಾಡುತ್ತಾ ಕತ್ತಿಯನ್ನು ಹಿಡಿದುಕೊಂಡೇ ಯಾವಾಗಲೂ ಅರಣ್ಯದಲ್ಲಿ ಸಂಚರಿಸತೊಡಗಿದನು.¹ ನ್ಯಾಸಭೂತವಾಗಿದ್ದ ಕತ್ತಿಯನ್ನು ರಕ್ಷಿಸುವುದರಲ್ಲಿಯೇ ನಿರತನಾಗಿದ್ದ ಆ ಮುನಿಯು

---

* ನ್ಯಾಸವಿಧಿ-ಎಂದರೆ ಒಂದು ವಸ್ತುವನ್ನು ಯಾರಾದರೂ ವಂಚಿಸಿ ತೆಗೆದುಕೊಂಡು ಬಿಟ್ಟಾರೆಂಬ ಭಯದಿಂದ ಬೇರೆಯವರ ಮನೆಯಲ್ಲಿ ರಕ್ಷಣಾರ್ಥವಾಗಿ ಇಟ್ಟಿರುವುದು; ಕೆಲಕಾಲಾನಂತರ ಭಯವು ತಪ್ಪಿದಮೇಲೆ ಪುನಃ ಅಲ್ಲಿಂದ ತೆಗೆದುಕೊಂಡುಬರುವುದು-ಇದಕ್ಕೆ ನ್ಯಾಸವಿಧಿ-ಎಂದು ಹೆಸರು.

ರಾಜಚೋರಾದಿಕಭಯಾದ್ದಾಯಾದಾನಾಂ ಚ ವಞ್ಚನಾತ್ । ಸ್ಥಾಪ್ಯತೇಽನ್ಯಗೃಹೇ ದ್ರವ್ಯಂ ನ್ಯಾಸಃ ಸ ಪರಿಕೀರ್ತಿತಃ ॥ ರಾಜರ ಮತ್ತು ಕಳ್ಳ-ಕಾಕರ ಭಯದಿಂದಲೂ, ದಾಯಾದಿಗಳು ವಂಚನೆಮಾಡುವರೆಂಬ ಭಯದಿಂದಲೂ ನಂಬಿಕೆಗೆ ಪಾತ್ರರಾದ ಬೇರೆಯವರ ಮನೆಯಲ್ಲಿ ದ್ರವ್ಯವನ್ನು (ಪದಾರ್ಥವನ್ನು) ಇಟ್ಟಿರುವುದಕ್ಕೆ ನ್ಯಾಸವೆಂದು ಹೆಸರು.

1 ನ್ಯಾಸಭೂತವಾಗಿ ಇಟ್ಟ ಪದಾರ್ಥವನ್ನು ರಕ್ಷಿಸುವುದು ಒಂದು ದೊಡ್ಡ ಹೊಣೆಯೇ ಸರಿ. ಅದನ್ನು ಸರಿಯಾಗಿ ರಕ್ಷಿಸದೇ ಅದನಿಟ್ಟವನು ಬಂದು ಕೇಳಿದಾಗ ಅದನ್ನು ಹಿಂದಿರುಗಿಸಿ ಕೊಡದಿದ್ದರೆ ಅವನು ಮಹಾಪಾತಕಿಯಾಗುತ್ತಾನೆ. ಇದಕ್ಕಾಗಿಯೇ ಈ ಶ್ಲೋಕದಲ್ಲಿ ರಕ್ಷನ್ ಪ್ರತ್ಯಯಮಾತ್ಮನಃ ಎಂದು ಹೇಳಿದ್ದಾರೆ. ಪ್ರತ್ಯಯ ಎಂದರೆ ವಿಶ್ವಾಸ.

ಫಲಗಳನ್ನೂ ಕಂದ-ಮೂಲಗಳನ್ನೂ ತರಲು ಹೋಗುವಾಗಲೂ ಅದನ್ನು ಹಿಡಿದುಕೊಂಡೇ ಹೋಗುತ್ತಿದ್ದನು. ಕತ್ತಿಯಿಲ್ಲದೇ ಅವನು ಎಲ್ಲಿಗೂ ಹೋಗುತ್ತಲೇ ಇರಲಿಲ್ಲ. ಹಾಗೆ ಹೋದೆಡೆಗೆಲ್ಲಾ ಕತ್ತಿಯನ್ನು ಒಯ್ಯುತ್ತಿದ್ದ ಆ ಮುನಿಯು ತಪಸ್ಸುಮಾಡಬೇಕೆಂಬ ಬುದ್ಧಿಯನ್ನೇ ಪೂರ್ಣವಾಗಿ ಪರಿತ್ಯಜಿಸಿ ಅದುವರೆಗೂ ಸಾತ್ತ್ವಿಕವಾಗಿದ್ದ ತನ್ನ ಬುದ್ಧಿಯನ್ನು ತಾಮಸಿಕವಾಗಿ ಪರಿವರ್ತಿಸಿದನು. ಕತ್ತಿಯ ಸಹವಾಸದಿಂದಾಗಿ ಅವನ ಮನಸ್ಸಿನಲ್ಲಿ ಕ್ರೌರ್ಯದ ಭಾವನೆಯುಂಟಾಯಿತು.[1] ಆ ಖಡ್ಗದ ಅನವರತವಾದ ಸಹವಾಸದಿಂದ ಆ ಮುನಿಯು ಪ್ರಮತ್ತನಾಗಿ ಅಧರ್ಮಕ್ರಿಯೆಯಿಂದ ಆಕರ್ಷಿಸಲ್ಪಟ್ಟವನಾಗಿ ಯಾವಾಗಲೂ ಪ್ರಾಣಿಗಳನ್ನೂ ಗಿಡ-ಮರಗಳನ್ನೂ ಕೊಚ್ಚಿಹಾಕುವ ಕ್ರೂರವಾದ ಕಾರ್ಯದಲ್ಲಿಯೇ ಅಭಿರುಚಿಯುಳ್ಳವನಾದನು. ಹೀಗವನು ಋಷಿಗೆ ಅನುಚಿತವಾದ ಕಾರ್ಯಗಳನ್ನು ಮಾಡುತ್ತಾ ಮರಣಾನಂತರದಲ್ಲಿ ನರಕಕ್ಕೆ ಹೋದನು. ಋಷಿಗೆ ಶಸ್ತ್ರದ ಸಹವಾಸವು ದೊರೆತುದಕ್ಕೆ ಕಾರಣ ಮತ್ತು ಅದರ ಪರಿಣಾಮ–ಇವುಗಳನ್ನು ನಿರೂಪಿಸುವ ಈ ವೃತ್ತಾಂತವು ಹಿಂದೆ ನಡೆಯಿತು. ಅಗ್ನಿಸಂಯೋಗವದ್ಧೇತುಃ ಶಸ್ತ್ರಸಂಯೋಗ ಉಚ್ಯತೇ ॥ ಅಗ್ನಿಸಂಯೋಗವು ವಸ್ತುಗಳನ್ನು ವಿಕಾರಗೊಳಿಸಲು ಕಾರಣವಾಗುವಂತೆಯೇ ಶಸ್ತ್ರಸಂಯೋಗವೂ ಶಸ್ತ್ರವನ್ನು ಹಿಡಿದವನ ಮನಸ್ಸನ್ನು ವಿಕಾರಗೊಳಿಸುವುದರಲ್ಲಿ ಕಾರಣವಾಗುತ್ತದೆ.

---

ಪ್ರತ್ಯಯೋಽಧೀನಶಪಥಜ್ಞಾನವಿಶ್ವಾಸಹೇತುಷು [ಅಮರಃ] ರಾಜಭಟನು ತನ್ನಲ್ಲಿಪ್ಪ ವಿಶ್ವಾಸನ್ಯಾಸದ (ತನ್ನ ಮೇಲಿಟ್ಟ ವಿಶ್ವಾಸವನ್ನು) ರಕ್ಷಣೆಮಾಡುತ್ತಾ, ತನ್ನ ತಪಸ್ಸನ್ನೂ ಬಿಟ್ಟು ಅರಣ್ಯದಲ್ಲಿ ತಿರುಗತೊಡಗಿದನು. ತಪಸ್ಸಿನಲ್ಲಿ ಧ್ಯಾನಮಗ್ನನಾದಾಗ ಯಾರಾದರೂ ಕತ್ತಿಯನ್ನು ಅಪಹರಿಸಿಬಿಟ್ಟರೆ ವಿಶ್ವಾಸಘಾತುಕನಾಗಬೇಕಾಗುತ್ತದೆಯಲ್ಲವೇ ?

[1] ಇದಕ್ಕೇ ಸಹವಾಸದೋಷ ಎನ್ನುತ್ತಾರೆ. ಪ್ರಾಣಿಗಳಿಗೆ ಯಾವ ವಿಧವಾದ ಹಿಂಸೆಯನ್ನೂ ಕೊಡಕೂಡದೆಂದಿದ್ದ ತಪಸ್ವಿಯ ಬುದ್ಧಿಯು ಕತ್ತಿಯ ಸಂಗದಿಂದಾಗಿ 'ಹೊಡಿ-ಬಡಿ-ಕಡಿ' ಎಂದು ಪ್ರೇರಿಸತೊಡಗಿತು. ದುಷ್ಟರ, ದುರ್ಜನರ ಸಂಗವನ್ನು ಮಾಡಲೇಕೂಡದೆಂದು ಹೇಳುವುದಕ್ಕೆ ಇದೇ ಕಾರಣ. ಎಷ್ಟೇ ಜಿತೇಂದ್ರಿಯನಾಗಿದ್ದರೂ ದುರ್ಜನರ ಸಹವಾಸಮಾಡಿದರೆ ಅವರ ದೌರ್ಜನ್ಯವು ಇವನಿಗೂ ಸ್ವಲ್ಪವಾದರೂ ಅಂಟದೇ ಇರುವುದಿಲ್ಲ. ಕಾಲಕ್ರಮದಲ್ಲಿ ಜಿತೇಂದ್ರಿಯನಾಗಿದ್ದವನೂ ದುಷ್ಟನೇ ಆಗಿಬಿಡುತ್ತಾನೆ. ಇದಕ್ಕೆ ಈ ಋಷಿಯ ಚರಿತ್ರೆಯು ನಿದರ್ಶನವಾಗಿದೆ.

**ಸ್ನೇಹಾಚ್ಚ ಬಹುಮಾನಾಚ್ಚ ಸ್ಮಾರಯೇ ತ್ವಾಂ ನ ಶಿಕ್ಷಯೇ ॥೨೪॥**

ಪತಿದೇವನೇ ! ನಿನ್ನ ಮೇಲಿನ ಅತಿಶಯವಾದ ಸ್ನೇಹದಿಂದಲೂ ಮತ್ತು ಗೌರವದಿಂದಲೂ ನಾನು ಈ ಕಥೆಯನ್ನು ನಿನ್ನ ಸ್ಮರಣೆಗೆ ತರುತ್ತಿದ್ದೇನೆ. ನಿನಗೆ ಉಪದೇಶ ಮಾಡುತ್ತಿಲ್ಲ.*

**ನ ಕಥಂಚನ ಸಾ ಕಾರ್ಯಾ ಗೃಹೀತಧನುಷಾ ತ್ವಯಾ ।**
**ಬುದ್ಧಿರ್ವೈರಂ ವಿನಾ ಹನ್ತುಂ ರಾಕ್ಷಸಾನ್ದಣ್ಡಕಾಶ್ರಿತಾನ್ ।**
**ಅಪರಾಧಂ ವಿನಾ ಹನ್ತುಂ ಲೋಕಾನ್ವೀರ ನ ಕಾಮಯೇ ॥೨೫॥**

ಧನುರ್ಬಾಣಗಳನ್ನು ಹಿಡಿದು ಅರಣ್ಯದಲ್ಲಿ ಸಂಚರಿಸುವ ನೀನು ನಮ್ಮೊಡನೆ ಯಾವ ವಿಧವಾದ ವೈರವೂ ಇಲ್ಲದಿರುವ ದಂಡಕಾರಣ್ಯವಾಸಿಗಳಾದ ರಾಕ್ಷಸರನ್ನು ಸಂಹರಿಸುವ ವಿಚಾರವನ್ನು ಮಾತ್ರ ಮನಸ್ಸಿನಲ್ಲಿ ಮಾಡಕೂಡದು. ನಮ್ಮ ವಿಷಯದಲ್ಲಿ ಯಾವುದೊಂದು ಅಪರಾಧವನ್ನು ಮಾಡದಿರುವ ಜನರನ್ನು ಸಂಹರಿಸುವುದು ನನಗೆ ಅಷ್ಟಾಗಿ ರುಚಿಸದು.

**ಕ್ಷತ್ರಿಯಾಣಾಂ ತು ವೀರಾಣಾಂ ವನೇಷು ನಿಯತಾತ್ಮನಾಮ್ ।**
**ಧನುಷಾ ಕಾರ್ಯಮೇತಾವದಾರ್ತಾನಾಮಭಿರಕ್ಷಣಮ್ ॥೨೬॥**

ಮನಸ್ಸು ಮತ್ತು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವ ವೀರರಾದ ಕ್ಷತ್ರಿಯರು ಅರಣ್ಯದಲ್ಲಿ ತಮ್ಮ ಧನುಸ್ಸಿನ ಮೂಲಕವಾಗಿ ಆರ್ತರಾದ ಋಷಿಗಳನ್ನು ಸಂರಕ್ಷಣೆಮಾಡಬೇಕು. ಆರ್ತರ ರಕ್ಷಣೆಯೊಂದೇ ಧನುಸ್ಸಿನ ಕಾರ್ಯ. ವೈರಿಗಳಲ್ಲದವರನ್ನು ಹಿಂಸಿಸುವುದು ಧನುಸ್ಸಿನ ಕಾರ್ಯವಲ್ಲ.

**ಕ್ವ ಚ ಶಸ್ತ್ರಂ ಕ್ವ ಚ ವನಂ ಕ್ವ ಚ ಕ್ಷಾತ್ರಂ ತಪಃ ಕ್ವ ಚ ।**
**ವ್ಯಾವಿದ್ಧಮಿದಮಸ್ಮಾಭಿರ್ದೇಶಧರ್ಮಸ್ತು ಪೂಜ್ಯತಾಮ್ ॥೨೭॥**

ಶಸ್ತ್ರವೆಲ್ಲಿ ? ವನವೆಲ್ಲಿ ? ಒಂದಕ್ಕೊಂದಕ್ಕೆ ಸಂಬಂಧವಿರುವುದೇ ? ಕ್ಷಾತ್ರಧರ್ಮವೆಲ್ಲಿ ? ತಪಶ್ಚರಣೆಯೆಲ್ಲಿ ? ಈ ಎರಡಕ್ಕೂ ಯಾವ ಸಂಬಂಧವೂ

* ತ್ವಾಂ ತು ಶಿಕ್ಷಯೇ–ಎಂಬ ಪಾಠಾಂತರವೂ ಇದೆ. ಸ್ನೇಹದಿಂದಲೂ, ನಿನ್ನ ಭಾರ್ಯೆಯೆಂಬ ಬಹುಮಾನದಿಂದಲೂ ನಿನಗೆ ಹಿಂದಿನದನ್ನು ಸ್ಮರಣೆಗೆ ತರುತ್ತೇನೆ ಮತ್ತು ನೀನು ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ಒತ್ತಾಯಿಸುತ್ತೇನೆ – ಎಂದು ಈ ಪಾಠಾಂತರದ ಪ್ರಕಾರ ಅರ್ಥವಾಗುತ್ತದೆ.

ಇಲ್ಲ. ಶಸ್ತ್ರ-ವನ, ಕ್ಷಾತ್ರ-ತಪಸ್ಸು ಇವು ಒಂದಕ್ಕೊಂದು ವಿರುದ್ಧವಾದುವುಗಳು. ಇದನ್ನು ನಾವು ಮಾಡಲು ಹೊರಟಿದ್ದೇವೆ. ಈ ವಿರುದ್ಧಧರ್ಮವನ್ನು ನಾವು ಆಚರಿಸಬಾರದು. ದೇಶಧರ್ಮವನ್ನು ಗೌರವಿಸಬೇಕು. ಇದು ಅರಣ್ಯವಾದುದರಿಂದ ಅದಕ್ಕೆ ಅನುಗುಣವಾಗಿ ವ್ಯವಹರಿಸಬೇಕು. ಹಾಗೆಯೇ ನೀನು ಮಾಡಬೇಕೆಂಬುದು ನನ್ನ ಆಶಯವಾಗಿದೆ.

ತದಾರ್ಯ ಕಲುಷಾ ಬುದ್ಧಿ ರ್ಜಾಯತೇ ಶಸ್ತ್ರಸೇವನಾತ್ ।
ಪುನರ್ಗತ್ವಾ ತ್ವಯೋಧ್ಯಾಯಾಂ ಕ್ಷತ್ರಧರ್ಮಂ ಚರಿಷ್ಯಸಿ ॥೨೮॥

ಆರ್ಯನೇ! ಶಸ್ತ್ರಗಳ ಸಹವಾಸದಿಂದ ಕಲ್ಮಷವಾದ ಬುದ್ಧಿಯು ಹುಟ್ಟುತ್ತದೆ. ಆದರೆ ಪೂರ್ಣವಾಗಿ ಶಸ್ತ್ರಸಂನ್ಯಾಸವನ್ನೇ ಮಾಡುವಂತೆ ನಾನು ಹೇಳುವುದಿಲ್ಲ. ತಪಸ್ವಿಗಳಿರುವ ಅರಣ್ಯದಲ್ಲಿ ಶಸ್ತ್ರಾಸ್ತ್ರಗಳ ಆವಶ್ಯಕತೆಯಿಲ್ಲ. ಇಷ್ಟೇ ನನ್ನ ಅಭಿಪ್ರಾಯ. ಅಯೋಧ್ಯೆಗೆ ಹಿಂದಿರುಗಿದ ನಂತರ ಕುಲಕ್ರಮಾಗತವಾದ ಕ್ಷತ್ರಧರ್ಮವನ್ನೇ ನೀನು ಅನುಸರಿಸಬಹುದು.

ಅಕ್ಷಯಾ ತು ಭವೇತ್ಪ್ರೀತಿಃ ಶ್ವಶ್ರೂಶ್ವಶುರಯೋರ್ಮಮ ।
ಯದಿ ರಾಜ್ಯಂ ಪರಿತ್ಯಜ್ಯ ಭವೇಸ್ತ್ವಂ ನಿರತೋ ಮುನಿಃ ॥೨೯॥

ಒಂದು ವೇಳೆ ನೀನು ರಾಜ್ಯವನ್ನು ಸಂಪೂರ್ಣವಾಗಿ ತ್ಯಾಗಮಾಡಿ ಮುನಿವೃತ್ತಿಯಲ್ಲೇ ನಿರತನಾಗಿದ್ದು ಬಿಟ್ಟರೆ ನನ್ನ ಅತ್ತೆಮಾವಂದಿರಿಗೆ (ಕೈಕೇಯಿಗೆ ಸ್ವರ್ಗದಲ್ಲಿರುವ ಮಾವನಾದ ದಶರಥನಿಗೆ) ನಿನ್ನ ವಿಷಯದಲ್ಲಿ ಎಂದೆಂದಿಗೂ ಅಳಿಸಿಹೋಗದ ಪ್ರೀತಿಯೇ ಉಂಟಾದೀತು.*

ಧರ್ಮಾದರ್ಥಃ ಪ್ರಭವತಿ ಧರ್ಮಾತ್ಪ್ರಭವತೇ ಸುಖಮ್ ।
ಧರ್ಮೇಣ ಲಭತೇ ಸರ್ವಂ ಧರ್ಮಸಾರಮಿದಂ ಜಗತ್ ॥೩೦॥

*ಈ ಶ್ಲೋಕವನ್ನು ಎರಡು ಬಗೆಯಾಗಿ ಸಮನ್ವಯ ಮಾಡಬಹುದಾಗಿದೆ. "ನೀನು ಯಾರ ಗೊಡವೆಗೂ ಹೋಗದೇ ದೇಶಧರ್ಮಾನುಸಾರವಾಗಿ ಮುನಿವೃತ್ತಿಯಲ್ಲೇ ಇದ್ದು ಬಿಟ್ಟರೆ ಅತ್ತೆಯಾದ ಕೌಸಲ್ಯೆಗೂ ಸಂತೋಷವಾಗುತ್ತದೆ. ಮಾವನಾದ ದಶರಥನಿಗೂ ಸಂತೋಷವಾಗುತ್ತದೆ. ಏಕೆಂದರೆ: ಮುನಿವೃತ್ತಿಯಲ್ಲಿದ್ದು ಬಿಟ್ಟರೆ ಯಾವ ಉಪಟಳವೂ ಇಲ್ಲದೆ ಸುಖವಾಗಿರುವೆಯೆಂದು ಕೌಸಲ್ಯೆಯು ಭಾವಿಸುತ್ತಾಳೆ. ಮಗನು ಮುನಿವೃತ್ತಿಯಲ್ಲಿರುವುದರಿಂದ ತನಗೆ ಸದ್ಗತಿಯು ಸಿಕ್ಕುವುದೆಂದು ದಶರಥನು ಭಾವಿಸುತ್ತಾನೆ."

ಧರ್ಮದಿಂದಲೇ ಐಶ್ವರ್ಯವು ಹುಟ್ಟುತ್ತದೆ. ಧರ್ಮದಿಂದಲೇ ಸುಖವೂ ಹುಟ್ಟುತ್ತದೆ. ಧರ್ಮದಿಂದಲೇ ಎಲ್ಲವೂ ಲಭಿಸುತ್ತದೆ. ಈ ಜಗತ್ತೀ ಧರ್ಮದ ಸಾರವಾಗಿದೆ.

ಆತ್ಮಾನಂ ನಿಯಮೈಸ್ತೈಸ್ತೈಃ ಕರ್ಶಯಿತ್ವಾ ಪ್ರಯತ್ನತಃ ।
ಪ್ರಾಪ್ಯತೇ ನಿಪುಣೈರ್ಧರ್ಮೋ ನ ಸುಖಾಲ್ಲಭ್ಯತೇ ಸುಖಮ್ ॥೩೧॥

ನಿಪುಣರಾದವರು ಎಂದರೆ ಕೃಚ್ಛ್ರ-ಚಾಂದ್ರಾಯಣಾದಿ ತಪಸ್ಸುಗಳ ಪ್ರಯೋಗ-ವಿಧಿಗಳನ್ನು ತಿಳಿದವರು ಆಯಾ ಕರ್ಮಗಳಲ್ಲಿ ವಿಧಿಸಿರುವ ನಿಯಮಗಳನ್ನು ಪ್ರಯತ್ನಪೂರ್ವಕವಾಗಿ ಪರಿಪಾಲಿಸುತ್ತಾ ಶರೀರವನ್ನು ಕ್ಲೇಶಗೊಳಿಸಿ ಧರ್ಮವನ್ನು ಅಥವಾ ಪುಣ್ಯವನ್ನು ಸಂಪಾದಿಸುತ್ತಾರೆ. ಈ ಧರ್ಮಸಂಗ್ರಹದಿಂದ ಅಥವಾ ಪುಣ್ಯಸಂಗ್ರಹದಿಂದ ಅವರಿಗೆ ಮುಂದೆ ಶಾಶ್ವತವಾದ ಸುಖವು ಲಭಿಸುತ್ತದೆ. ಯಾವ ವಿಧವಾದ ತಪಸ್ಸನ್ನೂ ಮಾಡದೇ ಕೇವಲ ಐಹಿಕಸುಖಕ್ಕೆ ಮಾರುಹೋಗಿ ಕ್ಷಣಿಕವಾದ ಅಂತಹ ಸುಖವನ್ನು ಅನುಭವಿಸುವವರಿಗೆ ಮುಂದೆ ಖಂಡಿತವಾಗಿಯೂ ಶಾಶ್ವತವಾದ ಸುಖವು ಲಭಿಸುವುದಿಲ್ಲ.*

ಸೌಮ್ಯನೇ! ಪರಿಶುದ್ಧವಾದ ಮನಸ್ಸಿನಿಂದ ಕೂಡಿದವನಾಗಿ ಈ ತಪೋವನದಲ್ಲಿ ನಿತ್ಯವೂ ಧರ್ಮವನ್ನಾಚರಿಸು. ಮೂರು ಲೋಕಗಳಲ್ಲಿಯೂ ಇರುವ ಪುರುಷಾರ್ಥಗಳೂ-ಅವುಗಳ ಸಾಧನಭೂತವಾದ ಕಲಾಪಗಳೂ ನಿನಗೆ ಯಥಾವತ್ತಾಗಿ ತಿಳಿದಿವೆ.

ಸ್ತ್ರೀಚಾಪಲಾದೇತದುದಾಹೃತಂ ಮೇ
ಧರ್ಮಂ ಚ ವಕ್ತುಂ ತವ ಕಃ ಸಮರ್ಥಃ ।

---

*ಸುಖವು ಸಿಕ್ಕಬೇಕಾದರೆ ಕಷ್ಟಪಟ್ಟು ಧರ್ಮಕಾರ್ಯಗಳನ್ನು ಮಾಡಬೇಕು. ಪುಣ್ಯವನ್ನು ಸಂಪಾದಿಸಬೇಕು. ಕೇವಲ ಸುಖಾನುಭಾವಿಗಳಿಗೆ ಹಿಂದೆ ಮಾಡಿದ್ದ ಅಲ್ಪ-ಸ್ವಲ್ಪ ಪುಣ್ಯವು ಕ್ಷಯಿಸಿ ಮುಂದೆ ದುಃಖಕ್ಕೆ ಕಾರಣವಾಗುವುದೇ ಹೊರತು ಸುಖದಿಂದ ಸುಖವು ಖಂಡಿತವಾಗಿಯೂ ಸಿಕ್ಕುವುದಿಲ್ಲ. ಹಣವನ್ನು ಕಷ್ಟಪಟ್ಟು ಸಂಪಾದಿಸಬೇಕು. ಸಂಪಾದಿಸಿದ ಹಣದಿಂದ ಸುಖಪಡಬೇಕು. ಅದು ಹೊರತಾಗಿ ಕಷ್ಟವಾಗುವುದೆಂಬ ಭಯದಿಂದ ಸಂಪಾದನೆಯನ್ನೇ ಮಾಡಲು ಹೋಗದಿದ್ದರೆ ಸುಖವು ಸಿಕ್ಕುವುದಿಲ್ಲ.

ವಿಚಾರ್ಯ ಬುದ್ಧ್ಯಾ ತು ಸಹಾನುಜೇನ
ಯದ್ರೋಚತೇ ತತ್ಕುರು ಮಾ ಚಿರೇಣ ॥೩೩॥

ಸ್ತ್ರೀಸಹಜವಾದ ಚಾಪಲ್ಯದಿಂದ ಈ ಮಾತುಗಳನ್ನು ನಾನು ನಿನಗೆ ಹೇಳುತ್ತಿದ್ದೇನೆ. ಧರ್ಮಮೂರ್ತಿಯೇ ಆಗಿರುವ ನಿನಗೆ ಧರ್ಮೋಪದೇಶ ಮಾಡಲು ಯಾರು ತಾನೇ ಸಮರ್ಥರು? ನಾನು ಹೇಳಿರುವುದನ್ನು ನಿನ್ನ ಬುದ್ಧಿಯಿಂದ ವಿಚಾರಮಾಡು. ತಮ್ಮನೊಡನೆಯೂ ಸಮಾಲೋಚಿಸು. ನಿನಗೆ ಯಾವುದು ಉಚಿತವೆನಿಸುವುದೋ ಅದನ್ನು ತಡಮಾಡದೇ ಮಾಡು."

೯ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೧೦ನೆಯ ಸರ್ಗ

## ಶ್ರೀರಾಮನು ಋಷಿಗಳ ರಕ್ಷಣೆಗಾಗಿ ರಾಕ್ಷಸರನ್ನು ವಧಿಸಲು ಮಾಡಿರುವ ಪ್ರತಿಜ್ಞೆಯನ್ನು ಪುನಃ ದೃಢಪಡಿಸಿದುದು

ವಾಕ್ಯಮೇತತ್ತು ವೈದೇಹ್ಯಾ ವ್ಯಾಹೃತಂ ಭರ್ತೃಭಕ್ತಯಾ ।
ಶ್ರುತ್ವಾ ಧರ್ಮೇ ಸ್ಥಿತೋ ರಾಮಃ ಪ್ರತ್ಯುವಾಚಾಥ
ಮೈಥಿಲೀಮ್ ॥೧॥

ಪತಿಭಕ್ತೆಯಾದ ವೈದೇಹಿಯು ಹೇಳಿದ ಮಾತುಗಳನ್ನು ಕೇಳಿ ಧರ್ಮದಲ್ಲಿಯೇ ನೆಲೆಗೊಂಡಿದ್ದ ಶ್ರೀರಾಮನು ಜಾನಕಿಗೆ ಹೇಳಿದನು :

" ಧರ್ಮವನ್ನು ತಿಳಿದವಳೇ! ಜನಕಪುತ್ರಿ! ಸ್ನೇಹಪರಳಾದ ನೀನು ಹಿತಕರವಾದ ಮಾತುಗಳನ್ನೇ ಹೇಳಿರುವೆ. ಕುಲದ ಹಿರಿಮೆಯನ್ನು ಪ್ರಸಿದ್ಧಿಪಡಿಸುವ ನಿನ್ನಂತಹ ರಾಜಪುತ್ರಿಗೆ ಈ ಮಾತುಗಳು ಅನುರೂಪವಾಗಿಯೇ ಇವೆ.

ನೀನೇ ಹೇಳಿರುವ ಒಂದು ಮಾತನ್ನು ನಾನು ಹೇಳಬಯಸುತ್ತೇನೆ. 'ಧನುಷಾ ಕಾರ್ಯಮೇತಾವದಾರ್ತಾನಾಮಭಿರಕ್ಷಣಮ್–ಧನುಸ್ಸಿನ ಕಾರ್ಯವೆಂದರೆ ಆರ್ತರ ರಕ್ಷಣೆಯು ಮಾತ್ರ. ಆರ್ತರ ರಕ್ಷಣೆಗೆ ಮಾತ್ರವೇ ಧನುಸ್ಸನ್ನು ಉಪಯೋಗಿಸಬೇಕು'–ಎಂದು ನೀನೇ ಹೇಳಿರುವೆಯಲ್ಲವೇ?

ಕ್ಷತ್ರಿಯೈರ್ಧಾರ್ಯತೇ ಚಾಪೋ ನಾರ್ತಶಬ್ದೋ ಭವೇದಿತಿ ॥೩॥

ರಾಜ್ಯದಲ್ಲಿ ಆರ್ತನಾದವು ಎಲ್ಲಿಯೂ ಕೇಳಿಬರಕೂಡದೆಂಬ ಕಾರಣ ದಿಂದಲೇ ಕ್ಷತ್ರಿಯರು ಧನುಸ್ಸನ್ನು ಸದಾ ಧರಿಸಿರುತ್ತಾರೆ. ದಂಡಕಾರಣ್ಯ ವಾಸಿಗಳಾದ ಕಠೋರವ್ರತನಿಷ್ಠರಾದ ಮುನಿಗಳು ಈಗ ಆರ್ತರಾಗಿದ್ದಾರೆ. ರಾಕ್ಷಸರ ಪೀಡೆಗೆ ಗುರಿಯಾಗಿದ್ದಾರೆ. ಅವರು ತಾವಾಗಿಯೇ ಬಂದು ಶರಣಾ ಗತರಾಗಿ ರಕ್ಷಕನಾಗಬೇಕೆಂದು ನನ್ನನ್ನು ಪ್ರಾರ್ಥಿಸಿದರು. ಇವರು ಕಂದ-ಮೂಲ-ಫಲಗಳನ್ನು ತಿನ್ನುತ್ತಾ ಧರ್ಮನಿರತರಾಗಿ ಹಲವಾರು ವರ್ಷಗಳಿಂದ ಆ ಅರಣ್ಯದಲ್ಲಿ ವಾಸಮಾಡುತ್ತಿದ್ದಾರೆ. ಆದರೆ ಈಗ ಅವರು ಕ್ರೂರಕರ್ಮಿ ಗಳಾದ ರಾಕ್ಷಸರಿಂದ ಭಯಗೊಳಿಸಲ್ಪಟ್ಟು ಸುಖವೆಂಬುದನ್ನೇ ಕಾಣದವರಾ ಗಿದ್ದಾರೆ. ಯಾವ ವಿಧವಾದ ಉಪದ್ರವವೂ ಇಲ್ಲದೇ ತಪಸ್ಸನ್ನು ಮಾಡಿ ಕೊಂಡಿರಲು ಅವರಿಗೆ ಸಾಧ್ಯವಾಗುತ್ತಿಲ್ಲ. ವರ್ಷಪೂರ್ತಿಯಾಗಿ ಆಯಾ ಕಾಲಗಳಲ್ಲಿ ಮಾಡಬೇಕಾದ ನಿಯಮಾನುಷ್ಠಾನಗಳಲ್ಲಿ ನಿರತರಾಗಿರುವ ಮುನಿ ಗಳನ್ನು ನರಮಾಂಸಭಕ್ಷಣದಿಂದಲೇ ಜೀವಿಸುತ್ತಿರುವ ಭಯಂಕರರಾದ ರಾಕ್ಷ ಸರು ತಿಂದುಹಾಕುತ್ತಿದ್ದಾರೆ. ಮುಂದೆ ರಾಕ್ಷಸರಿಗೆ ಆಹಾರವಾಗಲಿರುವ ಬ್ರಾಹ್ಮಣಶ್ರೇಷ್ಠರು ನನ್ನ ಬಳಿಗೆ ಬಂದು ರಾಕ್ಷಸರಿಂದ ರಕ್ಷಿಸಿ ಕಾಪಾಡು ವಂತೆ ಪ್ರಾರ್ಥಿಸಿದರು. ಬ್ರಾಹ್ಮಣರ ಮುಖದಿಂದ ಹೊರಟ ಕರುಣಾಜನಕ ವಾದ ಮಾತುಗಳನ್ನು ಕೇಳಿ ಅವರ ಕಾಲುಗಳನ್ನು ಮುಟ್ಟಿ ನಮಸ್ಕರಿಸಿ ಹೇಳಿದೆನು :

ಪ್ರಸೀದನ್ತು ಭವನ್ತೋ ಮೇ ಹ್ರೀರೇಷಾ ಹಿ ಮಮಾತುಲಾ ।
ಯದೀದೃಶೈರಹಂ ವಿಪ್ರೈರುಪಸ್ಥೇಯೈರುಪಸ್ಥಿತಃ ।
ಕಿಂ ಕರೋಮೀತಿ ಚ ಮಯಾ ವ್ಯಾಹೃತಂ ದ್ವಿಜಸಂನಿಧೌ ॥೯॥

"ಬ್ರಾಹ್ಮಣೋತ್ತಮರೇ! ಪ್ರಸನ್ನರಾಗಿರಿ. ಯಾರ ಬಳಿಗೆ ನಾನೇ ಹೋಗಿ ಅವರ ಯೋಗ-ಕ್ಷೇಮಗಳನ್ನು ವಿಚಾರಿಸುವುದು ನನ್ನ ಕರ್ತವ್ಯವಾ ಗಿದ್ದಿತೋ-ಅಂತಹ ಬ್ರಾಹ್ಮಣಶ್ರೇಷ್ಠರೇ ಇಂದು ನನ್ನ ಬಳಿಗೆ ಬಂದು ರಕ್ಷಣೆ ಯನ್ನು ಯಾಚಿಸುತ್ತಿದ್ದಾರೆ. ಇದರಿಂದಾಗಿ ನನಗೆ ಬಹಳ ನಾಚಿಕೆಯಾಗಿದೆ.

ನಾನು ನಿಮಗಾಗಿ ಯಾವ ಕಾರ್ಯವನ್ನು ಮಾಡಲಿ?–ಎಂಬುದನ್ನು ಒಡನೆಯೇ ಹೇಳಿರಿ."

ನನ್ನ ಮಾತನ್ನು ಕೇಳಿ ಅಲ್ಲಿಗೆ ಆಗಮಿಸಿದ್ದ ಋಷಿಗಳೆಲ್ಲರೂ ಒಕ್ಕೊರಲಿನಿಂದ ಹೇಳಿದರು :

ರಾಕ್ಷಸೈರ್ದಣ್ಡಕಾರಣ್ಯೇ ಬಹುಭಿಃ ಕಾಮರೂಪಿಭಿಃ ।
ಅರ್ದಿತಾಃ ಸ್ಮ ಭೃಶಂ ರಾಮ ಭವಾನ್ನಸ್ತತ್ರ ರಕ್ಷತು ॥೧೧॥

ಹೋಮಕಾಲೇಷು ಸಂಪ್ರಾಪ್ತಾಃ ಪರ್ವಕಾಲೇಷು ಚಾನಘ ।
ಧರ್ಷಯನ್ತಿ ಸುದುರ್ಧರ್ಷಾ ರಾಕ್ಷಸಾಃ ಪಿಶಿತಾಶನಾಃ ॥೧೨॥

ರಾಕ್ಷಸೈರ್ಧರ್ಷಿತಾನಾಂ ಚ ತಾಪಸಾನಾಂ ತಪಸ್ವಿನಾಮ್ ।
ಗತಿಂ ಮೃಗಯಮಾಣಾನಾಂ ಭವಾನ್ನಃ ಪರಮಾ ಗತಿಃ ॥೧೩॥

ಕಾಮಂ ತಪಃಪ್ರಭಾವೇಣ ಶಕ್ತಾ ಹನ್ತುಂ ನಿಶಾಚರಾನ್ ।
ಚಿರಾರ್ಜಿತಂ ನ ಚೇಚ್ಛಾಮಸ್ತಪಃ ಖಣ್ಡಯಿತುಂ ವಯಮ್ ॥೧೪॥

ಬಹುವಿಘ್ನಂ ತಪೋ ನಿತ್ಯಂ ದುಶ್ಚರಂ ಚೈವ ರಾಘವ ।
ತೇನ ಶಾಪಂ ನ ಮುಞ್ಚಾಮೋ ಭಕ್ಷ್ಯಮಾಣಾಶ್ಚ ರಾಕ್ಷಸೈಃ ॥೧೫॥

" ರಾಘವ ! ನಾನಾವಿಧವಾದ ಆಕಾರಗಳನ್ನು ಹೊಂದುವ ಸಾಮರ್ಥ್ಯವುಳ್ಳ ಕಾಮರೂಪಿಗಳಾದ ರಾಕ್ಷಸರು ನಮ್ಮನ್ನು ಬಹಳವಾಗಿ ಪೀಡಿಸುತ್ತಿದ್ದಾರೆ. ಈ ಸಮಯದಲ್ಲಿ ನೀನೇ ನಮ್ಮನ್ನು ರಕ್ಷಿಸಬೇಕಾಗಿದೆ. ಪರ್ವಕಾಲಗಳಲ್ಲಿ ಹೋಮಮಾಡಬೇಕಾದ ಕಾಲವು ಪ್ರಾಪ್ತವಾದಾಗ ಮಾಂಸಾಶಿಗಳಾದ, ಎದುರಿಸಲು ದುಸ್ಸಾಧ್ಯರಾದ ರಾಕ್ಷಸರು ನಮ್ಮನ್ನು ಭಯಪಡಿಸುತ್ತಾರೆ. ಅವರ ಭಯದಿಂದಾಗಿ ನಾವು ಹೋಮಮಾಡುವುದನ್ನೇ ನಿಲ್ಲಿಸಬೇಕಾಗುತ್ತದೆ. ರಾಕ್ಷಸರಿಗೆ ಭಯಪಟ್ಟು, ರಕ್ಷಕರನ್ನು ಹುಡುಕಿಕೊಂಡು ತಿರುಗುತ್ತಿರುವ ತಪೋನಿಷ್ಠರಾದ ತಪಸ್ವಿಗಳಿಗೆ ನೀನೇ ಪರಮಶರಣ್ಯನು. ರಾಮಭದ್ರ ! ನಾವು ನಮ್ಮ ತಪಃಪ್ರಭಾವದಿಂದ ಆ ಎಲ್ಲ ರಾಕ್ಷಸರನ್ನೂ ಸಂಹರಿಸಲು ಸಮರ್ಥರಾಗಿರುವೆವು. ಆದರೆ ಬಹಳ ಕಾಲದಿಂದ ಕಷ್ಟಪಟ್ಟು ಸಂಪಾದಿಸಿರುವ ತಪಸ್ಸಿನ ಫಲವನ್ನು ಹಾಳುಮಾಡಿಕೊಳ್ಳಲು ನಾವು ಬಯಸುವುದಿಲ್ಲ. ತಪಸ್ಸಿಗೆ ವಿಘ್ನಗಳು ಆಗಿಂದಾಗ್ಗೆ ಒದಗಿ ಬರುತ್ತಲೇ ಇರುತ್ತವೆ. ಮೇಲಾಗಿ

ಆಚರಿಸಲು ಕೂಡ ಬಹಳ ಕಷ್ಟಸಾಧ್ಯವಾಗುತ್ತದೆ. ಈ ಕಾರಣಗಳಿಂದಾಗಿ ರಾಕ್ಷಸರು ನಮ್ಮನ್ನು ತಿನ್ನಲು ಬಂದರೂ ತಿಂದೇ ಹಾಕಿದರೂ ನಾವು ಅವರಿಗೆ ಶಾಪವನ್ನು ಕೊಡುವುದಿಲ್ಲ. ಪ್ರಾಣವನ್ನಾದರೂ ಪರಿತ್ಯಜಿಸುವೆವೇ ಹೊರತು ಕಷ್ಟಾರ್ಜಿತವಾದ ತಪಸ್ಸಿನ ಫಲವನ್ನು ಮಾತ್ರ ವ್ಯರ್ಥಮಾಡಿಕೊಳ್ಳುವುದಿಲ್ಲ. ಆದುದರಿಂದ ದಂಡಕಾರಣ್ಯದಲ್ಲಿ ವಾಸಮಾಡುತ್ತಿರುವ ರಾಕ್ಷಸರಿಂದ ಸತತವಾಗಿ ಪೀಡಿಸಲ್ಪಡುತ್ತಿರುವ ನಮ್ಮನ್ನು ನಿನ್ನ ತಮ್ಮನೊಡಗೂಡಿ ಸಂರಕ್ಷಿಸು. ಅರಣ್ಯದಲ್ಲಿರುವ ನಮಗೆ ನೀನೇ ನಾಥನು."

ಪ್ರಿಯೇ ! ನಾನು ಮುನಿಗಳ ಈ ಮಾತುಗಳನ್ನು ಸಮಗ್ರವಾಗಿ ಕೇಳಿದನಂತರವೇ ದಂಡಕಾರಣ್ಯವಾಸಿಗಳಾದ ಮುನಿಗಳನ್ನು ರಕ್ಷಿಸುವುದಾಗಿ ಮಾತುಕೊಟ್ಟೆನು.

**ಸಂಶ್ರುತ್ಯ ಚ ನ ಶಕ್ಷ್ಯಾಮಿ ಜೀವಮಾನಃ ಪ್ರತಿಶ್ರವಮ್ ।**
**ಮುನೀನಾಮನ್ಯಥಾ ಕರ್ತುಂ ಸತ್ಯಮಿಷ್ಟಂ ಹಿ ಮೇ ಸದಾ ॥೧೮॥**

ಮಾತು ಕೊಟ್ಟನಂತರ ನಾನು ಬದುಕಿರುವವರೆಗೂ ಋಷಿಗಳಿಗೆ ಕೊಟ್ಟಿರುವ ಮಾತನ್ನು ಮೀರಿ ನಡೆಯಲು ಸಾಧ್ಯವಿಲ್ಲ. ನನಗೆ ಯಾವಾಗಲೂ ಸತ್ಯದಿಂದ ನಡೆದುಕೊಳ್ಳುವುದೇ ಇಷ್ಟವಾಗಿದೆ.

**ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸಲಕ್ಷ್ಮಣಾಮ್ ।**
**ನ ತು ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ॥೧೯॥**

ವೈದೇಹಿ ! ನಾನು ನನ್ನ ಪ್ರಾಣಗಳನ್ನಾದರೂ ತ್ಯಜಿಸುವೆನು. ಪ್ರಾಣಪ್ರಿಯಳಾದ ನಿನ್ನನ್ನಾದರೂ ಪರಿತ್ಯಜಿಸುವೆನು. ಲಕ್ಷ್ಮಣನನ್ನಾದರೂ ಪರಿತ್ಯಜಿಸುವೆನು. ಆದರೆ ಮಾತುಕೊಟ್ಟನಂತರ ಅದಕ್ಕೆ ಬದಲಾಗಿ ನಾನೆಂದಿಗೂ ನಡೆದುಕೊಳ್ಳುವುದಿಲ್ಲ. ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರಿಗೆ ಕೊಟ್ಟಿರುವ ಮಾತನ್ನು ಹಿಂದೆಗೆದುಕೊಳ್ಳುವ ಪ್ರಶ್ನೆಯೇ ಇಲ್ಲ.

**ತದವಶ್ಯಂ ಮಯಾ ಕಾರ್ಯಮೃಷೀಣಾಂ ಪರಿಪಾಲನಮ್ ।**
**ಅನುಕ್ತೇನಾಪಿ ವೈದೇಹಿ ಪ್ರತಿಜ್ಞಾಯ ತು ಕಿಂ ಪುನಃ ॥೨೦॥**

ಅರಣ್ಯದಲ್ಲಿರುವ ಋಷಿಗಳ ಸಂರಕ್ಷಣೆಯನ್ನು ಕುರಿತು ನನಗೆ ಯಾರೂ ಹೇಳಬೇಕಾಗಿಲ್ಲ. ಅವರೂ ಕೇಳಿಕೊಳ್ಳಬೇಕಾಗಿಲ್ಲ. ಅರಣ್ಯದಲ್ಲಿ ತಪಸ್ಸನ್ನು ಮಾಡುತ್ತಿರುವ ಋಷಿಗಳನ್ನು ಪರಿಪಾಲಿಸುವುದು ರಾಜನಿಗೆ ಅತಿಮುಖ್ಯವಾದ

ಕರ್ತವ್ಯವೇ ಆಗಿರುವುದು. ಹೀಗಿರುವಾಗ ಋಷಿಗಳು ನನ್ನನ್ನು ರಕ್ಷಣೆಗಾಗಿ ಪ್ರಾರ್ಥಿಸಿ ನಾನವರನ್ನು ರಾಕ್ಷಸರಿಂದ ರಕ್ಷಿಸುವೆನೆಂದು ಪ್ರತಿಜ್ಞೆಮಾಡಿರುವಾಗ ಹೇಳುವುದೇನಿದೆ ?

ನನ್ನ ಮೇಲಿನ ಸ್ನೇಹದಿಂದಲೂ ಸೌಹಾರ್ದದಿಂದಲೂ ನೀನು ಈ ಮಾತುಗಳನ್ನಾಡಿರುವೆ. ನಿನ್ನ ಮಾತಿನಿಂದ ನನಗೆ ಸಂತೋಷವಾಗಿದೆ. **ನ ಹ್ಯನಿಷ್ಟೋಽನುಶಿಷ್ಯತೇ**–ಆತ್ಮೀಯರಲ್ಲದವರಿಗೆ ಯಾರೂ ಉಪದೇಶಿಸಲು ಹೋಗುವುದಿಲ್ಲ. ನಾನು ನಿನಗೆ ಬಹಳ ಇಷ್ಟನೂ ಪ್ರಿಯನೂ ಆಗಿರುವುದರಿಂದಲೇ ಈ ಮಾತುಗಳನ್ನು ನೀನು ಆಡಿರುವೆ. ನೀನು ಹೇಳಿರುವ ಮಾತು ನಿನಗೂ–ನೀನು ಹುಟ್ಟಿರುವ ವಂಶಕ್ಕೂ ಅನುರೂಪವಾಗಿಯೇ ಇದೆ. ನನ್ನ ಮೇಲಿಟ್ಟಿರುವ ಪ್ರೀತಿಗೂ ಅನುಗುಣವಾಗಿದೆ. ನಾನು ಪಾಲಿಸತಕ್ಕ ಧರ್ಮದಲ್ಲಿ ನೀನೂ ಪಾಲ್ಗೊಳ್ಳುವವಳು. ಆದುದರಿಂದಲೇ ನೀನು ನನ್ನ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯಳಾಗಿರುವೆ."

ಮಹಾತ್ಮನಾದ ಧನುಷ್ಪಾಣಿಯಾದ ಶ್ರೀರಾಮನು ಪ್ರಿಯತಮೆಯಾದ ಮೈಥಿಲಿಗೆ ಹೀಗೆ ಸಮಾಧಾನವನ್ನು ಹೇಳಿ, ರಮ್ಯವಾಗಿದ್ದ ತಪೋವನಗಳ ಕಡೆಗೆ ಸೀತಾ-ಲಕ್ಷ್ಮಣರೊಡನೆ ಪ್ರಯಾಣಮಾಡಿದನು.

೧೦ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೧೧ನೆಯ ಸರ್ಗ

## ಪಂಚಾಪ್ಸರಸ್ತೀರ್ಥಗಳ ಕಥೆ : ಮಾಂಡಕರ್ಣಿಮುನಿಯ ಉಪಾಖ್ಯಾನ : ವಿಧ-ವಿಧವಾದ ಆಶ್ರಮಗಳನ್ನು ಸಂದರ್ಶಿಸಿ ರಾಮನು ಸುತೀಕ್ಷ್ಣರ ಆಶ್ರಮಕ್ಕೆ ಹಿಂದಿರುಗಿದುದು : ಸ್ವಲ್ಪಕಾಲ ಅಲ್ಲಿಯೇ ತಂಗಿದ್ದು ಸುತೀಕ್ಷ್ಣರ ಅನುಜ್ಞೆಯನ್ನು ಪಡೆದು ಅಗಸ್ತ್ಯರ ಆಶ್ರಮಕ್ಕೆ ಸೀತಾ-ಲಕ್ಷ್ಮಣರೊಡನೆ ತೆರಳಿದುದು : ಅಗಸ್ತ್ಯರ ಪ್ರಭಾವದ ವರ್ಣನೆ

**ಅಗ್ರತಃ ಪ್ರಯಯೌ ರಾಮಃ ಸೀತಾ ಮಧ್ಯೇ ಸುಮಧ್ಯಮಾ ।**
**ಪೃಷ್ಠತಸ್ತು ಧನುಷ್ಪಾಣಿರ್ಲಕ್ಷ್ಮಣೋಽನುಜಗಾಮ ಹ ॥೧॥**

ರಮ್ಯವಾಗಿದ್ದ ತಪೋವನಗಳ ಕಡೆಗೆ ಪ್ರಯಾಣಹೊರಟಾಗ ಮುಂದು

ಗಡೆ ಶ್ರೀರಾಮನು ಹೋಗುತ್ತಿದ್ದನು. ಮಧ್ಯದಲ್ಲಿ ಸುಶೋಭನೆಯಾದ ಸೀತಾದೇವಿಯೂ, ಅವರಿಬ್ಬರನ್ನು ಅನುಸರಿಸಿ ಹಿಂದುಗಡೆ ಧನುಷ್ಪಾಣಿಯಾದ ಲಕ್ಷ್ಮಣನೂ ಹೋಗುತ್ತಿದ್ದರು.

ರಾಮ-ಲಕ್ಷ್ಮಣರಿಬ್ಬರೂ ಹಲವಾರು ಪರ್ವತಗಳ ತಪ್ಪಲುಪ್ರದೇಶಗಳನ್ನೂ, ಕಾಡುಗಳನ್ನೂ, ನಾನಾವಿಧವಾದ ಮತ್ತು ರಮ್ಯವಾದ ನದಿಗಳನ್ನೂ ನೋಡುತ್ತಾ ಸೀತೆಯೊಡನೆ ಪ್ರಯಾಣಮಾಡುತ್ತಿದ್ದರು. ನದಿಯ ಮಳಲಿನಲ್ಲಿ ಸಂಚರಿಸುತ್ತಿದ್ದ ಸಾರಸಪಕ್ಷಿಗಳನ್ನೂ, ಚಕ್ರವಾಕಪಕ್ಷಿಗಳನ್ನೂ, ಕಮಲಪುಷ್ಪಗಳಿಂದಲೂ – ನೀರುಹಕ್ಕಿಗಳಿಂದಲೂ ಕೂಡಿದ್ದ ಸರೋವರಗಳನ್ನೂ ನೋಡುತ್ತಾ ರಾಮ-ಲಕ್ಷ್ಮಣ-ಸೀತೆಯರು ಪ್ರಯಾಣಮಾಡುತ್ತಿದ್ದರು. ಗುಂಪು-ಗುಂಪಾಗಿದ್ದ ಜಿಂಕೆಗಳನ್ನೂ, ಮದಿಸಿ ಉನ್ಮತ್ತವಾಗಿದ್ದ ನೀಳವಾದ ಕೊಂಬುಗಳಿಂದ ಕೂಡಿದ್ದ ಕಾಡುಕೋಣಗಳನ್ನೂ, ಕಾಡುಹಂದಿಗಳನ್ನೂ, ವೃಕ್ಷಗಳನ್ನು ನಾಶಪಡಿಸುತ್ತಿದ್ದ ಆನೆಗಳನ್ನೂ ನೋಡುತ್ತಾ ರಾಜಕುಮಾರರು ರಾಜಕುಮಾರಿಯೊಡನೆ ಪ್ರಯಾಣಮಾಡುತ್ತಿದ್ದರು. ಹೀಗೆಯೇ ಅವರು ವನಸಿರಿಯನ್ನು ನೋಡುತ್ತಾ ಬಹಳ ದೂರದವರೆಗೆ ಹೋದರು. ಸೂರ್ಯನು ಪಶ್ಚಿಮಸಮುದ್ರದ ಕಡೆಗೆ ವಾಲುತ್ತಿದ್ದನು. ಆ ವೇಳೆಗೆ ಅವರು ಯೋಜನದಷ್ಟು ಅಗಲವಾಗಿದ್ದ ಮತ್ತು ರಮ್ಯವಾಗಿದ್ದ ಸರೋವರವೊಂದನ್ನು ನೋಡಿದರು. ನಯನಮನೋಹರವಾಗಿದ್ದ ಆ ಸರೋವರವು ಕೆಂಪು ಮತ್ತು ಬಿಳಿಯ ಕಮಲಗಳಿಂದ ನಿಬಿಡವಾಗಿದ್ದಿತು. ಆನೆಗಳ ಗುಂಪುಗಳಿಂದ ಸಮಲಂಕೃತವಾಗಿದ್ದಿತು. ಹಂಸ-ಸಾರಸ-ಕಾರಂಡಗಳೇ ಮೊದಲಾದ ಜಲಚರಪಕ್ಷಿಗಳಿಂದ ಸಮಾಕುಲವಾಗಿದ್ದ ಸರೋವರವನ್ನು ಸೀತಾ-ರಾಮ-ಲಕ್ಷ್ಮಣರು ನೋಡಿದರು.

ಅಲೆಗಳೇ ಇಲ್ಲದೇ ಪ್ರಶಾಂತವಾದ ನೀರಿನಿಂದ ಕೂಡಿದ್ದ ಆ ಸರೋವರದಲ್ಲಿ ಕರ್ಣಾನಂದಕರವಾದ ಸಂಗೀತದ ಮತ್ತು ವಾದ್ಯಗಳ ಶಬ್ದವು ಕೇಳಿಬರುತ್ತಿದ್ದಿತು. ಆದರೆ ಗೀತೆಗಳನ್ನು ಹಾಡುತ್ತಿರುವವರಾಗಲೀ ವಾದ್ಯಗಳನ್ನು ಬಾರಿಸುತ್ತಿರುವವರಾಗಲೀ ಕಾಣಿಸುತ್ತಿರಲಿಲ್ಲ. ಧ್ವನಿಯನ್ನು ಮಾತ್ರವೇ ಆಲಿಸುತ್ತಿದ್ದ ರಾಮ-ಲಕ್ಷ್ಮಣರು ಕುತೂಹಲಾವಿಷ್ಟರಾಗಿ ಸರೋವರದ ಸಮೀಪದಲ್ಲಿದ್ದ ಧರ್ಮಭೃತನೆಂಬ ಮುನಿಯನ್ನು ಪ್ರಶ್ನಿಸಿದರು :

" ಮಹರ್ಷಿಯೇ ! ಸಂಗೀತವನ್ನು ಕೇಳುತ್ತಿದ್ದೇವೆ. ಹಾಡುವವರನ್ನು ಕಾಣುತ್ತಿಲ್ಲ. ವಾದ್ಯಗಳ ಶಬ್ದವನ್ನು ಕೇಳುತ್ತಿದ್ದೇವೆ. ವಾದ್ಯಗಾರರನ್ನು ಕಾಣುತ್ತಿಲ್ಲ. ಅತ್ಯದ್ಭುತವಾದ ಈ ಸಂಗೀತ ಮತ್ತು ವಾದ್ಯಗಳ ನಿನಾದ ವನ್ನು ಕೇಳಿ ಈ ಧ್ವನಿಯು ಎಲ್ಲಿಂದ ಬರುತ್ತಿದೆಯೆಂಬುದನ್ನು ತಿಳಿಯಲು ನಮಗೆ ಕುತೂಹಲವಾಗಿದೆ. ಹೇಳಬಹುದಾದ ವಿಷಯವಾಗಿದ್ದರೆ, ಹೇಳ ಕೂಡದೆಂಬ ರಹಸ್ಯವಿಷಯವಲ್ಲದಿದ್ದರೆ – ಇದೇನೆಂಬುದನ್ನು ವಿಶದವಾಗಿ ಹೇಳು. "

ರಾಘವನು ಹೀಗೆ ಪ್ರಶ್ನಿಸಲು ಧರ್ಮಾತ್ಮನಾದ ಧರ್ಮಭೃತನು ಆ ಶುಭಸರಸ್ಸಿನ ಉತ್ಪತ್ತಿಯನ್ನೂ ಮತ್ತು ಅದರ ಪ್ರಭಾವವನ್ನೂ ವಿಸ್ತಾರ ವಾಗಿ ಹೇಳಲು ಉಪಕ್ರಮಿಸಿದನು :

" ಮಹನೀಯರೇ ! ವರ್ಷದ ಎಲ್ಲ ಋತುಗಳಲ್ಲಿಯೂ ನೀರಿನಿಂದ ಸಮೃದ್ಧವಾಗಿರುವ ಈ ಸರೋವರವು ಪಂಚಾಪ್ಸರಸರಸ್ಸೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಮಾಂಡಕರ್ಣಿ ಎಂಬೊಬ್ಬ ಮುನಿಯು ತನ್ನ ತಪಸ್ಸಿನ ಪ್ರಭಾವದಿಂದಲೇ ಈ ಸರಸ್ಸನ್ನು ನಿರ್ಮಿಸಿದನು. ಮಾಂಡಕರ್ಣಿಯು ನೀರಲ್ಲಿ ನಿಂತು ಹತ್ತುಸಾವಿರ ವರ್ಷಗಳವರೆಗೆ ಗಾಳಿಯವನ್ನೇ ಆಹಾರವನ್ನಾಗಿ ಸೇವಿ ಸುತ್ತಾ ಅತಿಘೋರವಾದ ತಪಸ್ಸನ್ನು ಮಾಡಿದನು. ಭೀಕರವಾದ ಆ ತಪಸ್ಸಿ ನಿಂದಾಗಿ ಅಗ್ನಿಯೇ ಮೊದಲಾದ ಎಲ್ಲ ದೇವತೆಗಳೂ ಪರಿತಪಿಸತೊಡಗಿದರು. ಮುನಿಯ ತಪಸ್ಸಿನ ಕಾರಣವನ್ನು ತಿಳಿಯುವ ಸಲುವಾಗಿ ಒಂದೆಡೆಯಲ್ಲಿ ಸೇರಿದ ಎಲ್ಲ ದೇವತೆಗಳೂ ಪರಸ್ಪರವಾಗಿ ಸಮಾಲೋಚಿಸಿ–" ನಮ್ಮಲ್ಲಿ ಯಾವನಾದರೊಬ್ಬ ದೇವತೆಯ ಸ್ಥಾನವನ್ನು ಅಪೇಕ್ಷಿಸಿ ಇವನು ಇಂತಹ ಘೋರವಾದ ತಪಸ್ಸನ್ನು ಮಾಡುತ್ತಿರಬಹುದು "–ಎಂಬ ನಿರ್ಧಾರಕ್ಕೆ ಬಂದರು. ಅದರಿಂದ ಎಲ್ಲ ದೇವತೆಗಳ ಮನಸ್ಸೂ ಉದ್ವಿಗ್ನವಾಯಿತು. ಎಲ್ಲರೂ ಮಾಂಡಕರ್ಣಿಯ ತಪಸ್ಸಿಗೆ ವಿಘ್ನವನ್ನುಂಟುಮಾಡಲು ನಿಶ್ಚಯಿಸಿ ದರು. ಮಿಂಚಿನಂತೆ ಥಳ-ಥಳಿಸುವ ತೇಜಸ್ಸಿನಿಂದ ಕೂಡಿದ್ದ ಮುಖ್ಯರಾದ ಐವರು ಅಪ್ಸರಸ್ತ್ರೀಯರನ್ನು* ಆ ಕಾರ್ಯಕ್ಕೆ ದೇವತೆಗಳು ನಿಯೋಜಿ ಸಿದರು.

---

* ಅಪ್ಸು ನಿರ್ಮಥನಾದೇವ ರಸಾತ್ತಸ್ಮಾದ್ವರಸ್ತ್ರಿಯಃ । ಉತ್ಪೇತುರ್ಮನುಜಶ್ರೇಷ್ಠ

ಐಹಿಕವಾದ ಮತ್ತು ಪಾರಲೌಕಿಕವಾದ ಧರ್ಮಾಧರ್ಮಗಳನ್ನು ತಿಳಿದಿದ್ದ ಮಾಂಡಕರ್ಣಿಮುನಿಯನ್ನು ದೇವಕಾರ್ಯಸಿದ್ಧಿಗಾಗಿ ಅಪ್ಸರೆಯರು ತಮ್ಮ ಹಾವ-ಭಾವಗಳಿಂದ ಪ್ರಲೋಭನಗೊಳಿಸಿ ಕಾಮವಶನನ್ನಾಗಿ ಮಾಡಿದರು. ಆ ಐವರು ಪ್ರಧಾನಾಪ್ಸರೆಯರೂ ಮುನಿಯ ಪತ್ನಿಯರೇ ಆಗಿಬಿಟ್ಟರು. ಆ ಪತ್ನಿಯರಿಗಾಗಿಯೇ ಮಾಂಡಕರ್ಣಿಮುನಿಯು ಈ ಸರೋವರದಲ್ಲಿ ಮನೆಗಳನ್ನು ನಿರ್ಮಿಸಿದ್ದಾನೆ. ಆ ಮನೆಗಳೆಲ್ಲವೂ ಈ ಸರೋವರದಲ್ಲಿ ಗುಪ್ತವಾಗಿ ಅಡಗಿವೆ. ಋಷಿಯ ತಪೋಬಲದಿಂದ ನಿರ್ಮಿತವಾಗಿರುವ ಆ ಭವನಗಳಲ್ಲಿಯೇ ಐವರು ಅಪ್ಸರೆಯರೂ ಸುಖದಿಂದ ವಾಸಮಾಡುತ್ತಿದ್ದು, ತಪೋಬಲದಿಂದ ಯೌವನವನ್ನು ಪಡೆದಿರುವ ಆ ಮುನಿಯೊಡನೆ ಆನಂದದಿಂದ ವಿಹರಿಸುತ್ತಿರುವಾಗ ಆ ಅಪ್ಸರೆಯರು ಹಾಡುವ ಸುಮನೋಹರವಾದ ಗೀತೆಗಳ ನಿನಾದವೂ, ಬಾರಿಸುವ ವಾದ್ಯಗಳ ಧ್ವನಿಯೂ– ತೊಟ್ಟಿರುವ ಆಭರಣಗಳ ಶಬ್ದಗಳೊಂದಿಗೆ ಬೆರೆತು – ಕರ್ಣಾನಂದಕರವಾಗಿ ಕೇಳಿಬರುತ್ತದೆ.”

ಹೀಗೆ ಹೇಳಿದ ಆತ್ಮವಿದನಾದ ಧರ್ಮಭೃತನ ಈ ಮಾತುಗಳನ್ನು ಯಶೋವಂತನಾದ ಶ್ರೀರಾಮನು ಕೇಳಿ ಲಕ್ಷ್ಮಣನೊಡನೆ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾ ತಲೆದೂಗಿದನು.

ಹಾಗೆ ಮುಂದುವರಿದ ಶ್ರೀರಾಮನು ದರ್ಭೆಗಳಿಂದಲೂ ನಾರುಮಡಿಗಳಿಂದಲೂ ಸಮಲಂಕೃತವಾಗಿದ್ದ, ಬ್ರಹ್ಮತೇಜಸ್ಸಿನಿಂದ ಸಮಾವೃತವಾಗಿದ್ದ ಆಶ್ರಮಮಂಡಲವನ್ನು ನೋಡಿದನು. ಸೀತಾ-ಲಕ್ಷ್ಮಣರೊಡನೆ ಆಶ್ರಮಮಂಡಲವನ್ನು ಪ್ರವೇಶಿಸಿದ ಮಹಾಯಶೋವಂತನಾದ ಶ್ರೀರಾಮನು ಅಲ್ಲಿದ್ದ ಎಲ್ಲ ಋಷಿಗಳಿಂದಲೂ ಪೂಜಿಸಲ್ಪಟ್ಟವನಾಗಿ, ಅವರ ಪ್ರಾರ್ಥನೆ

---

ತಸ್ಮಾದಪ್ಸರಸೋಽಭವನ್ ॥ ನೀರಿನ (ಕ್ಷೀರಸಾಗರದ) ಕಡೆಯುವಿಕೆಯಿಂದ ಅದರ ರಸದಿಂದ ಈ ಉತ್ತಮಸ್ತ್ರೀಯರು ಉತ್ಪನ್ನರಾದ ಕಾರಣ ಇವರಿಗೆ ಅಪ್ಸರೆಯರೆಂದು ಹೆಸರಾಯಿತು. ದೇವ-ದಾನವರು ಅಮೃತಪ್ರಾಪ್ತಿಗಾಗಿ ವಾಸುಕಿಯನ್ನು ಹಗ್ಗವನ್ನಾಗಿ ಮಾಡಿಕೊಂಡು ಮೇರುದಂಡದಿಂದ ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ ಹದಿನಾರು ರತ್ನಗಳಲ್ಲಿ ಅಪ್ಸರೆಯರೂ ಸೇರಿದ್ದಾರೆ. ಊರ್ವಶೀ, ಮೇನಕಾ, ರಂಭಾ, ಘೃತಾಚೀ, ತಿಲೋತ್ತಮಾ–ಈ ಐವರು ಅಪ್ಸರೆಯರಲ್ಲಿ ಮುಖ್ಯರು.

ಯಂತೆ ಅಲ್ಲಿಯೇ ಸ್ವಲ್ಪಕಾಲದವರೆಗೆ ತಂಗಿದ್ದನು. ಅವರಿಂದ ಸತ್ಕರಿಸಲ್ಪಡುತ್ತಾ ಅಲ್ಲಿಯೇ ಕೆಲವು ದಿನ ಸುಖವಾಗಿದ್ದನು. ಅಲ್ಲಿದ್ದ ಎಲ್ಲ ಮುನಿಗಳೂ ಶ್ರೀರಾಮನನ್ನು ತಮ್ಮ ಆಶ್ರಮಗಳಿಗೆ ಬರುವಂತೆ ಪ್ರಾರ್ಥಿಸಿದರು. ಶ್ರೀರಾಮನು ಸೀತಾ-ಲಕ್ಷ್ಮಣರ ಸಮೇತನಾಗಿ ಪ್ರತಿಯೊಬ್ಬ ಮುನಿಯ ಆಶ್ರಮಕ್ಕೂ ಅನುಕ್ರಮವಾಗಿ ಹೋಗಿ ಪ್ರತಿಯೊಂದು ಆಶ್ರಮದಲ್ಲಿಯೂ ಸ್ವಲ್ಪಕಾಲದವರೆಗೆ ತಂಗಿರುತ್ತಿದ್ದನು. ಹೀಗೆ ಎಲ್ಲ ಮುನಿಗಳ ಆಶ್ರಮಕ್ಕೂ ಒಮ್ಮೆ ಹೋಗಿಬಂದನಂತರ ಮುನಿಗಳ ಒತ್ತಾಯಕ್ಕೆ ಮಣಿದು ತಾನು ಮೊದಲ ಬಾರಿಗೆ ಹೋಗಿದ್ದ ಅವರ ಆಶ್ರಮಕ್ಕೇ ಪುನಃ ಶ್ರೀರಾಮನು ಹೋಗಬೇಕಾಯಿತು.

ಹೀಗೆ ಶ್ರೀರಾಮನು ಋಷಿಗಳ ಆ ಆಶ್ರಮಗಳಲ್ಲಿ ಸೀತಾ-ಲಕ್ಷ್ಮಣರೊಡನೆ ಹತ್ತು ಮಾಸಗಳವರೆಗಿದ್ದನು. ಮತ್ತೆ ಕೆಲವರ ಆಶ್ರಮದಲ್ಲಿ ವರ್ಷಪೂರ್ತಿಯಾಗುವವರೆಗೂ ಇದ್ದನು. ಒಂದು ಆಶ್ರಮದಲ್ಲಿ ನಾಲ್ಕು ಮಾಸಗಳೂ, ಮತ್ತೊಂದು ಆಶ್ರಮದಲ್ಲಿ ಐದು ಮಾಸಗಳೂ, ಇನ್ನೊಂದು ಆಶ್ರಮದಲ್ಲಿ ಆರು ಮಾಸಗಳೂ, ಮತ್ತೊಬ್ಬ ಮುನಿಯ ಆಶ್ರಮದಲ್ಲಿ ಏಳು ಮಾಸಗಳೂ ತಂಗಿದ್ದನು. ಬೇರೊಂದಾಶ್ರಮದಲ್ಲಿ ಏಳುಮಾಸಗಳಿಗಿಂತಲೂ ಹೆಚ್ಚಾಗಿ ಎಂಟು ಮಾಸಗಳವರೆಗೂ ತಂಗಿದ್ದನು. ಕೆಲವು ಆಶ್ರಮಗಳಲ್ಲಿ ಎಂಟು ತಿಂಗಳು ಹದಿನೈದು ದಿವಸಗಳವರೆಗೂ ಇದ್ದುದುಂಟು. ಹೀಗೆ ಮಹರ್ಷಿಗಳ ಆಶ್ರಮಗಳಲ್ಲಿ ಯಥಾನುಕೂಲವಾಗಿ ಸಂತೋಷದಿಂದಿರುತ್ತಿದ್ದ ಶ್ರೀರಾಮನ ಹದಿನಾಲ್ಕು ವರ್ಷಗಳ ವನವಾಸದ ಅವಧಿಯಲ್ಲಿ ಹತ್ತು ವರ್ಷಗಳು ಕಳೆದು ಹೋದುವು.

ಹೀಗೆ ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ಆಶ್ರಮಮಂಡಲದಲ್ಲಿದ್ದ ಎಲ್ಲ ಆಶ್ರಮಗಳನ್ನೂ ಸುತ್ತಿಕೊಂಡು ಒಂದೊಂದು ಆಶ್ರಮದಲ್ಲಿಯೂ ಸಾಕಷ್ಟುಕಾಲ ಸುಖವಾಗಿ ತಂಗಿದ್ದು ಸುತೀಕ್ಷ್ಣರ ಆಶ್ರಮಕ್ಕೆ ಹಿಂದಿರುಗಿದನು. ಅಲ್ಲಿದ್ದ ಮುನಿಗಳಿಂದ ಸತ್ಕೃತನಾಗಿ ಸುತೀಕ್ಷ್ಣರ ಆಶ್ರಮದಲ್ಲಿಯೂ ಸ್ವಲ್ಪಕಾಲವನ್ನು ಕಳೆದನು. ಅಲ್ಲಿಯೇ ತಂಗಿದ್ದ ಶ್ರೀರಾಮನು ಒಮ್ಮೆ ಮಹಾಮುನಿಗಳಾದ ಸುತೀಕ್ಷ್ಣರ ಬಳಿಗೆ ಹೋಗಿ ವಿನೀತನಾಗಿ ಹೇಳಿದನು : " ಮಹಾಮುನಿಗಳೇ ! ಮುನಿಶ್ರೇಷ್ಠರಾದ, ಪೂಜ್ಯರಾದ

ಅಗಸ್ತ್ಯರು ಈ ಅರಣ್ಯಪ್ರದೇಶದಲ್ಲಿಯೇ ವಾಸಮಾಡುತ್ತಿದ್ದಾರೆಂಬ ವಿಷಯವನ್ನು ಇಲ್ಲಿ ನಿತ್ಯವೂ ಅರಣ್ಯದ ವಾರ್ತೆಯನ್ನು ಹೇಳುತ್ತಿರುವವರಿಂದ ಕೇಳಿದೆನು. ಆದರೆ ಈ ಅರಣ್ಯವು ಬಹಳ ವಿಸ್ತಾರವಾಗಿರುವುದರಿಂದ ಯಾವ ಪ್ರದೇಶದಲ್ಲಿ ಧೀಮಂತರಾದ ಅಗಸ್ತ್ಯರ ಆಶ್ರಮವಿರುವುದೆಂಬುದನ್ನು ನಾನು ತಿಳಿದಿಲ್ಲ. ಪೂಜ್ಯರಾದ ನಿಮ್ಮ ಅನುಗ್ರಹವನ್ನು ಪಡೆದು ಭಾರ್ಯಾ-ಭ್ರಾತೃಗಳೊಡನೆ ಅಗಸ್ತ್ಯರ ಬಳಿಗೆ ಹೋಗಲು ಮತ್ತು ಅವರಿಗೆ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆದು ಬರಲು ಬಯಸಿದ್ದೇನೆ. ಮುನಿಶ್ರೇಷ್ಠರಾದ ಅಗಸ್ತ್ಯರನ್ನು ನಾನೇ ಸ್ವತಃ ಶುಶ್ರೂಷೆಮಾಡಬೇಕೆಂಬ ದೊಡ್ಡ ಮನೋರಥವು ನನ್ನ ಮನಸ್ಸಿನಲ್ಲಿ ಪದೇ ಪದೇ ಸುಳಿದಾಡುತ್ತಲೇ ಇದೆ. ಇದಕ್ಕೆ ನೀವು ಅವಕಾಶವನ್ನು ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ."

ಧರ್ಮಾತ್ಮನಾದ, ದಶರಥಪುತ್ರನಾದ ಶ್ರೀರಾಮನ ವಿನಯಪೂರ್ವಕವಾದ ಆ ಮಾತನ್ನು ಕೇಳಿ ಸುಪ್ರೀತರಾದ ಸುತೀಕ್ಷ್ಣರು ಹೇಳಿದರು :

"ರಾಘವ ! ಸೀತಾ-ಲಕ್ಷ್ಮಣರೊಡನೆ ಅಗಸ್ತ್ಯರ ಆಶ್ರಮಕ್ಕೆ ಹೋಗಿ ಬರುವಂತೆ ನಾನೇ ನಿನಗೆ ಹೇಳಬೇಕೆಂದಿದ್ದೆನು. ದೈವಯೋಗದಿಂದ ಆ ವಿಷಯವಾಗಿ ನೀನೇ ನನ್ನನ್ನು ಪ್ರಾರ್ಥಿಸುತ್ತಿರುವೆ. ಅವರ ಆಶ್ರಮವು ಎಲ್ಲಿರುವುದೆಂಬುದನ್ನು ಹೇಳುವೆನು : ಕೇಳು.

ಈ ನಮ್ಮ ಆಶ್ರಮದಿಂದ ದಕ್ಷಿಣದಿಕ್ಕಿನ ಕಡೆಗೆ ನಾಲ್ಕು ಯೋಜನಗಳಷ್ಟು ದೂರ ಪ್ರಯಾಣಮಾಡು. ಅಲ್ಲಿ ಮಹಾನುಹಿಮೆಯುಳ್ಳ ಒಂದು ಶ್ರೇಷ್ಠವಾದ ಆಶ್ರಮವಿದೆ. ಅದು ಅಗಸ್ತ್ಯರ ತಮ್ಮನ ಆಶ್ರಮ. ಆ ಆಶ್ರಮಪ್ರದೇಶವು ಸಮತಲದಲ್ಲಿದೆ. ಬಹುಪುಷ್ಪಗಳಿಂದಲೂ ಫಲಗಳಿಂದಲೂ ಕೂಡಿರುವ, ನಾನಾವಿಧವಾದ ಪಕ್ಷಿಗಳಿಂದ ನಿನಾದಿತವಾಗಿರುವ, ರಮ್ಯವಾಗಿರುವ ಪಿಪ್ಪಲೀವನದಿಂದ ಆ ಆಶ್ರಮಪ್ರದೇಶವು ಕಂಗೊಳಿಸುತ್ತಿದೆ. ಅದರ ಸಮೀಪದಲ್ಲಿಯೇ ಪ್ರಸನ್ನವಾದ ಜಲರಾಶಿಯಿಂದ ಕೂಡಿರುವ, ಹಂಸ-ಕಾರಂಡವಪಕ್ಷಿಗಳಿಂದ ತುಂಬಿರುವ, ಚಕ್ರವಾಕಪಕ್ಷಿಗಳಿಂದ ಶೋಭಾಯಮಾನವಾಗಿ ಕಾಣುವ ಸುಂದರವಾದ ಸರೋವರಗಳಿವೆ. ಅಂತಹ ರಮ್ಯವಾದ ಆಶ್ರಮದಲ್ಲಿ ರಾತ್ರಿ ತಂಗಿದ್ದು ಬೆಳಗಾಗುತ್ತಲೇ ಪ್ರಾತರ್ವಿಧಿಗಳನ್ನು ಮುಗಿಸಿ

ಕೊಂಡು ಅರಣ್ಯದ ಪಾರ್ಶ್ವದಲ್ಲಿಯೇ ದಕ್ಷಿಣದಿಕ್ಕನ್ನು ಹಿಡಿದು ಹೋದರೆ ಒಂದು ಯೋಜನದ ಒಳಗಾಗಿಯೇ ಅಗಸ್ತ್ಯರ ಆಶ್ರಮವು ಸಿಕ್ಕುತ್ತದೆ. ನಾನು ಹೇಳಿರುವ ಈ ಮಾರ್ಗವನ್ನು ಹಿಡಿದು ನೀವೆಲ್ಲರೂ ಅಗಸ್ತ್ಯರ ಆಶ್ರಮಕ್ಕೆ ಹೋಗಿರಿ. ಅನೇಕವಿಧವಾದ ವೃಕ್ಷಗಳಿಂದ ಶೋಭಾಯಮಾನವಾಗಿ ಕಾಣುವ, ರಮಣೀಯವಾದ ಆ ವನಪ್ರದೇಶವನ್ನು ನೋಡಿ ವೈದೇಹಿಯೂ ಆನಂದಪಡುತ್ತಾಳೆ. ಲಕ್ಷ್ಮಣನೂ ಸಂತೋಷಪಡುತ್ತಾನೆ. ನಿನಗೂ ಆನಂದವಾಗುತ್ತದೆ. ನಿಶ್ಚಯವಾಗಿಯೂ ಬಗೆ-ಬಗೆಯ ವೃಕ್ಷಗಳಿಂದ ಸಮಾವೃತವಾಗಿರುವ ಆ ವನಪ್ರದೇಶವು ಬಹಳ ರಮ್ಯವಾಗಿದೆ. ಯಶೋವಂತನೇ! ಮಹಾಮುನಿಗಳಾದ ಅಗಸ್ತ್ಯರನ್ನು ನೋಡಲು ಮನಸ್ಸು ಮಾಡಿರುವೆಯಾದರೆ ಈಗಲೇ ನೀನಲ್ಲಿಗೆ ಹೊರಟುಬಿಡು." ಸುತೀಕ್ಷ್ಣರ ಮಾತನ್ನು ಕೇಳಿ ಶ್ರೀರಾಮನು ಲಕ್ಷ್ಮಣನೊಡನೆ ಮುನಿಗಳಿಗೆ ಅಭಿವಾದನಮಾಡಿ ಸೀತಾ-ಲಕ್ಷ್ಮಣರೊಡನೆ ಅಗಸ್ತ್ಯರ ಆಶ್ರಮದ ಕಡೆಗೆ ಹೊರಟನು.

ಸುತೀಕ್ಷ್ಣರು ನಿರ್ದೇಶಿಸಿದ್ದ ಮಾರ್ಗದಲ್ಲಿಯೇ ಸುಖವಾಗಿ ಪ್ರಯಾಣ ಮಾಡುತ್ತಾ ಮಾರ್ಗದ ಮಧ್ಯದಲ್ಲಿ ಸಿಕ್ಕುತ್ತಿದ್ದ ರಮ್ಯವಾದ ಅನೇಕಾನೇಕ ಅರಣ್ಯಗಳನ್ನೂ, ಮೇಘಸದೃಶವಾದ ಪರ್ವತಗಳನ್ನೂ, ಸರೋವರಗಳನ್ನೂ, ಹಾದಿಯ ಪಕ್ಕದಲ್ಲಿ ಹರಿಯುತ್ತಿದ್ದ ನದಿಗಳನ್ನೂ ನೋಡುತ್ತಾ ಶ್ರೀರಾಮನು ಪರಮಸಂತುಷ್ಟನಾಗಿ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ! ಮಹಾತ್ಮನಾದ, ಅಗಸ್ತ್ಯರ ತಮ್ಮನಾದ, ಪುಣ್ಯಕರ್ಮನಾದ ಮಹರ್ಷಿಯ ಆಶ್ರಮವಿರುವ ಸ್ಥಳವು ನಿಶ್ಚಯವಾಗಿಯೂ ಇದೇ ಇರಬಹುದೆಂದು ತೋರುತ್ತದೆ. ಅಗಸ್ತ್ಯರ ತಮ್ಮನ ಆಶ್ರಮವಿರುವ ವನಪ್ರದೇಶವು ಹೂವು-ಹಣ್ಣುಗಳಿಂದ ಸಮೃದ್ಧವಾಗಿರುವ ವೃಕ್ಷಗಳಿಂದ ಆವೃತವಾಗಿರುವುದೆಂದು ನಾವು ಸುತೀಕ್ಷ್ಣರಿಂದ ಕೇಳಿದ್ದೆವು. ಅವರು ಹೇಳಿದ್ದಂತೆಯೇ ಈ ಹಾದಿಯಲ್ಲಿ ಹೂವು-ಹಣ್ಣುಗಳ ಭಾರದಿಂದ ಬಗ್ಗಿರುವ ಸಾವಿರಾರು ವೃಕ್ಷಗಳಿವೆ.

ಬಾಲಮೆಣಸಿನ ವನವೇ ಅಲ್ಲಿರುವುದೆಂದು ಸುತೀಕ್ಷ್ಣರು ಹೇಳಿದ್ದರು. ಅದರಂತೆಯೇ ಕಟುವಾದ ವಾಸನೆಯಿಂದ ಕೂಡಿರುವ ಪಕ್ವವಾದ ಮೆಣಸಿನ ವಾಸನೆಯು ಗಾಳಿಯ ಮೂಲಕವಾಗಿ ಈ ವನದ ಕಡೆಯಿಂದಲೇ ಬರುತ್ತಿದೆ.

ಒಟ್ಟಲು-ಒಟ್ಟಲಾಗಿ ಸೌದೆಯನ್ನು ಕೂಡಿಸಿಟ್ಟಿರುವುದೂ ಕಾಣುತ್ತಿದೆ. ವೈಡೂರ್ಯದಂತೆ ಪ್ರಕಾಶಮಾನವಾಗಿ ಕಾಣುವ ಕತ್ತರಿಸಿಟ್ಟಿರುವ ದರ್ಭೆಗಳೂ ಅಲ್ಲಲ್ಲಿ ಕಾಣುತ್ತಿವೆ. ಅರಣ್ಯದ ಮಧ್ಯದಲ್ಲಿರುವ ಆಶ್ರಮದಲ್ಲಿ ಪ್ರತಿಷ್ಠಿತ ನಾಗಿರುವ ಯಜ್ಞೇಶ್ವರನ ಧೂಮದ ಅಗ್ರಭಾಗವು ಕಪ್ಪಾದ ಮೋಡದ ಶಿಖರ ದೋಪಾದಿಯಲ್ಲಿ ಕಂಗೊಳಿಸುತ್ತಿದೆ.

ಬ್ರಾಹ್ಮಣರು ಏಕಾಂತದಲ್ಲಿರುವ ಮತ್ತು ಪವಿತ್ರವಾದ ತೀರ್ಥಗಳಲ್ಲಿ ಸ್ನಾನಮಾಡಿ ತಾವೇ ಬಿಡಿಸಿತಂದ ಪುಷ್ಪಗಳಿಂದ * ದೇವತೆಗಳಿಗೆ ಪುಷ್ಪಬಲಿ ಯನ್ನು ಅರ್ಪಿಸುತ್ತಿದ್ದಾರೆ. ಸೌಮ್ಯನೇ! ಸುತೀಕ್ಷ್ಣರಿಂದ ನಾನು ಯಾವ ಆಶ್ರಮದ ವರ್ಣನೆಯನ್ನು ಕೇಳಿದ್ದೆನೋ ಅದಕ್ಕೆ ಅನುಗುಣವಾಗಿರುವ ಈ ಆಶ್ರಮವು ನಿಶ್ಚಯವಾಗಿಯೂ ಅಗಸ್ತ್ಯರ ತಮ್ಮನ ಆಶ್ರಮವೇ ಆಗಿದೆ. ಈ ಆಶ್ರಮದಲ್ಲಿರುವ ಮುನಿಯ ಅಣ್ಣನವರಾದ ಪುಣ್ಯಕರ್ಮರಾದ ಅಗಸ್ತ್ಯರು ಲೋಕಗಳಿಗೆ ಹಿತವನ್ನುಂಟುಮಾಡುವ ಆಶಯದಿಂದ ಜನರಿಗೆ ಮೃತ್ಯು ಸ್ವರೂಪರಾಗಿದ್ದ ಇಲ್ವಲ-ವಾತಾಪಿಗಳನ್ನು ನಿಗ್ರಹಿಸಿ ದಕ್ಷಿಣದಿಕ್ಕನ್ನು ವಾಸ ಯೋಗ್ಯವನ್ನಾಗಿ ಮಾಡಿದರು. ಬಹಳ ಹಿಂದೆ ಈ ಪ್ರದೇಶದಲ್ಲಿಯೇ ಮಹಾ ಕ್ರೂರಿಗಳಾದ, ಬ್ರಾಹ್ಮಣಹಂತಕರಾದ ಇಲ್ವಲ-ವಾತಾಪಿಗಳೆಂಬ ರಾಕ್ಷಸ ಸಹೋದರರಿದ್ದರು. ಮಹಾಕ್ರೂರಿಯಾದ ಇಲ್ವಲನು ಬ್ರಾಹ್ಮಣರಂತೆ ರೂಪ ವನ್ನು ಬದಲಾಯಿಸಿಕೊಂಡು, ಬ್ರಾಹ್ಮಣರಾಡುತ್ತಿದ್ದ ವ್ಯಾಕರಣಬದ್ಧವಾದ ಸಂಸ್ಕೃತಭಾಷೆಯಲ್ಲಿಯೇ ಮಾತನಾಡುತ್ತಾ, ಶ್ರಾದ್ಧದ ನೆಪದಿಂದ ಬ್ರಾಹ್ಮಣ ರನ್ನು ಆಮಂತ್ರಿಸುತ್ತಿದ್ದನು. ಆಡಿನ ರೂಪದಲ್ಲಿರುತ್ತಿದ್ದ ತಮ್ಮನಾದ ವಾತಾಪಿಯನ್ನು ಕಡಿದು ಮಾಂಸವನ್ನು ಯಥಾಯೋಗ್ಯವಾಗಿ ಸಂಸ್ಕರಿಸಿ ಶ್ರಾದ್ಧಯೋಗ್ಯವಾದ ಕರ್ಮಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸುತ್ತಿ ದ್ದನು. ಅನಂತರ ಶ್ರಾದ್ಧಭೋಜನಮಾಡಿದ ಆ ಬ್ರಾಹ್ಮಣರ ಎದುರಿಗೆ ನಿಂತು ಗಟ್ಟಿಯಾದ ಸ್ವರದಿಂದ-'ವಾತಾಪೇ ನಿಷ್ಕ್ರಮಸ್ವ-ವಾತಾಪಿಯೇ! ಇವರ ಹೊಟ್ಟೆಯಿಂದ ಹೊರಗೆ ಬಾ'-ಎನ್ನುತ್ತಿದ್ದನು. ಇಲ್ವಲನ ಆ

* ಸಮಿತ್ತು, ದರ್ಭೆ ಮತ್ತು ಹೂವು ಮೊದಲಾದುವುಗಳನ್ನು ಶ್ರೋತ್ರಿಯನು ತಾನೇ ತರಬೇಕು. ಮತ್ತೊಬ್ಬರು ತಂದುದನ್ನು ಉಪಯೋಗಿಸಿಕೊಳ್ಳಬಾರದು. ಸಮಿತ್ಪುಷ್ಪಕುಶಾದೀನಿ ಶ್ರೋತ್ರಿಯಃ ಸ್ವಯಮಾಹರೇತ್ । (ಸ್ಮೃತಿವಚನ)

ಮಾತನ್ನು ಕೇಳಿದೊಡನೆಯೇ ವಾತಾಪಿಯು ಆಡಿನಂತೆಯೇ ಅರಚಿಕೊಳ್ಳುತ್ತಾ ಬ್ರಾಹ್ಮಣರ ಹೊಟ್ಟೆಯನ್ನು ಸೀಳಿಕೊಂಡು ಹೊರಗೆ ಬರುತ್ತಿದ್ದನು.

ಈ ರೀತಿಯಲ್ಲಿ ಮನಬಂದಂತೆ ಆಕಾರಗಳನ್ನು ಹೊಂದುವ ಸಾಮರ್ಥ್ಯವಿದ್ದ, ಮಾಂಸಭಕ್ಷಕರಾದ, ಕ್ರೂರಿಗಳಾದ ಆ ಇಲ್ವಲ-ವಾತಾಪಿಗಳು ಕುಟಿಲೋಪಾಯದಿಂದ ಬ್ರಾಹ್ಮಣರನ್ನು ಆಮಂತ್ರಿಸಿ ನಿತ್ಯವೂ ಕೊಲ್ಲುತ್ತಿದ್ದರು. ಹೀಗೆ ಅವರು ಸಾವಿರಾರು ಬ್ರಾಹ್ಮಣರನ್ನು ಸಂಹರಿಸಿದರು. ಬ್ರಾಹ್ಮಣರನ್ನು ಈ ಉಪದ್ರವದಿಂದ ತಪ್ಪಿಸಬೇಕೆಂದು ದೇವತೆಗಳಿಂದ ಪ್ರಾರ್ಥಿತರಾದ ಅಗಸ್ತ್ಯರು ಇಲ್ವಲನಿದ್ದ ಸ್ಥಳಕ್ಕೆ ಬಂದು, ಅವನಿಂದ ಶ್ರಾದ್ಧಕ್ಕೆ ಆಮಂತ್ರಣವನ್ನು ಪಡೆದು, ಯಥಾವಿಧಿಯಾಗಿ ಶ್ರಾದ್ಧಕರ್ಮವು ನಡೆದನಂತರ ಮಾಂಸರೂಪನಾಗಿ ಪಚನಾದಿಗಳಿಂದ ಸಂಸ್ಕೃತನಾಗಿದ್ದ ವಾತಾಪಿಯನ್ನು ಭಕ್ಷಿಸಿದರು. ಭೋಜನವಾದನಂತರ ಇಲ್ವಲನು ಸಂಪನ್ನಂ ಎಂದು ಕೇಳಿ ಉತ್ತರಾಪೋಶನಕ್ಕೆ ನೀರುಹಾಕಿದನು. ಅಗಸ್ತ್ಯರು ಸುಸಂಪನ್ನಂ* ಎಂಬ ಪ್ರತಿವಚನದೊಡನೆ ಉತ್ತರಾಪೋಶನವನ್ನು ತೆಗೆದುಕೊಂಡು ಮೇಲೆದ್ದರು. ಹಿಂದಿನಂತೆಯೇ ಇಲ್ವಲನು-'ವಾತಾಪೇ ನಿಷ್ಕ್ರಮಸ್ವ' – ಎಂದು ಗಟ್ಟಿಯಾಗಿ ಕೂಗಿದನು. ತಮ್ಮನನ್ನು ಹೀಗೆ ಕರೆಯುತ್ತಿದ್ದ ವಿಪ್ರಹಂತಕನಾದ ಇಲ್ವಲನನ್ನು ಕುರಿತು ಧೀಮಂತರಾದ, ಮುನಿಶ್ರೇಷ್ಠರಾದ ಅಗಸ್ತ್ಯರು ಗಹ-ಗಹಿಸಿ ನಗುತ್ತಾ ಹೇಳಿದರು :

ಕುತೋ ನಿಷ್ಕ್ರಮಿತುಂ ಶಕ್ತಿರ್ಮಯಾ ಜೀರ್ಣಸ್ಯ ರಕ್ಷಸಃ ।
ಭ್ರಾತುಸ್ತೇ ಮೇಷರೂಪಸ್ಯ ಗತಸ್ಯ ಯಮಸಾದನಮ್ ॥೬೪॥

"ಇಲ್ವಲ! ಟಗರಿನ ರೂಪದ ಆ ರಾಕ್ಷಸನನ್ನು ನಾನು ಜೀರ್ಣಿಸಿಕೊಂಡುಬಿಟ್ಟಿದ್ದೇನೆ. ಯಮನ ಮನೆಗೆ ಹೋಗಿರುವ ಅವನಿಗೆ ನನ್ನ ಹೊಟ್ಟೆಯಿಂದ ಹೊರಬರುವ ಶಕ್ತಿ ಎಲ್ಲಿದೆ ?"

ತಮ್ಮನ ಮರಣಸೂಚಕವಾದ ಅಗಸ್ತ್ಯಮಹರ್ಷಿಗಳ ಮಾತನ್ನು ಕೇಳಿ ರಾಕ್ಷಸನು ಕಡುಕೋಪಗೊಂಡು ಅವರನ್ನು ಭಯಪಡಿಸಲು ಆರಂಭಿಸಿದನು.

---

* ಶ್ರಾದ್ಧಭೋಜನವು ಮುಗಿದನಂತರ 'ಸಂಪನ್ನಂ' ಎಂದು ಕರ್ತೃವು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ 'ಸುಸಂಪನ್ನಂ' ಎಂದು ಭೋಜನಮಾಡಿದ ಬ್ರಾಹ್ಮಣನು ಹೇಳುತ್ತಾನೆ. ಎಲ್ಲವೂ ಸಾಂಗವಾಗಿ ನೆರವೇರಿದೆ ಎಂಬ ಅರ್ಥ.

ದ್ವಿಜಶ್ರೇಷ್ಠರಾದ ಅಗಸ್ತ್ಯರನ್ನು ಸಂಹರಿಸಿಬಿಡಬೇಕೆನ್ನುವ ಆಶಯದಿಂದ ಅಸುರನು ಅವರ ಮೇಲೆ ಬೀಳಲು ಮುನ್ನುಗ್ಗಿ ಹೋದನು. ಆದರೆ ಮರುಕ್ಷಣ ದಲ್ಲಿಯೇ ಪ್ರಜ್ವಲಿಸುವ ತೇಜಸ್ಸಿನಿಂದ ಬೆಳಗುತ್ತಿದ್ದ ಮಹರ್ಷಿಗಳ ಅಗ್ನಿ ಸದೃಶವಾದ ಕಣ್ಣುಗಳ ಜ್ವಾಲೆಗಳಿಗೆ ಸಿಕ್ಕಿ ಭಸ್ಮೀಭೂತನಾಗಿ ಅವನೂ ಮರಣಹೊಂದಿದನು. ಹೀಗೆ ಬ್ರಾಹ್ಮಣಕಂಟಕರಾಗಿದ್ದ ಇಲ್ವಲ-ವಾತಾಪಿ ಗಳಿಬ್ಬರನ್ನೂ ಅಗಸ್ತ್ಯರು ಸಂಹರಿಸಿದರು. ಬ್ರಾಹ್ಮಣರ ಮೇಲಿನ ಅನು ಕಂಪದಿಂದಾಗಿ ಮಹರ್ಷಿಗಳು ಇಂತಹ ದುಷ್ಕರವಾದ ಕಾರ್ಯವನ್ನು ಮಾಡಿ ದರು. ಸರೋವರಗಳಿಂದಲೂ ವನಗಳಿಂದಲೂ ಸುಶೋಭಿತವಾಗಿರುವ ಈ ಆಶ್ರಮವು ಅಗಸ್ತ್ಯಮಹರ್ಷಿಗಳ ತಮ್ಮನದು."

ಶ್ರೀರಾಮನು ಲಕ್ಷ್ಮಣನಿಗೆ ಅಗಸ್ತ್ಯರ ಈ ಪುಣ್ಯಕಥೆಯನ್ನು ಹೇಳು ತ್ತಿದ್ದಾಗಲೇ ಸೂರ್ಯನು ಅಸ್ತಹೊಂದಿದನು. ಸಂಧ್ಯಾಕಾಲವು ಪ್ರಾಪ್ತ ವಾಯಿತು. ಶ್ರೀರಾಮನು ತಮ್ಮನೊಡನೆ ಯಥಾವಿಧಿಯಾಗಿ ಸಾಯಂ ಸಂಧ್ಯೋಪಾಸನೆಮಾಡಿ ಅಗಸ್ತ್ಯಭ್ರಾತೃವಿನ ಆಶ್ರಮವನ್ನು ಒಳಹೊಕ್ಕು ಅಲ್ಲಿದ್ದ ಮಹರ್ಷಿಗೆ ಅಭಿವಾದನಮಾಡಿದನು. ಅಗಸ್ತ್ಯರ ತಮ್ಮನೂ ಸೀತಾ-ರಾಮ-ಲಕ್ಷ್ಮಣರನ್ನು ಆದರದಿಂದ ಬರಮಾಡಿಕೊಂಡು ಕುಶಲಪ್ರಶ್ನೆಗಳನ್ನು ವಿಚಾರಿಸಿದನು. ಬಳಿಕ ಮುನಿಯಿತ್ತ ಫಲ-ಮೂಲಾದಿಗಳನ್ನು ಉಪಭುಂಜಿಸಿ ಸೀತಾ-ರಾಮ-ಲಕ್ಷ್ಮಣರು ಆ ರಾತ್ರಿ ಅಲ್ಲಿಯೇ ತಂಗಿದರು.

ರಾತ್ರಿಯು ಕಳೆದು ಸೂರ್ಯಮಂಡಲವು ಪೂರ್ವದಿಕ್ಕಿನಲ್ಲಿ ಕಾಣಿಸಿ ಕೊಳ್ಳಲಾಗಿ, ಶ್ರೀರಾಮನು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಅಗಸ್ತ್ಯ ಭ್ರಾತೃವಿನ ಬಳಿಗೆ ಸಾರಿ ಪ್ರಯಾಣಕ್ಕೆ ಅನುಮತಿಯನ್ನು ಪ್ರಾರ್ಥಿಸಿದನು:

ಅಭಿವಾದಯೇ ತ್ವಾಂ ಭಗವನ್ಸುಖಮಸ್ಮ್ಯುಷಿತೋ ನಿಶಾಮ್ ।
ಆಮನ್ತ್ರಯೇ ತ್ವಾಂ ಗಚ್ಛಾಮಿ ಗುರುಂ ತೇ ದ್ರಷ್ಟುಮಗ್ರಜಮ್ ॥

"ಪೂಜ್ಯರೇ! ನಿಮಗೆ ಅಭಿವಾದನಮಾಡುತ್ತೇನೆ. ನಾನು ರಾತ್ರಿ ಯನ್ನಿಲ್ಲಿ ಸುಖವಾಗಿ ಕಳೆದೆನು. ಗುರುಗಳಾದ ಮತ್ತು ನಿಮ್ಮ ಅಗ್ರಜರಾದ ಅಗಸ್ತ್ಯರನ್ನು ಸಂದರ್ಶಿಸಲು ಹೋಗುತ್ತಿದ್ದೇನೆ. ಇದಕ್ಕಾಗಿ ನಿಮ್ಮ ಅನು ಮತಿಯನ್ನು ಪ್ರಾರ್ಥಿಸುತ್ತೇನೆ."

'ಗಮ್ಯತಾಂ–ಹೋಗಿ ಬನ್ನಿರಿ' ಎಂದು ಹೇಳಿ ಅಗಸ್ತ್ಯರ ತಮ್ಮನು ಪ್ರಯಾಣಕ್ಕೆ ಅನುಮತಿಸಿದನಂತರ ರಾಘವನು ಸುತೀಕ್ಷ್ಣರು ನಿರ್ದೇಶಿಸಿದ್ದ ಮಾರ್ಗದಲ್ಲಿಯೇ ಪ್ರಯಾಣಮಾಡುತ್ತಾ ಹಾದಿಯುದ್ದಕ್ಕೂ ಇದ್ದ ಅರಣ್ಯದ ಸೊಬಗನ್ನು ನೋಡುತ್ತಾ ಆನಂದಿಸುತ್ತಿದ್ದನು. ನಿರವಂಜಮರಗಳನ್ನೂ, ಹಲಸಿನ ಮರಗಳನ್ನೂ, ತಾಳೇಮರಗಳನ್ನೂ, ಅಶೋಕವೃಕ್ಷಗಳನ್ನೂ, ನೇಮಿ ಗಿಡಗಳನ್ನೂ, ಹುಲಿಗಲಿಮರಗಳನ್ನೂ, ಮಧೂಕವೃಕ್ಷಗಳನ್ನೂ, ಬಿಲ್ವ ವೃಕ್ಷಗಳನ್ನೂ, ಪುಷ್ಪಸಮೃದ್ಧಿಯಿಂದ ಕೂಡಿದ್ದ ತಿಂದುಕವೃಕ್ಷಗಳನ್ನೂ, ತುದಿಯಲ್ಲಿ ಪುಷ್ಪಗಳನ್ನು ಹೊಂದಿದ್ದ ಲತೆಗಳಿಂದ ಆಲಿಂಗಿಸಲ್ಪಟ್ಟು ಶೋಭಾಯಮಾನವಾಗಿ ಕಾಣುತ್ತಿದ್ದ ಕಾಡುಮರಗಳನ್ನೂ ಶ್ರೀರಾಮನು ನೂರಾರು ಸಂಖ್ಯೆಯಲ್ಲಿ ನೋಡಿದನು. ಆನೆಯ ಸೊಂಡಿಲುಗಳಿಂದ ಕೆಡವಲ್ಪಟ್ಟ ವೃಕ್ಷಗಳನ್ನೂ, ಕಪಿಗಳಿಂದ ಆವರಿಸಲ್ಪಟ್ಟು ಶೋಭಾಯಮಾನವಾಗಿ ಕಾಣುತ್ತಿದ್ದ ವೃಕ್ಷಗಳನ್ನೂ, ಮದಿಸಿದ ಪಕ್ಷಿಗಳ ಸಮೂಹದಿಂದ ನಿನಾದಿತವಾದ ವೃಕ್ಷಗಳನ್ನೂ ಶ್ರೀರಾಮನು ನೂರಾರುಸಂಖ್ಯೆಯಲ್ಲಿ ನೋಡಿ ತನ್ನ ಸಮೀಪದಲ್ಲಿಯೇ ಹಿಂಭಾಗದಲ್ಲಿ ಬರುತ್ತಿದ್ದ, ವೀರನಾದ, ಲಕ್ಷ್ಮೀವರ್ಧನನಾದ ತಮ್ಮನಿಗೆ ಹೇಳಿದನು:

"ಇತ್ತ ನೋಡು, ಲಕ್ಷ್ಮಣ! ಇಲ್ಲಿರುವ ವೃಕ್ಷಗಳು ನವಿರಾದ ಎಲೆಗಳನ್ನು ಹೊಂದಿವೆ. ಮೃಗ-ಪಕ್ಷಿಗಳೂ ತಾಳ್ಮೆಯಿಂದ ಕುಳಿತಿವೆ. ಆದುದರಿಂದ ವಿದಿತಾತ್ಮರಾದ ಅಗಸ್ತ್ಯಮಹರ್ಷಿಗಳ ಆಶ್ರಮವು ಹತ್ತಿರದಲ್ಲಿಯೇ ಇರುವುದಾಗಿ ನಾನು ಭಾವಿಸುತ್ತೇನೆ. ತಮ್ಮ ಅದ್ಭುತವಾದ ಕರ್ಮದಿಂದಲೇ ಅಗಸ್ತ್ಯರೆಂಬ ಅನ್ವರ್ಥನಾಮದಿಂದ * ಪ್ರಸಿದ್ಧರಾಗಿರುವ, ಬಳಲಿ ಬಂದವರ ಶ್ರಮವನ್ನು ಪರಿಹರಿಸುವ ಮಹರ್ಷಿಗಳ ಆಶ್ರಮವು ಇಲ್ಲಿಯೇ ಕಾಣಿಸುತ್ತಿದೆ. ಈ ದಿವ್ಯಾಶ್ರಮದ ಸುತ್ತಲೂ ಇರುವ ವನಪ್ರದೇಶವು ಹೋಮಧೂಮದಿಂದ ವ್ಯಾಪ್ತವಾಗಿದೆ. ಸುತ್ತಲೂ ಹರಡಿರುವ ನಾರುಮಡಿಗಳ ಸಾಲು ಈ

---

* ಬೆಳೆಯುತ್ತಿದ್ದ ವಿಂಧ್ಯಪರ್ವತವು ಅಗಸ್ತ್ಯರಿಗೆ ನಮಸ್ಕಾರವನ್ನು ಮಾಡಿದಾಗ ತಾವು ಪುನಃ ಬರುವವರೆಗೂ ಹಾಗೆಯೇ ಇರಲು ಹೇಳಿ ಅದರ ಬೆಳವಣಿಗೆಯನ್ನು ಮೊಟಕುಗೊಳಿಸಿದವರಾದುದರಿಂದ ಅವರಿಗೆ 'ಅಗಸ್ತ್ಯ' ಎಂಬ ಅನ್ವರ್ಥನಾಮವು ಬಂದಿತು. ಅಗಂ=ಸ್ತಮ್ಭಯತೀತಿ ಅಗಸ್ತ್ಯಃ–ಪರ್ವತವನ್ನು ಸ್ತಂಭನಮಾಡಿದುದರಿಂದ ಅಗಸ್ತ್ಯರು.

ಆಶ್ರಮದ ಸೊಬಗನ್ನು ಹೆಚ್ಚಿಸುತ್ತಿದೆ. ಈ ಆಶ್ರಮಭೂಮಿಯು ಪ್ರಶಾಂತವಾದ ಮೃಗಗಳ ಸಮೂಹಗಳಿಂದ ತುಂಬಿಹೋಗಿದೆ. ನಾನಾವಿಧವಾದ ಪಕ್ಷಿಗಳಿಂದ ನಿನಾದಿತವಾಗಿದೆ. ಮೂರು ಲೋಕಗಳಿಗೂ ಒಳ್ಳೆಯದನ್ನು ಮಾಡುವ ಅಪೇಕ್ಷೆಯಿಂದ ಮೃತ್ಯುರೂಪರಾಗಿದ್ದ ಇಲ್ವಲ-ವಾತಾಪಿಗಳನ್ನು ಶೀಘ್ರವಾಗಿ ನಿಗ್ರಹಿಸಿ ಪುಣ್ಯಕರ್ಮರಾದ ಅಗಸ್ತ್ಯರು ಮೃತ್ಯುರೂಪವಾಗಿದ್ದ ದಕ್ಷಿಣದಿಕ್ಕನ್ನು ತಪಸ್ವಿಗಳ ಆಶ್ರಯಸ್ಥಾನವನ್ನಾಗಿ ಪರಿವರ್ತಿಸಿದರು. ಮಹಾನುಭಾವರಾದ ಅಗಸ್ತ್ಯರ ಪ್ರಭಾವದಿಂದಾಗಿ ರಾಕ್ಷಸರು ಈ ದಿಕ್ಕನ್ನು ಭಯದಿಂದ ನೋಡುವರೇ ಹೊರತು ಹಿಂದಿನಂತೆ ಆಕ್ರಮಿಸಲು ಬರುವುದಿಲ್ಲ. ಅಂತಹ ಮಹಾನುಭಾವರ ಆಶ್ರಮಸ್ಥಾನವು ಇದೇ ಆಗಿದೆ. ಪುಣ್ಯಕರ್ಮರಾದ ಮಹರ್ಷಿಗಳು ಈ ದಕ್ಷಿಣದಿಕ್ಕನ್ನು ಆಶ್ರಯಿಸಿ ಇಲ್ಲಿ ಆಶ್ರಮವನ್ನು ಮಾಡಿಕೊಂಡು ನೆಲೆಸಿದ ದಿನ ಮೊದಲ್ಗೊಂಡು ರಜನೀಚರರಾದ ರಾಕ್ಷಸರು ಇಲ್ಲಿ ವೈರವನ್ನು ತೊರೆದು ಶಾಂತರಾಗಿದ್ದಾರೆ. ಕ್ರೂರಕರ್ಮಿಗಳಾದ ರಾಕ್ಷಸರಿಗೆ ದುರ್ಧರ್ಷವಾದ ಈ ದಕ್ಷಿಣದಿಕ್ಕು ಹೆಸರಿನಿಂದ ಕೂಡ –'ಭಗವತಃ ಪ್ರದಕ್ಷಿಣಾ ದಕ್ಷಿಣಾ–ಪೂಜ್ಯರಾದ ಅಗಸ್ತ್ಯಮಹರ್ಷಿಗಳ ಪ್ರಶಸ್ತವಾದ ದಕ್ಷಿಣದಿಕ್ಕು'–ಎಂದು ಮೂರು ಲೋಕಗಳಲ್ಲಿಯೂ ವಿಖ್ಯಾತವಾಗಿದೆ.* ಪರ್ವತಗಳಲ್ಲಿ ಶ್ರೇಷ್ಠವಾದ ವಿಂಧ್ಯಪರ್ವತವು ಸೂರ್ಯನ ಮಾರ್ಗವನ್ನು ತಡೆಗಟ್ಟಲು ಸತತವಾಗಿ ಪ್ರಯತ್ನಿಸುತ್ತಲೇ ಇದ್ದಿತು. ಅದಕ್ಕಾಗಿ ಅದು ದಿನ-ದಿನಕ್ಕೂ ವೃದ್ಧಿಯನ್ನು ಹೊಂದುತ್ತಿದ್ದಿತು. ಆದರೆ ಅದು ಅಗಸ್ತ್ಯಮಹರ್ಷಿಗಳ ಸಂದೇಶವನ್ನು ಈಗಲೂ ಪರಿಪಾಲಿಸುತ್ತಿರುವುದರಿಂದ ಹಾಗೆ ವರ್ಧಿಸುತ್ತಿಲ್ಲ.[1] ಮೃಗಗಳಿಂದ ಸಂಸೇವಿತವಾದ, ಲೋಕವಿಖ್ಯಾತಕರ್ಮರಾದ, ದೀರ್ಘಾಯುಷ್ಮಂತರಾದ, ಅಗಸ್ತ್ಯಮಹರ್ಷಿಗಳ ಕಾಂತಿಯುಕ್ತವಾದ

---

* ಯಮನು ದಕ್ಷಿಣದಿಕ್ಕಿಗೆ ಒಡೆಯನಾಗಿದ್ದರೂ ಯಮನ ದಕ್ಷಿಣದಿಕ್ಕು ಎಂದು ಹೇಳದೇ ಅಗಸ್ತ್ಯರ ದಕ್ಷಿಣದಿಕ್ಕು ಎಂದು ಹೇಳುವುದೇ ಪ್ರಸಿದ್ಧಿಗೆ ಬಂದುಬಿಟ್ಟಿದೆ.

1 ವಿಂಧ್ಯಪರ್ವತವು ಸೂರ್ಯನ ಸಂಚಾರವನ್ನೂ ತಡೆಗಟ್ಟುವ ರೀತಿಯಲ್ಲಿ ಬೆಳೆಯುತ್ತಿರಲು ಸೂರ್ಯನು ಅಗಸ್ತ್ಯಮುನಿಗಳ ಬಳಿಗೆ ಹೋಗಿ ತನ್ನ ಕಷ್ಟವನ್ನು ನಿವೇದಿಸಿಕೊಂಡನು. ಅಗಸ್ತ್ಯರು ವಿಂಧ್ಯನ ಬಳಿಗೆ ಹೋಗಿ ತಾವು ಪುಣ್ಯಕರವಾದ ತೀರ್ಥಕ್ಕೆ ಸ್ನಾನಮಾಡಲು ಹೋಗುತ್ತಿರುವುದಾಗಿಯೂ, ವೃದ್ಧರಾದುದರಿಂದ ಪರ್ವತ

ದಿವ್ಯಾಶ್ರಮವು ಇದೇ ಆಗಿದೆ. ತ್ರೈಲೋಕ್ಯಪೂಜ್ಯರಾದ, ಸತ್ಪುರುಷರಾದ, ಸತ್ಪುರುಷರ ಹಿತದಲ್ಲಿಯೇ ಸದಾ ನಿರತರಾದ ಅಗಸ್ತ್ಯಮಹರ್ಷಿಗಳು ತಮ್ಮ ಸನ್ನಿಧಿಗೆ ಬರಲಿರುವ ನಮ್ಮನ್ನು ಅನುಗ್ರಹಿಸಿ ಶ್ರೇಯಸ್ಸನ್ನುಂಟುಮಾಡುತ್ತಾರೆ. ಇಲ್ಲಿ ನಾನು ಮಹಾಮುನಿಗಳಾದ ಅಗಸ್ತ್ಯರನ್ನು ಸತ್ಕರಿಸುತ್ತೇನೆ. ನನ್ನ ಉಳಿದ ವನವಾಸದ ಕಾಲವನ್ನು ಇಲ್ಲಿಯೇ ಕಳೆಯುತ್ತೇನೆ. ಇಲ್ಲಿ ಗಂಧರ್ವರಿಂದ ಕೂಡಿರುವ ದೇವತೆಗಳೂ, ಸಿದ್ಧರೂ, ಮಹರ್ಷಿಗಳೂ ನಿಯತವಾದ ಆಹಾರವನ್ನು ಸೇವಿಸುತ್ತಾ ಸತತವಾಗಿ ಅಗಸ್ತ್ಯರನ್ನು ಉಪಾಸನೆ ಮಾಡುತ್ತಿರುತ್ತಾರೆ.

**ನಾತ್ರ ಜೀವೇನ್ಮೃಷಾವಾದೀ ಕ್ರೂರೋ ವಾ ಯದಿ ವಾ ಶಠಃ ।**
**ನೃಶಂಸಃ ಕಾಮವೃತ್ತೋ ವಾ ಮುನಿರೇಷ ತಥಾವಿಧಃ ॥೯೦॥**

ಈ ಆಶ್ರಮದ ಪರಿಸರದಲ್ಲಿ ಸುಳ್ಳುಹೇಳುವವನಾಗಲೀ, ನಿರ್ದಯನಾಗಲೀ, ಕ್ರೂರಿಯಾಗಲೀ, ಘಾತುಕನಾಗಲೀ, ಸ್ವೇಚ್ಛಾಚಾರಿಯಾಗಲೀ ಬದುಕುವುದಿಲ್ಲ. ಅಗಸ್ತ್ಯಮುನಿಗಳು ನಿಶ್ಚಯವಾಗಿಯೂ ಅಂತಹ ಅಮೋಘವಾದ ಪ್ರಭಾವವುಳ್ಳವರು. ಧರ್ಮೋಪಾಸನೆಯನ್ನು ಮಾಡಲು ಇಚ್ಛೆಯಿರುವ ದೇವತೆಗಳೂ, ಯಕ್ಷರೂ, ನಾಗರೂ, ಗರುಡನೇ ಮುಂತಾದ ಪಕ್ಷಿಶ್ರೇಷ್ಠರೂ ಈ ದಿವ್ಯಾಶ್ರಮದಲ್ಲಿ ನಿಯತವಾದ ಆಹಾರವನ್ನು ಸೇವಿಸುತ್ತಾ ವಾಸಮಾಡುತ್ತಿದ್ದಾರೆ. ಮಹಾತ್ಮರಾದ ಹಲವಾರು ಮಹರ್ಷಿಗಳು ಇಲ್ಲಿ ತಪಸ್ಸಿನಿಂದ ಸಿದ್ಧಿಯನ್ನು ಪಡೆದು ಮನುಷ್ಯದೇಹವನ್ನು ಬಿಟ್ಟು ವಿನೂತನವಾದ ಶರೀರಗಳಿಂದ ಕೂಡಿ ಸೂರ್ಯಸದೃಶವಾದ ವಿಮಾನಗಳಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಾರೆ. ಸತ್ಕರ್ಮನಿರತರಾದ ಮಾನವರಿಂದ ಇಲ್ಲಿ ಆರಾಧಿಸಲ್ಪಡುವ ದೇವತೆಗಳು ಅಂತಹ ಸತ್ಕರ್ಮಿಗಳಿಗೆ ಮರಣಾ

---

ವನ್ನು ಹತ್ತಿ ಇಳಿದು ಹೋಗಲು ಸಾಧ್ಯವಾಗದೆಂದೂ ಆದುದರಿಂದ ವಿಂಧ್ಯನು ಬಾಗಬೇಕೆಂದೂ ಹೇಳಿದರು. ಮಹರ್ಷಿಗಳ ಮಾತಿನಂತೆ ವಿಂಧ್ಯನು ಬಾಗಿದನು. ಅಗಸ್ತ್ಯರು ಪರ್ವತವನ್ನು ದಾಟಿದನಂತರ–'ತೀರ್ಥದಲ್ಲಿ ಸ್ನಾನಮಾಡಿ ಪಾಪವನ್ನು ಕಳೆದುಕೊಂಡು ಹಿಂದಿರುಗಿ ಇದೇಮಾರ್ಗವಾಗಿಯೇ ಬರುತ್ತೇನೆ. ಅಲ್ಲಿಯವರೆಗೂ ನೀನು ಬಾಗಿಯೇ ಇರಬೇಕು. ಇಲ್ಲದಿದ್ದರೆ ಶಾಪಕೊಟ್ಟುಬಿಡುತ್ತೇನೆ'–ಎಂದು ಹೇಳಿದರು. ಮುಂದೆ ಅಗಸ್ತ್ಯರು ಹಿಂದಿರುಗಲೂ ಇಲ್ಲ. ಪರ್ವತವು ಮೇಲೇಳಲೂ ಇಲ್ಲ.

ನಂತರದಲ್ಲಿ ಯಕ್ಷತ್ವವನ್ನೂ, ಅಮರತ್ವವನ್ನೂ, ರಾಜ್ಯಗಳನ್ನೂ, ವಿಧ-ವಿಧ ವಾದ ಕಾಮ್ಯವಸ್ತುಗಳನ್ನೂ ಅನುಗ್ರಹಿಸುತ್ತಾರೆ. ಇಂತಹ ಪರಮಪವಿತ್ರ ವಾದ ಅಗಸ್ತ್ಯಮಹರ್ಷಿಗಳ ದಿವ್ಯಾಶ್ರಮಕ್ಕೆ ನಾವೀಗ ಬಂದಿರುತ್ತೇವೆ. ನೀನು ಮೊದಲು ಆಶ್ರಮದೊಳಗೆ ಹೋಗಿ ಸೀತೆಯೊಡನೆ ನಾನು ಬಂದಿರುವ ವಿಷಯವನ್ನು ಮಹರ್ಷಿಗಳಲ್ಲಿ ಅರಿಕೆಮಾಡು."

೧೧ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೧೨ನೆಯ ಸರ್ಗ

## ಸೀತಾ-ರಾಮ-ಲಕ್ಷ್ಮಣರು ಅಗಸ್ತ್ಯರ ಆಶ್ರಮವನ್ನು ಪ್ರವೇಶಿಸಿದುದು: ಅತಿಥಿಸತ್ಕಾರ: ಅಗಸ್ತ್ಯರು ಶ್ರೀರಾಮನಿಗೆ ಅಸ್ತ್ರ-ಶಸ್ತ್ರಗಳನ್ನು ಅನುಗ್ರಹಿಸಿದುದು

**ಸ ಪ್ರವಿಶ್ಯಾಶ್ರಮಪದಂ ಲಕ್ಷ್ಮಣೋ ರಾಘವಾನುಜಃ ।**
**ಅಗಸ್ತ್ಯಶಿಷ್ಯಮಾಸಾದ್ಯ ವಾಕ್ಯಮೇತದುವಾಚ ಹ ॥೧॥**

ಶ್ರೀರಾಮನ ಅಣತಿಯಂತೆ ಲಕ್ಷ್ಮಣನು ಆಶ್ರಮದ ಅಂಗಳವನ್ನು ಪ್ರವೇಶಿಸಿ ಅಲ್ಲಿದ್ದ ಅಗಸ್ತ್ಯರ ಶಿಷ್ಯನ ಬಳಿಗೆ ಹೋಗಿ ಹೇಳಿದನು:

"ಋಷಿಕುಮಾರ! ದಶರಥನೆಂಬ ಹೆಸರಿನ ಸುಪ್ರಸಿದ್ಧನಾದ ರಾಜ ನಿದ್ದನು. ಅವನ ಹಿರಿಯ ಮಗನಾದ, ಮಹಾಬಲಿಷ್ಠನಾದ ಶ್ರೀರಾಮನು ಪತ್ನಿಯಾದ ಸೀತೆಯೊಡನೆ ಅಗಸ್ತ್ಯಮುನಿಗಳನ್ನು ಸಂದರ್ಶಿಸಲು ಇಲ್ಲಿಗೆ ಆಗಮಿಸಿದ್ದಾನೆ. ನಾನು ಶ್ರೀರಾಮನ ತಮ್ಮನು. ನನ್ನನ್ನು ಲಕ್ಷ್ಮಣನೆಂದು ಕರೆಯುತ್ತಾರೆ. ನಮ್ಮ ಅಣ್ಣನಾದ ಶ್ರೀರಾಮನಿಗೆ ನಾನು ಹಿತೈಷಿಯೂ, ಅನುಕೂಲನೂ, ಭಕ್ತನೂ ಆಗಿದ್ದೇನೆ. ಈ ಎಲ್ಲ ವಿಷಯಗಳನ್ನು ನೀನು ಈ ಹಿಂದೆ ಕೇಳಿದ್ದಿರಬಹುದು. ನಾವು ಮೂವರೂ ತಂದೆಯ ಆಜ್ಞೆಯಂತೆ ಮಹಾಭಯಂಕರವಾದ ಈ ಕಾಡಿಗೆ ಬಂದಿರುತ್ತೇವೆ. ಮೂವರೂ ಪೂಜ್ಯ ರಾದ ಅಗಸ್ತ್ಯಮಹರ್ಷಿಗಳ ದರ್ಶನವನ್ನು ಪಡೆಯಲು ಬಯಸಿದ್ದೇವೆ. ಈ ವಿಷಯವನ್ನು ಮಹರ್ಷಿಗಳಿಗೆ ಅರಿಕೆಮಾಡು."

ಲಕ್ಷ್ಮಣನ ಆ ಮಾತನ್ನು ಕೇಳಿ ಋಷಿಕುಮಾರನು ಹಾಗೆಯೇ ಆಗ

ಲೆಂದು ಹೇಳಿ, ಮಹರ್ಷಿಗಳಿಗೆ ವಾರ್ತೆಯನ್ನು ತಿಳಿಸುವ ಸಲುವಾಗಿ ಅಗ್ನಿಗೃಹವನ್ನು ಪ್ರವೇಶಿಸಿದನು. ಅಗಸ್ತ್ಯರ ಪ್ರೀತಿಗೆ ಪಾತ್ರನಾಗಿದ್ದ ಆ ಶಿಷ್ಯನು ಬಹುಶೀಘ್ರವಾಗಿಯೇ ಅಗ್ನಿಗೃಹವನ್ನು ಪ್ರವೇಶಿಸಿ, ತಪಃಪ್ರಭಾವರಿಂದ ಕೂಡಿದ್ದು ಯಾರಿಂದಲೂ ಎದುರಿಸಲು ಅಸಾಧ್ಯರಾಗಿದ್ದ ಮುನಿಶ್ರೇಷ್ಠರಾದ ಅಗಸ್ತ್ಯರನ್ನು ಸಂದರ್ಶಿಸಿ, ಕೈಮುಗಿದು ನಿಂತು ಭಾರ್ಯಾಸಮೇತನಾಗಿ ಶ್ರೀರಾಮನು ಬಂದಿರುವ ವಿಷಯವನ್ನು–ಲಕ್ಷ್ಮಣನು ಹೇಗೆ ಹೇಳಿದ್ದನೋ ಹಾಗೆಯೇ–ಅರಿಕೆಮಾಡಿದನು.

"ಗುರುವರೇಣ್ಯರೇ ! ರಾಮ-ಲಕ್ಷ್ಮಣರೆಂಬ ದಶರಥನ ಇಬ್ಬರು ಮಕ್ಕಳು ನಮ್ಮ ಆಶ್ರಮದ ಅಂಗಳಕ್ಕೆ ಬಂದಿರುತ್ತಾರೆ. ಆ ಇಬ್ಬರಲ್ಲಿ ಜ್ಯೇಷ್ಠನಾದ ಶ್ರೀರಾಮನು ತನ್ನ ಜೊತೆಯಲ್ಲಿ ಪತ್ನಿಯಾದ ಸೀತಾದೇವಿಯನ್ನೂ ಕರೆತಂದಿದ್ದಾನೆ. ತಮ್ಮನ್ನು ಸಂದರ್ಶಿಸುವುದಕ್ಕೂ ಮತ್ತು ತಮ್ಮ ಸೇವೆಯನ್ನು ಮಾಡುವುದಕ್ಕೂ ಅವರಿಲ್ಲಿಗೆ ಬಂದಿರುತ್ತಾರೆ. ಮುಂದೇನು ಮಾಡಬೇಕೆಂಬುದನ್ನು ತಾವೇ ಆಜ್ಞಾಪಿಸಿರಿ."

ರಾಮ-ಲಕ್ಷ್ಮಣರೂ, ಮಹಾಭಾಗ್ಯಶಾಲಿನಿಯಾದ ಸೀತಾದೇವಿಯೂ ತಮ್ಮನ್ನು ಸಂದರ್ಶಿಸುವ ಸಲುವಾಗಿ ಆಶ್ರಮಕ್ಕೆ ಬಂದಿರುವರೆಂಬ ವಾರ್ತೆಯನ್ನು ಪ್ರಿಯಶಿಷ್ಯನಿಂದ ತಿಳಿದೊಡನೆಯೇ ಅಗಸ್ತ್ಯರು ಹೇಳಿದರು :

ದಿಷ್ಟ್ಯಾ ರಾಮಶ್ಚಿರಸ್ಯಾದ್ಯ ದ್ರಷ್ಟುಂ ಮಾಂ ಸಮುಪಾಗತಃ ।
ಮನಸಾ ಕಾಂಕ್ಷಿತಂ ಹ್ಯಸ್ಯ ಮಯಾಪ್ಯಾಗಮನಂ ಪ್ರತಿ ॥೧೦॥

"ಋಷಿಕುಮಾರ ! ಬಹಳ ಕಾಲವು ಕಳೆದ ಮೇಲಾದರೂ ಈಗ ದೈವಯೋಗದಿಂದ ಶ್ರೀರಾಮನು ನನ್ನನ್ನು ನೋಡಲು ಬಂದಿರುವನು. ಅವನಿಲ್ಲಿಗೆ ಬರಬೇಕೆಂಬುದು ನನ್ನ ಮನಸ್ಸಿನ ಆಕಾಂಕ್ಷೆಯೂ ಆಗಿದ್ದಿತು. ಈಗಲೇ ಹೋಗು. ಸೀತಾ-ಲಕ್ಷ್ಮಣಸಮೇತನಾದ ಶ್ರೀರಾಮನನ್ನು ಯಥಾಯೋಗ್ಯವಾಗಿ ಸತ್ಕರಿಸಿ ನನ್ನ ಬಳಿಗೆ ಕರೆದುಕೊಂಡು ಬಾ. ರಾಮನೆಂಬುದು ತಿಳಿದ ಮೇಲೂ ನೀನೇಕೆ ಅವನನ್ನು ಒಳಕ್ಕೆ ಕರೆತರಲಿಲ್ಲ ? "

ಧರ್ಮಜ್ಞರಾದ ಮಹಾತ್ಮರಾದ ಮುನಿಗಳು ಹೀಗೆ ಹೇಳಲು ಶಿಷ್ಯನು ಅಭಿವಾದನಮಾಡಿ ಕೈಮುಗಿದುಕೊಂಡು ಸಂಭ್ರಾಂತನಾಗಿ, ಹಾಗೆಯೇ ಆಗ

ಲೆಂದು ಹೇಳಿ ಅಗ್ನಿಗೃಹದಿಂದ ಹೊರಬಂದು ಅಂಗಳದಲ್ಲಿ ನಿಂತಿದ್ದ ಲಕ್ಷ್ಮಣನಿಗೆ ಹೇಳಿದನು :

"ರಾಜಕುಮಾರ ! ರಾಮನೆಲ್ಲಿ ? ಮಹರ್ಷಿಗಳನ್ನು ಸಂದರ್ಶಿಸಲು ಈಗಲೇ ಆಗಮಿಸಲಿ. ಈಗಲೇ ಅವನು ಅಗ್ನಿಗೃಹವನ್ನು ಪ್ರವೇಶಿಸಲಿ."

ಋಷಿಕುಮಾರನ ಮಾತನ್ನು ಕೇಳಿ ಲಕ್ಷ್ಮಣನು ಅವನೊಡನೆ ರಾಮ-ಸೀತೆಯರಿದ್ದ ಆಶ್ರಮದ ಅಂಗಳಕ್ಕೆ ಹೋಗಿ ಕಾಕುತ್ಸ್ಥನನ್ನೂ, ಜನಕ ರಾಜನಂದಿನಿಯನ್ನೂ ಅಗಸ್ತ್ಯಶಿಷ್ಯನಿಗೆ ಪರಿಚಯಿಸಿದನು. ಒಡನೆಯೇ ಋಷಿಕುಮಾರನು ವಿನಯದೊಡನೆ ಅಗಸ್ತ್ಯರು ಹೇಳಿದ ಮಾತುಗಳನ್ನು ಸತ್ಕಾರಕ್ಕೆ ಅರ್ಹನಾಗಿದ್ದ ಶ್ರೀರಾಮನಿಗೆ ಹೇಳಿ, ಯಥಾಯೋಗ್ಯವಾಗಿ ಸತ್ಕರಿಸಿ ಆಶ್ರಮದೊಳಕ್ಕೆ ಕರೆದೊಯ್ದನು. ಶ್ರೀರಾಮನು ಜಿಂಕೆಗಳಿಂದ ಸಮಾವೃತವಾಗಿದ್ದ ಪ್ರಶಾಂತವಾದ ಆಶ್ರಮದ ಸೊಬಗನ್ನು ವೀಕ್ಷಿಸುತ್ತಾ ಸೀತಾ-ಲಕ್ಷ್ಮಣರೊಡನೆ ಆಶ್ರಮವನ್ನು ಪ್ರವೇಶಿಸಿದನು. ಆಶ್ರಮದ ಒಳಗಿನ ಅಂಗಳದಲ್ಲಿ ಬ್ರಹ್ಮನ ಸ್ಥಾನವನ್ನೂ, ಅಗ್ನಿಯ ಸ್ಥಾನವನ್ನೂ, ವಿಷ್ಣುವಿನ ಸ್ಥಾನವನ್ನೂ, ಮಹೇಂದ್ರನ ಸ್ಥಾನವನ್ನೂ, ಸೂರ್ಯನ ಸ್ಥಾನವನ್ನೂ, ಸೋಮನ ಸ್ಥಾನವನ್ನೂ, ಭಗದೇವತೆಯ ಸ್ಥಾನವನ್ನೂ, ಕುಬೇರನ ಸ್ಥಾನವನ್ನೂ, ಧಾತೃ ಮತ್ತು ವಿಧಾತೃಗಳ ಸ್ಥಾನಗಳನ್ನೂ, ವಾಯುವಿನ ಸ್ಥಾನವನ್ನೂ, ಪಾಶಹಸ್ತನಾದ ಮತ್ತು ಮಹಾತ್ಮನಾದ ವರುಣನ ಸ್ಥಾನವನ್ನೂ, ಗಾಯತ್ರಿಯ ಸ್ಥಾನವನ್ನೂ, ಅಷ್ಟವಸುಗಳ ಸ್ಥಾನವನ್ನೂ, ನಾಗರಾಜನ ಸ್ಥಾನವನ್ನೂ, ಗರುಡನ ಸ್ಥಾನವನ್ನೂ, ಕಾರ್ತಿಕೇಯನ ಸ್ಥಾನವನ್ನೂ ಮತ್ತು ಯಮಧರ್ಮನ ಸ್ಥಾನವನ್ನೂ ನೋಡಿದನು. ಆ ಹದಿನೇಳು ದೇವತೆಗಳೂ ಅಗಸ್ತ್ಯರ ಆಶ್ರಮದಲ್ಲಿ ಸುಪ್ರತಿಷ್ಠಿತರಾಗಿದ್ದರು.* ಶ್ರೀರಾಮನನ್ನು ಸ್ವಾಗತಿಸುವ ಸಲುವಾಗಿ ಶಿಷ್ಯರಿಂದ ಪರಿವೃತರಾದ ಅಗಸ್ತ್ಯರೂ ಎದುರಾಗಿ

*ಬ್ರಹ್ಮನ ಸ್ಥಾನವಾದ ಮೇಲೆ ಬಂದಿರುವ ಅಗ್ನಿಯ ಸ್ಥಾನವೆಂಬುದಕ್ಕೆ ರುದ್ರನ ಸ್ಥಾನವೆಂದು ಅರ್ಥಮಾಡಬೇಕೆಂದೂ, ಗಾಯತ್ರಿಯ ಸ್ಥಾನವೆಂಬುದಕ್ಕೆ ಗಾಯತ್ರೀ, ಸಾವಿತ್ರೀ ಮತ್ತು ಸರಸ್ವತೀ–ಈ ಮೂವರು ದೇವತೆಗಳ ಅಧಿಷ್ಠಾನವಿರುವುದೆಂದು ಅರ್ಥ ಮಾಡಬೇಕೆಂದೂ ಒಬ್ಬ ವ್ಯಾಖ್ಯಾನಕಾರರು ವಿವರಣೆಯನ್ನು ಕೊಟ್ಟಿರುತ್ತಾರೆ. ಗರುಡ ಸ್ಥಾನಮೇವ ಚ–ಎಂಬುದಕ್ಕೆ ಅನನ್ತಸ್ಯ ಮಹಾತ್ಮನಃ–ಎಂದು ಪಾಠಾಂತರವನ್ನು ನಿರೂಪಿಸಿದ್ದಾರೆ. ಬ್ರಹ್ಮಾಗ್ನಿ–ವಿಷ್ಣುಗಳೇ ಮೊದಲಾದ ಹದಿನೇಳು ದೇವತೆಗಳು–' ಯೋ ವೈ

ಬಂದರು. ಜಾಜ್ವಲ್ಯಮಾನವಾದ ತೇಜಸ್ಸಿನಿಂದ ಕೂಡಿದ್ದ ಮುನಿಗಳ ಅಗ್ರಭಾಗದಲ್ಲಿ ಮಹಾಮಹಿಮರಾದ ಅಗಸ್ತ್ಯರು ಬರುತ್ತಿರುವುದನ್ನು ಶ್ರೀರಾಮನು ನೋಡಿ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ ! ಪೂಜ್ಯರಾದ ಅಗಸ್ತ್ಯಮಹರ್ಷಿಗಳು ಹೊರಗೆ ಬರುತ್ತಿದ್ದಾರೆ. ತೇಜೋವಿಶೇಷ-ರೂಪ-ಔನ್ನತ್ಯಾದಿಗಳಿಂದ ಇವರೇ ತಪೋನಿಧಿಗಳೆಂದು ಭಾವಿಸುತ್ತೇನೆ."

ಮಹಾಬಾಹುವಾದ ರಾಘವನು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಮಹಾಮಹಿಮರಾದ ಅಗಸ್ತ್ಯರ ವಿಷಯವಾಗಿ ಲಕ್ಷ್ಮಣನಿಗೆ ಹೀಗೆ ಹೇಳಿ ತನಗೆ ಅಭಿಮುಖವಾಗಿ ಬರುತ್ತಿದ್ದ ಅಗಸ್ತ್ಯರ ಎರಡು ಪಾದಗಳನ್ನೂ ಹಿಡಿದುಕೊಂಡನು. ಬಳಿಕ ಧರ್ಮಾತ್ಮನಾದ ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ಅಗಸ್ತ್ಯರಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಕೈಮುಗಿದುಕೊಂಡು ನಿಂತುಕೊಂಡನು. ಅಗಸ್ತ್ಯರು ಶ್ರೀರಾಮನನ್ನು ಗಾಢವಾಗಿ ಆಲಿಂಗಿಸಿಕೊಂಡು ಆದರದಿಂದ ಬರಮಾಡಿಕೊಂಡರು. ಸುಖಾಸನವನ್ನಿತ್ತು ಅರ್ಘ್ಯ-ಪಾದ್ಯಾದಿಗಳಿಂದ ಯಥೋಚಿತವಾಗಿ ಸತ್ಕರಿಸಿದನಂತರ ಕುಶಲಪ್ರಶ್ನೆಗಳನ್ನು ಕೇಳಿ ಎಲ್ಲರಿಗೂ ಕುಳಿತುಕೊಳ್ಳಲು ಹೇಳಿದರು. ವೈಶ್ವದೇವವಿಧಿಯಂತೆ ಯಜ್ಞೇಶ್ವರನಲ್ಲಿ ಹೋಮಮಾಡಿ ಅತಿಥಿಗಳಿಗೆ ಅರ್ಘ್ಯವನ್ನಿತ್ತು, ಸಂಪೂಜಿಸಿ ವಾನಪ್ರಸ್ಥೋಚಿತವಾದ ರೀತಿಯಲ್ಲಿ ರಾಮ-ಲಕ್ಷ್ಮಣ-ಸೀತೆಯರಿಗೆ ಭೋಜನವನ್ನು ಮಾಡಿಸಿದರು.

ಧರ್ಮಜ್ಞರಾದ, ಮುನಿಗಳಲ್ಲಿ ಶ್ರೇಷ್ಠರಾದ ಅಗಸ್ತ್ಯರು ಮೊದಲು ಆಸನದಲ್ಲಿ ಕುಳಿತು ಅನಂತರ ಶ್ರೀರಾಮನಿಗೂ ಕುಳಿತುಕೊಳ್ಳಲು, ಹೇಳಿ ಸುಖಾಸನದಲ್ಲಿ ಕೈಮುಗಿದುಕೊಂಡು ಕುಳಿತಿದ್ದ ಧರ್ಮಕೋವಿದನಾದ ಶ್ರೀರಾಮನಿಗೆ ಹೇಳಿದರು :

ಅಗ್ನಿಂ ಹುತ್ವಾ ಪ್ರದಾಯಾರ್ಘ್ಯಮತಿಥಿಂ ಪ್ರತಿಪೂಜಯೇತ್ ।

---

ಸಪ್ತದಶಂ '–ಎಂಬ ಅನುವಾಕದಲ್ಲಿ ಹೇಳಿರುವ ಸಪ್ತದಶಾಕ್ಷರದೇವತೆಗಳೇ ಆಗಿರುತ್ತಾರೆಂದೂ, ಅಗಸ್ತ್ಯಮಹರ್ಷಿಗಳು ಪೂಜಾರ್ಥವಾಗಿ ಆ ದೇವತೆಗಳನ್ನು ತಮ್ಮ ಆಶ್ರಮದಲ್ಲಿಯೇ ಪ್ರತಿಷ್ಠಾಪಿಸಿದ್ದರೆಂದೂ, ಮತ್ತೊಬ್ಬ ವ್ಯಾಖ್ಯಾನಕಾರರು ವಿವರಿಸಿದ್ದಾರೆ.

ಅನ್ಯಥಾ ಖಲು ಕಾಕುತ್ಸ್ಥ ತಪಸ್ವೀ ಸಮುದಾಚರನ್ ।
ದುಃಸಾಕ್ಷೀವ ಪರೇ ಲೋಕೇ ಸ್ವಾನಿ ಮಾಂಸಾನಿ ಭಕ್ಷಯೇತ್॥೨೯॥

"ರಾಘವ! ವೈಶ್ವದೇವವಿಧಿಯಲ್ಲಿ ಬರುವಂತೆ ಅಗ್ನಿಯಲ್ಲಿ ಹೋಮ ಮಾಡಿ ಅತಿಥಿಯಾದವನಿಗೆ ಅರ್ಘ್ಯವನ್ನಿತ್ತು ಸತ್ಕರಿಸಬೇಕು. ಈ ವಿಧಾನದಲ್ಲಿ ಅತಿಥಿಪೂಜೆಯನ್ನು ಮಾಡದಿದ್ದರೆ ತಪಸ್ವಿಯೂ ಕೂಡ ಸುಳ್ಳುಸಾಕ್ಷಿಯನ್ನು ಹೇಳಿದವನಂತೆ-ಪರಲೋಕದಲ್ಲಿ ತನ್ನ ಮಾಂಸವನ್ನು ತಾನೇ ಭಕ್ಷಿಸಬೇಕಾಗುತ್ತದೆ.

ರಾಜಾ ಸರ್ವಸ್ಯ ಲೋಕಸ್ಯ ಧರ್ಮಚಾರೀ ಮಹಾರಥಃ ।
ಪೂಜನೀಯಶ್ಚ ಮಾನ್ಯಶ್ಚ ಭವಾನ್ಪ್ರಾಪ್ತಃ ಪ್ರಿಯಾತಿಥಿಃ ॥೩೦॥

ರಾಘವ! ನೀನು ಎಲ್ಲ ಲೋಕಗಳಿಗೂ ರಾಜನಾಗಿರುವೆ. ಧರ್ಮಪ್ರವರ್ತಕನಾಗಿರುವೆ. ಮಹಾರಥನೂ ಆಗಿರುವೆ. ಇಂದು ನೀನು ನನಗೆ ಅತಿಪ್ರಿಯನಾದ ಅತಿಥಿಯ ರೂಪದಲ್ಲಿ ಆಗಮಿಸಿರುವೆ. ಆದುದರಿಂದಲೇ ನೀನು ನಮಗೆ ಪೂಜ್ಯನೂ ಮಾನ್ಯನೂ ಆಗಿರುವೆ."

ಹೀಗೆ ಹೇಳಿ ಅಗಸ್ತ್ಯರು ಶ್ರೀರಾಮನನ್ನು ಫಲ-ಮೂಲಗಳಿಂದಲೂ, ಪುಷ್ಪಗಳಿಂದಲೂ, ಪೂಜಾಯೋಗ್ಯವಾದ ಇತರ ವಸ್ತುಗಳಿಂದಲೂ ಮನಃಪೂರ್ತಿಯಾಗಿ ಆರಾಧಿಸಿ ಹೇಳಿದರು :

ಇದಂ ದಿವ್ಯಂ ಮಹಚ್ಚಾಪಂ ಹೇಮರತ್ನವಿಭೂಷಿತಮ್ ।
ವೈಷ್ಣವಂ ಪುರುಷವ್ಯಾಘ್ರ ನಿರ್ಮಿತಂ ವಿಶ್ವಕರ್ಮಣಾ ॥೩೧॥

ಅಮೋಘಃ ಸೂರ್ಯಸಂಕಾಶೋ ಬ್ರಹ್ಮದತ್ತಃ ಶರೋತ್ತಮಃ ।
ದತ್ತೌ ಮಮ ಮಹೇನ್ದ್ರೇಣ ತೂಣೀ ಚಾಕ್ಷಯಸಾಯಕೌ ॥೩೨॥

ಸಂಪೂರ್ಣೌ ನಿಶಿತೈರ್ಬಾಣೈರ್ಜ್ವಲದ್ಭಿರಿವ ಪಾವಕೈಃ ।
ಮಹಾರಜತಕೋಶೋಽಯಮಸಿರ್ಹೇಮವಿಭೂಷಿತಃ ॥೩೩॥

ಅನೇನ ಧನುಷಾ ರಾಮ ಹತ್ವಾ ಸಂಖ್ಯೇ ಮಹಾಸುರಾನ್ ।
ಆಜಹಾರ ಶ್ರಿಯಂ ದೀಪ್ತಾಂ ಪುರಾ ವಿಷ್ಣುರ್ದಿವೌಕಸಾಮ್ ॥೩೪॥

"ಪುರುಷಶ್ರೇಷ್ಠನೇ! ಸುವರ್ಣದಿಂದಲೂ ವಜ್ರ-ವೈಡೂರ್ಯಾದಿಗಳಿಂದಲೂ ಸಮಲಂಕೃತವಾಗಿರುವ ದಿವ್ಯವಾದ ಈ ವೈಷ್ಣವಮಹಾಧನುಸ್ಸು

ದೇವಶಿಲ್ಪಿಯಾದ ವಿಶ್ವಕರ್ಮನಿಂದಲೇ ನಿರ್ಮಿತವಾದುದು. ಸೂರ್ಯ ಸದೃಶವಾದ, ಅಮೋಘವಾದ ಮತ್ತು ಶ್ರೇಷ್ಠವಾದ ಈ ಬಾಣವನ್ನು ಬ್ರಹ್ಮನೇ ನನಗೆ ಅನುಗ್ರಹಿಸಿಕೊಟ್ಟನು. ಅಕ್ಷಯವಾದ ಬಾಣಗಳಿಂದ ತುಂಬಿರುವ ಈ ಎರಡು ಬತ್ತಳಿಕೆಗಳನ್ನೂ ಇಂದ್ರನು ಕೊಟ್ಟಿರುತ್ತಾನೆ. ಪ್ರಜ್ವಲಿಸುತ್ತಿರುವ ಅಗ್ನಿಗಳಂತೆಯೇ ಇರುವ ನಿಶಿತವಾದ ಬಾಣಗಳಿಂದ ಈ



ಬತ್ತಳಿಕೆಗಳು ಪೂರ್ಣವಾಗಿವೆ. ಚಿನ್ನದ ಒರೆಯನ್ನು ಹೊಂದಿರುವ ಈ ಕತ್ತಿಯು ಚಿನ್ನದ ಹಿಡಿಯಿಂದ ಸಮಲಂಕೃತವಾಗಿದೆ. ಈ ವೈಷ್ಣವಧನುಸ್ಸಿನಿಂದಲೇ ಹಿಂದೆ ಮಹಾವಿಷ್ಣುವು ಯುದ್ಧದಲ್ಲಿ ಮಹಾಸುರರೆಲ್ಲರನ್ನೂ ಸಂಹರಿಸಿ ಪರಮೋಜ್ಜ್ವಲವಾದ ಅಸುರಸಂಪತ್ತನ್ನು ತೆಗೆದುಕೊಂಡು ದೇವತೆಗಳಿಗೆ ಕೊಟ್ಟನು.

ತದ್ಧನುಸ್ತೌ ಚ ತೂಣೀರೌ ಶರಂ ಖಡ್ಗಂ ಚ ಮಾನದ ।
ಜಯಾಯ ಪ್ರತಿಗೃಹ್ಣೀಷ್ವ ವಜ್ರಂ ವಜ್ರಧರೋ ಯಥಾ ॥೩೬॥

ಮಾನಪ್ರದನೇ ! ಈ ವೈಷ್ಣವಧನುಸ್ಸನ್ನೂ, ಅಕ್ಷಯವಾದ ಬತ್ತಳಿಕೆಗಳನ್ನೂ, ಶ್ರೇಷ್ಠವಾದ ಬಾಣವನ್ನೂ, ಖಡ್ಗವನ್ನೂ–ಯುದ್ಧದಲ್ಲಿ ಜಯಗಳಿಸುವ ಸಲುವಾಗಿ ಇಂದ್ರನು ವಜ್ರಾಯುಧವನ್ನು ಸ್ವೀಕರಿಸಿದಂತೆ–ಸ್ವೀಕರಿಸು.”

ಮಹಾತೇಜಸ್ವಿಗಳಾದ ಅಗಸ್ತ್ಯರು ಹೀಗೆ ಹೇಳಿ ತಮ್ಮಲ್ಲಿದ್ದ ಶ್ರೇಷ್ಠವಾದ ಆಯುಧಗಳೆಲ್ಲವನ್ನೂ ಶ್ರೀರಾಮನಿಗೆ ಸಮರ್ಪಿಸಿ ಪುನಃ ಹೇಳತೊಡಗಿದರು.

೧೨ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೧೩ನೆಯ ಸರ್ಗ

## ಅಗಸ್ತ್ಯರು ಶ್ರೀರಾಮನ ವಿಷಯದಲ್ಲಿ ಪ್ರಸನ್ನರಾದುದು : ಅಗಸ್ತ್ಯರಿಂದ ಸೀತಾದೇವಿಯ ಪ್ರಶಂಸೆ : ಶ್ರೀರಾಮನ ಕೋರಿಕೆಯಂತೆ ಪಂಚವಟಿಯಲ್ಲಿ ಆಶ್ರಮವನ್ನು ಕಲ್ಪಿಸಿಕೊಂಡಿರಲು ಅಗಸ್ತ್ಯರು ಸಲಹೆಯನ್ನಿತ್ತುದು : ಸೀತಾ-ರಾಮ-ಲಕ್ಷ್ಮಣರ ಪ್ರಯಾಣ

ರಾಮ ಪ್ರೀತೋಽಸ್ಮಿ ಭದ್ರಂ ತೇ ಪರಿತುಷ್ಟೋಽಸ್ಮಿ ಲಕ್ಷ್ಮಣ ।
ಅಭಿವಾದಯಿತುಂ ಯನ್ಮಾಂ ಪ್ರಾಪ್ತೌ ಸ್ಥಃ ಸಹ ಸೀತಯಾ ॥೧॥

“ರಾಮ ! ನನಗೆ ಅಭಿವಾದನಮಾಡಿ ನನ್ನ ಆಶೀರ್ವಾದಗಳನ್ನು ಪಡೆಯುವ ಸಲುವಾಗಿ ನೀವು ಸೀತೆಯೊಡನೆ ಇಲ್ಲಿಗೆ ಆಗಮಿಸಿರುವುದು ನನಗೆ ತುಂಬಾ ಸಂತೋಷವಾಗಿದೆ. ನಿನಗೆ ಮಂಗಳವಾಗಲಿ. ಲಕ್ಷ್ಮಣ ! ನಿನ್ನ ಭ್ರಾತೃಸೇವಾಪರಾಯಣತೆಯನ್ನು ಕಂಡು ಸಂತುಷ್ಟನಾಗಿದ್ದೇನೆ.

ರಾಮ-ಲಕ್ಷ್ಮಣರೇ ! ಇಷ್ಟು ದೂರ ನಡೆದುಬಂದ ಅಧಿಕಶ್ರಮದಿಂದಾಗಿ ನಿಮಗೆ ಹೆಚ್ಚು ಆಯಾಸವಾಗಿದೆ. ಇದೇ ಕಾರಣದಿಂದಾಗಿ ಜನಕನ ಮಗಳಾದ ಸೀತಾದೇವಿಯೂ ವ್ಯಾಕುಲಗೊಂಡಿದ್ದಾಳೆ. ಸುಕುಮಾರಿಯಾದ ಸೀತಾದೇವಿಯು ಹಿಂದೆ ಯಾವಾಗಲೂ ಇಂತಹ ದುಃಖಗಳಿಂದ ಪೀಡಿತಳಾಗಿರಲಿಲ್ಲ. ಗಂಡನ ಮೇಲಿನ ಪ್ರೀತಿಯಿಂದ ಚೋದಿತಳಾಗಿ ಇವಳು

ಬಹುದೋಷಯುಕ್ತವಾದ ಅರಣ್ಯಕ್ಕೆ ಬಂದಿರುವಳು. ರಾಘವ! ಸೀತಾದೇವಿಯು ಸಂತೋಷವಾಗಿರುವಂತೆ ಅವಳಿಗೆ ಬೇಕಾದುದನ್ನು ನೀನು ಮಾಡಿಕೊಡು. ಅರಣ್ಯಕ್ಕೂ ನಿನ್ನನ್ನು ಅನುಸರಿಸಿ ಬಂದಿರುವ ಇವಳು ನಿಶ್ಚಯವಾಗಿಯೂ ಬಹುದುಷ್ಕರವಾದ ಕಾರ್ಯವನ್ನೇ ಮಾಡಿರುವಳು. ಸೃಷ್ಟಿಯು ಆರಂಭವಾದಾಗಿನಿಂದಲೂ ಸ್ತ್ರೀಯರ ಸ್ವಭಾವವು ಸಾಮಾನ್ಯವಾಗಿ ಹೀಗಿರುತ್ತದೆ.

ಸಮಸ್ಥಮನುರಜ್ಯನ್ತಿ ವಿಷಮಸ್ಥಂ ತ್ಯಜನ್ತಿ ಚ ।
ಶತಹ್ರದಾನಾಂ ಲೋಲತ್ವಂ ಶಸ್ತ್ರಾಣಾಂ ತೀಕ್ಷ್ಣತಾಂ ತಥಾ ।
ಗರುಡಾನಿಲಯೋಃ ಶೈಘ್ರ್ಯಮನುಗಚ್ಛನ್ತಿ ಯೋಷಿತಃ ॥೬॥

ಧನ-ಧಾನ್ಯಗಳ ಸಮೃದ್ಧಿಯಿಂದ ಸಮಸ್ಥಿತಿಯಲ್ಲಿರುವವನನ್ನು ಸ್ತ್ರೀಯರು ಸಂತೋಷಪಡಿಸುತ್ತಾರೆ. ಕಷ್ಟದಲ್ಲಿರುವ ದರಿದ್ರನನ್ನು ಪರಿತ್ಯಜಿಸುತ್ತಾರೆ. ಸ್ತ್ರೀಯರು ಮಿಂಚಿನ ಚಾಪಲ್ಯವನ್ನೂ, ಶಸ್ತ್ರಗಳ ತೀಕ್ಷ್ಣತೆಯನ್ನೂ, ಗರುಡ-ವಾಯುಗಳ ವೇಗವನ್ನೂ ಹೊಂದಿರುತ್ತಾರೆ.* ನಿನ್ನ ಭಾರ್ಯೆಯಾದ ಈ ಸೀತಾದೇವಿಯಾದರೋ ಈ ಎಲ್ಲ ದೋಷಗಳಿಂದಲೂ ಮುಕ್ತಳಾಗಿದ್ದಾಳೆ. ನಾನು ಹೇಳಿದ ಯಾವ ದೋಷವೂ ಇವಳಲ್ಲಿ ಇಲ್ಲವಾಗಿದೆ. ಆದುದರಿಂದಲೇ ಶ್ಲಾಘ್ಯಳು. ಮಹಾಪತಿವ್ರತೆಯಾದ ಅರುಂಧತೀದೇವಿಯಂತೆ ಇವಳಾದರೂ ಪತಿವ್ರತೆಯರಲ್ಲಿ ಅಗ್ರಗಣ್ಯಳೆಂದು ಪರಿಗಣಿಸಲ್ಪಡತಕ್ಕವಳೂ ಆಗಿದ್ದಾಳೆ. ಅರಿಂದಮನೇ! ವೈದೇಹಿಯೊಡನೆಯೂ, ತಮ್ಮನಾದ ಲಕ್ಷ್ಮಣನೊಡನೆಯೂ ಈ ಆಶ್ರಮದಲ್ಲಿ ವಾಸಮಾಡಲು ಬಂದಿರುವುದರಿಂದ ಈ ಆಶ್ರಮಭೂಮಿಯನ್ನೇ ನೀವು ನಿಮ್ಮ ಸಾನ್ನಿಧ್ಯದಿಂದ ಅಲಂಕರಿಸಿದಂತಾಗಿದೆ."

---

* ಶತಪ್ರದಗಳು ಎಂದರೆ ವಿದ್ಯುತ್ತುಗಳು ಅಥವಾ ಮಿಂಚುಗಳು-ಇವುಗಳ ಚಾಂಚಲ್ಯವನ್ನು ಹೆಂಗಸರು ಹೊಂದಿರುತ್ತಾರೆ. ಮಿಂಚಿನಂತೆ ಚಂಚಲಸ್ವಭಾವದವರಾಗಿರುತ್ತಾರೆ. ಮಿಂಚು ಬೆಳಕಿನಿಂದ ಕೂಡಿರುವುದೇನೋ ನಿಜ, ಆದರೆ ಸ್ಥಿರವಾಗಿ ಇರುವುದಿಲ್ಲ. ಕಾಣಿಸಿಕೊಂಡು ಎವೆಯಿಕ್ಕುವುದರಲ್ಲಿಯೇ ಮಾಯವಾಗುತ್ತದೆ. ಹೆಂಗಸರ ಸ್ವಭಾವವೂ ಅಷ್ಟೇ ಚಂಚಲವಾಗಿರುತ್ತದೆ. ಶಸ್ತ್ರಾಣಾಂ ತೀಕ್ಷ್ಣತಾಂ ಗಚ್ಛನ್ತಿ-ಇವರೇನಾದರೂ ಮುನಿದರೆಂದರೆ ಶಸ್ತ್ರಗಳಷ್ಟೇ ತೀಕ್ಷ್ಣಪ್ರಕೃತಿಯವರೂ ಆಗುತ್ತಾರೆ. 'ಒಲಿದರೆ

ಅಗಸ್ತ್ಯಮಹಾಮುನಿಗಳು ಹೀಗೆ ಹೇಳಲು ರಾಘವನು ವಿನೀತನಾಗಿ ಕೈಮುಗಿದುಕೊಂಡು ಅಗ್ನಿಯಂತೆ ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿದ್ದ ಅಗಸ್ತ್ಯರಿಗೆ ಹೇಳಿದನು :

" ಪೂಜ್ಯರೇ ! ಮುನಿಶ್ರೇಷ್ಠರಾದ ಮತ್ತು ನಮ್ಮ ಗುರುಗಳಾದ ನೀವು ಭ್ರಾತೃ-ಭಾರ್ಯಾಸಮೇತನಾಗಿ ಬಂದಿರುವ ನನ್ನ ಗುಣಗಳಿಂದ ಸಂತುಷ್ಟರಾಗಿರುವಿರಾದರೆ ನಿಶ್ಚಯವಾಗಿಯೂ ನಾನೇ ಧನ್ಯನು. ನಿಮ್ಮ ಈ ಸೌಮನಸ್ಯದಿಂದಾಗಿ ಅನುಗೃಹೀತನೂ ಆಗಿದ್ದೇನೆ. ಒಂದು ವಿಷಯವನ್ನು ತಮ್ಮಲ್ಲಿ ಪ್ರಾರ್ಥಿಸುವುದಿದೆ. ನೀರಿನಿಂದ ಕೂಡಿಯೂ. ದಟ್ಟವಾದ ಕಾಡಿನಿಂದ ಕೂಡಿಯೂ ಇರುವ ಸ್ಥಳವಾಗಿರಬೇಕು. ಅಂತಹ ಪ್ರದೇಶವು ಎಲ್ಲಿದೆಯೆಂಬುದನ್ನು ದಯಮಾಡಿ ಹೇಳಿರಿ. ಅಲ್ಲಿ ನಾನೊಂದು ಆಶ್ರಮವನ್ನು ಕಲ್ಪಿಸಿಕೊಂಡು ಸ್ವಕರ್ಮನಿರತನಾಗಿ ಸುಖವಾಗಿರುತ್ತೇನೆ."

ಮಹರ್ಷಿಗಳಾದ ಅಗಸ್ತ್ಯರು ಶ್ರೀರಾಮನ ಆ ಮಾತನ್ನು ಕೇಳಿ ಮುಹೂರ್ತಕಾಲ ಯೋಚಿಸುತ್ತಿದ್ದು ಅನಂತರ ಶುಭಾವಹವಾದ ಈ ಮಾತನ್ನು ಹೇಳಿದರು :

" ವತ್ಸ ! ಇಲ್ಲಿಗೆ ಎರಡು ಯೋಜನಗಳ ದೂರದಲ್ಲಿ ಸಂಪದ್ಯುಕ್ತವಾದ 'ಪಂಚವಟೀ' * ಎಂದು ವಿಖ್ಯಾತವಾಗಿರುವ ಕಾಡಿನ ಪ್ರದೇಶವಿದೆ. ಆ ಪ್ರದೇಶವು ಕಂದ-ಮೂಲ-ಫಲಗಳಿಂದಲೂ ನೀರಿನಿಂದಲೂ ಸಮೃದ್ಧವಾಗಿದೆ. ಬಹುಸಂಖ್ಯೆಯ ಮೃಗಗಳಿಂದ ಸಮಾವೃತವಾಗಿದೆ. ಆ ಪ್ರದೇಶಕ್ಕೆ ಸೀತಾ-ಲಕ್ಷ್ಮಣರೊಡನೆ ಹೋಗಿ ಅಲ್ಲಿ ಆಶ್ರಮವೊಂದನ್ನು ಕಲ್ಪಿಸಿಕೊಂಡು

---

ನಾರಿ ಮುನಿದರೆ ಮಾರಿ' ಎಂಬ ನಾಣ್ಣುಡಿಯೂ ಇದೇ ಅರ್ಥದಲ್ಲಿದೆ. ಗರುಡಾನಿಲಯೋಃ ಶೈಘ್ರ್ಯಂ ಗಚ್ಛನ್ತಿ = ವೇಗದಲ್ಲಿ ಪ್ರಸಿದ್ಧರಾದವರೆಂದರೆ ಗರುಡ ಮತ್ತು ಗಾಳಿ. ಸ್ತ್ರೀಯರು ಅವರಂತೆ ಆವೇಶಪೂರ್ಣವಾಗಿ ಕೆಲಸಮಾಡಿಬಿಡುತ್ತಾರೆ – ಎಂದು ಅರ್ಥ. ಈ ವರ್ಣನೆಯು ಸಾಮಾನ್ಯಸ್ತ್ರೀಯರನ್ನು ಕುರಿತು ಹೇಳಿದ್ದು.

* ಪಞ್ಚವಟೀ–ಪಞ್ಚಾನಾಂ ವಟಾನಾಂ ಸಮಾಹಾರಃ ಪಞ್ಚವಟೀ. ವಿಶಾಲವೂ, ಎತ್ತರವೂ ಆಗಿರುವ ಐದು ಆಲದ ಮರಗಳಿರುವುದರಿಂದ ಆ ಪ್ರದೇಶಕ್ಕೆ ಪಂಚವಟೀ ಎಂದು ಹೆಸರು. ಗೋದಾವರೀನದಿಯ ಉತ್ತರತೀರದಲ್ಲಿ ನಾಸಿಕಾಕ್ಷೇತ್ರದ ( ನಾಸಿಕ್ ) ಸಮೀಪದಲ್ಲಿದೆ.

ತಂದೆಯ ವಾಕ್ಯವನ್ನು ಯಥಾವತ್ತಾಗಿ ಪರಿಪಾಲನೆ ಮಾಡುತ್ತಾ ಸುಖಿಯಾಗಿರು. ನರೇಂದ್ರನಾದ ದಶರಥನೊಡನೆ ನೀನು ಯಾವ ಪ್ರತಿಜ್ಞೆಯನ್ನು ಮಾಡಿರುವೆಯೋ, ಎಷ್ಟುಕಾಲ ವನವಾಸಮಾಡುವುದಾಗಿ ಆ ನಿನ್ನ ತಂದೆಗೆ ಭಾಷೆಯನ್ನಿತ್ತು ಬಂದಿರುವೆಯೋ–ಆ ಹದಿನಾಲ್ಕು ವರ್ಷಗಳ ಅವಧಿಯಲ್ಲಿ ಹೆಚ್ಚು ಕಾಲವು ಈಗಾಗಲೇ ಕಳೆದುಹೋಗಿದೆ. ನೀನು ನಿನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡು ರಾಜ್ಯದಲ್ಲಿ ಸುಸ್ಥಿರವಾಗಿ ನಿಲ್ಲುವೆ. ಸುಖವಾಗಿ ರಾಜ್ಯಭಾರಮಾಡಿಕೊಂಡಿರುವೆ. ಇದರಲ್ಲಿ ಸಂಶಯವೇ ಇಲ್ಲ. ನಿನ್ನ ತಂದೆಯಾದ ದಶರಥರಾಜನು ನಿಶ್ಚಯವಾಗಿಯೂ ಧನ್ಯನು. ಯಯಾತಿಯನ್ನು ಅಷ್ಟಕನೇ ಮೊದಲಾದ ಅವನ ಮೊಮ್ಮಕ್ಕಳು ಉದ್ಧರಿಸಿದಂತೆ–ಜ್ಯೇಷ್ಠಪುತ್ರನಾದ ನೀನು ತಂದೆಯನ್ನು ಮಿಥ್ಯಾಪ್ರತಿಜ್ಞೆಯಿಂದ ಒದಗಬಹುದಾಗಿದ್ದ ಮಹಾಪಾಪದಿಂದ ಪಾರುಮಾಡಿರುವೆ. ಅನಘನೇ ! ಈ ಎಲ್ಲ ವೃತ್ತಾಂತಗಳನ್ನೂ ನಾನು ತಪಸ್ಸಿನ ಪ್ರಭಾವದಿಂದಲೂ ಮತ್ತು ದಶರಥನಲ್ಲಿ ನನಗಿದ್ದ ಸ್ನೇಹದ ಕಾರಣದಿಂದಲೂ ಈ ಹಿಂದೆಯೇ ತಿಳಿದುಕೊಂಡಿದ್ದೆನು. ನಿನ್ನ ಹೃದ್ಗತವಾದ ಅಭಿಪ್ರಾಯವನ್ನೂ ನಾನು ನನ್ನ ತಪಃಪ್ರಭಾವದಿಂದ ತಿಳಿದುಕೊಂಡೆನು. ನನ್ನೊಡನೆ ಈ ತಪೋವನದಲ್ಲಿ ವಾಸಮಾಡಲು ನಿಶ್ಚಯಿಸಿ ನೀನಿಲ್ಲಿಗೆ ಬಂದಿರುವೆ. ಆದರೆ ನೀನಿಲ್ಲಿದ್ದರೆ ಎಲ್ಲರಿಗೂ ನಿನ್ನ ನಿವಾಸಸ್ಥಳವು ತಿಳಿಯುತ್ತದೆ. ಆದುವರಿಂದಲೇ ನಾನು ನಿನಗೆ ಪಂಚವಟಿಗೆ ಹೋಗಲು ಹೇಳುತ್ತಿರುವೆನು. ಪಂಚವಟಿಯ ವನಪ್ರದೇಶವೂ ಬಹುರಮ್ಯವಾಗಿದ್ದು ವೈದೇಹಿಯೂ ಅಲ್ಲಿ ಸಂತೋಷದಿಂದಿರುತ್ತಾಳೆ. ಆ ವನಪ್ರದೇಶವು ಶ್ಲಾಘನೀಯವಾಗಿದೆ. ಇಲ್ಲಿಗೆ ಹೆಚ್ಚು ದೂರವೂ ಇಲ್ಲ. ಗೋದಾವರೀ ನದಿಯ ತೀರದಲ್ಲಿದೆ. ಅಂತಹ ರಮ್ಯವಾದ ಪರಿಸರದಲ್ಲಿ ವೈದೇಹಿಯು ಆನಂದಪಡುತ್ತಾಳೆ. ಮೇಲಾಗಿ ಆ ಪ್ರದೇಶವು ಕಂದ-ಮೂಲ-ಫಲಗಳಿಂದ ಸಮೃದ್ಧವಾಗಿದೆ. ನಾನಾವಿಧವಾದ ಪಕ್ಷಿಗಳ ಸಮೂಹಗಳಿಂದ ಸಮಾವೃತವಾಗಿದೆ. ಜನಜಂಗುಳಿಯಿಂದ ವಿಹೀನವಾಗಿದೆ. ಪುಣ್ಯತಮವೂ ಮತ್ತು ಬಹುರಮ್ಯವೂ ಆಗಿದೆ. ನೀನು ಸದಾಚಾರನಿರತನಾಗಿರುವೆ. ಪಂಚವಟಿಯಲ್ಲಿ ವಾಸಮಾಡುತ್ತಾ ಇಲ್ಲಿರುವ ತಪಸ್ವಿಗಳನ್ನು ರಾಕ್ಷಸರ ಉಪಟಳದಿಂದ ರಕ್ಷಿಸಬಹುದಾಗಿದೆ.

ರಾಘವ ! ಅದೋ ಹಿಪ್ಪೇಮರಗಳ ಕಾಡು ಅಲ್ಲಿ ಕಾಣುತ್ತಿದೆಯಲ್ಲವೇ ! ಆ ಕಾಡಿನಿಂದ ಉತ್ತರಕ್ಕೆ ಪ್ರಯಾಣಮಾಡಬೇಕು. ಆ ಮಾರ್ಗವನ್ನು ಹಿಡಿದು ಹೋದರೆ ಮುಂದೆ ಒಂದು ಆಲದ ಮರವು ಸಿಕ್ಕುತ್ತದೆ. ಅದರ ಬಳಿಗೆ ಹೋದರೆ ಮರಗಳಿಲ್ಲದ ದಿಬ್ಬದ ಪ್ರದೇಶವು ಸಿಕ್ಕುತ್ತದೆ. ಆ ದಿಬ್ಬವನ್ನು ಹತ್ತಿಹೋದರೆ ಒಂದು ಪರ್ವತವು ಕಾಣಿಸುತ್ತದೆ. ಆ ಪರ್ವತಕ್ಕೆ ಹತ್ತಿರದಲ್ಲಿಯೇ 'ಪಂಚವಟೀ' ಎಂದೇ ಪ್ರಸಿದ್ಧವಾಗಿರುವ, ವರ್ಷಪೂರ್ತಿಯಾಗಿ ಹೂಗಳಿಂದ ಕಂಗೊಳಿಸುವ, ರಮ್ಯವಾದ ಅರಣ್ಯವಿದೆ. ಅಲ್ಲಿಗೆ ಈಗಲೇ ನೀನು ಪ್ರಯಾಣಮಾಡು."

ಅಗಸ್ತ್ಯರು ಹೀಗೆ ಹೇಳಲು ಶ್ರೀರಾಮನು ಸೌಮಿತ್ರಿಯೊಡನೆ ಸತ್ಯವಾದಿಗಳಾದ ಅಗಸ್ತ್ಯರನ್ನು ನಮಸ್ಕಾರಾದಿಗಳಿಂದ ಸತ್ಕರಿಸಿ ಪಂಚವಟಿಗೆ ಪ್ರಯಾಣಮಾಡಲು ಅನುಮತಿಯನ್ನು ಪ್ರಾರ್ಥಿಸಿದನು. ಕಾಲುಮುಟ್ಟಿ ನಮಸ್ಕರಿಸಿದ ಇಬ್ಬರು ಸೋದರರನ್ನೂ ಅಗಸ್ತ್ಯರು ಆಶೀರ್ವದಿಸಿ ಪ್ರಯಾಣಮಾಡಲು ಅನುಮತಿಯನ್ನಿತ್ತರು. ಬಳಿಕ ರಾಮ-ಲಕ್ಷ್ಮಣರು ಸೀತಾಸಮೇತರಾಗಿ ಅಗಸ್ತ್ಯರ ಆಶ್ರಮದಿಂದ ಸುವಿಖ್ಯಾತವಾದ ಪಂಚವಟಿಗೆ ಪ್ರಯಾಣಮಾಡಿದರು. ಪ್ರಯಾಣಮಾಡುವಾಗ ಯುದ್ಧದ ಸಮಯದಲ್ಲಿಯೂ ಭಯವೆಂಬುದನ್ನೇ ಕಾಣದ ದಶರಥನ ಮಕ್ಕಳಾದ ರಾಮ-ಲಕ್ಷ್ಮಣರು, ಧನುಷ್ಪಾಣಿಗಳಾಗಿ ಬತ್ತಳಿಕೆಗಳನ್ನು ಬೆನ್ನಿಗೆ ಬಿಗಿದುಕೊಂಡು, ಏಕಾಗ್ರಚಿತ್ತರಾಗಿ ಅಗಸ್ತ್ಯಮಹರ್ಷಿಗಳು ಸೂಚಿಸಿದ್ದ ಮಾರ್ಗವನ್ನೇ ಹಿಡಿದು ಪಂಚವಟಿಯ ಕಡೆಗೆ ಪ್ರಯಾಣಹೊರಟರು.

೧೩ನೆಯ ಸರ್ಗವು ಮುಗಿಯಿತು.

ಅಯೋಧ್ಯಾಕಾಂಡ ೧೪ನೆಯ ಸರ್ಗ

## ಪಂಚವಟಿಗೆ ಹೋಗುವ ಮಾರ್ಗದಲ್ಲಿ ಶ್ರೀರಾಮನು ಜಟಾಯುವನ್ನು ಸಂಧಿಸಿ ತನ್ನ ಪರಿಚಯವನ್ನು ಮಾಡಿಕೊಟ್ಟುದು

ಅಥ ಪಞ್ಚವಟೀಂ ಗಚ್ಛನ್ನನ್ತರಾ ರಘುನನ್ದನಃ ।
ಆಸಸಾದ ಮಹಾಕಾಯಂ ಗೃಧ್ರಂ ಭೀಮಪರಾಕ್ರಮಮ್ ॥೧॥

ಪಂಚವಟಿಗೆ ಹೋಗುತ್ತಿದ್ದಾಗ ಮಾರ್ಗಮಧ್ಯದಲ್ಲಿ ರಾಘವನು

ಭಯಂಕರಪರಾಕ್ರಮಿಯಾಗಿದ್ದ, ದೊಡ್ಡದಾದ ಶರೀರವನ್ನು ಹೊಂದಿದ್ದ ಒಂದು ಹದ್ದನ್ನು ನೋಡಿದನು. ಆಲದ ಮರದ ಮೇಲೆ ಕುಳಿತಿದ್ದ ಬೃಹದಾಕಾರದ ಆ ಹದ್ದನ್ನು ನೋಡಿ ಮಹಾಭಾಗರಾದ ರಾಮ-ಲಕ್ಷ್ಮಣರು ಅವನೊಬ್ಬ ರಾಕ್ಷಸನೇ ಇರಬಹುದೆಂದು ಭಾವಿಸಿ ನೀನಾರೆಂದು ಆ ಮಹಾಪ್ರಾಣಿಯನ್ನು ಪ್ರಶ್ನಿಸಿದರು.

ಮಧುರವಾದ ಮತ್ತು ಸೌಮ್ಯವಾದ ಮಾತುಗಳಿಂದ ರಾಮ-ಲಕ್ಷ್ಮಣರನ್ನು ಸಂತೃಪ್ತಿಗೊಳಿಸಲೋ ಎಂಬಂತೆ ಆ ಹದ್ದು ಹೇಳಿತು :

"ವತ್ಸ ಮಾಂ ವಿದ್ಧಿ ವಯಸ್ಯಂ ಪಿತುರಾತ್ಮನಃ ॥೩॥ ಮಗು! ನನ್ನನ್ನು ನಿನ್ನ ತಂದೆಯ ಸ್ನೇಹಿತನೆಂದು ತಿಳಿ." ರಣಹದ್ದು ಹೀಗೆ ಹೇಳಿದೊಡನೆಯೇ ಶ್ರೀರಾಮನು ಅದನ್ನು ಪೂಜ್ಯಭಾವನೆಯಿಂದ ಯಥೋಚಿತವಾಗಿ ಸತ್ಕರಿಸಿ ಏಕಾಗ್ರಚಿತ್ತನಾಗಿ ಮಹಾಗೃಧ್ರದ ಕುಲವನ್ನೂ ಮತ್ತು ಹೆಸರನ್ನೂ ಕೇಳಿದನು. ಗೃಧ್ರನು ರಾಮನಿಗೆ ಸಕಲಪ್ರಾಣಿಗಳ ಉತ್ಪತ್ತಿಯನ್ನೂ ಮತ್ತು ತನ್ನ ಕುಲದ ವಿಷಯವನ್ನೂ ಹೇಳಲು ಉಪಕ್ರಮಿಸಿದನು.

"ರಾಮ! ಪೂರ್ವದಲ್ಲಿ ಯಾರು ಯಾರು ಪ್ರಜಾಪತಿಗಳಾಗಿದ್ದರೋ ಅವರ ವಿಷಯಗಳನ್ನು ಮೊದಲಿನಿಂದಲೂ ಹೇಳುತ್ತೇನೆ. ಅವಧರಿಸು. ಪ್ರಜಾಪತಿಗಳಲ್ಲಿ ಕರ್ದಮನೆಂಬುವವನೇ ಮೊದಲನೆಯವನು. ವಿಕೃತನೆಂಬುವವನು ಎರಡನೆಯವನು. ಶೇಷನೆಂಬುವನು ಮೂರನೆಯವನು. ನಾಲ್ಕನೆಯವನು ಸಂಶ್ರಯನು. ಬಹುಪುತ್ರನೆಂಬುವನು ಐದನೆಯವನು. ಆರನೆಯವನೇ ಸ್ಥಾಣು. ಏಳನೆಯವನು ಮರೀಚಿಯು. ಎಂಟನೆಯವನು ಅತ್ರಿ. ಕ್ರತು ಎಂಬುವವನು ಒಂಬತ್ತನೆಯವನು. ಹತ್ತನೆಯವನು ಪುಲಸ್ತ್ಯ. ಹನ್ನೊಂದನೆಯವನು ಅಂಗಿರಸ. ಪ್ರಚೇತಸನು ಹನ್ನೆರಡನೆಯವನು. ಹದಿಮೂರನೆಯವನು ಪುಲಹ. ಹದಿನಾಲ್ಕನೆಯವನು ಸುಪ್ರಸಿದ್ಧನಾದ ದಕ್ಷಪ್ರಜಾಪತಿಯು. ಹದಿನೈದನೆಯವನು ವಿವಸ್ವಂತ. ಹದಿನಾರನೆಯವನು ಅರಿಷ್ಟನೇಮಿ. ಹದಿನೇಳನೆಯವನು ಹಾಗೂ ಕಡೆಯವನು ಮಹಾತೇಜಸ್ವಿಯಾದ ಕಶ್ಯಪನು. ಹದಿನಾಲ್ಕನೆಯವನಾದ ದಕ್ಷಪ್ರಜಾಪತಿಗೆ ಯಶಸ್ವಿನಿಯರಾದ ಅರುವತ್ತು ಮಂದಿ ಹೆಣ್ಣುಮಕ್ಕಳು ಹುಟ್ಟಿದರು. ಕಡೆಯವನಾದ ಕಶ್ಯಪನು ದಕ್ಷಪ್ರಜಾಪತಿಯ ಆ ಅರುವತ್ತು ಮಂದಿ ಹೆಣ್ಣುಮಕ್ಕಳಲ್ಲಿ ಸುಂದರವಾದ ನಡು

ವನ್ನು ಹೊಂದಿದ್ದ ಅದಿತಿ, ದಿತಿ, ದನೂ, ಕಾಲಿಕಾ, ತಾಮ್ರಾ, ಕ್ರೋಧವಶಾ, ಮನು, ಅನಲಾ ಎಂಬ ಎಂಟುಮಂದಿ ಹೆಣ್ಣುಮಕ್ಕಳನ್ನು ಮದುವೆಮಾಡಿಕೊಂಡನು.* ತಾನು ವರಿಸಿದ ಕನ್ಯೆಯರ ವಿಷಯದಲ್ಲಿ ಸುಪ್ರೀತನಾದ ಕಶ್ಯಪನು ತನ್ನ ಪತ್ನಿಯರಿಗೆ–'ಮೂರು ಲೋಕಗಳನ್ನೂ ಧರಿಸಲು ಸಮರ್ಥರಾದ, ಮಹಾವೀರ್ಯರಾದ, ನನಗೆ ಸಮಾನರಾದ ಮಕ್ಕಳನ್ನು ಪಡೆಯಿರಿ'–ಎಂದು ಆದೇಶವನ್ನಿತ್ತನು. ಅದಿತಿ, ದಿತಿ, ದನು, ಕಾಲಿಕಾ–ಈ ನಾಲ್ವರು ಕಶ್ಯಪನ ನಿರ್ದೇಶದಂತೆ ಮಹಾವೀರ್ಯರಾದ ಸುಪುತ್ರರನ್ನು ಅವನಿಂದ ಪಡೆದುಕೊಳ್ಳಲು ಮನಸ್ಸು ಮಾಡಿದರು. ಅಪರೆ ಉಳಿದವರಿಗೆ ಅದು ಇಷ್ಟವಾಗಲಿಲ್ಲ. ಅದಿತಿಯು ಕಶ್ಯಪನಿಂದ ಮೂವತ್ತುಮೂರು ದೇವತೆಗಳನ್ನು ಮಕ್ಕಳನ್ನಾಗಿ ಪಡೆದುಕೊಂಡಳು. ದ್ವಾದಶಾದಿತ್ಯರು, ಏಕಾದಶರುದ್ರರು, ಅಷ್ಟವಸುಗಳು ಮತ್ತು ಇಬ್ಬರು ಅಶ್ವಿನೀದೇವತೆಗಳು–ಇವರೇ ಆ ಮೂವತ್ತು ಮೂರು ದೇವತೆಗಳು. ದಿತಿಯು ಕಶ್ಯಪನಿಂದ ಯಶೋವಂತರಾದ ದೈತ್ಯರನ್ನು ಮಕ್ಕಳನ್ನಾಗಿ ಪಡೆದಳು. ಅರಣ್ಯಗಳಿಂದಲೂ, ಸಮುದ್ರಗಳಿಂದಲೂ ವ್ಯಾಪ್ತವಾಗಿರುವ ಈ ಭೂಮಿಯು ಮೊದಲು ದೈತ್ಯರ ಅಧೀನದಲ್ಲಿಯೇ ಇದ್ದಿತು. ದನುವು ಕಶ್ಯಪನಿಂದ ಅಶ್ವಗ್ರೀವನೆಂಬ ಮಗನನ್ನು ಪಡೆದಳು. ಕಾಲಿಕೆಯು ನರಕ ಮತ್ತು ಕಾಲಕರೆಂಬ ಇಬ್ಬರು ಮಕ್ಕಳನ್ನು ಕಶ್ಯಪನಿಂದ ಪಡೆದುಕೊಂಡಳು. ಹಿಂದೆ ಹೇಳಿದಂತೆ ಉಳಿದವರಿಗೆ ಗಂಡುಮಕ್ಕಳನ್ನು ಪಡೆದುಕೊಳ್ಳುವ ಮನಸ್ಸಿರಲಿಲ್ಲ. ತಾಮ್ರಾ ಎಂಬುವಳು ಲೋಕವಿಖ್ಯಾತೆಯರಾದ ಕ್ರೌಂಚೀ, ಭಾಸೀ, ಶ್ಯೇನೀ, ಧೃತರಾಷ್ಟ್ರೀ ಮತ್ತು ಶುಕೀ ಎಂಬ ಐವರು ಹೆಣ್ಣುಮಕ್ಕಳನ್ನು ಕಶ್ಯಪನಿಂದ ಪಡೆದಳು. ಆ ಐವರು ಕನ್ಯೆಯರಿಂದ ಪಕ್ಷಿಗಳ ಸಂತಾನವು ಆರಂಭವಾಯಿತು. ಕ್ರೌಂಚಿ ಎಂಬುವಳು ಗೂಬೆಗಳನ್ನೂ, ಭಾಸೀ ಎಂಬುವಳು ಭಾಸಪಕ್ಷಿಗಳನ್ನೂ, ಶ್ಯೇನೀ ಎಂಬುವಳು ತೇಜೋವಿಶಿಷ್ಟವಾದ ಶ್ಯೇನಪಕ್ಷಿಗಳನ್ನೂ–ಗೃಧ್ರಗಳನ್ನೂ ಪ್ರಸವಿಸಿದರು. ಧೃತರಾಷ್ಟ್ರೀ ಎಂಬುವಳು

---

*ಬ್ರಹ್ಮನ ಮಗನಾದ ಮರೀಚಿಮಹರ್ಷಿಯಿಂದ ಕರ್ದಮನ ಪುತ್ರಿಯಾದ ಕಲಾ ಎಂಬುವಳಲ್ಲಿ ಕಶ್ಯಪನು ಹುಟ್ಟಿದವನೆಂದೂ–ಅವನಿಗೆ ಅದಿತಿ, ದಿತಿ, ದನು, ಕಲಾ, ದನಾಯು, ಸಿಂಹಿಕಾ, ಕ್ರೋಧಾ, ಪ್ರಧಾ, ವಿಶ್ವಾ ವಿನತಾ, ಕಪಿಲಾ, ಮುನಿ, ಕದ್ರೂ–ಎಂಬ ಹದಿಮೂರು ಮಂದಿ ದಕ್ಷಕನ್ಯೆಯರು ಪತ್ನಿಯರೆಂದೂ ಮಹಾಭಾರತದಲ್ಲಿ ಹೇಳಿದೆ.

ಹಂಸಗಳನ್ನೂ, ಕಲಹಂಸಗಳನ್ನೂ, ಚಕ್ರವಾಕಪಕ್ಷಿಗಳನ್ನೂ ಪ್ರಸವಿಸಿದಳು. ತಾಮ್ರಾಪುತ್ರಿಯಾದ ಶುಕಿಯು ನತಾ ಎಂಬುವಳನ್ನು ಪ್ರಸವಿಸಿದಳು. ನತಾ ಎಂಬುವಳಲ್ಲಿ ವಿನತಾ ಎಂಬ ಹೆಣ್ಣು ಹುಟ್ಟಿತು. ಕ್ರೋಧವಶಾ ಎಂಬ ಕಶ್ಯಪನ ಆರನೆಯ ಹೆಂಡತಿಯು–ಮೃಗೀ, ಮೃಗಮಂದಾ, ಹರೀ, ಭದ್ರಮದಾ, ಮಾತಂಗೀ, ಶಾರ್ದೂಲೀ, ಶ್ವೇತಾ, ಸುರಭಿ, ಸರ್ವಲಕ್ಷಣಸಂಪನ್ನೆಯರಾದ ಸುರಸಾ, ಕದ್ರುಕಾ–ಎಂಬ ಹತ್ತು ಹೆಣ್ಣುಮಕ್ಕಳನ್ನು ಕಶ್ಯಪನಿಂದ ಪಡೆದುಕೊಂಡಳು. ಮೃಗಗಳೆಲ್ಲವೂ ಮೃಗೀ ಎಂಬುವಳ ಮಕ್ಕಳು. ಮೃಗಮಂದಾ ಎಂಬುವಳಿಂದ ಕರಡಿಗಳೂ, ಕಪ್ಪುಬಣ್ಣದ ಚಮರೀಮೃಗಗಳೂ, ಬಿಳಿಯಬಣ್ಣದ ಚಮರೀಮೃಗಗಳೂ ಹುಟ್ಟಿದುವು. ಭದ್ರಮದಾ ಎಂಬುವಳು ಇರಾವತಿ ಎಂಬ ಹೆಣ್ಣಿಗೆ ಜನ್ಮವನ್ನಿತ್ತಳು. ಅವಳಲ್ಲಿಯೇ ಲೋಕದಲ್ಲಿರುವ ಆನೆಗಳಿಗೆ ಒಡೆಯನಾದ ಐರಾವತನೆಂಬ ಗಜಶ್ರೇಷ್ಠನು ಹುಟ್ಟಿದನು. ಹರಿ ಎಂಬುವಳಲ್ಲಿ ಸಿಂಹಗಳೂ, ಮಹಾವೇಗವುಳ್ಳ ವಾನರಗಳೂ ಹುಟ್ಟಿದುವು. ಶಾರ್ದೂಲೀ ಎಂಬುವಳು ಗೋವಿನ ಬಾಲದಂತೆ ಬಾಲವುಳ್ಳ ಕೋತಿಗಳನ್ನೂ, ವ್ಯಾಘ್ರಗಳನ್ನೂ ಪ್ರಸವಿಸಿದಳು. ಮಾತಂಗೀ ಎಂಬುವಳಲ್ಲಿ ಆನೆಗಳು ಹುಟ್ಟಿದುವು. ಶ್ವೇತಾ ಎಂಬುವಳು ಅಷ್ಟದಿಗ್ಗಜಗಳನ್ನು ಮಕ್ಕಳನ್ನಾಗಿ ಪಡೆದುಕೊಂಡಳು. ಸುರಭಿ ಎಂಬುವಳು ರೋಹಿಣೀ ಮತ್ತು ಗಂಧರ್ವೀ ಎಂಬ ಯಶೋವತಿಯರಾದ ಇಬ್ಬರು ಹೆಣ್ಣುಮಕ್ಕಳನ್ನು ಪ್ರಸವಿಸಿದಳು. ರಾಘವ! ಭೂತೋತ್ಪತ್ತಿಯ ಕಥೆಯನ್ನು ಕೇಳುತ್ತಿರುವ ನಿನಗೆ ಮಂಗಳವಾಗಲಿ. ರೋಹಿಣೀದೇವಿಯು ಹಸುಗಳನ್ನೂ, ಗಂಧರ್ವಿಯು ಕುದುರೆಗಳನ್ನೂ ಪ್ರಸವಿಸಿದರು. ಸುರಸಾ ಎಂಬುವಳು ಹೆಡೆಗಳಿರುವ ನಾಗಗಳನ್ನೂ, ಕದ್ರೂ ಎಂಬುವಳು ಸರ್ಪಗಳನ್ನೂ ಪುತ್ರರನ್ನಾಗಿ ಪಡೆದುಕೊಂಡರು. ಮನು ಎಂಬುವಳು ಮಹಾತ್ಮನಾದ ಕಶ್ಯಪನಿಂದ ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರರೆಂಬ ನಾಲ್ಕು ವರ್ಣಗಳ ಮನುಷ್ಯಪುತ್ರರನ್ನುಪಡೆದುಕೊಂಡಳು.

**ಮುಖತೋ ಬ್ರಾಹ್ಮಣಾ ಜಾತಾ ಉರಸಃ ಕ್ಷತ್ರಿಯಾಸ್ತಥಾ ।**
**ಊರುಭ್ಯಾಂ ಜಜ್ಞಿರೇ ವೈಶ್ಯಾಃ ಪದ್ಭ್ಯಾಂ ಶೂದ್ರಾ ಇತಿ ಶ್ರುತಿಃ ॥**

ಮುಖದಿಂದ ಬ್ರಾಹ್ಮಣರೂ, ಎದೆಯಿಂದ ಕ್ಷತ್ರಿಯರೂ, ತೊಡೆಗಳಿಂದ

ವೈಶ್ಯರೂ, ಕಾಲುಗಳಿಂದ ಶೂದ್ರರೂ ಹುಟ್ಟಿದರೆಂದೂ ಶ್ರುತಿವಾಕ್ಯವು ಹೇಳುತ್ತದೆ.

ಕಶ್ಯಪನ ಎಂಟನೆಯ ಪತ್ನಿಯಾದ ಅನಲಾ ಎಂಬುವಳು ಪುಣ್ಯಫಲಗಳಿಂದ ಕೂಡಿರುವ ಸಮಸ್ತವೃಕ್ಷಗಳನ್ನೂ ಕಶ್ಯಪರಿಂದ ಮಕ್ಕಳನ್ನಾಗಿ ಪಡೆದುಕೊಂಡಳು. ಹಿಂದೆಯೇ ಹೇಳಿದಂತೆ ಕಶ್ಯಪನ ಹೆಂಡತಿಯಾದ ತಾಮ್ರಾ ಎಂಬುವಳಲ್ಲಿ ಶುಕೀ ಎಂಬುವಳು ಹುಟ್ಟಿದಳು. ನತಾ ಎಂಬುವಳು ಶುಕಿಯ ಮಗಳು. ಅವಳಿಗೆ ವಿನತಾ ಎಂಬುವಳು ಹುಟ್ಟಿದಳು. ಕ್ರೋಧವಶಾ ಎಂಬುವಳ ಮಕ್ಕಳಾದ ಸುರಸಾ ಕದ್ರುಕಾ ಎಂಬುವರು ಅಕ್ಕ-ತಂಗಿಯರು. ಕದ್ರೂ ಎಂಬುವಳು ಭೂಗೋಳವನ್ನು ಹೊತ್ತಿರುವ ಸಾವಿರ ಮುಖಗಳುಳ್ಳ ಶೇಷನಾಗನನ್ನು ಪುತ್ರನನ್ನಾಗಿ ಪಡೆದಳು. ವಿನತೆಗೆ ಅರುಣ ಮತ್ತು ಗರುಡ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಸಂಪಾತಿಯೂ ಮತ್ತು ನಾನೂ ಅರುಣನ ಮಕ್ಕಳು. ಸಂಪಾತಿಯು ನನ್ನ ಅಗ್ರಜನು. ನನ್ನನ್ನು ಶ್ಯೇನಿಯ ಪುತ್ರನಾದ ಜಟಾಯುವೆಂದು ತಿಳಿ. ನೀನು ಅಪೇಕ್ಷಿಸುವುದಾದರೆ ನೀನು ವಾಸಮಾಡುವ ಸ್ಥಳದಲ್ಲಿ ನಾನು ನಿನಗೆ ಸಹಾಯಕನಾಗಿರುತ್ತೇನೆ. ದುಷ್ಟ ಮೃಗಗಳಿಂದಲೂ ಮತ್ತು ರಾಕ್ಷಸರಿಂದಲೂ ಸೇವಿಸಲ್ಪಡುತ್ತಿರುವ ಈ ಅರಣ್ಯವು ದುರ್ಗಮವಾಗಿದೆ. ನಿರ್ಭಯವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಲು ಸಾಧ್ಯವಾಗುವುದಿಲ್ಲ. ನೀನೂ ಮತ್ತು ಲಕ್ಷ್ಮಣನೂ ಆಶ್ರಮದಿಂದ ಹೊರಗೆ ಹೋಗುವ ಸಂದರ್ಭದಲ್ಲಿ ನಾನು ಸೀತಾದೇವಿಯನ್ನು ಸಂರಕ್ಷಿಸಿಕೊಂಡಿರುವೆನು."

ಜಟಾಯುವು ಹೀಗೆ ಹೇಳಿದುದಕ್ಕಾಗಿ ಶ್ರೀರಾಮನು ಅವನನ್ನು ಅಭಿನಂದಿಸಿ ಸಂತೋಷಾಧಿಕ್ಯದಿಂದ ಅವನನ್ನು ಆಲಿಂಗಿಸಿ ವಿನೀತನಾಗಿ ನಿಂತನು. ಜಟಾಯುವಿಗೂ ಮತ್ತು ತನ್ನ ತಂದೆಗೂ ಇದ್ದ ಸ್ನೇಹವನ್ನು ಶ್ರೀರಾಮನು ಪುನಃ-ಪುನಃ ಜಟಾಯುವಿನಿಂದ ಕೇಳಿ ಸಂತೋಷಪಟ್ಟನು. ಜಟಾಯುವಿನ ಪ್ರಾರ್ಥನೆಯಂತೆ ತಾನಿಲ್ಲದಿರುವಾಗ ಸೀತಾದೇವಿಯನ್ನು ರಕ್ಷಿಸಿಕೊಂಡಿರಲು ಸಮ್ಮತಿಸಿ–ಯಜ್ಞೇಶ್ವರನು ಮಿಡತೆಗಳನ್ನು ದಹಿಸಿಬಿಡುವಂತೆ – ಮುನಿಗಳ ಶತ್ರುಗಳಾದ ರಾಕ್ಷಸರನ್ನು ದಹಿಸಿಬಿಡಬೇಕೆಂದು ನಿಶ್ಚಯಿಸಿದವನಾಗಿ ಅತಿಬಲ

ನಾದ ಜಟಾಯುವಿನೊಡನೆಯೂ ಲಕ್ಷ್ಮಣನೊಡನೆಯೂ ಪಂಚವಟಿಯ ಕಡೆಗೆ ಪ್ರಯಾಣಮಾಡಿದನು.

ಗ೧ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ಗ೫ನೆಯ ಸರ್ಗ

## ಪಂಚವಟಿಯ ರಮಣೀಯವಾದ ಪ್ರದೇಶವೊಂದರಲ್ಲಿ ಲಕ್ಷ್ಮಣನು ಶ್ರೀರಾಮನ ನಿರ್ದೇಶದಂತೆ ಸುಂದರವಾದ ಪರ್ಣಶಾಲೆಯನ್ನು ನಿರ್ಮಿಸಿದುದು : ಅದರಲ್ಲಿ ಸೀತಾ-ರಾಮ-ಲಕ್ಷ್ಮಣರು ವಾಸವಾಗಿದ್ದುದು

**ತತಃ ಪಞ್ಚವಟೀಂ ಗತ್ವಾ ನಾನಾವ್ಯಾಲಮೃಗಾಯುತಾಮ್ ।**
**ಉವಾಚ ಲಕ್ಷ್ಮಣಂ ರಾಮೋ ಭ್ರಾತರಂ ದೀಪ್ತತೇಜಸಮ್ ॥೧॥**

ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ನಾನಾವಿಧವಾದ ಸರ್ಪಗಳಿಂದಲೂ ಮೃಗಗಳಿಂದಲೂ ನಿಬಿಡವಾಗಿದ್ದ ಪಂಚವಟಿಯನ್ನು ಸೇರಿ ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿದ್ದ ತಮ್ಮನಾದ ಲಕ್ಷ್ಮಣನಿಗೆ ಹೇಳಿದನು :

"ಸೌಮ್ಯನೇ ! ಮಹರ್ಷಿಗಳಾದ ಅಗಸ್ತ್ಯರು ಯಾವ ಮಾರ್ಗವನ್ನನುಸರಿಸಿ ಪ್ರಯಾಣಮಾಡುವಂತೆ ಹೇಳಿದ್ದರೋ – ಅದೇ ಮಾರ್ಗದಲ್ಲಿಯೇ ಪ್ರಯಾಣಮಾಡಿ ನಾವು ಇಲ್ಲಿಗೆ ಬಂದಿರುವೆವು. ಸುಪುಷ್ಪಿತವಾದ ವೃಕ್ಷಗಳಿಂದ ನಿಬಿಡವಾಗಿರುವ ಇದೇ ಆ ಪಂಚವಟೀವನ. ನೀನು ಅರಣ್ಯವಿಜ್ಞಾನದಲ್ಲಿ ನಿಪುಣನಾಗಿರುವೆ. ಈ ಅರಣ್ಯದ ನಾಲ್ಕು ದಿಕ್ಕುಗಳಲ್ಲಿಯೂ ದೃಷ್ಟಿಯನ್ನು ಹಾಯಿಸು. ಯಾವ ಪ್ರದೇಶದಲ್ಲಿ ಆಶ್ರಮವನ್ನು ನಿರ್ಮಿಸಿದರೆ ನಮ್ಮೆಲ್ಲರಿಗೂ ಅನುಕೂಲವಾಗುವುದೆಂಬುದನ್ನು ನಿಶ್ಚಯಿಸು.

ಅದು ವೈದೇಹಿಯೂ ನಾನೂ ಮತ್ತು ನೀನೂ ಸಂತೋಷಿಸುವಂತಹ ಆನಂದಕರವಾದ ಪರಿಸರದಿಂದ ಕೂಡಿರಬೇಕು. ಸಮೀಪದಲ್ಲಿಯೇ ಜಲಾಶಯವಿರಬೇಕು. ವನದ ಸೊಬಗೂ ಕಣ್ಣಿಗೆ ಕಾಣುವಂತಿರಬೇಕು. ಸಣ್ಣ-ಪುಟ್ಟ ಜಲಪಾತಗಳೂ ಜಲಾಶಯಗಳೂ ಸಮೀಪದಲ್ಲಿದ್ದು ಜಲರಮಣೀಯತೆಯಿಂದಲೂ ಆ ಪ್ರದೇಶವು ಕೂಡಿರಬೇಕು. ನಿತ್ಯ-ನೈಮಿತ್ತಿಕಕರ್ಮಗಳಿಗೆ

ಬೇಕಾಗುವ ಸಮಿತ್ತು, ಹೂವು, ದರ್ಭೆ ಮತ್ತು ನೀರು ಸಮೃದ್ಧವಾಗಿ ಸಿಕ್ಕುವ ಸ್ಥಳವಾಗಿರಬೇಕು. ಅಂತಹ ಪ್ರದೇಶವೊಂದನ್ನು ಹುಡುಕು, ಲಕ್ಷ್ಮಣ!"

ಶ್ರೀರಾಮನು ಹೀಗೆ ಹೇಳಲು ಸೌಮಿತ್ರಿಯು ಕೈಮುಗಿದುಕೊಂಡು ಸೀತಾದೇವಿಯ ಸಮಕ್ಷದಲ್ಲಿ ಹೀಗೆ ಹೇಳಿದನು:

"ಅಣ್ಣಾ! ನಾನು ಪರಾಧೀನನು. ಸ್ವತಂತ್ರನಲ್ಲ. ನೀನು ನೂರಾರು ವರ್ಷಗಳ ಕಾಲ ಇಲ್ಲಿದ್ದರೂ ಅಷ್ಟುಕಾಲವೂ ನಾನು ನಿನ್ನ ದಾಸನಾಗಿಯೇ ಇರತಕ್ಕವನು. ಸುಂದರವಾಗಿ, ನಯನಮನೋಹರವಾಗಿ, ನಿಮ್ಮಿಬ್ಬರಿಗೂ ಆನಂದಕರವಾಗಿರುವ ಪ್ರದೇಶವೊಂದನ್ನು ನೀನೇ ಆರಿಸು. ಅಲ್ಲಿ ಆಶ್ರಮವನ್ನು ನಿರ್ಮಿಸುವಂತೆ ನನಗೆ ಆಜ್ಞಾಪಿಸು. ನಾನದನ್ನು ಸಿದ್ಧಗೊಳಿಸುವೆನು."*

ಲಕ್ಷ್ಮಣನ ಆ ಮಾತಿನಿಂದ ಸುಪ್ರೀತನಾದ ಮಹಾದ್ಯುತಿಮಂತನಾದ ಶ್ರೀರಾಮನು ತಾನೇ ಸುತ್ತಲೂ ದೃಷ್ಟಿಯನ್ನು ಹಾಯಿಸಿ, ಸುದೀರ್ಘವಾಗಿ ಆಲೋಚಿಸಿ, ಎಲ್ಲ ಗುಣಗಳಿಂದಲೂ ಸಂಪನ್ನವಾಗಿದ್ದ ಪ್ರದೇಶವೊಂದನ್ನು ಕಂಡುಕೊಂಡನು. ಸುಂದರವಾಗಿದ್ದ ಆ ಪ್ರದೇಶಕ್ಕೆ ಹೋಗಿ ಶ್ರೀರಾಮನು ಲಕ್ಷ್ಮಣನನ್ನು ಆಶ್ರಮದ ಕಾರ್ಯದಲ್ಲಿ ತೊಡಗಿಸುವುದಕ್ಕಾಗಿ ಅವನೆರಡು ಕೈಗಳನ್ನು ತನ್ನ ಕೈಯಿಂದ ಹಿಡಿದುಕೊಂಡು ಹೇಳಿದನು:

"ಲಕ್ಷ್ಮಣ! ಈ ಪ್ರದೇಶವು ಹಳ್ಳ-ತಿಟ್ಟುಗಳಿಲ್ಲದೇ ಸಮತಟ್ಟಾಗಿದೆ.

---

* ಶ್ರೀರಾಮನು ಹೇಳಿರುವ ಮಾತು ರಮಣೀಯವಾಗಿದೆ. ಆದರೆ ಭಕ್ತನಾದ ಲಕ್ಷ್ಮಣನಿಗೆ ಶ್ರೀರಾಮನ ಮಾತು ಸರಿಬೀಳುವುದಿಲ್ಲ. ಇದಕ್ಕೆ ಕಾರಣವನ್ನು ಎರಡು ರೀತಿಯಲ್ಲಿ ನಿರೂಪಿಸಬಹುದಾಗಿದೆ. ಸರ್ವತಶ್ಚಾರ್ಯತಾಂ ದೃಷ್ಟಿಃ ಕಾನನೇ ನಿಪುಣೋ ಹ್ಯಸಿ–ಕಾನನವಿಜ್ಞಾನದಲ್ಲಿ ನೀನು ಕುಶಲನಾಗಿರುವೆ–ಎಂಬುದೊಂದು ವಾಕ್ಯ. ರಮತೇ ಯತ್ರ ವೈದೇಹೀ ತ್ವಮಹಂ ಚೈವ ಲಕ್ಷ್ಮಣ| ಎಂಬ ಮತ್ತೊಂದು ವಾಕ್ಯ. ಕಾನನವಿಜ್ಞಾನದ ನಿಪುಣತೆ ತನಗೆ ಇದೆಯೆಂದು ಪ್ರಶಂಸೆ ಮಾಡಿದ್ದು ವಿನಯಸಂಪನ್ನನಾದ ಲಕ್ಷ್ಮಣನಿಗೆ ಸರಿಯಾಗಿ ಹಿಡಿಸಲಿಲ್ಲ. ವೈದೇಹೀ, ನಾನು ಮತ್ತು ನೀನು ಸಂತೋಷಪಡಬೇಕು–ಅಂತಹ ಸ್ಥಳವನ್ನು ನೋಡು–ಎಂದು ಹೇಳಿದ್ದೂ ಲಕ್ಷ್ಮಣನಿಗೆ ಸರಿ ಎನಿಸಲಿಲ್ಲ. ಸುಖವಾಗಿ ಸಂತೋಷವಾಗಿ ಇರಬೇಕಾದವರು ಸೀತಾ-ರಾಮರು. ದಾಸನಾದ ಲಕ್ಷ್ಮಣನಿಗೆ

ಪುಷ್ಪಭರಿತವಾದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟದ್ದು ಕಂಗೊಳಿಸುತ್ತಿದೆ. ಇಲ್ಲಿಯೇ ನೀನು ಸುಂದರವಾದ ಆಶ್ರಮವೊಂದನ್ನು ಯಥೋಚಿತವಾಗಿ ನಿರ್ಮಿಸು. ನಾನು ಆಶಿಸಿದ್ದಂತೆ ಇಲ್ಲಿಗೆ ಹತ್ತಿರದಲ್ಲಿಯೇ ಸೂರ್ಯಸದೃಶವಾದ ಮತ್ತು ಸುಗಂಧಯುಕ್ತವಾದ ಕಮಲಗಳಿಂದ ಸುಶೋಭಿತವಾದ ಸರೋವರವೊಂದು ಕಾಣುತ್ತಿದೆ. ಆತ್ಮಾನುಭವಿಗಳಾದ ಅಗಸ್ತ್ಯಮುನಿಗಳು ಹೇಳಿದ್ದಂತೆಯೇ ಸುಪುಷ್ಪಿತವಾದ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟಿರುವ ಗೋದಾವರೀನದಿಯು ಬಹುರಮ್ಯವಾಗಿ ಕಾಣುತ್ತಿದೆ. ಈ ನದಿಯು ರಾಜಹಂಸಗಳಿಂದಲೂ ನೀರುಕೋಳಿಗಳಿಂದಲೂ ಸಮಲಂಕೃತವಾಗಿದೆ. ಚಕ್ರವಾಕಪಕ್ಷಿಗಳೂ ಈ ನದಿಯ ಶೋಭೆಯನ್ನು ಅಧಿಕಗೊಳಿಸುತ್ತಿವೆ. ನೀರು ಕುಡಿಯಲು ಬರುವ ಮೃಗಗಳಿಂದ ಕಲಕಲ್ಪಡುತ್ತಿರುವ ಗೋದಾವರೀನದಿಯು ನಾವು ಕಟ್ಟಲಿರುವ ಆಶ್ರಮಪ್ರದೇಶಕ್ಕೆ ಬಹಳ ದೂರದಲ್ಲಿಯೂ ಇಲ್ಲ; ಬಹಳ ಹತ್ತಿರದಲ್ಲಿಯೂ ಇಲ್ಲ. ನವಿಲುಗಳ ನಿನಾದದಿಂದ ಶಬ್ದಿತವಾದ, ಹಲವಾರು ಗುಹೆಗಳಿಂದ ಕೂಡಿರುವ ಎತ್ತರವಾದ ಪರ್ವತಗಳು–ವಿಕಸಿತವಾದ ಪುಷ್ಪವೃಕ್ಷಗಳಿಂದಲೂ ಸುತ್ತುವರಿಯಲ್ಪಟ್ಟದ್ದು ಬಹಳ ರಮ್ಯವಾಗಿ ಕಾಣುತ್ತಿವೆ. ಪ್ರತಿಯೊಂದು ಪ್ರದೇಶದಲ್ಲಿಯೂ ಚಿನ್ನ, ಬೆಳ್ಳಿ ಮತ್ತು ತಾಮ್ರಗಳ ಧಾತುಗಳಿಂದ ಸಮಾವೃತವಾಗಿರುವ ಈ ಪರ್ವತಗಳು ರೇಖಾವಿನ್ಯಾಸಗಳಿಂದ ಕಿಟಕಿಗಳ ರೂಪದಲ್ಲಿ ಚಿತ್ರಿತವಾಗಿರುವ ಆನೆಗಳಂತೆಯೇ ಕಾಣುತ್ತಿವೆ. ಪಂಚವಟಿಯ ಗಿರಿಪ್ರದೇಶಗಳು ಸಾಲ-ತಾಲವೃಕ್ಷಗಳಿಂದಲೂ, ಹೊಂಗೆ-ಖರ್ಜೂರ ಮತ್ತು ಹಲಸಿನ ಮರಗಳಿಂದಲೂ, ಹುಣಿಸೆ-ನೆಮ್ಮಿ ಮರಗಳಿಂದಲೂ, ಪುನ್ನಾಗವೃಕ್ಷಗಳಿಂದಲೂ, ಮಾವು-ಅಶೋಕ ಮತ್ತು ತಿಲಕ ವೃಕ್ಷಗಳಿಂದಲೂ, ಕೇದಿಗೆ-ಸಂಪಿಗೆಮರಗಳಿಂದಲೂ, ಪುಷ್ಪಭರಿತವಾದ ಪೊದೆ

---

ಅವರ ಸಾನ್ನಿಧ್ಯವೇ ಸುಖಾವಹ. ಅರಣ್ಯದ ಪರಿಸರವಲ್ಲ. ಆದುದರಿಂದ ಅವನ ಸುಖಕ್ಕೆಂದು ಅವನು ಸ್ಥಳವನ್ನು ಹುಡುಕಿಕೊಳ್ಳಬೇಕಾದ ಪ್ರಮೇಯವೇ ಇಲ್ಲ. ಸೀತಾ-ರಾಮರ ಸಾನ್ನಿಧ್ಯವೇ ಸುಖವೆಂದೂ–ಅವರ ಪಾದಗಳ ದರ್ಶನವೇ ಆನಂದಕರವೆಂದೂ ಅವನು ನಂಬಿದ್ದಾನೆ. ಆದುದರಿಂದ ನೀನೇ ಅದನ್ನು ಹುಡುಕಿಕೊ–ಎಂದು ಶ್ರೀರಾಮನಿಗೆ ಹೇಳುತ್ತಾನೆ. ದಾಸ್ಯದ ಭಾವನೆಯಲ್ಲಿಯೇ ಲಕ್ಷ್ಮಣನಿಗೆ ಎಷ್ಟರ ಮಟ್ಟಿನ ಆನಂದವಿದ್ದಿತೆಂಬುದನ್ನು ಈ ಶ್ಲೋಕದಿಂದ ತಿಳಿಯಬಹುದಾಗಿದೆ. ಲಕ್ಷ್ಮಣನಿಗೆ ಈ ವಿಧವಾದ ಮನೋಭಾವವಿರುವುದನ್ನರಿತೇ ರಾಮನಿಗೆ ಸಂತೋಷವಾಗುತ್ತದೆ.

ಗಳಿಂದಲೂ, ಲತೆಗಳಿಂದ ಆಲಿಂಗಿಸಲ್ಪಟ್ಟ ವೃಕ್ಷಗಳಿಂದಲೂ, ಸ್ಯಂದನವೃಕ್ಷಗಳಿಂದಲೂ, ಗಂಧದ ಮರಗಳಿಂದಲೂ, ಉತ್ತಮಜಾತಿಯ ಈಚಲುಮರಗಳಿಂದಲೂ, ಪನಸ-ನಕುಲ-ಧವವೃಕ್ಷಗಳಿಂದಲೂ, ಮತ್ತಿ-ಕಗ್ಗಲಿ ಮತ್ತು ಬನ್ನೀಮರಗಳಿಂದಲೂ, ಮುತ್ತುಗ-ಪಾದರೀಮರಗಳಿಂದಲೂ ಸಮಾವೃತವಾಗಿ ಬಹಳ ರಮಣೀಯವಾಗಿ ಕಾಣುತ್ತಿವೆ. ಲಕ್ಷ್ಮಣ! ಈ ಪಂಚವಟಿಯ ವನಪ್ರದೇಶವು ಪುಣ್ಯಕರವಾಗಿದೆ. ಬಹಳ ರಮ್ಯವಾಗಿಯೂ ಇದೆ. ಹಲವಾರು ಬಗೆಯ ಪಕ್ಷಿಗಳೂ, ಮೃಗಗಳೂ ಇಲ್ಲಿ ಹೇರಳವಾಗಿವೆ. ಆದುದರಿಂದ ಜಟಾಯುವಿನೊಡನೆ ನಾವು ಇಲ್ಲಿಯೇ ವಾಸಮಾಡೋಣ."

ಶ್ರೀರಾಮನು ಹೀಗೆ ಹೇಳಲು ಮಹಾಬಲಿಷ್ಠನಾದ, ಶತ್ರುಹಂತಕನಾದ ಲಕ್ಷ್ಮಣನು ಅಲ್ಲಿ ಅಣ್ಣನಿಗಾಗಿ ಬಹಳ ಬೇಗ ಒಂದು ಆಶ್ರಮವನ್ನು ಸಿದ್ಧಮಾಡಿದನು.

ಲಕ್ಷ್ಮಣನು ಮಣ್ಣನ್ನು ಕಲಸಿ ಗೋಡೆಗಳನ್ನು ಹಾಕಿದನು. ಸುಂದರವಾದ ಕಂಬಗಳನ್ನು ನಿಲ್ಲಿಸಿದನು. ಅದರ ಮೇಲೆ ಉದ್ದವಾದ ಬಿದುರಿನ ತೀರುಗಳನ್ನು ಹಾಕಿದನು. ಬನ್ನೀಮರದ ರೆಂಬೆಗಳನ್ನು ಮೇಲೆ ಹರಡಿ ಅವುಗಳನ್ನು ಅಡ್ಡತೀರುಗಳೊಡನೆ ಸೇರಿಸಿ ಗಟ್ಟಿಯಾದ ಹಗ್ಗಗಳಿಂದ ಬಿಗಿದನು. ದರ್ಭೆಗಳಿಂದಲೂ, ಜಂಬುಹುಲ್ಲಿನಿಂದಲೂ, ಬಿಳಿಯ ಹುಲ್ಲಿನಿಂದಲೂ ಮತ್ತು ಎಲೆಗಳಿಂದಲೂ ಮೇಲ್ಛಾವಣಿಯನ್ನು ಹೊದಿಸಿದನು. ನೆಲವನ್ನು ಸಮ್ಮಸ್ಸುಮಾಡಿ ಸಮತಟ್ಟಾಗಿ ಮಾಡಿದನು. ರಾಘವನಿಗಾಗಿ ಲಕ್ಷ್ಮಣನು ನಿರ್ಮಿಸಿದ್ದ ಆ ಪರ್ಣಶಾಲೆಯು ಶ್ರೇಷ್ಠವಾಗಿದ್ದುದು ಮಾತ್ರವಲ್ಲದೇ ಅತ್ಯಂತ ಪ್ರೇಕ್ಷಣೀಯವೂ ಆಗಿದ್ದಿತು. ಹೀಗೆ ಲಕ್ಷ್ಮಣನು ಶ್ರೀರಾಮನ ಸಲುವಾಗಿ ಸುಂದರವಾದ ಪರ್ಣಶಾಲೆಯನ್ನು ನಿರ್ಮಿಸಿದನಂತರ ಗೋದಾವರೀ ನದಿಗೆ ಹೋಗಿ ಸ್ನಾನಮಾಡಿ ಅಲ್ಲಿಯೇ ಇದ್ದ ಕಮಲಪುಷ್ಪಗಳನ್ನೂ, ಹಣ್ಣು-ಹಂಪಲುಗಳನ್ನೂ ತೆಗೆದುಕೊಂಡು ಪರ್ಣಕುಟೀರದ ಬಳಿಗೆ ಬಂದು *ಪುಷ್ಪಬಲಿಯನ್ನರ್ಪಿಸಿ, ವಾಸ್ತುಶಾಂತಿಕರ್ಮಗಳನ್ನು ಯಥಾವಿಧಿಯಾಗಿ, ಮುಗಿಸಿ ತಾನು ನಿರ್ಮಿಸಿದ ಆ ಪರ್ಣಕುಟೀರವನ್ನು ಶ್ರೀರಾಮನಿಗೆ ತೋರಿಸಿದನು.

* ಪುಷ್ಪಬಲಿ: ಹೂವುಗಳಿಂದ ಯಥಾವಿಧಿಯಾಗಿ ಪೂಜೆಮಾಡುವುದು.

ಲಕ್ಷ್ಮಣನು ತನಗಾಗಿ ನಿರ್ಮಿಸಿದ್ದ ಆ ಪ್ರಶಾಂತವಾದ ಆಶ್ರಮಸ್ಥಾನ ವನ್ನು ಸೀತೆಯೊಡನೆ ನೋಡಿದ ರಾಮನು ಬಹಳ ಸಂತೋಷಪಟ್ಟನು. ಆನಂದತುಂದಿಲನಾದ ಶ್ರೀರಾಮನು ಲಕ್ಷ್ಮಣನನ್ನು ಬಾಚಿತಬ್ಬಿಕೊಂಡು ಸ್ನೇಹಪೂರ್ಣವಾದ ಮತ್ತು ದೃಢವಾದ ಮಾತುಗಳನ್ನು ಹೇಳಿದನು :

ಪ್ರೀತೋಽಸ್ಮಿ ತೇ ಮಹತ್ಕರ್ಮ ತ್ವಯಾ ಕೃತಮಿದಂ ಪ್ರಭೋ ।
ಪ್ರದೇಯೋ ಯನ್ನಿಮಿತ್ತಂ ತೇ ಪರಿಷ್ವಙ್ಗೋ ಮಯಾ ಕೃತಃ ॥

" ಸಮರ್ಥನೇ ! ಇಂತಹ ಬಹುಸುಂದರವಾದ ಮತ್ತು ಪ್ರೇಕ್ಷಣೀಯ ವಾದ ಪರ್ಣಶಾಲೆಯನ್ನು ನಿರ್ಮಿಸಿ ಮಹಾಕಾರ್ಯವನ್ನೇ ಮಾಡಿರುವೆ. ಇದಕ್ಕೆ ಪಾರಿತೋಷಿಕವಾಗಿ ನಿನ್ನನ್ನು ಆಲಿಂಗಿಸಿಕೊಂಡಿದ್ದೇನೆ.* ಲಕ್ಷ್ಮಣ ! ನೀನು ಭಾವಜ್ಞನು. ಮುಖಭಾವವನ್ನು ನೋಡಿಯೇ ನನ್ನ ಮನಸ್ಸಿನಲ್ಲಿ ಏನಿರುವುದೆಂಬುದನ್ನು ತಿಳಿದು ಕಾರ್ಯಮಾಡುವೆ. ಕೃತಜ್ಞನು. ಮಾಡಿದ ಉಪಕಾರವನ್ನು ಎಂದೂ ಮರೆಯತಕ್ಕವನಲ್ಲ. ಧರ್ಮಜ್ಞನು. ಕ್ಷತ್ರಿಯೋ ಚಿತವಾದ ಧರ್ಮವನ್ನು ಚೆನ್ನಾಗಿ ತಿಳಿದಿರುವೆ. ಇಂತಹ ಸುಪುತ್ರನನ್ನು ಪಡೆದ ನಮ್ಮ ತಂದೆಯು ನಿಜವಾಗಿಯೂ ಸತ್ತಿಲ್ಲವೆಂದೇ ನಾನು ಭಾವಿಸು ತ್ತೇನೆ. ನ ಸಂವೃತ್ತಃ ಪಿತಾ ಮಮ "[1]

---

* ಅನ್ಯಸ್ಯ ದೇಯಸ್ಯ ಅಭಾವಾತ್ = ಪಾರಿತೋಷಿಕವಾಗಿ ಕೊಡಲು ಬೇರೆ ಯಾವ ಪದಾರ್ಥವೂ ಇಲ್ಲದೇ ಇರುವುದರಿಂದ ಪ್ರತಿನಿಧಿರೂಪವಾಗಿ ನನ್ನಿಂದ ಗಾಢಾಲಿಂಗನವು ಮಾಡಲ್ಪಟ್ಟಿತು-ಎಂದು ಸಾಮಾನ್ಯವಾಗಿ ಎಲ್ಲ ವ್ಯಾಖ್ಯಾನಕಾರರೂ ಅರ್ಥಮಾಡಿರು ತ್ತಾರೆ. ಆದರೆ ಲಕ್ಷ್ಮಣನ ದೃಷ್ಟಿಯಲ್ಲಿ ಅನಂತ ಕೋಟಿ ವರಹಗಳೂ ಪರಮಾತ್ಮನ ಸ್ನೇಹ ಪೂರ್ಣವಾದ ಗಾಢಾಲಿಂಗನೆಗೆ ಸಾಟಿಯಾಗುತ್ತಿರಲಿಲ್ಲ. ಇದೊಂದು ಹೊರತಾಗಿ ಬೇರೆ ಯಾವುದೇ ಪಾರಿತೋಷಿಕವನ್ನು ಕೊಟ್ಟಿದ್ದರೂ ದಾಸ್ಯಭಾವದಿಂದಿದ್ದ ಅವನು ಸ್ವೀಕರಿಸುತ್ತಿರಲಿಲ್ಲವೆಂದೇ ಭಾವಿಸಬಹುದು. ಆದುದರಿಂದ ಲಕ್ಷ್ಮಣನು ಆಶಿಸಿದ್ದ ಪಾರಿತೋಷಿಕವನ್ನೇ ಶ್ರೀರಾಮನು ಅನುಗ್ರಹಪೂರ್ವಕವಾಗಿ ದಯಪಾಲಿಸಿದನು-ಎಂದು ಅರ್ಥಮಾಡುವುದು ಇನ್ನೂ ಸಾಧುವಾಗಿದೆ.

1 ತಂದೆಯ ಗುಣಗಳನ್ನು ಹೋತಿದ್ದರೆ ತಂದೆಯಂತೆಯೇ ಮಗ ಎಂದು ಹೇಳುವ ನಾಣ್ನುಡಿಯು ಈಗಲೂ ಬಳಕೆಯಲ್ಲಿದೆ. ಲಕ್ಷ್ಮಣನಲ್ಲಿ ತಂದೆಯಲ್ಲಿದ್ದ ಗುಣಗಳೆಲ್ಲವೂ ಇದ್ದುದರಿಂದ ರಾಮನಿಗೆ ತನ್ನ ಹತ್ತಿರದಲ್ಲಿ ತಂದೆಯಿದ್ದಂತೆಯೇ ಭಾಸವಾಗುತ್ತದೆ. ಇದನ್ನೇ ಅವನು ಲಕ್ಷ್ಮಣನಿಗೆ ಹೇಳುತ್ತಾನೆ.

ಲಕ್ಷ್ಮಿವರ್ಧನನಾದ, ಜಿತೇಂದ್ರಿಯನಾದ ಶ್ರೀರಾಮನು ಲಕ್ಷ್ಮಣನಿಗೆ ಹೀಗೆ ಹೇಳಿ ಅವನನ್ನು ಶ್ಲಾಘಿಸಿದನು. ನಾನಾವಿಧವಾದ ಫಲಗಳಿಂದ ಸಮೃದ್ಧವಾಗಿದ್ದ ಪಂಚವಟೀವನಪ್ರದೇಶದಲ್ಲಿ ಶ್ರೀರಾಮನು ಸುಖವಾಗಿದ್ದನು. ಸೀತಾ-ಲಕ್ಷ್ಮಣರಿಂದ ಸೇವಿಸಲ್ಪಡುತ್ತಿದ್ದ ಧರ್ಮಾತ್ಮನಾದ ಶ್ರೀರಾಮನು-ಸ್ವರ್ಗಲೋಕದಲ್ಲಿ ದೇವತೆಯು ಸುಖವಾಗಿರುವಂತೆ-ಪಂಚವಟಿಯಲ್ಲಿ ಸ್ವಲ್ಪಕಾಲದವರೆಗೆ ಸುಖವಾಗಿದ್ದನು.

ಗಿ೫ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೧೬ನೆಯ ಸರ್ಗ

## ಲಕ್ಷ್ಮಣನಿಂದ ಹೇಮಂತರ್ತುವಿನ ವರ್ಣನೆ: ಭರತನ ಪ್ರಶಂಸೆ: ಶ್ರೀರಾಮನು ಸೀತಾ-ಲಕ್ಷ್ಮಣರೊಡನೆ ಗೋದಾವರಿಯಲ್ಲಿ ಮಿಂದುದು

ವಸತಸ್ತಸ್ಯ ತು ಸುಖಂ ರಾಘವಸ್ಯ ಮಹಾತ್ಮನಃ ।
ಶರದ್ವ್ಯಪಾಯೇ ಹೇಮನ್ತ ಋತುರಿಷ್ಟಃ ಪ್ರವರ್ತತೇ ॥೧॥

ಪಂಚವಟಿಯಲ್ಲಿ ಸೀತಾ-ಲಕ್ಷ್ಮಣರೊಡನೆ ಸುಖವಾಗಿ ವಾಸಮಾಡುತ್ತಿದ್ದ ಶ್ರೀರಾಮನಿಗೆ-ಶರತ್ಕಾಲವು ಕಳೆದು ಇಷ್ಟವಾದ ಹೇಮಂತರ್ತುವು ಪ್ರಾರಂಭವಾಯಿತು.*

ಹೀಗೆಯೇ ದಿನಗಳು ಕಳೆಯುತ್ತಿರಲಾಗಿ ಒಮ್ಮೆ ಶ್ರೀರಾಮನು

* ಇಷ್ಟಃ ಹೇಮನ್ತಃ ಋತುಃ = 'ಇಷ್ಟವಾದ ಹೇಮಂತಋತು' ಎಂಬುವುದಕ್ಕೆ ಒಬ್ಬೊಬ್ಬರು ಒಂದೊಂದು ವಿಧವಾಗಿ 'ಇಷ್ಟ' ಎಂಬುದರ ಅರ್ಥವನ್ನು ವಿವರಿಸಿದ್ದಾರೆ. ಕಾಮಿನಾಂ ಶರದ್ವ್ಯಪಾಯೇ ಶರದೃತೋರಪಗಮೇ ಹೇಮನ್ತಃ ಋತುಃ ಇಷ್ಟಃ-ಕಾಮಿಗಳಿಗೆ ಇಷ್ಟವಾದುದು ಹೇಮಂತ ಋತು. ೨) ಇಷ್ಟಃ = ತಪಸ್ವಿನಾಂ ತಪಃಸಾಧನಾಯ ಇಷ್ಟಃ-ತಪಸ್ವಿಗಳಿಗೆ ತಪಃಸಾಧನೆಗೆ ಇಷ್ಟ. ೩) ರಾಮಸ್ಯ ತು ಖರಾದಿರಾಕ್ಷಸವಧವಿಜಯಮೂಲಶೂರ್ಪಣಖಾಗಮನಹೇತುತಯಾ ಇಷ್ಟಃ । ಖರ-ದೂಷಣಾದಿರಾಕ್ಷಸರ ನಿರ್ಮೂಲನಕ್ಕೆ ಮೂಲವಾದ ಶೂರ್ಪಣಖಾಗಮನವಾಗುವುದು-ಎಂಬುದರಿಂದ ರಾಮನಿಗೆ ಹೇಮಂತ ಋತುವಿನ ಆಗಮನವು ಇಷ್ಟವಾಯಿತು. ೪) ಕಾಮಿನೀನಾಂ ಕಾಮಿನಾಂ ಇಷ್ಟಃ-ಕಾಮಿನೀ-ಕಾಮುಕರಿಬ್ಬರಿಗೂ ಹೇಮಂತವು ಇಷ್ಟವಾದ ಋತು.

ರಾತ್ರಿಯು ಕಳೆದು ಬೆಳಗಾಗುತ್ತಲೇ ಸ್ನಾನಮಾಡುವ ಸಲುವಾಗಿ ರಮ್ಯವಾದ ಗೋದಾವರೀನದಿಗೆ ತೆರಳಿದನು. ವಿನಯಶೀಲನಾದ ಮತ್ತು ವೀರನಾದ ಲಕ್ಷ್ಮಣನು ಬಿಂದಿಗೆಯನ್ನೆತ್ತಿಕೊಂಡು ಸೀತೆಯೊಡನೆ ಶ್ರೀರಾಮನ ಹಿಂದೆಯೇ ಹೋಗುತ್ತಿದ್ದನು. ಹಾಗೆ ಹೋಗುತ್ತಿದ್ದಾಗ ಲಕ್ಷ್ಮಣನು ಶ್ರೀರಾಮನಿಗೆ ಹೇಳಿದನು :

" ಪ್ರಿಯವಾದ ಮಾತುಗಳನ್ನಾಡುವವನೇ ! ನಿನಗೆ ಬಹುಪ್ರಿಯವಾದ ಆ ಕಾಲವು ಈಗ ಪ್ರಾಪ್ತವಾಗಿದೆ. ಪ್ರಾರಂಭವಾಗಿರುವ ಈ ಶುಭಸಂವತ್ಸರವು ಹೃದಯಂಗಮವಾದ ಈ ಹೇಮಂತರ್ತುವಿನಿಂದ ಅಲಂಕರಿಸಲ್ಪಟ್ಟಿರುವುದೋ ಎಂಬಂತೆ ಕಾಣುತ್ತಿದೆ.* ಈ ಕಾಲದಲ್ಲಿ ಅಧಿಕವಾದ ಹಿಮದಿಂದಾಗಿ ಜನರ ಶರೀರವೆಲ್ಲವೂ ಒರಟಾಗುತ್ತದೆ. ಭೂಮಿಯು ಮಾಲೆಯೋಪಾದಿಯಲ್ಲಿರುವ ಸಸ್ಯಗಳ ಸಾಲುಗಳಿಂದ ತುಂಬಿರುತ್ತದೆ. ಈ ಋತುವಿನಲ್ಲಿ ತಣ್ಣೀರಿನ ಪ್ರಯೋಜನವು ಅಷ್ಟಾಗಿ ಇರುವುದಿಲ್ಲ. ಅಗ್ನಿಯು ಮಾತ್ರ ಎಲ್ಲರಿಗೂ ಬಹುಪ್ರಿಯವಾಗಿರುತ್ತದೆ. ಈ ಹೇಮಂತಕಾಲದಲ್ಲಿ ಸತ್ಪುರುಷರು ನವಾಗ್ರಯಣಪೂಜೆಗಳಿಂದ[1] ಪಿತೃಗಳನ್ನೂ ದೇವತೆಗಳನ್ನೂ ತೃಪ್ತಿಗೊಳಿಸಿ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಈ ಋತುವಿನಲ್ಲಿ ಜನರು ಹೆಚ್ಚು

---

* ಅಲಂಕೃತ ಇವಾಭಾತಿ ಯೇನ ಸಂವತ್ಸರಃ ಶುಭಃ—ಎಂದು ಲಕ್ಷ್ಮಣನು ಹೇಳುತ್ತಾನೆ. ಹೇಮಂತ ಋತುವಿನಿಂದ ಅಲಂಕರಿಸಲ್ಪಟ್ಟಂತೆ ಕಾಣುವ ಈ ಸಂವತ್ಸರವೇ ಶುಭವಾಗುತ್ತದೆ. ಇಲ್ಲಿ ಹಿಮಂತ ಋತುವಿನಿಂದಲೇ ವರ್ಷಾರಂಭ ಎಂಬ ಅರ್ಥಬರುತ್ತದೆ. ಹಿಂದೆ ಮಾರ್ಗಶಿರಮಾಸದಿಂದಲೇ ವರ್ಷಾರಂಭವಾಗುತ್ತಿದ್ದಿತು. ಮಾರ್ಗಶಿರ ಮತ್ತು ಪುಷ್ಯಗಳಲ್ಲಿ ಹೇಮಂತ ಋತುವಿರುತ್ತದೆ. ಆದುದರಿಂದ ಹೇಮಂತ ಋತುವಿನೊಡನೆ ವರ್ಷಾರಂಭವಾಗಿರುವುದೆಂದೂ ಋತುವಿನ ಪ್ರಾರಂಭವು ಶುಭವಾಗಿ ಕಾಣುತ್ತಿರುವುದರಿಂದ ವರ್ಷಪೂರ್ತಿಯಾಗಿ ಇದೇ ವಾತಾವರಣವಿರುವುದೆಂದೂ ಲಕ್ಷ್ಮಣನು ಹೇಳಿದ್ದಾನೆ.

1. ಆಗ್ರಯಣಃ :—ಹೊಸಧಾನ್ಯವು ಬಂದಾಗ ಪಿತೃಗಳ ಮತ್ತು ದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಯಜ್ಞ. ಹೊಸಧಾನ್ಯವನ್ನು ದೇವತೆಗಳಿಗೆ ಅರ್ಪಿಸುವುದಕ್ಕೆ ಮುಂಚೆ ಉಪಯೋಗಿಸಬಾರದು. ' ಸಸ್ಯಂ ನಾಶ್ನೀಯಾದಗ್ನಿಹೋತ್ರಮಹುತ್ವಾ । ( ಆಶ್ವ—ಶ್ರೌತಸೂತ್ರ) ನಾನಿಷ್ಟ್ವಾಗ್ರಯಣೇನಾಹಿತಾಗ್ನಿರ್ನವಸ್ಯ ಧಾನ್ಯಸ್ಯಾಶ್ನೀಯಾದ್ವ್ರೀಹೀಣಾಂ ಯವಾನಾಂ ಶ್ಯಾಮಾಕಾನಾಮಗ್ರೇ ಪಾಕಸ್ಯ ಯಜೇತ । ಆಪಸ್ತಂಬಃ

ಕಾಮುಕರಾಗಿರುತ್ತಾರೆ. ಹಾಲು-ಮೊಸರು-ಬೆಣ್ಣೆ-ತುಪ್ಪಗಳು ಸಮೃದ್ಧವಾಗಿ ಸಿಕ್ಕುತ್ತವೆ. ಶತ್ರುಗಳನ್ನು ಜಯಿಸುವುದಕ್ಕಾಗಿ ವಿಜಯೇಚ್ಛುಗಳಾದ ರಾಜರು ಸಂಚರಿಸುತ್ತಿರುತ್ತಾರೆ. ಈ ಋತುವಿನಲ್ಲಿ ಸೂರ್ಯನು ಯಮನಿಗೆ ಸೇರಿದ ದಕ್ಷಿಣದಿಕ್ಕನ್ನು ದೃಢವಾಗಿ ಆಶ್ರಯಿಸಿರುತ್ತಾನೆ. (ಇದು ದಕ್ಷಿಣಾಯನವಾಗಿರುತ್ತದೆ.) ವಿಹೀನತಿಲಕೇವ ಸ್ತ್ರೀ ನೋತ್ತರಾ ದಿಕ್ಪ್ರಕಾಶತೇ। ಹಣೆಯಲ್ಲಿ ತಿಲಕವಿಲ್ಲದ ಹೆಂಗಸಿನಂತೆ ಉತ್ತರದಿಕ್ಕು ಕಾಂತಿಹೀನವಾಗಿದೆ. ಸ್ವಭಾವದಿಂದಲೇ ಹಿಮಗೆಡ್ಡೆಗಳಿಂದ ಸಮೃದ್ಧವಾಗಿರುವ ಹಿಮವಂತನು ಹೇಮಂತಕಾಲದಲ್ಲಿ (ದಕ್ಷಿಣಾಯನದಲ್ಲಿ) ಸೂರ್ಯನು ಬಹಳ ದೂರದಲ್ಲಿರುವುದರಿಂದ ಅನ್ವರ್ಥನಾಮವನ್ನೇ ಹೊಂದಿರುವನೆಂಬುದು ಸ್ಪಷ್ಟವಾಗಿದೆ. [1]

ಹಿಮಂತರ್ತುವಿನಲ್ಲಿ ದಿನವು ಮಧ್ಯಾಹ್ನವಾಗುತ್ತಾ ಹೆಚ್ಚು ಸುಖಕರವಾಗಿರುತ್ತದೆ. ಮಧ್ಯಾಹ್ನದ ಸಮಯದಲ್ಲೇ ಸಂಚಾರವೂ ಸುಖದಾಯಕವಾಗುತ್ತದೆ. ಸೂರ್ಯನು ದರ್ಶನಯೋಗ್ಯನಾಗುತ್ತಾನೆ. ಆದುದರಿಂದ ಈ ಋತುವಿನಲ್ಲಿ ನೆಳಲಿನಲ್ಲಿ ಕುಳಿತುಕೊಳ್ಳಲು ಮತ್ತು ತಣ್ಣೀರಿನಲ್ಲಿ ಸ್ನಾನಮಾಡಲು ಯಾರೂ ಬಯಸುವುದಿಲ್ಲ. ಆದುದರಿಂದ ಈ ಸಮಯದಲ್ಲಿ ನೀರೂ ಮತ್ತು ನೆಳಲೂ ಅಪೇಕ್ಷಿಸುವವರೇ ಇಲ್ಲದೇ ಅದೃಷ್ಟಹೀನವಾಗುತ್ತವೆ. ಈ ಹೇಮಂತಕಾಲದ ದಿವಸಗಳು ಮೃದುವಾದ ಕಿರಣಗಳುಳ್ಳ ಸೂರ್ಯನಿಂದ ಕೂಡಿರುತ್ತವೆ. ಮಧ್ಯಾಹ್ನಕಾಲದಲ್ಲಿಯೂ ಸೂರ್ಯನಲ್ಲಿ ಪ್ರಖರವಾದ ಕಿರಣಗಳಿರುವುದಿಲ್ಲ. ದಿವಸಗಳು ಹಿಮಾಚ್ಛಾದಿತವಾಗಿರುತ್ತವೆ. ಪ್ರಬಲವಾದ ಚಳಿಯಿಂದ ಕೂಡಿರುತ್ತವೆ. ಜೊತೆಗೆ ಶೀತವಾದ ಗಾಳಿಯೂ ಬೀಸುತ್ತಿರುತ್ತದೆ. ಹಿಮದಿಂದ ನಾಶಗೊಳಿಸಲ್ಪಟ್ಟ ಅರಣ್ಯಗಳು ಶೂನ್ಯವಾಗಿರು

---

1 ಉತ್ತರಾಯಣದಲ್ಲಿ ಸೂರ್ಯನು ಹಿಮಾಲಯದ ಸಮೀಪದಲ್ಲಿಯೇ ಹಾದುಹೋಗುವುದರಿಂದ ಹಿಮಗಡ್ಡೆಗಳು ಕರಗಿ ದೊಡ್ಡ ದೊಡ್ಡ ಪ್ರವಾಹಗಳು ಗಂಗಾ-ಯಮುನಾ ಮುಂತಾದ ನದಿಗಳಲ್ಲಿ ಹರಿದುಬರುತ್ತವೆ. ಆದರೆ ದಕ್ಷಿಣಾಯನದಲ್ಲಿ ಸೂರ್ಯನು ಬಹು ದೂರದಲ್ಲಿರುವುದರಿಂದ ಹಿಮಗಡ್ಡೆಗಳು ಕರಗದೇ ಹಾಗೆಯೇ ಇರುತ್ತವೆ. ಆದುದರಿಂದ ಪರ್ವತರಾಜನಿಗೆ ಹಿಮವಂತನೆಂಬ ಹೆಸರು ಈ ಸಮಯದಲ್ಲಿ ಎಂದರೆ ದಕ್ಷಿಣಾಯನದ ಹೇಮಂತರ್ತುವಿನಲ್ಲಿ ಅನ್ವರ್ಥವಾಗಿರುತ್ತದೆ.

ತ್ತವೆ. ಅಣ್ಣ ! ಈ ಋತುವಿನಲ್ಲಿ ರಾತ್ರಿಗಳು ಸುದೀರ್ಘವಾಗಿಯೂ ಶೀತಳ ವಾಗಿಯೂ ಇರುತ್ತವೆ. ಬೇಸಿಗೆಯಂತೆ ಆಕಾಶವನ್ನೇ ಹೊದ್ದಿಕೆಯನ್ನಾಗಿ ಮಾಡಿಕೊಂಡು ಹಿಮಗಾಲದಲ್ಲಿ ಯಾರೂ ಮಲಗುವುದಿಲ್ಲ. ಪುಷ್ಯನಕ್ಷತ್ರದಿಂದ ಪ್ರಾರಂಭವಾದ ಪುಷ್ಯಮಾಸದ ರಾತ್ರಿಗಳು ಹಿಮದ ಆಚ್ಛಾದನೆಯಿಂದ ಎಣೆಗೆಂಪಿನ ಬಣ್ಣದಿಂದ ಕೂಡಿರುತ್ತವೆ. ಹಿಮಗಾಲದಲ್ಲಿ ಚಂದ್ರನ ಸೌಭಾಗ್ಯವನ್ನು ಸೂರ್ಯನು ಆಕ್ರಮಿಸಿರುತ್ತಾನೆ. ಶೀತಳನಾದ ಚಂದ್ರನನ್ನು ಯಾರೂ ಬಯಸುವುದಿಲ್ಲ. ಸೌಮ್ಯನಾದ ಸೂರ್ಯನ ಪ್ರಕಾಶವನ್ನು ಎಲ್ಲರೂ ಬಯಸುತ್ತಾರೆ. ಧೂಸರವರ್ಣದ ಹಿಮವನ್ನೇ ಮಂಡಲಾಕಾರದಲ್ಲಿ ಹೊಂದಿರುವ ಚಂದ್ರನು ಉಸಿರಿನಿಂದ ಮಸುಕಾದ ಕನ್ನಡಿಯಂತೆ ಪ್ರಕಾಶಿಸುವುದಿಲ್ಲ. ಹೇಮಂತರ್ತುವಿನಲ್ಲಿ ಬೆಳದಿಂಗಳಿನಿಂದ ಕೂಡಿದ ರಾತ್ರಿಯು ( ಹುಣ್ಣಿಮೆಯ ದಿನವೂ ) ಹಿಮದಿಂದ ಆಚ್ಛಾದಿತವಾಗಿ ಮಲಿನವಾಗಿಯೇ ಇರುತ್ತದೆ. ಈ ಸಮಯದಲ್ಲಿ ಬೆಳದಿಂಗಳ ರಾತ್ರಿಯು–ಬಿಸಿಲಿನ ಝಳದಿಂದ ಶ್ಯಾಮಲವರ್ಣಳಾಗುವ ಸೀತಾದೇವಿಯಂತೆಯೇ ಕಾಣುತ್ತದೆ. ಆದರೆ ಸೀತಾದೇವಿಯು ಬಿಸಿಲಿನ ಝಳದಿಂದ ಶ್ಯಾಮಲವರ್ಣದವಳಾಗುವಳೇ ಹೊರತು ಅವಳ ಸೌಂದರ್ಯಕ್ಕೆ ಅದರಿಂದ ಕುಂದುಂಟಾಗುವುದಿಲ್ಲ. ಹಿಮದ ಆಚ್ಛಾದನೆಯಿಂದ ಮಲಿನವಾದ ಬೆಳದಿಂಗಳ ರಾತ್ರಿಯು ಶೋಭಿಸುವುದೇ ಇಲ್ಲ. ಪಶ್ಚಿಮದಿಕ್ಕಿನಿಂದ ಬೀಸುವ ಗಾಳಿಯು ಸ್ವಾಭಾವಿಕವಾಗಿಯೇ ಶೀತಲವಾಗಿರುವುದು. ಈ ಕಾಲದಲ್ಲಿ ಹಿಮದ ಬಡಿತದಿಂದ ಗಾಳಿಯು ಎರಡು ಪಟ್ಟು ಶೀತಲವಾಗಿರುವುದು. ಯವಧಾನ್ಯಗಳಿಂದಲೂ ಗೋದುವೆಗಳಿಂದಲೂ ಕೂಡಿರುವ, ಕಣ್ಣೀರಿನ ಬಿಂದುಗಳಂತಿರುವ ಜಲಬಿಂದುಗಳಿಂದ ತುಂಬಿರುವ ಈ ಅರಣ್ಯಗಳು ಸೂರ್ಯೋದಯಸಮಯದಲ್ಲಿ ನಿನಾದಮಾಡುವ ಕ್ರೌಂಚಪಕ್ಷಿಗಳಿಂದಲೂ ಸಾರಸಪಕ್ಷಿಗಳಿಂದಲೂ ಕೂಡಿ ತುಂಬಾ ರಮಣೀಯವಾಗಿವೆ.

ಸುವರ್ಣದ ಕಾಂತಿಯಿಂದ ಕೂಡಿರುವ ಮಾಗಿರುವ ಈ ಬತ್ತದ ಸಸಿಗಳು, ಖರ್ಜೂರದ ಹೂವಿನ ಆಕಾರವುಳ್ಳ ಅಕ್ಕಿಯ ಕಾಳುಗಳಿಂದ ಪರಿಪೂರ್ಣವಾಗಿರುವ ಭತ್ತದ ತೆನೆಗಳನ್ನೂ ಶಿರಸ್ಸಿನಲ್ಲಿ ಧರಿಸಿ ತೆನೆಗಳ ಭಾರದಿಂದ ಸ್ವಲ್ಪ ಬಗ್ಗಿದ್ದು ಹೆಚ್ಚು ಶೋಭಿಸುತ್ತಿವೆ.

ಮಂಜಿನಿಂದ ಕವಿಯಲ್ಪಟ್ಟ ಕಿರಣಗಳನ್ನು ಹೊರಸೂಸುತ್ತಾ

ದೂರದಲ್ಲಿ ಉದಯಿಸುತ್ತಿರುವ ಸೂರ್ಯನು ಚಂದ್ರನಂತೆಯೇ ಕಾಣು ತ್ತಿದ್ದಾನೆ.*

ಮಂಜುಮುಸುಕಿದ ಕಿರಣಗಳಿರುವ ಸೂರ್ಯನು ಪ್ರಾತಃಕಾಲದಲ್ಲಿ ಪ್ರಾಣಿಗಳಿಗೆ ಅಷ್ಟು ಹಿತಕರನಾಗಿರುವುದಿಲ್ಲ. ಮಧ್ಯಾಹ್ನಸಮಯದಲ್ಲಿ ಅವನ ಕಿರಣಗಳ ಸ್ಪರ್ಶವು ಸುಖಕರವಾಗಿ ಕಾಣುತ್ತದೆ. ಈ ಕಾರಣ ದಿಂದಲೇ ಹಿಮಗಾಲದ ಸೂರ್ಯನು ಮಧ್ಯಾಹ್ನಸಮಯದಲ್ಲಿ ಜನರ ಅನು ರಾಗಕ್ಕೆ ಹೆಚ್ಚು ವಿಷಯನಾಗುತ್ತಾನೆ. ಮಧ್ಯಾಹ್ನದ ಬಿಸಿಲು ಕೂಡ ಸ್ವಲ್ಪ ಕೆಂಪಾಗಿಯೂ–ಬಿಳುಪಾಗಿಯೂ ಇರುತ್ತದೆ. ಮಂಜುಬಿದ್ದು ಸ್ವಲ್ಪ ನೆನೆ ದಿರುವ ಗರಿಕೆಯ ಹುಲ್ಲಿನಿಂದ ವ್ಯಾಪ್ತವಾಗಿರುವ ಅರಣ್ಯದ ಭೂಮಿಯು ಥಳ ಥಳಿಸುತ್ತಾ ಎಳಬಿಸಿಲು ಬಿದ್ದೊಡನೆ ಅತ್ಯಂತಶೋಭಾಯಮಾನವಾಗಿ ಕಾಣು ತ್ತದೆ.

ಬಾಯಾರಿಕೆಯಿಂದ ಬಹಳವಾಗಿ ಬಳಲಿರುವ ಈ ಕಾಡಾನೆಯು ಬಾಯಾರಿಕೆಯನ್ನು ಹೋಗಲಾಡಿಸಿಕೊಂಡು ಸುಖವನ್ನು ಅನುಭವಿಸುವ ಆಶಯದಿಂದ ಅತ್ಯಂತಶೀತಲವಾಗಿರುವ ನೀರನ್ನು ಕುಡಿಯಲು ಸೊಂಡಿ ಲನ್ನು ಮುಂಚಾಚುತ್ತಿದೆ. ಮರುಕ್ಷಣದಲ್ಲಿಯೇ ಕೊರೆಯುತ್ತಿರುವ ನೀರಿನ ಶೀತವನ್ನು ತಡೆಯಲಾರದೇ ಸೊಂಡಿಲನ್ನು ಹಿಂದಕ್ಕೆ ಸೆಳೆದುಕೊಳ್ಳುತ್ತಿದೆ. ಬಾಯಾರಿಕೆಯಾಗಿದ್ದರೂ ನೀರನ್ನು ಕುಡಿಯುವುದಿಲ್ಲ.

ಇಲ್ಲಿ ಕಾಣುತ್ತಿರುವ ಈ ಜಲಚರಪಕ್ಷಿಗಳು ಸದಾ ನೀರಿನಲ್ಲಿಯೇ ಇರ ತಕ್ಕವುಗಳು. ಆದರೂ ಈ ಹಿಮಗಾಲದಲ್ಲಿ ನೀರಿಗಿಳಿಯದೇ ದಂಡೆಯ ಮೇಲೆ ಕುಳಿತಿವೆ. ಹೇಡಿಗಳಾದ ಸೈನಿಕರು ಯುದ್ಧದಲ್ಲಿ ಮುನ್ನುಗ್ಗಿಹೋಗಲು ಹೆದರುವಂತೆ–ಈ ಪಕ್ಷಿಗಳು ಚಳಿಯ ಭಯದಿಂದಾಗಿ ನೀರಿನೊಳಗೆ ಇಳಿ ಯುತ್ತಿಲ್ಲ.

ಮಂಜುಗೆಡ್ಡೆಗಳು ಬಿದ್ದಕಾರಣ ಬುಡದವರೆಗೂ ಬಗ್ಗಿಕೊಂಡು ಕತ್ತ ಲೆಂಬ ಮಂಜು ಆವರಿಸಿರುವ ಪುಷ್ಪರಹಿತವಾದ ರೆಂಬೆಗಳಿಂದ ಕೂಡಿರುವ ಕಾಡುಮರಗಳ ಸಾಲುಗಳು ಮಲಗಿ ನಿದ್ರಿಸುತ್ತಿರುವಂತೆ ಕಾಣುತ್ತಿವೆ.

---

*ಚಂದ್ರನು ಹಿಮಾಂಶು. ಸೂರ್ಯನ ಕಿರಣಗಳನ್ನು ಹಿಮವು ಆವರಿಸಿರುವುದರಿಂದ ಸೂರ್ಯನೂ ಹಿಮಗಾಲದಲ್ಲಿ ಹಿಮಾಂಶುವಾದ ಚಂದ್ರನಂತೆಯೇ ಕಾಣುತ್ತಾನೆ.

ಇಲ್ಲಿ ಕಾಣುತ್ತಿರುವ ನದಿಗಳ ನೀರು ಹಬೆಯಿಂದ ಮುಚ್ಚಿಹೋಗಿದೆ. ಅವುಗಳ ಸನಿಹದಲ್ಲಿಯೇ ಇರುವ ಸಾರಸಪಕ್ಷಿಗಳೂ ಹಬೆಯಿಂದ ಮುಚ್ಚಿಹೋಗಿದ್ದು ಧ್ವನಿಯಿಂದ ಮಾತ್ರವೇ ಅವು ಇಲ್ಲಿವೆಯೆಂಬುದನ್ನು ತಿಳಿಯಬಹುದಾಗಿದೆ. ನದಿಗಳ ತೀರಪ್ರದೇಶದಲ್ಲಿರುವ ಮರಳೂ ಕೂಡ ಹಿಮಬಿದ್ದು ಒದ್ದೆಯಾಗಿದೆ. ಈ ಹಿಮಗಾಲದಲ್ಲಿ ನದಿಯ ಸ್ವರೂಪವು ಹೀಗಿರುತ್ತದೆ.

ತುಷಾರಪತನಾಚ್ಚೈವ ಮೃದುತ್ವಾದ್ಭಾಸ್ಕರಸ್ಯ ಚ ।
ಶೈತ್ಯಾದಗಾಗ್ರಸ್ಥಮಪಿ ಪ್ರಾಯೇಣ ರಸವಜ್ಜಲಮ್ ॥ ೨೫॥

ಹಿಮಪಾತದಿಂದಲೂ, ಸೂರ್ಯನ ಮೃದುವಾದ ಕಿರಣಗಳ ಸ್ಪರ್ಶದಿಂದಲೂ, ಚಳಿಯ ಕಾರಣದಿಂದಲೂ ಪರ್ವತಶಿಖರದಲ್ಲಿರುವ ನೀರು ಪ್ರಾಯಶಃ ಮಂಜುಗೆಡ್ಡೆಯೊಡನೆ ಬೆರೆತು ಪಾದರಸದಂತೆ ಥಳಥಳಿಸುತ್ತಿರುತ್ತದೆ.*

ಅಣ್ಣ ! ಈ ಹಿಮಗಾಲದಲ್ಲಿ ಕಮಲಗಳಿಗೆ ಆಕರವಾಗಿರುವ ಸರೋವರಗಳೂ ಸುಂದರವಾಗಿ ಕಾಣುತ್ತಿಲ್ಲ. ಏಕೆಂದರೆ : ಈ ಸರೋವರಗಳು ಮುದಿಯಾಗಿ ಬಾಡಿಹೋಗಿರುವ ಕಮಲಗಳಿಂದ ಕೂಡಿವೆ. ಹಿಮಪಾತದಿಂದಾಗಿ ಕಮಲಗಳಲ್ಲಿರುವ ಎಸಳುಗಳೂ ಬೀಜಕೋಶಗಳೂ ಉದುರಿಹೋಗಿವೆ. ದಂಟುಗಳು ಮಾತ್ರವೇ ಉಳಿದುಕೊಂಡಿದೆ.

ಇದೇ ಸಮಯದಲ್ಲಿ ನಿನ್ನ ವಿಯೋಗದಿಂದ ಬಹಳ ದುಃಖಿತನಾಗಿರುವ ಧರ್ಮಾತ್ಮನಾದ ಭರತನು ನಿನ್ನ ಮೇಲಿನ ಭಕ್ತಿಯಿಂದ ತಪಸ್ಸನ್ನು ಮಾಡುತ್ತಿರಬಹುದು.

ತ್ಯಕ್ತ್ವಾ ರಾಜ್ಯಂ ಚ ಮಾನಂ ಚ ಭೋಗಾಂಶ್ಚ ವಿವಿಧಾನ್ಬಹೂನ್ ।
ತಪಸ್ವೀ ನಿಯತಾಹಾರಃ ಶೇತೇ ಶೀತೇ ಮಹೀತಲೇ ॥ ೨೮॥

*ಅಗಾಗ್ರಸ್ಥಮಪಿ ಜಲಂ ಪ್ರಾಯೇಣ ರಸವತ್ (ಭಾಸತೇ) ಎಂದು ಈ ಶ್ಲೋಕದಲ್ಲಿದೆ. ಹಿಮಗಾಲದ ವರ್ಣನೆಯನ್ನು ಲಕ್ಷ್ಮಣನು ಮಾಡುತ್ತಿದ್ದಾನೆ. ನೀರನ್ನು ಮುಟ್ಟಲು ಕೂಡ ಸಾಧ್ಯವಾಗುವುದಿಲ್ಲ–ಹಾಗೆಂತಾಗಿ ಹಿಂದೆ ವರ್ಣನೆಯಿದೆ. ಪರ್ವತದ ಮೇಲೆ ನೀರು ಘನೀಭೂತವಾಗಿರುವುದೇ ಹೊರತು ದ್ರವರೂಪವಾಗಿರುವುದಿಲ್ಲ. ಮಂಜು ಬಿದ್ದಿರುತ್ತದೆ. ಸೂರ್ಯನ ಕಿರಣಗಳು ಪ್ರಖರವಾಗಿರುವುದಿಲ್ಲ. ಸೌಮ್ಯವಾಗಿರುತ್ತವೆ.

ಭರತನು ರಾಜ್ಯವನ್ನೂ ತ್ಯಜಿಸಿದ್ದಾನೆ. (ಮಂತ್ರಿಗಳ ಆಡಳಿತಕ್ಕೆ ಒಪ್ಪಿಸಿದ್ದಾನೆ.) ತಾನು ರಾಜಪುತ್ರನೆಂಬ ಅಭಿಮಾನವನ್ನೂ ತೊರೆದಿದ್ದಾನೆ. ಸಕಲವಿಧವಾದ ರಾಜಭೋಗಗಳನ್ನೂ ತ್ಯಾಗಮಾಡಿದ್ದಾನೆ. ನಿಯತವಾದ ಆಹಾರವನ್ನು ಸೇವಿಸುತ್ತಾ ತಪಶ್ಚರಣೆಯಲ್ಲಿಯೇ ನಿರತನಾಗಿರುವ ಅವನು ತಣ್ಣನೆ ಕೊರೆಯುತ್ತಿರುವ ನೆಲದ ಮೇಲೆ ರಾತ್ರಿಯಲ್ಲಿ ಮಲಗುತ್ತಿರಬಹುದು. ನಾವೀಗ ಗೋದಾವರೀನದಿಗೆ ಸ್ನಾನಾರ್ಥವಾಗಿ ಹೋಗುತ್ತಿರುವಂತೆಯೇ ಭರತನೂ ಕೂಡ ಇದೇ ಹೊತ್ತಿನಲ್ಲಿ ಪ್ರಜೆಗಳಿಂದ ಪರಿವೃತನಾಗಿ ಸ್ನಾನವಮಾಡಲು ಸರಯೂನದಿಗೆ ಹೋಗುತ್ತಿರಬಹುದು. ಇದು ನಿಶ್ಚಯ.

ಅತ್ಯನ್ತಸುಖಸಂವೃದ್ಧಃ ಸುಕುಮಾರೋ ಸುಖೋಚಿತಃ ।
ಕಥಂ ತ್ವಪರರಾತ್ರೇಷು ಸರಯೂಮವಗಾಹತೇ ॥ ೩೦॥

ಅಣ್ಣ ! ನಮ್ಮ ಸಹೋದರನಾದ ಭರತನು ಅತ್ಯಂತಸುಖದಲ್ಲಿ ಬೆಳೆದವನು ; ಸುಕುಮಾರನು ; ಕೋಮಲಾಂಗನು ; ಸುಖವಾಗಿರಲು ಯೋಗ್ಯನಾದವನು ; ಅಂತಹ ರಾಜಪುತ್ರನು ಈ ಹಿಮಗಾಲದ ರಾತ್ರಿಯ ಕೊನೆಯಲ್ಲಿ ತಣ್ಣನೆ ಕೊರೆಯುತ್ತಿರುವ ಸರಯೂನದಿಯ ನೀರಿನಲ್ಲಿ ಹೇಗೆತಾನೇ ಸ್ನಾನ ಮಾಡುವನು ?

---

ಇಷ್ಟರ ಮೇಲೆ ಚಳಿಯಿರುತ್ತದೆ. ಇಂತಹ ಸಮಯದಲ್ಲಿ ಪರ್ವತದ ತುದಿಯಲ್ಲಿ ನೀರು ರಸವತ್ ರಸದಂತೆ ಇರುತ್ತದೆ. ರಸ ಎಂದರೆ ರುಚಿಕರವಾಗಿರುತ್ತದೆ-ಎಂದು ಅರ್ಥವಾದ ಬಹುದಾದರೂ ನೀರನ್ನು ಮುಟ್ಟಲು ಸಾಧ್ಯವಿಲ್ಲದೇ ಇರುವುದರಿಂದ ರುಚಿನೋಡುವ ಅವಕಾಶವೇ ಇಲ್ಲ. ಆದುದರಿಂದ ಒಬ್ಬ ವ್ಯಾಖ್ಯಾನಕಾರರು ರಸ ಎಂಬುದಕ್ಕೆ ವಿಷವೆಂದು ಅರ್ಥಮಾಡಿರುತ್ತಾರೆ ವಿಷದಂತೆ ಮುಟ್ಟಲು ಕೂಡ ಅಯೋಗ್ಯವಾಗಿರುತ್ತದೆ. ಎಂಬುದು ಅವರ ಅಭಿಪ್ರಾಯವಾಗಿದೆ. ರಸವೆಂಬುದಕ್ಕೆ ಚಿನ್ನವೆಂಬ ಅರ್ಥವೂ ಇದೆ. ಬಾಲಸೂರ್ಯನ ಹೊಂಬಣ್ಣದ ಕಿರಣಗಳು ಹಿಮಗೆಡ್ಡೆಗಳ ಮೇಲೆ ಬೀಳುವುದರಿಂದ ಚಿನ್ನದ ಗಟ್ಟಿಗಳಂತೆ ಕಾಣುತ್ತದೆ ಎಂದಾದರೂ ಅರ್ಥಮಾಡಬಹುದು. ರಸಶಬ್ದಕ್ಕೆ ಪಾದರಸನೆಂಬ ಅರ್ಥವಿರುವುದರಿಂದ ಮೇಲಿನಂತೆಯೂ ಅರ್ಥೈಸಬಹುದು. ಅಗ ಎಂಬುದಕ್ಕೆ ವೃಕ್ಷವೆಂದು ಅರ್ಥಮಾಡಿ ಮರದ ತುದಿಯಲ್ಲಿರುವ ಹಿಮದ ಬಿಂದುಗಳು ಪಾದರಸದಂತೆ ಕಾಣುತ್ತವೆ ಎಂದೂ ಅರ್ಥಮಾಡಬಹುದು.

Funding: Tattva Heritage Foundation,Kolkata. Digitization: eGangotri.



ಪದ್ಮಪತ್ರೇಕ್ಷಣಃ ಶ್ಯಾಮಃ ಶ್ರೀಮಾನ್ನಿರುದರೋ ಮಹಾನ್ ।
ಧರ್ಮಜ್ಞಃ ಸತ್ಯವಾದೀ ಚ ಹ್ರೀನಿಷೇಧೋ ಜಿತೇನ್ದ್ರಿಯಃ ॥೩೦॥
ಪ್ರಿಯಾಭಿಭಾಷೀ ಮಧುರೋ ದೀರ್ಘಬಾಹುರರಿನ್ದಮಃ ।
ಸಂತ್ಯಜ್ಯ ವಿವಿಧಾನ್ಸೌಖ್ಯಾನಾರ್ಯಂ ಸರ್ವಾತ್ಮನಾ ಶ್ರಿತಃ ॥೩೧॥

ಭರತನು ಕಮಲದ ದಳಗಳಂತೆ ವಿಶಾಲವಾದ ಕಣ್ಣುಗಳುಳ್ಳವನು. ಶ್ಯಾಮಲವರ್ಣನು. ಶ್ರೀಮಂತನು. ಕೃಶೋದರನು. ಮಹಾತ್ಮನು. ರಾಜ



ಧರ್ಮವನ್ನು ಚೆನ್ನಾಗಿ ತಿಳಿದಿರತಕ್ಕವನು. ಸತ್ಯವಾದಿಯು. ನಾಚಿಕೆಯಿಂದ ಪರಸ್ತ್ರೀಯರೊಡನೆ ಸಂಭಾಷಣೆಯನ್ನೇ ನಿಷೇಧಿಸಿರತಕ್ಕವನು. ಜಿತೇಂದ್ರಿಯನು. ಪ್ರಿಯವಾಗುವುದನ್ನೇ ಮಾತನಾಡತಕ್ಕವನು. ಮಧುರಸ್ವಭಾವ

ದವನು. ನೀಳವಾದ ತೋಳುಗಳಿರತಕ್ಕವನು. ಶತ್ರುಗಳನ್ನು ದಮನ ಮಾಡುವ ಸಾಮರ್ಥ್ಯವಿರುವವನು. ಇಂತಹ ಸಕಲಗುಣಸಂಪನ್ನನಾದ ಭರತನು ರಾಜೋಚಿತವಾದ, ಬಗೆ-ಬಗೆಯ ಸುಖಗಳೆಲ್ಲವನ್ನೂ ಪರಿತ್ಯಜಿಸಿ ಸರ್ವರೀತಿಯಲ್ಲಿಯೂ ನಿನ್ನನ್ನೇ ಆಶ್ರಯಿಸಿದ್ದಾನೆ.

ಜಿತಃ ಸ್ವರ್ಗಸ್ತವ ಭ್ರಾತ್ರಾ ಭರತೇನ ಮಹಾತ್ಮನಾ ।
ವನಸ್ಥಮಪಿ ತಾಪಸ್ಯೇ ಯಸ್ತ್ವಾಮನುವಿಧೀಯತೇ ॥೩೩॥

ಅಣ್ಣಾ ! ನಿನ್ನ ತಮ್ಮನಾದ ಮಹಾತ್ಮನಾದ ಭರತನು ಈಗಾಗಲೇ ಸ್ವರ್ಗವನ್ನೂ ಜಯಿಸಿಬಿಟ್ಟದ್ದಾನೆ. ಏಕೆಂದರೆ: ನಗರದಲ್ಲಿದ್ದರೂ ತಪಸ್ಸನ್ನು ಮಾಡಿಕೊಂಡು ನಿನ್ನಂತೆಯೇ ವನವಾಸದ ಜೀವನವನ್ನು ನಡೆಸುತ್ತಿರುವನಲ್ಲವೇ ?

ನ ಪಿತ್ರ್ಯಮನುವರ್ತನ್ತೇ ಮಾತೃಕಂ ದ್ವಿಪದಾ ಇತಿ ।
ಖ್ಯಾತೋ ಲೋಕಪ್ರವಾದೋಽಯಂ ಭರತೇನಾನ್ಯಥಾ ಕೃತಃ ॥೩೪॥

ಮನುಷ್ಯರು ಸಾಮಾನ್ಯವಾಗಿ ತಾಯಿಯ ಗುಣವನ್ನೇ ಹೊಂದಿರುತ್ತಾರೆ. ತಂದೆಯ ಗುಣವನ್ನಲ್ಲ–ಎಂಬ ಗಾದೆಯು ಲೋಕಪ್ರಸಿದ್ಧವಾಗಿದೆ. ಭರತನು ಈ ಗಾದೆಯನ್ನು ಬದಲಾಯಿಸಿಬಿಟ್ಟಿರುವನು.

ಭರ್ತಾ ದಶರಥೋ ಯಸ್ಯಾಃ ಸಾಧುಶ್ಚ ಭರತಃ ಸುತಃ ।
ಕಥಂ ನು ಸಾಮ್ಬಾ ಕೈಕೇಯೀ ತಾದೃಶೀ ಕ್ರೂರಶೀಲಿನೀ ॥೩೫॥

ಅಣ್ಣಾ ! ನಮ್ಮ ತಾಯಿಯಾದ ಕೈಕೇಯಿಗೆ ಧರ್ಮಸ್ವರೂಪನಾದ ದಶರಥನೇ ಪತಿಯು. ಸಾಧುಸ್ವಭಾವದವನಾದ ಭರತನೇ ಮಗನು. ಇಂತಹವಳು ಹೇಗೆ ಅಷ್ಟು ಕ್ರೂರಸ್ವಭಾವದವಳಾದಳು ? ”

ಇವೇ ಮುಂತಾಗಿ ಧರ್ಮಾತ್ಮನಾದ ಲಕ್ಷ್ಮಣನು ಸ್ನೇಹಭಾವದಿಂದ ಮಾತನಾಡುತ್ತಿದ್ದರೂ ತಾಯಿಯಾದ ಕೈಕೇಯಿಯ ವಿಷಯದಲ್ಲಿ ಲಕ್ಷ್ಮಣನಾಡಿದುದನ್ನು ಶ್ರೀರಾಮನು ಸಹಿಸಲಿಲ್ಲ.

ನ ತೇಽಮ್ಬಾ ಮಧ್ಯಮಾ ತಾತ ಗರ್ಹಿತವ್ಯಾ ಕದಾಚನ ।

“ ಲಕ್ಷ್ಮಣ ! ನೀನು ಯಾವಾಗಲೂ ಯಾವುದೇ ಕಾರಣದಿಂದಲೂ ನಮ್ಮ ತಾಯಿಯಾದ ಕೈಕೇಯಿಯನ್ನು ನಿಂದಿಸಬಾರದು.

ಇಕ್ಷ್ವಾಕುನಾಥನಾದ ಮಹಾತ್ಮನಾದ ಭರತನ ಕಥೆಯನ್ನೇ ಮುಂದು ವರಿಸು. ನನ್ನ ಬುದ್ಧಿಯು ವನವಾಸದ ವಿಷಯದಲ್ಲಿ ನಿಶ್ಚಿತವಾಗಿದ್ದರೂ ಮತ್ತು ದೃಢವಾಗಿದ್ದರೂ ಭರತನ ಮೇಲಿರುವ ಅಧಿಕಪ್ರೀತಿಯಿಂದಾಗಿ ಸುಖ ಪಡುವ ಯೋಗವಿದ್ದರೂ ಕಷ್ಟಪಡುತ್ತಿರುವ ಅವನ ವಿಷಯದಲ್ಲಿ ಸಂತಾಪ ಗೊಂಡು ಚಂಚಲವಾಗುತ್ತಿದೆ. ಅವನನ್ನು ನೋಡಲು ತವಕಿಸುತ್ತಿದೆ.

ಅವನು ನನ್ನನ್ನು ನೋಡಲು ಸಪರಿವಾರನಾಗಿ ಅರಣ್ಯಕ್ಕೆ ಬಂದಿದ್ದಾಗ ಅವನು ಹೇಳಿದ ಪ್ರಿಯವಾದ, ಮಧುರವಾದ, ಹೃದ್ಯವಾದ, ಅಮೃತಕ್ಕೆ ಸಮಾನವಾದ, ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ಮಾತುಗಳನ್ನು ಈಗಲೂ ಸ್ಮರಿಸಿಕೊಳ್ಳುತ್ತೇನೆ. ಲಕ್ಷ್ಮಣ ! ನಿನ್ನೊಡನೆ ನಾನು ಮಹಾತ್ಮನಾದ ಭರತನನ್ನೂ ವೀರನಾದ ಶತ್ರುಘ್ನನನ್ನೂ ಪುನಃ ಯಾವಾಗ ಸೇರುವೆನು ?”

ಇವೇ ಮುಂತಾಗಿ ಹೇಳಿಕೊಂಡು ದುಃಖಪಡುತ್ತಾ ಶ್ರೀರಾಮನು ಗೋದಾವರೀನದಿಗೆ ಹೋಗಿ ತಮ್ಮನೊಡನೆಯೂ ಸೀತೆಯೊಡನೆಯೂ ಪವಿತ್ರವಾದ ಆ ನದಿಯಲ್ಲಿ ಮಿಂದನು.

ಸ್ನಾನವಾದನಂತರ ಅವರು ಗೋದಾವರೀನದಿಯ ಪುಣ್ಯತೀರ್ಥದಿಂದ ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನಿತ್ತರು. ಅನಂತರ ಏಕಾಗ್ರಚಿತ್ತರಾಗಿ ದೇವತೆಗಳನ್ನೂ ಮತ್ತು ಆಗ ತಾನೇ ಉದಯಿಸುತ್ತಿದ್ದ ಸೂರ್ಯನನ್ನೂ ಸ್ತುತಿಸಿದರು.

ರುದ್ರದೇವನು ಪರ್ವತರಾಜನಂದಿನಿಯಾದ ಪಾರ್ವತಿಯೊಡನೆಯೂ ನಂದಿಯೊಡನೆಯೂ ಗಂಗಾನದಿಯಲ್ಲಿ ಮಿಂದು ವಿರಾಜಿಸುವಂತೆ–ಸೀತಾ-ಲಕ್ಷ್ಮಣರೊಡನೆ ಗೋದಾವರಿಯಲ್ಲಿ ಸ್ನಾನಮಾಡಿದ ಶ್ರೀರಾಮನು ಕಂಗೊಳಿಸಿದನು.

೧೬ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ

೧೭ನೆಯ ಸರ್ಗ

## ಶ್ರೀರಾಮನ ಆಶ್ರಮಕ್ಕೆ ಶೂರ್ಪಣಖಿಯ ಆಗಮನ : ಪರಸ್ಪರ ಪರಿಚಯ : ಭಾರ್ಯೆಯನ್ನಾಗಿ ಮಾಡಿಕೊಳ್ಳಲು ರಾಕ್ಷಸಿಯು ಶ್ರೀರಾಮನನ್ನು ಒತ್ತಾಯಿಸಿದುದು

ಕೃತಾಭಿಷೇಕೋ ರಾಮಸ್ತು ಸೀತಾ ಸೌಮಿತ್ರಿರೇವ ಚ ।
ತಸ್ಮಾದ್ಗೋದಾವರೀತೀರಾತ್ತತೋ ಜಗ್ಮುಃ ಸ್ವಮಾಶ್ರಮಮ್ ॥೧॥

ರಾಮ-ಲಕ್ಷ್ಮಣ-ಸೀತೆಯರು ಗೋದಾವರೀನದಿಯಲ್ಲಿ ಸ್ನಾನಮಾಡಿ ನದಿಯ ತೀರದಿಂದ ತಮ್ಮ ಆಶ್ರಮಕ್ಕೆ ತೆರಳಿದರು. ಆಶ್ರಮವನ್ನು ಸೇರಿದ ನಂತರ ಶ್ರೀರಾಮನು ಲಕ್ಷ್ಮಣನೊಡನೆ ಪ್ರಾತಃಕಾಲದಲ್ಲಿ ಮಾಡಬೇಕಾಗಿದ್ದ ಜಪ-ಹೋಮ-ದೇವ-ಪಿತೃತರ್ಪಣಾದಿ ಕರ್ಮಗಳನ್ನು ಮುಗಿಸಿ ಪರ್ಣಶಾಲೆಗೆ ಬಂದನು.*

ಅಲ್ಲಿ ಶ್ರೀರಾಮನು ಮಹರ್ಷಿಗಳಿಂದ ಪೂಜಿಸಲ್ಪಡುತ್ತಾ ಸುಖವಾಗಿ ಕಾಲಕಳೆಯುತ್ತಿದ್ದನು. ತಮ್ಮನಾದ ಲಕ್ಷ್ಮಣನೊಡನೆ ವಿಧ-ವಿಧವಾದ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದನು.

ಪರ್ಣಶಾಲೆಯಲ್ಲಿ ಸೀತಾಸಮೇತನಾಗಿ ಕುಳಿತಿದ್ದ ಶ್ರೀರಾಮನು ಚಿತ್ತಾನಕ್ಷತ್ರಯುಕ್ತನಾದ ಚಂದ್ರನಂತೆಯೇ ವಿರಾಜಿಸುತ್ತಿದ್ದನು.[1]

ಲಕ್ಷ್ಮಣನು ಹೇಳುತ್ತಿದ್ದ ಕಥೆಯನ್ನು ಆಸಕ್ತನಾಗಿ ಕೇಳುತ್ತಿದ್ದ, ಸೀತಾಸಮೇತನಾಗಿದ್ದ ಶ್ರೀರಾಮನ ಪರ್ಣಶಾಲೆಯ ಬಳಿಗೆ ರಾಕ್ಷಸಿಯೊಬ್ಬಳು ಆಕಸ್ಮಿಕವಾಗಿ ಆಗಮಿಸಿದಳು. ಅವಳು ದಶಕಂಠನಾದ ರಾವಣರಾಕ್ಷಸನ ತಂಗಿ ಶೂರ್ಪಣಖಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಳು. ಶ್ರೀರಾಮನ

---

*ಆಶ್ರಮವೇ ಬೇರೆ; ಪರ್ಣಶಾಲೆಯೇ ಬೇರೆ. ಆಶ್ರಮವು ಪೂಜಾದಿಗಳನ್ನು ಮಾಡುವ ಸ್ಥಳ. ತಪೋವನ. ಪರ್ಣಶಾಲೆಯು ಹೊರ ಹಜಾರ. ಆಗಂತುಕರನ್ನು ಸ್ವಾಗತಿಸಿ ಸಂಭಾಷಿಸುವ ಸ್ಥಳ.

1 ಚಿತ್ರಾಪೂರ್ಣಿಮೆ ಎಂಬುದು ಪ್ರಸಿದ್ಧವಾಗಿದೆ. ಚೈತ್ರಮಾಸದ ಹುಣ್ಣಿಮೆಯ ದಿನ ಚಂದ್ರನು ಚಿತ್ತಾನಕ್ಷತ್ರದಲ್ಲಿರುತ್ತಾನೆ. ಹಿಮಂತರ್ಮವಿನ ರಾತ್ರಿಗೂ ಚಿತ್ತಾ ಎಂದು ಹೆಸರು.

ಪರ್ಣಶಾಲೆಯ ಬಳಿಗೆ ಬರುತ್ತಲೇ ಅವಳು ದೇವತೆಯೋಪಾದಿಯಲ್ಲಿ ಕಾಣುತ್ತಿದ್ದ, ಸಿಂಹದಂತೆ ವಿಶಾಲಹೃದಯನಾದ, ಮಹಾಬಾಹುವಾದ, ಕಮಲದ ದಳಗಳಿಗೆ ಸದೃಶವಾದ ಕಣ್ಣುಗಳಿಂದ ಕೂಡಿದ್ದ, ಆಜಾನುಬಾಹುವಾದ, ಪ್ರಕಾಶಮಾನವಾದ ಮುಖದಿಂದ ಕೂಡಿದ್ದ, ನೋಡಲು ಹೆಚ್ಚು ಪ್ರಿಯನಾಗಿ ಕಾಣುತ್ತಿದ್ದ, ಆನೆಯಂತೆ ಮಂದಗಮನನಾಗಿದ್ದ, ಮಂಡಲಾಕಾರವಾದ ಜಟೆಯಿಂದ ಕೂಡಿದ್ದ, ಸುಕುಮಾರನಾದ, ಮಹಾಸತ್ತ್ವನಾದ, ರಾಜಲಕ್ಷಣಗಳಿಂದ ಸಂಪನ್ನನಾಗಿದ್ದ, ಕನ್ನೈದಿಲೆಯಂತೆ ಶ್ಯಾಮಲವರ್ಣದವನಾಗಿದ್ದ, ಮನ್ಮಥನಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಿದ್ದ, ಇಂದ್ರೋಪಮನಾಗಿದ್ದ ಶ್ರೀರಾಮನನ್ನು ನೋಡಿ ಕಾಮಮೋಹಿತಳಾದಳು.

ಸುಮುಖಂ ದುರ್ಮುಖೀ ರಾಮಂ ವೃತ್ತಮಧ್ಯಂ ಮಹೋದರೀ ।
ವಿಶಾಲಾಕ್ಷಂ ವಿರೂಪಾಕ್ಷೀ ಸುಕೇಶಂ ತಾಮ್ರಮೂರ್ಧಜಾ ॥೧೦॥

ಪ್ರಿಯರೂಪಂ ವಿರೂಪಾ ಸಾ ಸುಸ್ವರಂ ಭೈರವಸ್ವನಾ ।
ತರುಣಂ ದಾರುಣಾ ವೃದ್ಧಾ ದಕ್ಷಿಣಂ ವಾಮಭಾಷಿಣೀ ॥೧೧॥

ನ್ಯಾಯವೃತ್ತಂ ಸುದುರ್ವೃತ್ತಾ ಪ್ರಿಯಮಪ್ರಿಯದರ್ಶನಾ ।
ಶರೀರಜಸಮಾವಿಷ್ಟಾ ರಾಕ್ಷಸೀ ರಾಮಮಬ್ರವೀತ್ ॥೧೨॥ *

ಶ್ರೀರಾಮನು ಸುಂದರವಾದ ಮುಖವುಳ್ಳವನಾಗಿದ್ದನು. ರಾಕ್ಷಸಿಯು ಗಂಟಿಕ್ಕಿದ ಮುಖವುಳ್ಳವಳಾಗಿದ್ದಳು. ಶ್ರೀರಾಮನ ನಡುಭಾಗವು ದುಂಡಾಗಿಯೂ, ತೆಳುವಾಗಿಯೂ ಇದ್ದಿತು. ರಾಕ್ಷಸಿಗೆ ಪ್ರತ್ಯೇಕವಾಗಿ ಸೊಂಟವೇ ಕಾಣುತ್ತಿರಲಿಲ್ಲ. ಬಹಳ ದೊಡ್ಡದಾದ ಜೋತುಬಿದ್ದ ಹೊಟ್ಟೆಯಿದ್ದಿತು. ಶ್ರೀರಾಮನಿಗೆ ಕಮಲದಂತೆ ವಿಶಾಲವಾದ ಕಣ್ಣುಗಳಿದ್ದುವು. ರಾಕ್ಷಸಿಯು ವಿರೂಪಾಕ್ಷಿ. ಗುಡ್ಡೆಯುಬ್ಬಿ ವಿರೂಪವಾಗಿದ್ದ ಕಣ್ಣುಗಳುಳ್ಳವಳಾಗಿದ್ದಳು. ಶ್ರೀರಾಮನು ಸುಂದರವಾದ ಕೇಶರಾಶಿಯುಳ್ಳವನಾಗಿದ್ದನು. ರಾಕ್ಷಸಿಯು ಕೆಂಜೆಡೆಯುಳ್ಳವಳಾಗಿದ್ದಳು. ಶ್ರೀರಾಮನ ರೂಪು ನೋಡಲು ಎಲ್ಲರಿಗೂ ಪ್ರಿಯವಾಗಿದ್ದಿತು. ಇದಕ್ಕೆ ಪ್ರತಿಯಾಗಿ ರಾಕ್ಷಸಿಯು ವಿಕಾರವಾದ ರೂಪ

* ಶ್ರೀರಾಮನಿಗೂ ರಾಕ್ಷಸಿಗೂ ಯಾವುದರಲ್ಲಿಯೂ ಸಾಮ್ಯವಿರಲಿಲ್ಲ. ಅನುರೂಪ್ಯವಿರಲಿಲ್ಲ–ಎಂಬುದನ್ನು ಈ ಶ್ಲೋಕಗಳಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾರೆ.

ವುಳ್ಳವಳು. ಶ್ರೀರಾಮನು ಮೃದುವಾದ, ಮಧುರವಾದ ಕಂಠಧ್ವನಿಯುಳ್ಳವನು. ರಾಕ್ಷಸಿಯು ಭಯಂಕರವಾದ ಕರ್ಕಶಧ್ವನಿಯುಳ್ಳವಳು. ಶ್ರೀರಾಮನು ತರುಣನು. ರಾಕ್ಷಸಿಯು ಮುದುಕಿ ಮತ್ತು ಭಯಂಕರಾಕಾರಳು. ಶ್ರೀರಾಮನು ಋಜುಭಾಷಿ. ರಾಕ್ಷಸಿಯು ವಕ್ರ-ವಕ್ರವಾಗಿ ಮಾತನಾಡತಕ್ಕವಳು. ಶ್ರೀರಾಮನು ನ್ಯಾಯೋಚಿತವಾದ ವ್ಯವಹಾರವುಳ್ಳವನು. ರಾಕ್ಷಸಿಯು ದುರಾಚಾರಳು. ಶ್ರೀರಾಮನು ಸರ್ವರಿಗೂ ಪ್ರಿಯನಾದವನು. ರಾಕ್ಷಸಿಯು ಎಲ್ಲರಿಗೂ ಅಪ್ರಿಯಳಾದವಳು. ಅವಳನ್ನು ನೋಡಲು ಕೂಡ ಯಾರೂ ಇಷ್ಟಪಡುತ್ತಿರಲಿಲ್ಲ. ಹೀಗೆ ಅತ್ಯಂತವಿರುದ್ಧವಾದ ಗುಣಗಣಗಳಿಂದ ಕೂಡಿದ್ದ ಶೂರ್ಪಣಖಿಯು ಕಣ್ಮನಗಳನ್ನು ಸೆಳೆಯುವ ಮತ್ತು ಆನಂದಕರವಾದ ಶ್ರೀರಾಮನ ರೂಪವನ್ನು ನೋಡಿ ಕಾಮಾಭಿಭೂತೆಯಾಗಿ ಶ್ರೀರಾಮನಿಗೆ ಹೇಳಿದಳು :

" ಸುಂದರಾಂಗನೇ ! ಜಟೆಯನ್ನು ಬಿಟ್ಟು ತಪಸ್ವಿಯ ವೇಷದಲ್ಲಿರುವ ನೀನು ಧನುರ್ಬಾಣಗಳನ್ನೂ ಧರಿಸಿರುವೆ ; ಹೆಂಡತಿಯೊಡನೆಯೂ ಇರುವೆ. ರಾಕ್ಷಸರಿಂದ ಸೇವಿಸಲ್ಪಡುತ್ತಿರುವ ಈ ಪ್ರದೇಶಕ್ಕೆ ನೀನು ಎಲ್ಲಿಂದ ಬಂದೆ ? ಏಕೆ ಬಂದೆ ?–ನೀನಿಲ್ಲಿಗೆ ಆಗಮಿಸಿದ ಕಾರಣವೇನು ಮತ್ತು ನೀನಿಲ್ಲಿ ಮಾಡಬೇಕಾಗಿರುವ ಕಾರ್ಯವೇನು ? – ಎಂಬುದನ್ನೂ ಯಥಾವತ್ತಾಗಿ ಹೇಳು."

ಶೂರ್ಪಣಖಿಯು ಹೀಗೆ ಪ್ರಶ್ನಿಸಲು ಪರಂತಪನಾದ ಶ್ರೀರಾಮನು ತನ್ನ ಸರಳಬುದ್ಧಿಗೆ ಅನುಸಾರವಾಗಿ ಎಲ್ಲ ವಿಷಯುಗಳನ್ನೂ ಯಥಾವತ್ತಾಗಿಯೇ ಹೇಳತೊಡಗಿದನು.

ಅನೃತಂ ನ ಹಿ ರಾಮಸ್ಯ ಕದಾಚಿದಪಿ ಸಂಮತಮ್ ।
ವಿಶೇಷೇಣಾಶ್ರಮಸ್ಥಸ್ಯ ಸಮೀಪೇ ಸ್ತ್ರೀಜನಸ್ಯ ಚ ॥

ಶ್ರೀರಾಮನಿಗೆ ಸುಳ್ಳುಹೇಳುವುದು ಯಾವಾಗಲೂ ಸಮ್ಮತವಲ್ಲ. ಅದರಲ್ಲಿಯೂ ವಿಶೇಷವಾಗಿ ಈಗವನು ಋಷ್ಯಾಶ್ರಮದಲ್ಲಿದ್ದಾನೆ. ಸಮೀಪದಲ್ಲಿ ಸ್ತ್ರೀಯರಿದ್ದಾರೆ. ಆದುದರಿಂದ ಶ್ರೀರಾಮನು ಎಲ್ಲ ವಿಷಯುಗಳನ್ನೂ ಯಥಾವತ್ತಾಗಿಯೇ ಹೇಳಿದನು :

"ದಶರಥನೆಂಬ ರಾಜನೊಬ್ಬನಿದ್ದನು. ನಾನು ಅವನ ಹಿರಿಯ ಮಗನು. ನನ್ನನ್ನು ರಾಮನೆಂದು ಜನರು ಕರೆಯುತ್ತಾರೆ. ಇವನು ನನ್ನ ಚಿಕ್ಕ ತಮ್ಮನು. ಯಾವಾಗಲೂ ನನ್ನನ್ನೇ ಅನುಸರಿಸಿಕೊಂಡು ಇರತಕ್ಕವನು. ಇವಳು ನನ್ನ ಪತ್ನಿಯು. ವೈದೇಹೀ–ಎಂಬ ಹೆಸರಿನಿಂದ ಖ್ಯಾತಳಾಗಿದ್ದಾಳೆ. ಧರ್ಮಾಕಾಂಕ್ಷಿಯಾದ ನಾನು ತಂದೆಯಾದ ದಶರಥ ರಾಜೇಂದ್ರನ ಆಜ್ಞೆಯಿಂದಲೂ ಮತ್ತು ತಾಯಿಯಾದ ಕೈಕೇಯಿಯಿಂದಲೂ ನಿರ್ಬಂಧಿತನಾಗಿ ಧರ್ಮದ ರಕ್ಷಣೆಯ ಸಲುವಾಗಿ ಈ ಕಾಡಿನಲ್ಲಿ ವಾಸವಾಗಿರಲು ಬಂದಿದ್ದೇನೆ. ನೀನಾರೆಂಬುದನ್ನು ನಾನು ತಿಳಿಯುವ ಆಶಯವಿದೆ. ನೀನು ಯಾರು? ಯಾರವಳು? ಈ ಎಲ್ಲ ವಿಷಯಗಳನ್ನೂ ವಿಶದವಾಗಿ ಹೇಳು.

ತ್ವಂ ಹಿ ತಾವನ್ಮನೋಜ್ಞಾಙ್ಗೀ ರಾಕ್ಷಸೀ ಪ್ರತಿಭಾಸಿ ಮೇ ॥೧೮॥

ಇಂತಹ ಮನೋಹರವಾದ ಶರೀರಸೌಂದರ್ಯವನ್ನು ಹೊಂದಿರುವ ನೀನು ರಾಕ್ಷಸಿಯಾಗಿರಬಹುದೆಂದು ನನಗೆ ಭಾಸವಾಗುತ್ತಿದೆ. * ಇಲ್ಲಿಗಾದರೂ ನೀನು ಯಾವ ಕಾರಣದಿಂದ ಬಂದೆಯೆಂಬುದನ್ನು ಯಥಾವತ್ತಾಗಿ ಹೇಳು."

ಶ್ರೀರಾಮನ ಆ ಮಾತನ್ನು ಕೇಳಿ ಮನ್ಮಥಪೀಡಿತಳಾಗಿದ್ದ ರಾಕ್ಷಸಿಯು ಹೇಳಿದಳು:

"ಕೇಳು; ರಾಮ! ನಿಜಸ್ಥಿತಿಯನ್ನು ಹೇಳುವೆನು. ಮನಬಂದಂತೆ ರೂಪವನ್ನು ಬದಲಾಯಿಸಿಕೊಳ್ಳುವ ಸಾಮರ್ಥ್ಯವುಳ್ಳ ಶೂರ್ಪಣಖಾ–ಎಂಬ ಹೆಸರಿನ ರಾಕ್ಷಸಿಯು ನಾನು. ಸರ್ವಪ್ರಾಣಿಗಳನ್ನೂ ಭಯಗೊಳಿಸುತ್ತಾ ಈ ಅರಣ್ಯದಲ್ಲಿ ಏಕಾಕಿನಿಯಾಗಿ ಸುತ್ತುತ್ತಿರುತ್ತೇನೆ. ಮಹಾಬಲಿಷ್ಠನಾದ, ಸಕಲರಾಕ್ಷಸರಿಗೂ ಒಡೆಯನಾದ ರಾವಣನೆಂಬ ಹೆಸರಿನಿಂದ ವಿಖ್ಯಾತನಾಗಿರು

---

*ರಾಕ್ಷಸರಿಗೆ ಅವಳ ರೂಪವು ಮನಮೋಹಕವಾಗಿತ್ತೆಂದು ಒಬ್ಬರು ವ್ಯಾಖ್ಯಾನಮಾಡಿರುತ್ತಾರೆ. ಮತ್ತೊಬ್ಬರು ತ್ವಂ ಹಿ ಎಂಬುದಕ್ಕೆ ನ ಹಿ ಎಂಬ ಪಾಠಾಂತರವನ್ನಿಟ್ಟುಕೊಂಡು ಇಂತಹ ಅನುಪಮವಾದ, ಮನೋಜ್ಞವಾದ ಶರೀರಸೌಂದರ್ಯವುಳ್ಳ ನೀನು ರಾಕ್ಷಸಿಯೆಂದು ನನಗನಿಸುವುದಿಲ್ಲ. 'ನ ಪ್ರತಿಭಾಸಿ ಮೇ' ಎಂದು ಅರ್ಥಮಾಡಿರುತ್ತಾರೆ. ಆ ಸಮಯದಲ್ಲಿ ಶೂರ್ಪನಖೆಯು ಸ್ವಾಭಾವಿಕರೂಪವನ್ನು ಬದಲಾಯಿಸಿ ರೂಪ-ಯೌವನಸಂಪನ್ನೆಯಾಗಿ ಬಂದಿದ್ದಳೆಂಬುದು ಇವರ ಈ ಅಭಿಪ್ರಾಯಕ್ಕೆ ಕಾರಣವಾಗಿದೆ. ಆದರೆ ಈ ಹಿಂದೆ ಶೂರ್ಪಣಖೆಯು ಹೇಗಿದ್ದಳೆಂಬ ವರ್ಣನೆಯು ಬಂದಿದೆ.

ವವನೇ ನನ್ನಣ್ಣನು. ಅವನು ವಿಶ್ರವಸಮುನಿಯ ಮಗನು. ಅವನ ಹೆಸರನ್ನು ನೀನೂ ಕೇಳಿರಬಹುದು. ಮಹಾಬಲನಾದ ಕುಂಭಕರ್ಣನೂ ನನ್ನ ಮತ್ತೊಬ್ಬ ಅಣ್ಣನು. ಅವನು ಯಾವಾಗಲೂ ನಿದ್ರೆಮಾಡುತ್ತಲೇ ಇರುವವನು. ಅವನ ನಿದ್ರೆಯು ಹೆಚ್ಚುತ್ತಲೇ ಇರುವುದು. ಧರ್ಮಾತ್ಮನಾದ ವಿಭೀಷಣನೂ ನನ್ನ ಅಣ್ಣನೇ. ಅವನು ರಾಕ್ಷಸರ ವಂಶದಲ್ಲಿ ಹುಟ್ಟಿದ್ದರೂ-ರಾಕ್ಷಸರ ಪ್ರಕೃತಿಯುವನಲ್ಲ. ಈ ಮೂವರೇ ಅಲ್ಲದೇ ಯುದ್ಧದಲ್ಲಿ ಖ್ಯಾತವೀರ್ಯರಾದ, ಖರ-ದೂಷಣರೆಂಬ ಇನ್ನೂ ಇಬ್ಬರು ಅಣ್ಣಂದಿರೂ ನನಗಿದ್ದಾರೆ. ಬಲ-ವೀರ್ಯ-ಪರಾಕ್ರಮಗಳಲ್ಲಿ ನಾನು ಅವರೆಲ್ಲರನ್ನೂ ಮೀರಿಸಿರತಕ್ಕವಳು. ನಿನ್ನ ಅಪೂರ್ವವಾದ ಸೌಂದರ್ಯದಿಂದ ವಿಮೋಹಿತೆಯಾದ ನಾನು ನನ್ನ ಅಣ್ಣಂದಿರನ್ನೂ ಲೆಕ್ಕಿಸದೇ ಪುರುಷಶ್ರೇಷ್ಠನಾದ ನಿನ್ನನ್ನು ಗಂಡನನ್ನಾಗಿ ಮಾಡಿಕೊಳ್ಳಬೇಕೆಂಬ ಭಾವನೆಯಿಂದ ನಿನ್ನ ಬಳಿಗೆ ಬಂದಿರುವೆನು. ನಾನು ಶಕ್ತಿ-ಸಾಮರ್ಥ್ಯಗಳಿಂದ ಸಂಪನ್ನಳಾಗಿದ್ದೇನೆ. ನನ್ನಲ್ಲಿರುವ ಬಲಾತಿಶಯದಿಂದ ಇಚ್ಛೆಯಿದ್ದೆಡೆಗೆ ಸ್ವೇಚ್ಛೆಯಿಂದ ಹೋಗಬಲ್ಲವಳಾಗಿದ್ದೇನೆ. ಚಿರಕಾಲದವರೆಗೂ ನೀನು ನನಗೆ ಪತಿಯಾಗಿರು. ಇಂತಹ ಪ್ರಭಾವವಾಗಲೀ ಬಲವಾಗಲೀ ಇಲ್ಲದ ಈ ಸೀತೆಯನ್ನು ಕಟ್ಟಿಕೊಂಡು ನೀನೇನು ಮಾಡುವೆ?

**ವಿಕೃತಾ ಚ ವಿರೂಪಾ ಚ ನ ಚೇಯಂ ಸದೃಶೀ ತವ ।**
**ಅಹಮೇವಾನುರೂಪಾ ತೇ ಭಾರ್ಯಾರೂಪೇಣ ಪಶ್ಯ ಮಾಮ್ ॥**

---

ಅವಳು ರೂಪವನ್ನು ಬದಲಾಯಿಸಿಕೊಂಡು ಬಂದಳೆಂದು ಎಲ್ಲಿಯೂ ಹೇಳಿಲ್ಲ. ಆದರೆ ಶ್ರೀರಾಮನಿಲ್ಲಿ-' ಇಷ್ಟು ಚೆಲುವೆಯಾಗಿರುವ ನೀನು ' - ಎಂದು ಹೇಳಿದ್ದಾರೆ. ವಾಲ್ಮೀಕಿಯು ಹಿಂದೆ ವರ್ಣಿಸಿರುವುದು ಆಕೆಯ ಸಹಜವಾದ ರೂಪವನ್ನು. ತಾನು ಕಾಮರೂಪಿಣೀ - ಎಂದು ಇಲ್ಲಿ ಅವಳೇ ಹೇಳಿಕೊಂಡಿದ್ದಾಳೆ. ' ಮದಿರೇಕ್ಷಣಾ ' - ಎಂದು ಮುಂದೆ ಅವಳ ವರ್ಣನೆಯೂ ಇದೆ. ಆದುದರಿಂದ ಅವಳು ತನ್ನ ಸಹಜವಾದ ರಾಕ್ಷಸ ರೂಪವನ್ನು ತೊರೆದು ಮನುಷ್ಯರಿಗೆ ಆಕರ್ಷಕವಾದ ರೂಪವನ್ನು ಧರಿಸಿ ರಾಮನ ಮುಂದೆ ಕಾಣಿಸಿಕೊಂಡಳೆಂದು ಊಹಿಸಬಹುದು. ಮಹಾಭಾರತದಲ್ಲಿ ಹಿಡಿಂಬೆಯು ಭೀಮಸೇನನ ಮುಂದೆ ಮೊದಲು ಕಾಣಿಸಿಕೊಳ್ಳುವಾಗ ಸುಂದರರೂಪವನ್ನು ಧರಿಸಿದ್ದ ಉದಾಹರಣೆಯನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸುಂದರರೂಪದಿಂದ ಕಾಣಿಸಿಕೊಂಡಿದ್ದರೂ ಅದು ಮಾಯೆಯಿಂದ ಕೈಗೊಂಡಿರುವ

ಇವಳಾದರೋ ವಿಕಾರವಾದ ರೂಪವುಳ್ಳವಳು. (ರೋಗಗ್ರಸ್ತಳಂತಿದ್ದಾಳೆ.) ನಿನಗಂತೂ ಇವಳು ಅನುರೂಪಳಾದ ಪತ್ನಿಯೇ ಅಲ್ಲ. ನಾನೇ ನಿನಗೆ ಅನುರೂಪಳಾದ ಕನ್ಯೆಯಾಗಿದ್ದೇನೆ. ಆದುದರಿಂದ ನೀನು ಇನ್ನು ಮುಂದೆ ನನ್ನನ್ನು ಪತ್ನಿಯಂತೆ ಕಾಣು.

(ಸೀತಾ-ಲಕ್ಷ್ಮಣರಿಬ್ಬರೂ ನನ್ನ ಜೊತೆಯಲ್ಲಿರುವವರಲ್ಲವೇ ?–ಎಂಬ ವಿಷಯವಾಗಿಯೂ ನೀನು ಯೋಚಿಸಬೇಡ.)

ವಿರೂಪಳಾಗಿರುವ, ಸತೀತ್ವದಿಂದ ಭ್ರಷ್ಟಳಾಗಿರುವ, ಭಯಂಕರಾಕಾರವುಳ್ಳ, ಕೃಶೋದರಿಯಾದ, ಮನುಷ್ಯಜಾತಿಗೆ ಸೇರಿದ ಇವಳನ್ನೂ–ನಿನ್ನ ತಮ್ಮನನ್ನೂ ನಾನು ತಿಂದುಬಿಡುತ್ತೇನೆ. ಅನಂತರ, ಪ್ರಾಣಕಾಂತನೇ! ನೀನು ಪರ್ವತಶಿಖರಗಳನ್ನೂ ವಿಧ-ವಿಧವಾದ ವನಗಳನ್ನೂ ಸಂದರ್ಶಿಸುತ್ತಾ ಈ ದಂಡಕಾರಣ್ಯದಲ್ಲಿ ಸ್ವೇಚ್ಛೆಯಿಂದ ನನ್ನೊಡನೆ ಸಂಚರಿಸಬಹುದು."

ಶೂರ್ಪಣಖೆಯು ಹೀಗೆ ಹೇಳಲು ವಾಕ್ಯವಿಶಾರದನಾದ ರಾಮನು ಗಹ-ಗಹಿಸಿ ನಗುತ್ತಾ ಮೋಹಗೊಳಿಸುವ ಕಣ್ಣುಗಳನ್ನು ಹೊಂದಿದ್ದ ಶೂರ್ಪಣಖೆಗೆ ಹೇಳತೊಡಗಿದನು.

೧೭ನೆಯ ಸರ್ಗವು ಮುಗಿಯಿತು.

---

ರೂಪ. ಸಹಜವಾಗಿ ಆಕೆಯು ರಾಕ್ಷಸೀ ಎಂದು ವಸ್ತುಸ್ಥಿತಿಯನ್ನು ಆವಳ ನಡತೆಯಿಂದ ಊಹಿಸಿ ರಾಮನು ಆಕೆಯನ್ನು ನೀನು ಸುಂದರರೂಪದಿಂದ ಕಾಣಿಸಿಕೊಂಡಿರುವ ರಾಕ್ಷಸಿ ಎಂದು ಹೇಳಿರಬಹುದು. ಮುಂದೆ ರಾವಣನು ಕೂಡ ಶೂರ್ಪಣಖೆಯನ್ನು ಮನೋಜ್ಞಾಙ್ಗಿ ಎಂದೇ ಸಂಬೋಧಿಸುತ್ತಾನೆ. ಬರೋಡಾದ ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟಿನ ಪುಸ್ತಕದಲ್ಲಿ ತ್ವಂ ಹಿ ತಾವನ್ಮನೋಜ್ಞಾಙ್ಗೀ ರಾಕ್ಷಸೀ ಪ್ರತಿಭಾತಿ ಮೇ– ಎಂಬ ಉತ್ತರಾರ್ಧವಿರುವುದಿಲ್ಲ.

ಅರಣ್ಯಕಾಂಡ ೧೮ನೆಯ ಸರ್ಗ

## ಶ್ರೀರಾಮನ ಸಲಹೆಯಂತೆ ಶೂರ್ಪಣಖೆಯು ಲಕ್ಷ್ಮಣನಲ್ಲಿ ಪ್ರಣಯಭಿಕ್ಷೆಯನ್ನು ಯಾಚಿಸಿದುದು : ಅವನೂ ನೆಪ ಹೇಳಿ ಹಿಂಪಕ್ಕಟ್ಟಲು ಶೂರ್ಪಣಖೆಯು ಸೀತಾದೇವಿಯನ್ನೇ ಕಬಳಿಸಲು ಹೋದುದು : ಲಕ್ಷ್ಮಣನು ರಾಕ್ಷಸಿಯ ಕಿವಿ-ಮೂಗುಗಳನ್ನು ಕತ್ತರಿಸಿದುದು

ತಾಂ ತು ಶೂರ್ಪಣಖಾಂ ರಾಮಃ ಕಾಮಪಾಶಾವಪಾಶಿತಾಮ್ ।
ಸ್ವಚ್ಛಯಾ ಶ್ಲಕ್ಷ್ಣಯಾ ವಾಚಾ ಸ್ಮಿತಪೂರ್ವಮಥಾಬ್ರವೀತ್ ॥ ೧॥

ಶ್ರೀರಾಮನು ಕಾಮವೆಂಬ ಪಾಶದಿಂದ ಕಟ್ಟಿಹಾಕಲ್ಪಟ್ಟಿದ್ದ ಶೂರ್ಪಣಖೆಗೆ ಸ್ವಚ್ಛವಾದ ಮತ್ತು ಮೃದುವಾದ ಮಾತುಗಳಿಂದ ಮಂದಸ್ಮಿತನಾಗಿ ಹೇಳಿದನು :

ಕೃತದಾರೋಽಸ್ಮಿ ಭವತಿ ಭಾರ್ಯೇಯಂ ದಯಿತಾ ಮಮ ।
ತ್ವದ್ವಿಧಾನಾಂ ತು ನಾರೀಣಾಂ ಸುದುಃಖಾ ಸಸಪತ್ನತಾ ॥ ೨॥

"ಆದರಣೀಯಳೇ ! ನನಗೆ ಮದುವೆಯಾಗಿದೆ. ಇವಳೇ ನನ್ನ ಭಾರ್ಯೆಯು. ಅತ್ಯಂತಪ್ರಿಯಳಾದವಳು. ನಿನ್ನಂತಹ ಪ್ರಭಾವಸಂಪನ್ನೆಯರಾದ ನಾರಿಯರಿಗೆ ಸವತಿಯ ಜೊತೆಯಲ್ಲಿರುವುದು ಬಹಳ ದುಃಖಕರವಾಗುತ್ತದೆ.

ಆದುದರಿಂದ ನಾನು ಹೇಳುವಂತೆ ಮಾಡು. ನನ್ನನ್ನು ಅನುಸರಿಸಿ ಹುಟ್ಟಿರುವ ಈ ನನ್ನ ತಮ್ಮನು ಶೀಲವಂತನು. ನೋಡಲು ಕೂಡ ಬಹಳ ಚೆಲುವನು. ತೇಜೋವಿಶಿಷ್ಟನು. ವೀರ್ಯವಂತನು. ಮೇಲಾಗಿ ಭಾರ್ಯೆಯ ಜೊತೆಯಲ್ಲಿಲ್ಲ.* ಇನ್ನೂ ಸ್ತ್ರೀಸುಖವನ್ನು ಅನುಭವಿಸಿಲ್ಲ. ಭಾರ್ಯೆಯ

* ಅಕೃತದಾರಃ = ಎಂದರೆ ಮದುವೆಯಾಗದವನು ಎಂದೇ ಮುಖ್ಯಾರ್ಥ. ಹಿಂದಿನ ಶ್ಲೋಕದಲ್ಲಿ ಶ್ರೀರಾಮನು 'ನಾನು ಮದುವೆಯಾಗಿದ್ದೇನೆ' ಎಂದು ಹೇಳುವಾಗ ಕೃತದಾರೋಽಸ್ಮಿ ಎಂದು ಈ ಶಬ್ದವನ್ನೇ ಹೇಳಿದ್ದಾನೆ. ಆದುದರಿಂದ ಅಕೃತದಾರಃ ಎಂಬುದಕ್ಕೆ ಮದುವೆಯಾಗದವನು ಎಂದು ನೇರವಾದ ಅರ್ಥವೇ ಆಗುತ್ತದೆ. ಭಾರ್ಯಾಸುಖವನ್ನು ಅನುಭವಿಸದವನು–ಎಂಬ ಲಕ್ಷಣಾರ್ಥವೂ ಸರಿಹೊಂದುತ್ತದೆ. ಈ ಸಮಯದಲ್ಲಿ ಶೂರ್ಪಣಖೆಯೊಡನೆ ಶ್ರೀರಾಮನು ಪರಿಹಾಸದ ಮಾತನಾಡುತ್ತಿರುವುದರಿಂದ ಹಾಸ್ಯ

ಅನ್ವೇಷಕನೂ ಆಗಿದ್ದಾನೆ. ತರುಣನು. ಪ್ರಿಯಕರವಾದ ಸೌಂದರ್ಯವಿರು ತಕ್ಕವನು. ನಿನ್ನ ಈ ಮನೋಜ್ಞವಾದ ರೂಪಿಗೆ ಅವನು ಅನುರೂಪನಾದ ಪತಿಯಾಗುತ್ತಾನೆ. ವಿಶಾಲಾಕ್ಷಿಯೇ! ನನ್ನ ತಮ್ಮನಾದ ಇವನನ್ನು ಪತಿಯನ್ನಾಗಿ ಮಾಡಿಕೊಂಡು ಸೂರ್ಯನ ಪ್ರಭೆಯು ಮೇರುಪರ್ವತವನ್ನು ಬೆಳಗುವಂತೆ – ಅವನ ಮನಸ್ಸನ್ನು ನಿನ್ನ ಪ್ರಭಾವದಿಂದ ಉಲ್ಲಾಸಗೊಳಿಸು. ರೂಪ-ಲಾವಣ್ಯಗಳಿಂದ ಸಂಪನ್ನಳಾದವಳೇ! ನೀನು ಇವನನ್ನು ಮದುವೆಯಾದರೆ ನಿನಗೆ ಸವತಿಯ ಬಾಧೆಯೂ ಇರುವುದಿಲ್ಲ."

ಶ್ರೀರಾಮನು ಹೀಗೆ ಹೇಳುತ್ತಲೇ ಕಾಮಮೋಹಿತಳಾಗಿದ್ದ ರಾಕ್ಷಸಿಯು ರಾಮನನ್ನು ಬಿಟ್ಟು ಲಕ್ಷ್ಮಣನಲ್ಲಿಗೆ ಹೋಗಿ ಹೇಳಿದಳು :

"ಲಕ್ಷ್ಮಣ! ನಿನ್ನ ಈ ಸ್ಫುರದ್ರೂಪಕ್ಕೆ ಉತ್ತಮಸ್ತ್ರೀಯಾಗಿರುವ ನಾನು ಅನುರೂಪಳಾದ ಭಾರ್ಯೆಯಾಗುತ್ತೇನೆ. ಆದುದರಿಂದ ನನ್ನನ್ನು ಮದುವೆಯಾಗಿ ಈ ದಂಡಕಾರಣ್ಯದಲ್ಲಿ ನನ್ನೊಡನೆ ಸುಖವಾಗಿ ವಿಹರಿಸು."

ಶೂರ್ಪಣಖೆಯು ಹೀಗೆ ಹೇಳಲು ವಾಕ್ಯಕೋವಿದನಾದ ಲಕ್ಷ್ಮಣನು ಮಂದಹಾಸದೊಡನೆ ತತ್ಕಾಲೋಚಿತವಾದ ಈ ಮಾತನ್ನು ಹೇಳಿದನು :

ಕಥಂ ದಾಸಸ್ಯ ಮೇ ದಾಸೀ ಭಾರ್ಯಾ ಭವಿತುಮಿಚ್ಛಸಿ ।
ಸೋಽಹಮಾರ್ಯೇಣ ಪರವಾನ್ಭ್ರಾತ್ರಾ ಕಮಲವರ್ಣಿನಿ ॥೯॥
ಸಮೃದ್ಧಾರ್ಥಸ್ಯ ಸಿದ್ಧಾರ್ಥಾ ಮುದಿತಾಮಲವರ್ಣಿನೀ ।
ಆರ್ಯಸ್ಯ ತ್ವಂ ವಿಶಾಲಾಕ್ಷಿ ಭಾರ್ಯಾ ಭವ ಯವೀಯಸೀ ॥೧೦॥

"ಕಮಲದಂತೆ ಶರೀರಕಾಂತಿಯುಳ್ಳವಳೇ! ನೀನು ನನ್ನ ಅಂತಸ್ತೇನೆಂಬುದನ್ನು ತಿಳಿಯೆ. ನಾನೊಬ್ಬ ದಾಸ. ದಾಸನನ್ನು ಮದುವೆಯಾದರೆ

---

ಸಮಯದಲ್ಲಿ ಸುಳ್ಳುಹೇಳಿದರೂ ದೋಷವಿಲ್ಲ. ಪರಿಹಾಸಾದೌ ಮಿಥ್ಯಾಭಾಷಣೇ ನ ದೋಷಃ–ಎಂಬಂತೆ ರಾಮನು ಸುಳ್ಳನ್ನಾಡಿದನೆಂಬ ದೋಷಾರೋಪಣೆಯನ್ನು ಮಾಡಬೇಕಾದ ಕಾರಣವೇನೂ ಇಲ್ಲ. ಆದರೂ ಕೆಲವು ವ್ಯಾಖ್ಯಾನಕಾರರು ರಾಮನು ಪರಿಹಾಸಕ್ಕಾದರೂ ಸುಳ್ಳನ್ನಾಡಿದನೆಂದು ಅರ್ಥಮಾಡಲು ಇಷ್ಟವಿಲ್ಲದೇ ಅಸಹಕೃತದಾರಃ ಅಸಂನಿಹಿತದಾರಃ ಪತ್ನಿಯನ್ನು ಜೊತೆಯಲ್ಲಿ ಕರೆದುಕೊಂಡು ಬರದೇ ಇರತಕ್ಕವನು ; ನ ಕೃತಾಃ ವನೇ ಸ್ವೀಕೃತಾಃ ದಾರಾಃ ಯೇನ ಸಃ–ಎಂದು ಮುಂತಾಗಿ ಅರ್ಥಮಾಡಿರುತ್ತಾರೆ. ನ

ನೀನೂ ದಾಸಿಯಾಗಬೇಕಾಗುತ್ತದೆ. ಪ್ರಭಾವದಿಂದಲೂ, ಬಲದಿಂದಲೂ, ರೂಪ-ಲಾವಣ್ಯಗಳಿಂದಲೂ ಸಂಪನ್ನೆಯಾಗಿರುವ ನೀನು ದಾಸನೊಬ್ಬನ ಪತ್ನಿಯಾಗಿ ದಾಸಿಯಾಗಲು ಬಯಸುವೆಯಾ? ಆರ್ಯನಾದ ನಮ್ಮಣ್ಣನಿಗೆ ನಾನು ಅಧೀನನು. ಆದುದರಿಂದ ಶುಭ್ರವಾದ ವರ್ಣವುಳ್ಳವಳೇ! ವಿಶಾಲ ನೇತ್ರಳೇ! ಸಮೃದ್ಧವಾದ ಐಶ್ವರ್ಯದಿಂದ ಸಂಪನ್ನನಾಗಿರುವ ನಮ್ಮ ಅಣ್ಣನಿಗೆ ನೀನು ಕಿರಿಯ ಹೆಂಡತಿಯಾಗಿ ಕೃತಕೃತ್ಯಳಾಗು. ಸಂತೋಷದಿಂದಿರು. ನಿನ್ನನ್ನು ಮದುವೆಯಾದೊಡನೆಯೇ ನಮ್ಮಣ್ಣನು ನೀನು ಹೇಳಿದಂತೆ ವಿರೂಪಳಾದ, ಅಸತಿಯಾದ, ಕರಾಳರೂಪಳಾದ, ಕೃಶೋದರಿಯಾದ, ವೃದ್ಧೆಯಾದ ಪತ್ನಿಯನ್ನು ಪರಿತ್ಯಜಿಸಿ ನಿನ್ನನ್ನೇ ಸೇವಿಸುತ್ತಾನೆ.* ಹಾಗಾಗಿಬಿಟ್ಟರೆ ನಿನಗೆ ಸವತಿಯ ಬಾಧೆಯೂ ಇರುವುದಿಲ್ಲ. ವರವರ್ಣಿನಿಯೇ! ವರಾರೋಹಿಣಿಯೇ! ಬುದ್ಧಿವಂತನಾದ ಯಾವನು ತಾನೇ ಶ್ರೇಷ್ಠವಾದ ಮತ್ತು ಸರ್ವೋತ್ತಮವಾದ ಈ ನಿನ್ನ ರೂಪವನ್ನು ಪರಿತ್ಯಜಿಸಿ ಮನುಷ್ಯ ಸಾಮಾನ್ಯರಲ್ಲಿ ಪ್ರೀತಿಭಾವವನ್ನು ಹೊಂದುತ್ತಾನೆ?"

ಶೂರ್ಪಣಖೆಗೆ ಪರಿಹಾಸವೆಂದರೇನೆಂಬುದೇ ತಿಳಿದಿರಲಿಲ್ಲ. ಅಣ್ಣ-ತಮ್ಮಂದಿರಿಬ್ಬರೂ ತನ್ನನ್ನು ಹಾಸ್ಯಮಾಡುತ್ತಿರುವರೆಂದೂ ಅವಳು ಭಾವಿಸಲಿಲ್ಲ. ಶ್ರೀರಾಮನ ಮಾತು ಸತ್ಯವೆಂದು ಭಾವಿಸಿ ಲಕ್ಷ್ಮಣನಲ್ಲಿಗೆ

---

ವಿತಥಾ ಪರಿಹಾಸಕಥಾಸ್ವಪಿ ಪರಿಹಾಸದಲ್ಲೇ ಆಗಲೀ ಕಥೆಯಲ್ಲೇ ಆಗಲೀ ಸುಳ್ಳನ್ನು ಆಡಲೇ ಕೂಡದು–ಎಂಬ ಅಭಿಪ್ರಾಯವೂ 'ಅನೃತಂ ನೋಕ್ತಪೂರ್ವಂ ಮೇ' ಎಂಬ ಶ್ರೀರಾಮನ ಮಾತೂ ಇವರು ಹೀಗೆ ಅರ್ಥಮಾಡಲು ಕಾರಣವಾಗಿದೆ. ಆದರೆ ತಾನು ಕೃತದಾರನಾಗಿದ್ದೇನೆ. ಲಕ್ಷ್ಮಣನು ಅಕೃತದಾರನು ಎಂದು ಹೇಳುವಾಗ ರಾಮನಿಗೆ ಈ ಅಭಿಪ್ರಾಯವು ಮನಸ್ಸಿನಲ್ಲಿದ್ದಂತೆ ಕಾಣುವುದಿಲ್ಲ. ಪರಿಹಾಸ್ಯಕ್ಕಾಗಿ ರಾಮನು ಆಡಿರುವ ಅಕೃತದಾರಃ ಎಂಬ ಪದಕ್ಕೆ ಮದುವೆಯಾಗದವನು ಅಥವಾ ಭಾರ್ಯೆಯನ್ನು ಹೊಂದಿಲ್ಲದವನು ಎಂಬ ಎರಡು ಅರ್ಥಗಳನ್ನೂ ಹೇಳಬಹುದು. ಹಾಸ್ಯದಲ್ಲಿ ಎರಡು ಅರ್ಥಗಳು ಬರುವ ಪದವನ್ನು ಉಪಯೋಗಿಸುವುದು ಸಹಜವೇ.

* ಇಲ್ಲಿ ವಿರೂಪಾಂ ಅಸತೀಂ ಕರಾಲಾಂ ನಿರ್ಣತೋದರೀಮ್ ವೃದ್ಧಾಂ–ಮುಂತಾದ ವಿಶೇಷಣಗಳು ಸೀತಾದೇವಿಗೂ ಹೇಳಲ್ಪಟ್ಟಿವೆ. ಈ ವಿಶೇಷಣಗಳು ಸೀತಾದೇವಿಗೆ ತಕ್ಕುವುಗಳಾಗಿಲ್ಲ. ಆದುದರಿಂದ ಈ ಎಲ್ಲ ಪದಗಳಿಗೂ ವ್ಯಾಖ್ಯಾನಕಾರರು ಬೇರೆಯ ರೀತಿಯಲ್ಲಿ ಅರ್ಥಮಾಡಿರುತ್ತಾರೆ. ವಿರೂಪಾಂ = ವಿಶಿಷ್ಟರೂಪಾಂ, ವಿಶಿಷ್ಟವಾದ ರೂಪವುಳ್ಳ

ಹೋದಂತೆಯೇ ಲಕ್ಷ್ಮಣನ ಮಾತನ್ನೂ ಸತ್ಯವೆಂದೇ ಕರಾಳರೂಪಳಾದ ಲಂಬೋದರಿಯಾದ ಶೂರ್ಪಣಖೆಯು ಭಾವಿಸಿದಳು.

ಕಾಮಮೋಹಿತೆಯಾಗಿದ್ದ ಶೂರ್ಪಣಖೆಯು ಲಕ್ಷ್ಮಣನ ಮಾತಿನಂತೆ ಪುನಃ ಶ್ರೀರಾಮನ ಬಳಿಗೆ ಹೋದಳು. ಪರಂತಪನಾದ, ಶತ್ರುಗಳಿಂದ ಎದುರಿಸಲು ಅಸಾಧ್ಯನಾದ, ಸೀತೆಯೊಡನೆ ಪರ್ಣಶಾಲೆಯಲ್ಲಿ ಕುಳಿತಿದ್ದ ಶ್ರೀರಾಮನಿಗೆ ಹೇಳಿದಳು :

"ರಾಮ ! ವಿರೂಪಳೂ, ಅಸತಿಯೂ, ಭಯಂಕರಾಕಾರಳೂ, ಕೃಶೋದರಿಯೂ, ಮುದುಕಿಯೂ ಆಗಿರುವ ಪತ್ನಿಗೆ ಜೋತು ಬಿದ್ದು ನನ್ನನ್ನು ನೀನು ಲೆಕ್ಕಿಸುತ್ತಲೇ ಇಲ್ಲ. ಆದುದರಿಂದ ಈ ಕ್ಷಣದಲ್ಲಿಯೇ ನಾನು ನೀನು ನೋಡುತ್ತಿರುವಂತೆಯೇ ಇವಳನ್ನು ತಿಂದುಬಿಡುತ್ತೇನೆ. ಹೀಗೆ ಮಾಡಿ ಸವತಿಯ ಕಾಟವಿಲ್ಲದವಳಾಗಿ ನಿನ್ನೊಡನೆ ಸುಖವಾಗಿ ವಿಹರಿಸುತ್ತೇನೆ."

ಆ ಸಮಯದಲ್ಲಿ ಶೂರ್ಪಣಖೆಯ ಕಣ್ಣುಗಳು ಕೊಳ್ಳಿಯಂತೆ ಉರಿಯುತ್ತಿದ್ದುವು. ಪರಮಕ್ರುದ್ಧೆಯಾಗಿದ್ದ ಅವಳು ಹೀಗೆ ಹೇಳಿ ಉಲ್ಕೆಯು (ಧೂಮಕೇತುವು) ರೋಹಿಣೀನಕ್ಷತ್ರದ ಬಳಿಗೆ ರಭಸದಿಂದ ನುಗ್ಗಿ ಹೋಗುವಂತೆ ಜಿಂಕೇಮರಿಯ ಕಣ್ಣುಗಳಂತೆ ಚಂಚಲವಾದ ಕಣ್ಣುಗಳಿಂದ ಕೂಡಿದ್ದ ಸೀತಾದೇವಿಯ ಕಡೆಗೆ ರಭಸದಿಂದ ನುಗ್ಗಿದಳು.

ಮೃತ್ಯುವಿನ ಪಾಶದಂತೆಯೇ ಬಹುಭಯಂಕರಳಾಗಿದ್ದ, ಸೀತಾದೇವಿಯ ಮೇಲೆ ಬೀಳಲಿದ್ದ ಆ ರಾಕ್ಷಸಿಯನ್ನು ಮಹಾಬಲಶಾಲಿಯಾದ, ಪರಮಕ್ರುದ್ಧನಾಗಿದ್ದ ಶ್ರೀರಾಮನು ಕ್ಷಣಮಾತ್ರದಲ್ಲಿ ಹಿಡಿದು ನಿಲ್ಲಿಸಿ ಲಕ್ಷ್ಮಣನಿಗೆ ಹೇಳಿದನು :

"ಲಕ್ಷ್ಮಣ ! ಕ್ರೂರಿಗಳೂ ಅನಾರ್ಯರೂ ಆಗಿರುವವರೊಡನೆ

---

ವಳು, ತ್ರಿಲೋಕಸುಂದರಿ. ಅಸತೀ – ನ ವಿದ್ಯತೇ ಅನ್ಯಾ ಸತೀ ಯಸ್ಯಾಃ = ಬೇರೊಬ್ಬ ಸವತಿಯಿಲ್ಲದವಳು, ಕರಾಲಾ = ಎತ್ತರವಾಗಿರುವವಳು. ನಿರ್ಣತೋದರೀ = ಆಳವಾಗಿರುವ ಅಥವಾ ತೆಳುವಾಗಿರುವ ಹೊಟ್ಟೆಯುಳ್ಳವಳು. ರಾಕ್ಷಸಿಯ ಪರ್ಯಾಯದಲ್ಲಿ ಇದೇ ಶಬ್ದಕ್ಕೆ ವಕ್ರವಾಗಿರುವ ಅಥವಾ ಮುಂದಕ್ಕೆ ಚಾಚಿಕೊಂಡಿರುವ ಹೊಟ್ಟೆಯುಳ್ಳವಳು–ಎಂದಾಗುತ್ತದೆ. ವೃದ್ಧಾ = ಜ್ಞಾನವುಳ್ಳವಳು.

ಯಾವುದೇ ಕಾರಣದಿಂದಲೂ ಪರಿಹಾಸವು ಸಲ್ಲದು. ವೈದೇಹಿಯು ಹೇಗೋ ಇವಳ ಕೈಗೆ ಸಿಕ್ಕದೆ ಬದುಕಿದಳು. ವಿಕಾರವಾದ ರೂಪವುಳ್ಳ, ಅಸಾಧ್ವಿಯಾದ, ಬಲದಿಂದ ಅತಿಯಾಗಿ ಕೊಬ್ಬಿಹೋಗಿರುವ, ಮಹೋದರಿಯಾದ ಈ ರಾಕ್ಷಸಿಯನ್ನು ಈಗ ವಿರೂಪಗೊಳಿಸುವುದು ಯೋಗ್ಯವಾಗಿದೆ."



ಶ್ರೀರಾಮನು ಹೀಗೆ ಹೇಳಲು ಪರಮಕ್ರುದ್ಧನಾದ, ಮಹಾಬಲಶಾಲಿಯಾದ ಲಕ್ಷ್ಮಣನು ಶ್ರೀರಾಮನು ನೋಡುತ್ತಿದ್ದಂತೆಯೇ ಖಡ್ಗವನ್ನು ಮೇಲೆತ್ತಿ ರಾಕ್ಷಸಿಯ ಕಿವಿ-ಮೂಗುಗಳನ್ನು ಕತ್ತರಿಸಿಬಿಟ್ಟನು. ಹೀಗೆ ಕಿವಿ-ಮೂಗುಗಳನ್ನು ಕಳೆದುಕೊಂಡ ಘೋರರೂಪಿಣಿಯಾದ ಶೂರ್ಪಣಖೆಯು ವಿಕಾರಸ್ವರದಿಂದ ಗಟ್ಟಿಯಾಗಿ ಅರಚುತ್ತಾ ಯಾವ ಮಾರ್ಗದಿಂದ ಬಂದಿದ್ದಳೋ ಅದೇ ಮಾರ್ಗವನ್ನು ಹಿಡಿದು ಅರಣ್ಯದಲ್ಲಿ ಓಡಿಹೋದಳು.

ವಿಕಾರರೂಪಳಾಗಿದ್ದ, ಮಹಾಘೋರಸ್ವರೂಪಳಾಗಿದ್ದ, ಕಿವಿ-ಮೂಗುಗಳ ಮೂಲಕವಾಗಿ ಹೊರಚಿಮ್ಮುತ್ತಿದ್ದ ರಕ್ತದಿಂದ ತೋಯ್ದುಹೋಗಿದ್ದ ರಾಕ್ಷಸಿಯು–ವರ್ಷಾಕಾಲದಲ್ಲಿ ಮೇಘವು ಗರ್ಜಿಸುವಂತೆ ಪರಿ-ಪರಿಯಾಗಿ ಕೂಗಿಕೊಳ್ಳುತ್ತಿದ್ದಳು. ಆ ಸಮಯದಲ್ಲಿ ನೋಡಲು ಬಹಳ ಭಯಂಕರಳಾಗಿ ಕಾಣುತ್ತಿದ್ದ ಆ ರಾಕ್ಷಸಿಯು ಹಾದಿಯುದ್ದಕ್ಕೂ ರಕ್ತವನ್ನು ಸುರಿಸುತ್ತಾ ತೋಳುಗಳೆರಡನ್ನೂ ಮೇಲಕ್ಕೆತ್ತಿಕೊಂಡು ಗರ್ಜನೆಮಾಡುತ್ತಾ ಅರಣ್ಯದ ಒಳಹೊಕ್ಕಳು.

ಲಕ್ಷ್ಮಣನಿಂದ ವಿರೂಪಿತಳಾದ ಶೂರ್ಪಣಖೆಯು ಜನಸ್ಥಾನದಲ್ಲಿ ರಾಕ್ಷಸರ ಸಮೂಹದಿಂದ ಸಮಾವೃತನಾಗಿದ್ದ, ಭಯಂಕರವಾದ ತೇಜಸ್ಸಿನಿಂದ ಕೂಡಿದ್ದ, ಅಣ್ಣನಾದ ಖರನ ಬಳಿಗೆ ಹೋಗಿ – ಅಂತರಿಕ್ಷದಿಂದ ಸಿಡಿಲು ಭೂಮಿಗೆ ಅಪ್ಪಳಿಸುವಂತೆ–ಭೂಮಿಯ ಮೇಲೆ ದೊಪ್ಪನೆ ಬಿದ್ದಳು. ರಕ್ತದಿಂದ ತೋಯ್ದ ಶರೀರದಿಂದ ಕೂಡಿದ್ದ ಖರನ ತಂಗಿಯಾದ ಶೂರ್ಪಣಖೆಯು ಭಯದಿಂದಲೂ ಮೋಹದಿಂದಲೂ ಮೂರ್ಛಿತಳಾಗಿ ಸ್ವಲ್ಪಕಾಲ ನೆಲದ ಮೇಲೆ ಬಿದ್ದಿದ್ದು ಅನಂತರ ಚೇತರಿಸಿಕೊಂಡು, ಸೀತಾ-ಲಕ್ಷ್ಮಣರೊಡನೆ ಶ್ರೀರಾಮನು ಅರಣ್ಯಕ್ಕೆ ಬಂದಿರುವುದನ್ನೂ – ಶ್ರೀರಾಮನ ಸಲಹೆಯಂತೆ ಲಕ್ಷ್ಮಣನು ತನ್ನನ್ನು ವಿರೂಪಗೊಳಿಸಿದುದನ್ನೂ ಖರನಿಗೆ ವಿವರಿಸಿ ಹೇಳಿದಳು.

೧೮ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೧೯ನೆಯ ಸರ್ಗ

## ಶೂರ್ಪಣಖೆಯಿಂದ ವೃತ್ತಾಂತವನ್ನು ಕೇಳಿ ಕುಪಿತನಾದ ಖರನು ಶ್ರೀರಾಮನನ್ನು ಸಂಹರಿಸಲು ಹದಿನಾಲ್ಕು ಮಂದಿ ರಾಕ್ಷಸರನ್ನು ಕಳುಹಿಸಿಕೊಟ್ಟಿದು

**ತಾಂ ತಥಾ ಪತಿತಾಂ ದೃಷ್ಟ್ವಾ ವಿರೂಪಾಂ ಶೋಣಿತೋಕ್ಷಿತಾಮ್ ।**
**ಭಗಿನೀಂ ಕ್ರೋಧಸಂತಪ್ತಃ ಖರಃ ಪಪ್ರಚ್ಛ ರಾಕ್ಷಸಃ ॥೧॥**

ತಂಗಿಯು ಹೀಗೆ ತನ್ನ ಮುಂದೆ ಬಿದ್ದುದನ್ನೂ, ರೂಪವು ಅವಳ ವಿಕಾರ

ಹೊಂದಿರುವುದನ್ನೂ, ರಕ್ತದಿಂದ ತೋಯ್ದಿರುವುದನ್ನೂ ಕಂಡು ಖರರಾಕ್ಷಸನು ಕ್ರೋಧಸಂತಪ್ತನಾಗಿ ತಂಗಿಯನ್ನು ಪ್ರಶ್ನಿಸಿದನು :

" ಏಳು ತಂಗಿ ! ಭಯಪಡಬೇಡ. ಮಂಕಾಗಿ ಕುಳಿತುಕೊಳ್ಳಬೇಡ. ಸ್ಪಷ್ಟವಾಗಿ ಹೇಳು. ಪ್ರಶಸ್ತವಾದ ರೂಪವನ್ನು ಹೊಂದಿದ್ದ ನಿನ್ನನ್ನು ಹೀಗೆ ವಿರೂಪಗೊಳಿಸಿದವರಾರು ? ಅವನಿಗೆ ಯಾರನ್ನು ಕೆಣಕಿರುವೆನೆಂಬ ಅರಿವಿದ್ದಂತೆ ಕಾಣುವುದಿಲ್ಲ. ಯಾವ ತಪ್ಪನ್ನೂ ಮಾಡದೇ ತನ್ನಪಾಡಿಗೆ ಕುಳಿತಿರುವ, ಹಲ್ಲಿನಲ್ಲಿ ವಿಷವನ್ನು ತುಂಬಿಕೊಂಡಿರುವ ವಿಷಸರ್ಪವನ್ನು ಬೆರಳಿನ ತುದಿಯಿಂದ ಕೇವಲ ವಿನೋದಕ್ಕಾಗಿ ಮೂಢನಾದವನಲ್ಲದೇ ಬೇರೆ ಯಾವನು ತಾನೇ ಬಾಧೆಪಡಿಸಲು ಹೋಗುವನು ? ನಿನ್ನನ್ನು ಯಾವನು ವಿರೂಪಗೊಳಿಸಿದನೋ ಅವನು ಕಾಲಪಾಶವನ್ನೇ ಕುತ್ತಿಗೆಗೆ ಬಿಗಿದುಕೊಂಡಿದ್ದಾನೆ. ತಿಳಿಗೇಡಿತನದಿಂದಾಗಿ ಅವನು ಈ ವಿಷಯವನ್ನು ಅರಿತುಕೊಂಡಿಲ್ಲ. ಯಾವನು ನಿನ್ನ ಬಳಿಗೆ ಬಂದು ನಿನ್ನನ್ನು ಈ ರೀತಿಯಲ್ಲಿ ವಿರೂಪಗೊಳಸಿರುವನೋ ಅವನು ಈಗಾಗಲೇ ಅತಿದಾರುಣವಾದ ವಿಷವನ್ನು ಕುಡಿದುಬಿಟ್ಟಿದ್ದಾನೆ. ಅದರ ಪರಿಣಾಮಕ್ಕೆ ಸ್ವಲ್ಪಹೊತ್ತು ಮಾತ್ರವೇ ಕಾಯಬೇಕಾಗಿದೆ. ಇನ್ನವನು ಖಂಡಿತವಾಗಿಯೂ ಬದುಕಿರಲಾರನು.

ತಂಗಿ ! ನೀನೇನು ಸಾಮಾನ್ಯಳಲ್ಲ. ಅಬಲೆಯಲ್ಲ. ಬಲದಿಂದಲೂ ಪರಾಕ್ರಮದಿಂದಲೂ ಸಂಪನ್ನಳಾಗಿರತಕ್ಕವಳು. ಇಚ್ಛೆಯಿದ್ದೆಡೆಗೆ ಹೋಗುವ ಸಾಮರ್ಥ್ಯವನ್ನು ಹೊಂದಿರತಕ್ಕವಳು. ಇಚ್ಛಿಬಂದ ರೂಪವನ್ನು ಧರಿಸತಕ್ಕವಳು. ಯಮಧರ್ಮನಿಗೆ ಸರಿಸಮಾನಳು. ಇಂತಹ ನಿನಗೆ ಯಾರಿಂದ ಈ ದುರವಸ್ಥೆಯುಂಟಾಯಿತು ? ಇಂತಹ ಅತ್ಯಂತಬಲಿಷ್ಠೆಯಾದ, ಅತಂಕನಿಗೆ ಸರಿಸಮಾನಳಾದ ನಿನ್ನನ್ನು ವಿರೂಪಗೊಳಿಸಿರುವವನು ಸಾಮಾನ್ಯನೆಂದು ನಾನು ಭಾವಿಸುವುದಿಲ್ಲ. ಅವನು ಅತುಲಪರಾಕ್ರಮಿಯೇ ಆಗಿರಬೇಕು. ದೇವತೆಗಳಲ್ಲಿ, ಗಂಧರ್ವರಲ್ಲಿ, ಭೂತಗಣಗಳಲ್ಲಿ, ಮಹಾತ್ಮರಾದ ಋಷಿಗಳ ಸಮೂಹದಲ್ಲಿ ಮಹಾವೀರ್ಯನಾದ ಯಾವನು ನಿನ್ನನ್ನು ಹೀಗೆ ವಿರೂಪಗೊಳಿಸಿದನು ? ನೀನು ನನ್ನ ತಂಗಿಯೆಂಬುದು ತಿಳಿದಿದ್ದರೂ ಈ ದುಷ್ಕಾರ್ಯವನ್ನು ಮಾಡಿದವನು ಮಹಾಸಾಹಸಿಯೇ ಸರಿ. ಸಹಸ್ರಾಕ್ಷನಾದ, ಪಾಕಶಾಸನನಾದ ಮಹೇಂದ್ರನೊಬ್ಬನ ಹೊರತಾಗಿ ಈ ಲೋಕದಲ್ಲಿ ನನಗೆ

ಅಪ್ರಿಯವಾಗುವಂತಹ ಕಾರ್ಯವನ್ನು ಮಾಡುವ ಸಾಹಸವಿರುವವರನ್ನು ನಾನು ಇದುವರೆಗೂ ಕಂಡೇ ಇಲ್ಲ. ನೀರಿನಲ್ಲಿ ಬೆರೆತಿರುವ ಹಾಲನ್ನು ಹಂಸ ಪಕ್ಷಿಯು ಪ್ರತ್ಯೇಕಿಸಿ ಕುಡಿಯುವಂತೆ-ಶತ್ರುವಿನ ಜೀವಿತವನ್ನು ಅಂತ್ಯ ಗೊಳಿಸುವ ಬಾಣಗಳಿಂದ ಆ ತಿಳಿಗೇಡಿಯ ಪ್ರಾಣಗಳನ್ನು ಅವನ ಶರೀರ ದಿಂದ ಸೆಳೆದುಬಿಡುತ್ತೇನೆ.

ಬಾಣದಿಂದ ಕತ್ತರಿಸಲ್ಪಟ್ಟ ಮರ್ಮಸ್ಥಾನವುಳ್ಳವನಾಗಿ ನನ್ನಿಂದ ಸಂಹರಿಸಲ್ಪಡುವ ಯಾವ ಪುರುಷಾಧಮನ ರಕ್ತವನ್ನು ಈ ಭೂಮಿಯು ಕುಡಿಯಲಿಚ್ಛಿಸಿದೆ? ಬೇಗ ಹೇಳು; ತಂಗಿ! ಪಕ್ಷಿಗಳೆಲ್ಲವೂ ಗುಂಪು ಸೇರಿ ಯುದ್ಧದಲ್ಲಿ ನನ್ನಿಂದ ಹತನಾಗಿ ಕೆಳಗೆ ಬೀಳುವ ಯಾವನ ಶರೀರ ದಿಂದ ಮಾಂಸವನ್ನು ಕಿತ್ತು ಸಂತೋಷದಿಂದ ಭಕ್ಷಿಸಲಿವೆ? ಯುದ್ಧದಲ್ಲಿ ನನ್ನಿಂದ ಆಕ್ರಮಿಸಲ್ಪಡುವ ಕೃಪಣನಾದ ಆ ದುಷ್ಟನನ್ನು ದೇವ-ಗಂಧರ್ವ ರಾಗಲೀ, ಪಿಶಾಚ-ರಾಕ್ಷಸರಾಗಲೀ ರಕ್ಷಿಸಲು ಸಮರ್ಥರಲ್ಲ. ತಂಗಿ! ಮೆಲ್ಲಗೆ ಚೇತರಿಸಿಕೊಂಡು ಎಲ್ಲ ವಿಷಯಗಳನ್ನೂ ಹೇಳು. ಯಾವ ದುಷ್ಟನು ನಿನ್ನನ್ನು ಈ ಅರಣ್ಯದಲ್ಲಿ ಪರಾಕ್ರಮದಿಂದ ಜಯಿಸಿ ಹೀಗೆ ವಿಕಾರಗೊಳಿ ಸಿದನು?"

ಅತ್ಯಂತಕ್ರುದ್ಧನಾಗಿದ್ದ ಅಣ್ಣನ ಆ ಮಾತುಗಳನ್ನು ಕೇಳಿ ಶೂರ್ಪ ಣಖಿಯು ಅಳುತ್ತಲೇ ಹೇಳಿದಳು:

ತರುಣೌ ರೂಪಸಂಪನ್ನೌ ಸುಕುಮಾರೌ ಮಹಾಬಲೌ ।
ಪುಣ್ಡರೀಕವಿಶಾಲಾಕ್ಷೌ ಚೀರಕೃಷ್ಣಾಜಿನಾಮ್ಬರೌ ॥೧೪॥
ಫಲಮೂಲಾಶನೌ ದಾನ್ತೌ ತಾಪಸೌ ಬ್ರಹ್ಮಚಾರಿಣೌ ।
ಪುತ್ರೌ ದಶರಥಸ್ಯಾಸ್ತಾಂ ಭ್ರಾತರೌ ರಾಮಲಕ್ಷ್ಮಣೌ ॥೧೫॥
ಗನ್ಧರ್ವರಾಜಪ್ರತಿಮೌ ಪಾರ್ಥಿವವ್ಯಞ್ಜನಾನ್ವಿತೌ ।
ದೇವೌ ವಾ ಮಾನುಷೌ ವಾ ತೌ ನ ತರ್ಕಯಿತುಮುತ್ಸಹೇ ॥೧೬॥

"ಅಣ್ಣ! ರಾಮ-ಲಕ್ಷ್ಮಣರೆಂಬ ಅಣ್ಣ-ತಮ್ಮಂದಿರು ದಶರಥ ರಾಜನ ಮಕ್ಕಳಂತೆ. ಅವರಿನ್ನೂ ಪ್ರಾಯದವರು. ಅನುಪಮವಾದ ರೂಪ ಸಂಪತ್ತಿಯುಳ್ಳವರು. ಸುಕೋಮಲವಾದ ಶರೀರವುಳ್ಳವರು. ಮಹಾ

ಬಲಿಷ್ಠರು. ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ಅವರು ನಾರುಮಡಿ ಮತ್ತು ಕೃಷ್ಣಾಜಿನಗಳನ್ನುಟ್ಟಿರುವರು. ಕಾಡಿನಲ್ಲಿ ಸಿಕ್ಕುವ ಹಣ್ಣುಗಳನ್ನೂ ಗೆಡ್ಡೆ-ಗೆಣಸುಗಳನ್ನೂ ತಿಂದು ಜೀವಿಸುತ್ತಿರುವರು. ಜಿತೇಂದ್ರಿಯರು ;



ತಪಸ್ವಿಗಳು ; ಬ್ರಹ್ಮಚಾರಿಗಳು. ವೇದಾಭ್ಯಾಸದಲ್ಲಿಯೇ ನಿರತರಾಗಿರತಕ್ಕವರು. ಧರ್ಮಮಾರ್ಗದಲ್ಲಿಯೇ ಇರತಕ್ಕವರು. ಗಂಧರ್ವರಾಜನಿಗೆ ಸಮಾನರಾಗಿರತಕ್ಕವರು. ರಾಜರಿಗಿರಬೇಕಾದ ಎಲ್ಲ ಲಕ್ಷಣಗಳನ್ನೂ ಹೊಂದಿರತಕ್ಕವರು. ಅವರು ದೇವತೆಗಳಾದರೂ ಆಗಿರಬಹುದು. ಮನುಷ್ಯರಾದರೂ ಆಗಿರಬಹುದು. ಅದನ್ನು ಊಹೆಯಿಂದ ನಿರ್ಧರಿಸುವ ಉತ್ಸಾಹವು ನನಗಿಲ್ಲ. ಅವರು ಯಾರೇ ಆಗಿರಲಿ – ಅವರ ಸ್ವರೂಪವು ಹೀಗಿದೆ.

ತರುಣೀ ರೂಪಸಂಪನ್ನಾ ಸರ್ವಾಭರಣಭೂಷಿತಾ ।
ದೃಷ್ಟಾ ತತ್ರ ಮಯಾ ನಾರೀ ತಯೋರ್ಮಧ್ಯೇ ಸುಮಧ್ಯಮಾ॥೧೭॥

(ವಿರೂಪಾ, ಅಸತೀ, ಕರಾಲಾ, ನಿರ್ಣತೋದರೀ, ವೃದ್ಧಾ–ಇವೇ

ಮುಂತಾದ ವಿಶೇಷಣಗಳಿಂದ ಸೀತೆಯನ್ನು ರಾಮನೆದುರಿನಲ್ಲಿ ತೆಗಳಿದ್ದ ಶೂರ್ಪಣಖೆಯೇ ಅಣ್ಣನೆದುರಿನಲ್ಲಿ ಸೀತೆಯ ವಿಷಯವಾಗಿ ಹೇಳುತ್ತಾಳೆ.)

ಅಣ್ಣ ! ಅವರಿಬ್ಬರ ಮಧ್ಯದಲ್ಲಿ ತರುಣಿಯೂ, ರೂಪಸಂಪನ್ನೆಯೂ, ಸಮಸ್ತವಾದ ಆಭರಣಗಳಿಂದ ವಿಭೂಷಿತಳೂ, ಸುಂದರವಾದ ನಡುವಿನಿಂದ ಕೂಡಿರುವಳೂ ಆಗಿದ್ದ ನಾರಿಯೊಬ್ಬಳನ್ನು ನಾನು ನೋಡಿದೆನು. ಆ ಹೆಂಗಸಿನ ಕಾರಣದಿಂದಲೇ ಅವರಿಬ್ಬರೂ ಸೇರಿಕೊಂಡು ಅನಾಥೆಯಾದವಳಿಗೂ ಕುಲಟೆಗೂ ಯೋಗ್ಯವಾಗಿದ್ದ ಈ ಶಿಕ್ಷೆಯನ್ನು ನನಗೆ ವಿಧಿಸಿದರು. ಇದಕ್ಕೆ ತಕ್ಕುದಾದ ಪ್ರತೀಕಾರವನ್ನು ನಾನು ಆಶಿಸಿದ್ದೇನೆ. ನಿನ್ನೊಡನೆ ಮಾಡುವ ಯುದ್ಧದಲ್ಲಿ ಮರಣಹೊಂದುವ ಆ ಇಬ್ಬರು ಒಡಹುಟ್ಟಿದವರ ಮತ್ತು ಕುಟಿಲ ವೃತ್ತಿಯುಳ್ಳ ಆ ತರುಣಿಯ ನೊರೆಯಿಂದ ಕೂಡಿದ ರಕ್ತವನ್ನು ನಾನು ಕುಡಿಯಲು ಬಯಸಿದ್ದೇನೆ. ಆ ತರುಣಿಯ ಮತ್ತು ಆ ತರುಣರ ರಕ್ತವನ್ನು ನಾನು ರಣರಂಗದಲ್ಲಿ ಕುಡಿಯಲೇಬೇಕು. ಇದು ನನ್ನ ಮುಖ್ಯವಾದ ಆಶಯವಾಗಿದೆ. ಈ ನನ್ನ ಅಭಿಲಾಷೆಯನ್ನು ನೀನು ಪೂರೈಸಿಕೊಡಬೇಕು."

ಶೂರ್ಪಣಖೆಯು ಹೀಗೆ ಹೇಳಲು ಕ್ರುದ್ಧನಾಗಿದ್ದ ಖರನು, ಮಹಾಕೋಪಿಷ್ಠರಾಗಿದ್ದ ಮತ್ತು ಮಹಾಬಲಿಷ್ಠರಾಗಿದ್ದ ಹದಿನಾಲ್ಕು ಮಂದಿ ರಾಕ್ಷಸನಾಯಕರಿಗೆ* ಆಜ್ಞಾಪಿಸಿದನು.

ಮಾನುಷೌ ಶಸ್ತ್ರಸಂಪನ್ನೌ ಚೀರಕೃಷ್ಣಾಜಿನಾಮ್ಬರೌ ।
ಪ್ರವಿಷ್ಟೌ ದಣ್ಡಕಾರಣ್ಯಂ ಘೋರಂ ಪ್ರಮದಯಾ ಸಹ ॥೨೨॥
ತೌ ಹತ್ವಾ ತಾಂ ಚ ದುರ್ವೃತ್ತಾಮುಪಾವರ್ತಿತುಮರ್ಹಥ ।
ಇಯಂ ಚ ರುಧಿರಂ ತೇಷಾಂ ಭಗಿನೀ ಮಮ ಪಾಸ್ಯತಿ ॥೨೩॥

---

* ಹದಿನಾಲ್ಕು ರಾಕ್ಷಸರೆಂದರೆ ಹದಿನಾಲ್ಕು ಸಾವಿರ ರಾಕ್ಷಸರಿಗೆ ಹದಿನಾಲ್ಕು ಮಂದಿ ನಾಯಕರಾಕ್ಷಸರು ಎಂದರ್ಥ. ರಾಮ-ಲಕ್ಷ್ಮಣರು ಇಬ್ಬರೇ ಇದ್ದಾರೆಂದು ಶೂರ್ಪಣಖೆಯು ಹೇಳಿದ್ದರೂ ಹದಿನಾಲ್ಕು ಮಂದಿಯನ್ನೇಕೆ ಯುದ್ಧಕ್ಕೆ ಖರನು ಕಳುಹಿಸಿದನು ? ಈ ಹದಿನಾಲ್ಕು ಮಂದಿಯನ್ನು ಶ್ರೀರಾಮನು ಹದಿನಾಲ್ಕು ಬಾಣಗಳಿಂದ ಸಂಹರಿಸಿದ ನಂತರ ಖರನು ಹದಿನಾಲ್ಕು ಸಾವಿರ ಸೈನಿಕರನ್ನು ತನ್ನೊಡನೆ ಕರೆದುಕೊಂಡು ಹೋಗುತ್ತಾನೆ. ಹದಿನಾಲ್ಕು ಸಾವಿರ ರಾಕ್ಷಸರನ್ನೂ ರಾಮ-ಲಕ್ಷ್ಮಣರು ಸಂಹರಿಸುತ್ತಾರೆ. ಆದರೆ ರಾಮ-ಲಕ್ಷ್ಮಣರ ಪರಾಕ್ರಮವನ್ನು ಇದುವರೆಗೆ ತಿಳಿಯದಿದ್ದ ಖರನು

"ರಾಕ್ಷಸನಾಯಕರೇ! ನಾರುಮುಡಿಯನ್ನೂ - ಕೃಷ್ಣಾಜಿನವನ್ನೂ ಉಟ್ಟು, ಶಸ್ತ್ರಗಳನ್ನು ಧರಿಸಿರುವ ಇಬ್ಬರು ಯುವಕರು ಒಬ್ಬ ಹೆಂಗಸಿನೊಡನೆ ಘೋರವಾದ ಈ ದಂಡಕಾರಣ್ಯಕ್ಕೆ ಬಂದಿರುವರು. ಆ ಇಬ್ಬರು ಪುರುಷರನ್ನೂ ಮತ್ತು ದುಷ್ಟಚಾರಿತ್ರ್ಯವಿರುವ ಆ ಹೆಂಗಸನ್ನೂ ನೀವೀಗಲೇ ಸಂಹರಿಸಿ ಜನಸ್ಥಾನಕ್ಕೆ ಹಿಂದಿರುಗಬೇಕು. ಅನಂತರ ಈ ನನ್ನ ತಂಗಿಯು ಅವರ ರಕ್ತವನ್ನು ಕುಡಿಯುತ್ತಾಳೆ.

ಇದು ನನ್ನ ತಂಗಿಗೆ ಬಹಳ ಇಷ್ಟವಾದ ಮನೋರಥವಾಗಿದೆ. ರಾಕ್ಷಸನಾಯಕರೇ! ನೀವು ಅಲ್ಲಿಗೆ ಹೋಗಿ ನಿಮ್ಮ ಪರಾಕ್ರಮದಿಂದ ಅವರನ್ನು ಸಂಹರಿಸಿ ಸಾಧ್ಯವಾದಷ್ಟು ಬೇಗ ಅವಳ ಮನೋರಥವನ್ನು ಪೂರೈಸಿಕೊಡಿರಿ.

ನೀವು ಅವರಿಬ್ಬರನ್ನೂ ಸಂಹರಿಸಿದುದನ್ನು ನೋಡಿದೊಡನೆಯೇ ಈ ನನ್ನ ತಂಗಿಯು ಪರಮಹೃಷ್ಟಳಾಗಿ ಸಂತೋಷಭರಿತಳಾಗಿ ಅವರ ಬಿಸಿ-ಬಿಸಿಯಾದ ರಕ್ತವನ್ನು ಕುಡಿಯುತ್ತಾಳೆ."

ಹೀಗೆ ಖರನಿಂದ ಆಜ್ಞಪ್ತರಾದ ಹದಿನಾಲ್ಕು ಮಂದಿ ರಾಕ್ಷಸರೂ ಬಿರುಗಾಳಿಯಿಂದ ಪ್ರಚೋದಿತವಾದ ಮೋಡಗಳಂತೆ ಶೂರ್ಪಣಖೆಯೊಡನೆ ರಾಮ-ಲಕ್ಷ್ಮಣರಿದ್ದೆಡೆಗೆ ತೆರಳಿದರು.

ಆ ರಾಕ್ಷಸರೆಲ್ಲರೂ ತೀಕ್ಷ್ಣವಾದ ಬಾಣಗಳನ್ನಿಟ್ಟುಕೊಂಡಿದ್ದರೂ

---

ಅವರಿಬ್ಬರ ಸಂಹಾರಕ್ಕಾಗಿ ಅಷ್ಟು ಮಂದಿಯನ್ನು ಕರೆದುಕೊಂಡು ಹೋಗಲು ಮತ್ತೇನಾದರೂ ಕಾರಣವಿರಬಹುದೇ? ಈ ಹದಿನಾಲ್ಕು ಸಾವಿರ ಮಂದಿಯೂ ಯಾಜ್ಞವಲ್ಕ್ಯರ ಮಕ್ಕಳ ಶಿಷ್ಯರಾಗಿದ್ದರೆಂದೂ ಶಿವನ ಶಾಪದಿಂದಾಗಿ ಅವರೆಲ್ಲರೂ ರಾಕ್ಷಸರಾಗಿ ಹುಟ್ಟಿ ಮಹಾವಿಷ್ಣುವಿನಿಂದ ಅರ್ಥಾತ್ ಶ್ರೀರಾಮನಿಂದ ಅವರ ಸಂಹಾರವು ನಡೆಯಬೇಕಾಗಿತ್ತೆಂದೂ, ಆದರಿಂದಲೇ ಖರನು ತನ್ನ ಅಧೀನದಲ್ಲಿದ್ದ ಹದಿನಾಲ್ಕು ಸಾವಿರ ಮಂದಿಯನ್ನೂ ರಾಮನೊಡನೆ ಯುದ್ಧಮಾಡಲು ಕರೆದುಕೊಂಡು ಹೋದನೆಂದೂ ಪುರಾಣಾಂತರದ ಕಥೆಯಿದೆ.

ಯಾಜ್ಞವಲ್ಕ್ಯಸುತಾ ರಾಜಂಸ್ತ್ರಯೋ ವೈ ಲೋಕವಿಶ್ರುತಾಃ। ಚನ್ದ್ರಕಾನ್ತ ಮಹಾವೇಘವಿಜಯಾ ಬ್ರಾಹ್ಮಣೋತ್ತಮಾಃ॥ ಖರಶ್ಚ ದೂಷಣಶ್ಚೈವ ತ್ರಿಶಿರಾ ಬ್ರಹ್ಮವಿತ್ತಮಾಃ। ಆಸಂಸ್ತೇಷಾಂ ಚ ಶಿಷ್ಯಾಶ್ಚ ಚತುರ್ದಶ ಸಹಸ್ರಧಾ॥ ಅಭವನ್ ರಾಕ್ಷಸಾಃ ಸರ್ವೇ ಜನಸ್ಥಾನನಿವಾಸಿನಃ॥ ಹರಿವಂಶ, ಶೇಷಧರ್ಮ ಅಧ್ಯಾಯ ೩೭

ಉಗ್ರವಾದ ತೇಜಸ್ಸಿನಿಂದ ಕೂಡಿದ್ದ ಶ್ರೀರಾಮನನ್ನು ಎದುರಿಸಲು ಅಥವಾ ಸಂಹರಿಸಲು ಸಮರ್ಥರಾಗಲಿಲ್ಲ. ರಭಸದಿಂದ ಮುನ್ನುಗ್ಗುತ್ತಿರುವ ಕಾಡು ಗಿಚ್ಚನ್ನು ಕಾಡಾನೆಗಳು ಎದುರಿಸಲು ಸಾಧ್ಯವಾಗದಂತೆ – ಅಗ್ನಿಸಮಾನ ತೇಜಸ್ವಿಯಾದ ಶ್ರೀರಾಮನನ್ನು ಎದುರಿಸಿ ನಿಲ್ಲಲು ಮತ್ತು ಸಂಹರಿಸಲು ಅವರಿಗೆ ಅಸಾಧ್ಯವಾಯಿತು.

೧೯ನೆಯ ಸರ್ಗವು ಮುಗಿಯಿತು.



## ೨೦ನೆಯ ಸರ್ಗ

### ಖರನು ಕಳುಹಿಸಿದ್ದ ಹದಿನಾಲ್ಕು ಮಂದಿ ರಾಕ್ಷಸ ನಾಯಕರನ್ನೂ ಶ್ರೀರಾಮನು ಸಂಹರಿಸಿದುದು

ತತಃ ಶೂರ್ಪಣಖಾ ಘೋರಾ ರಾಘವಾಶ್ರಮಮಾಗತಾ ।
ರಕ್ಷಸಾಮಾಚಚಕ್ಷೇ ತೌ ಭ್ರಾತರೌ ಸಹ ಸೀತಯಾ ॥೧॥

ಅನಂತರ ಘೋರರೂಪಿಣಿಯಾದ ಶೂರ್ಪಣಖೆಯು ಶ್ರೀರಾಘವನ ಆಶ್ರಮಕ್ಕೆ ರಾಕ್ಷಸನಾಯಕರೊಡನೆ ಬಂದು ಸೀತೆಯೊಡನಿರುವ ಆ ಭ್ರಾತೃಗಳೇ ರಾಮ-ಲಕ್ಷ್ಮಣರೆಂದು ತಿಳಿಸಿದಳು.

ಸೀತೆಯೊಡನೆ ಪರ್ಣಶಾಲೆಯಲ್ಲಿ ಕುಳಿತಿದ್ದ, ಲಕ್ಷ್ಮಣನಿಂದ ಸೇವಿಸಲ್ಪಡುತ್ತಿದ್ದ, ಮಹಾಬಲಿಷ್ಠನಾದ ಶ್ರೀರಾಮನನ್ನು ರಾಕ್ಷಸರು ನೋಡಿದರು. ಶ್ರೀಮಂತನಾದ ರಾಘವನು ಶೂರ್ಪಣಖೆಯನ್ನೂ, ಮತ್ತು ಅವರ ಜೊತೆಯಲ್ಲೇ ಆಶ್ರಮದ ಬಳಿಗೆ ಬಂದ ರಾಕ್ಷಸರನ್ನೂ ನೋಡಿ ಮಹಾತೇಜಸ್ವಿಯಾದ ಲಕ್ಷ್ಮಣನಿಗೆ ಹೇಳಿದನು :

" ಸೌಮಿತ್ರಿಯೇ ! ಮುಹೂರ್ತಕಾಲ ನೀನು ಸೀತೆಯನ್ನು ಸಂರಕ್ಷಿಸುತ್ತಾ ಇವಳ ಸಮೀಪದಲ್ಲಿಯೇ ಇರು. ಈ ಶೂರ್ಪಣಖೆಯ ಮಾರ್ಗವನ್ನೇ ಅನುಸರಿಸಿ ಅವಳ ಸಹಾಯಕ್ಕಾಗಿ ಬಂದಿರುವ ಈ ರಾಕ್ಷಸರನ್ನು ಈ ಕ್ಷಣದಲ್ಲಿಯೇ ಸಂಹರಿಸುತ್ತೇನೆ. "

ಆತ್ಮವಿದನಾದ ಶ್ರೀರಾಮನ ಮಾತನ್ನು ಕೇಳಿ ಲಕ್ಷ್ಮಣನು ಹಾಗೆಯೇ ಆಗಲೆಂದು ಹೇಳಿ ಅವನ ಮಾತನ್ನು ಗೌರವಿಸಿದನು.

ಬಳಿಕ ಧರ್ಮಾತ್ಮನಾದ ಶ್ರೀರಾಮನು ಸ್ವರ್ಣವಿಭೂಷಿತವಾಗಿದ್ದ

ತನ್ನ ಮಹಾಧನುಸ್ಸನ್ನು ತೆಗೆದುಕೊಂಡು ಬಗ್ಗಿಸಿ ಹೆದೆಯೇರಿಸಿ ಯುದ್ಧಕ್ಕೆ ಸಜ್ಜುಗೊಳಿಸಿ ರಾಕ್ಷಸರಿಗೆ ಹೇಳಿದನು :

"ಒಡಹುಟ್ಟಿದವರಾದ ನಾವಿಬ್ಬರೂ ದಶರಥರಾಜನ ಮಕ್ಕಳು. ರಾಮ-ಲಕ್ಷ್ಮಣರೆಂಬ ಹೆಸರಿನಿಂದ ವಿಖ್ಯಾತರಾಗಿದ್ದೇವೆ. ಸಂಚರಿಸಲು ದುಷ್ಕರವಾದ ಈ ದಂಡಕಾರಣ್ಯಕ್ಕೆ ಕಾರಣಾಂತರದಿಂದ ಸೀತೆಯೊಡನೆ ಬಂದೆವು. ನಾವು ಈ ಅರಣ್ಯದಲ್ಲಿ ಸಿಕ್ಕುವ ಋಷಿಯೋಗ್ಯವಾದ ಗೆಡ್ಡೆ-ಗೆಣಸುಗಳನ್ನೂ, ಹಣ್ಣು-ಹಂಪಲುಗಳನ್ನೂ ತಿಂದು ಜೀವಿಸುತ್ತಿದ್ದೇವೆ. ಯಾರೊಬ್ಬರಿಗೂ ಯಾವ ತೊಂದರೆಯನ್ನೂ ಮಾಡುತ್ತಿಲ್ಲ. ಜಿತೇಂದ್ರಿಯರಾಗಿದ್ದೇವೆ. ವೇದ-ಶಾಸ್ತ್ರಗಳ ಅಭ್ಯಾಸದಲ್ಲಿಯೇ ನಿರತರಾಗಿದ್ದೇವೆ. ಹೀಗೆ ನಾವಿಬ್ಬರೂ ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದೇವೆ. ಇಂತಹವರಿಗೆ ಹಿಂಸೆಕೊಡಲು ನೀವೇಕೆ ಬಂದಿರುವಿರಿ ? ಪಾಪಾತ್ಮರಾದ ಮತ್ತು ಋಷಿಜನಹಿಂಸಕರಾದ ನಿಮ್ಮನ್ನು ಸಂಹರಿಸಲು ಋಷಿಗಳ ಆಜ್ಞಾನುಸಾರವಾಗಿ ಧನುರ್ಧರನಾಗಿ ನಾನಿಲ್ಲಿಗೆ ಬಂದಿರುವೆನು. ಯುದ್ಧಮಾಡುವುದರಲ್ಲಿಯೇ ನಿಮಗೆ ಸಂತೃಪ್ತಿಯಿರುವುದಾದರೆ ಇಲ್ಲಿಯೇ ನಿಲ್ಲಿರಿ. ನಿಮ್ಮಂತಹ ವೀರರಿಗೆ ಹಿಂದಿರುಗಿ ಹೋಗುವುದು ಯೋಗ್ಯವಲ್ಲ. ಒಂದು ವೇಳೆ ನಿಮಗೆ ಜೀವಿಸಿರುವುದೇ ಮುಖ್ಯಪ್ರಯೋಜನವಾಗಿದ್ದರೆ–ನೀವೀಗಲೇ ಹಿಂದಿರುಗಿ ಹೊರಟು ಹೋಗಿರಿ. ಯುದ್ಧವು ಪ್ರಾರಂಭವಾದ ನಂತರ ನೀವು ಜೀವಂತರಾಗಿ ಹಿಂದಿರುಗಲು ಸಾಧ್ಯವೇ ಇಲ್ಲ."

ಶ್ರೀರಾಮನ ಆ ಮಾತುಗಳನ್ನು ಕೇಳಿ ಬಹಳವಾಗಿ ಕೋಪಗೊಂಡ ಬ್ರಾಹ್ಮಣಹಂತಕರಾದ, ಶೂಲಗಳನ್ನು ಕೈಯ್ಯಲ್ಲಿ ಹಿಡಿದಿದ್ದ, ಕೆಂಗಣ್ಣರಾಗಿದ್ದ, ಘೋರರೂಪಿಗಳಾದ, ನಿಷ್ಠುರಸ್ವಭಾವದವರಾದ, ಖರನಿಂದ ಕಳುಹಿಸಲ್ಪಟ್ಟಿದ್ದ ಹದಿನಾಲ್ಕು ಮಂದಿ ರಾಕ್ಷಸರೂ–ರಕ್ತಲೋಚನನೂ, ಸುಮಧುರಭಾಷಿಯೂ, ಎದುರಾಳಿಗಳ ಪರಾಕ್ರಮವನ್ನು ಮನಗಂಡಿದ್ದವನೂ ಆಗಿದ್ದ ಶ್ರೀರಾಮನನ್ನು ನೋಡಿ, ಶತ್ರುವು ಸಿಕ್ಕಿಬಿದ್ದನೆಂಬ ಸಂತೋಷವನ್ನು ವ್ಯಕ್ತಪಡಿಸುತ್ತಾ ಹೇಳಿದರು :

"ಮಹಾಕಾಯನಾದ, ನಮ್ಮ ಒಡೆಯನಾದ ಖರನ ಮನಸ್ಸಿನಲ್ಲಿ ಕೋಪವನ್ನು ಹುಟ್ಟಿಸಿರುವ ನೀನೇ ನಮ್ಮೊಡನೆ ಮಾಡಲಿರುವ ಯುದ್ಧದಲ್ಲಿ ಹತನಾಗಿ ಪ್ರಾಣಗಳನ್ನು ತೊರೆಯುವೆ. ರಣರಂಗದಲ್ಲಿ ಬಹುಸಂಖ್ಯಾತರಾಗಿರುವ ನಮ್ಮೊಡನೆ ಯುದ್ಧಮಾಡುವುದಿರಲಿ, ನಮ್ಮ ಮುಂದೆ ನಿಂತುಕೊಳ್ಳಲು ಕೂಡ ಏಕಾಕಿಯಾಗಿರುವ ನಿನಗೆ ಯಾವ ಶಕ್ತಿಯಿದೆ? ಈ ನಮ್ಮ ತೋಳುಗಳಿಂದ ಬಿಡಲ್ಪಡುವ ಪರಿಘಾಯುಧಗಳಿಂದಲೂ, ಶೂಲಾಯುಧಗಳಿಂದಲೂ, ಪಟ್ಟಿಶಗಳಿಂದಲೂ–ದೃಢವಾಗಿ ಹಿಡಿದಿರುವ ಧನುಸ್ಸನ್ನು ಕಳೆದುಕೊಳ್ಳುವೆ. ಬಳಿಕ ನಿನ್ನ ವೀರ್ಯವೂ ನಾಶವಾಗುವುದು. ಮರುಕ್ಷಣದಲ್ಲಿಯೇ ನಿನ್ನ ಪ್ರಾಣಗಳೂ ಹಾರಿಹೋಗುವುವು."

ಇವೇ ಮುಂತಾಗಿ ವೀರೋದ್ಗಾರಗಳನ್ನು ಮಾಡುತ್ತಾ ಅತ್ಯಂತಕುಪಿತರಾಗಿದ್ದ ಆ ಹದಿನಾಲ್ಕು ಮಂದಿ ರಾಕ್ಷಸರೂ ಆಯುಧಗಳನ್ನೂ, ಶಕ್ತಿಗಳನ್ನೂ, ಶೂಲಗಳನ್ನೂ ಮೇಲೆತ್ತಿಕೊಂಡು ಶ್ರೀರಾಮನ ಕಡೆಗೆ ವೇಗವಾಗಿ ಧಾವಿಸಿ ಕೈಗಳಲ್ಲಿ ಹಿಡಿದಿದ್ದ ಶೂಲಗಳನ್ನು ದುರ್ಜಯನಾದ ಶ್ರೀರಾಮನ ಮೇಲೆ ರಭಸದಿಂದೆಸೆದರು. ಹಾಗೆ ಎಸೆದ ಹದಿನಾಲ್ಕು ಶೂಲಗಳನ್ನೂ ಶ್ರೀರಾಮನು ಅಷ್ಟೇ ಸಂಖ್ಯೆಯ ಸುವರ್ಣಭೂಷಿತವಾದ ಬಾಣಗಳಿಂದ ಕತ್ತರಿಸಿ ಹಾಕಿದನು. ಅನಂತರ ಮಹಾತೇಜಸ್ವಿಯಾದ ಶ್ರೀರಾಮನು ಪರಮಕ್ರುದ್ಧನಾಗಿ ಸಾಣೇಕಲ್ಲಿನಿಂದ ಚೂಪಾಗಿಮಾಡಲ್ಪಟ್ಟಿದ್ದ, ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಹದಿನಾಲ್ಕು ಬಾಣಗಳನ್ನು ಬತ್ತಳಿಕೆಯಿಂದ ಹೊರತೆಗೆದನು. ಧನುಸ್ಸನ್ನು ಸೆಳೆದು ಹದಿನಾಲ್ಕು ಬಾಣಗಳನ್ನೂ ಧನುಸ್ಸಿನಲ್ಲಿ ಹೂಡಿ–ಇಂದ್ರನು ವಜ್ರಾಯುಧಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುವಂತೆ–ಲಕ್ಷ್ಯವಾಗಿ ನಿಂತಿದ್ದ ರಾಕ್ಷಸರನ್ನು ಪ್ರಹರಿಸಿದನು. ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ, ಸುವರ್ಣಭೂಷಿತವಾಗಿದ್ದ, ಪ್ರದೀಪ್ತವಾಗಿದ್ದ ಆ ಹದಿನಾಲ್ಕು ಬಾಣಗಳೂ ಹದಿನಾಲ್ಕು ಮಂದಿ ರಾಕ್ಷಸರ ವಕ್ಷಸ್ಥಳಗಳನ್ನು ಏಕಕಾಲದಲ್ಲಿ ಭೇದಿಸಿ ರಕ್ತದಲ್ಲಿ ತೋಯ್ದು–ಹುತ್ತದಿಂದ ಹಾವುಗಳು ಹೊರಬರುವಂತೆ–ರಾಕ್ಷಸರ ಶರೀರದಿಂದ ಹೊರಬಂದು ಭೂಮಿಯ ಮೇಲೆ ಬಿದ್ದುವು. ಬಾಣಗಳಿಂದ ಭೇದಿಸಲ್ಪಟ್ಟ ವಕ್ಷಸ್ಥಳಗಳಿಂದ ಕೂಡಿದ್ದ ಆ ರಾಕ್ಷಸರು ರಕ್ತದಿಂದ ತೋಯ್ದುಹೋಗಿ ಪ್ರಾಣಗಳನ್ನು ತೊರೆದು ವಿಕಾರ

ನಾದ ಆಕಾರಗಳನ್ನು ಹೊಂದಿ-ಬುಡವನ್ನು ಕತ್ತರಿಸಿದ ಮರಗಳಂತೆ ಭೂಮಿಯ ಮೇಲೆ ಬಿದ್ದರು.

ರಾಮ-ಲಕ್ಷ್ಮಣರನ್ನು ಸಂಹರಿಸುವ ಸಲುವಾಗಿಯೇ ಕರೆತಂದಿದ್ದ ಹದಿನಾಲ್ಕು ಮಂದಿ ರಾಕ್ಷಸರೂ ಸತ್ತುಬಿದ್ದುದನ್ನು ನೋಡಿ ಕ್ರೋಧಾಭಿಭೂತಳಾಗಿದ್ದ ಶೂರ್ಪಣಖೆಯು ಭಯಗೊಂಡಳು. ಭಯಂಕರವಾಗಿ ಗರ್ಜಿಸಿದಳು. ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ ಬಹಳ ಬೇಗ ಖರನಿದ್ದೆಡೆಗೇ ಪುನಃ ಧಾವಿಸಿದಳು. ಆ ವೇಳೆಗೆ ಮೂಗು ಮತ್ತು ಕಿವಿಗಳ ಪ್ರದೇಶದಲ್ಲಿದ್ದ ರಕ್ತವು ಸ್ವಲ್ಪ ಒಣಗಿದ್ದಿತು. ಕತ್ತರಿಸಲ್ಪಟ್ಟು ಒಸರುವ ರಸದಿಂದ ಕೂಡಿರುವ ಬಳ್ಳಿಯೋಪಾದಿಯಲ್ಲಿದ್ದ ಅವಳು ಪುನಃ ದುಃಖಪೀಡಿತಳಾಗಿ ಖರನ ಮುಂದೆ ಬಿದ್ದಳು. ಶೋಕಾರ್ತಳಾಗಿದ್ದ ಶೂರ್ಪಣಖೆಯು ಅಣ್ಣನಾದ ಖರನ ಬಳಿಯಲ್ಲಿ ಪುನಃ ಪುನಃ ಕಿರುಚಿಕೊಳ್ಳುತ್ತಿದ್ದಳು. ಕಳೆಗುಂದಿದ ಮುಖದಿಂದ ಕೂಡಿ ಸ್ವರಸಹಿತವಾಗಿ ಅಳುತ್ತಾ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಿದ್ದಳು.

ಯುದ್ಧದಲ್ಲಿ ರಾಕ್ಷಸರೆಲ್ಲರೂ ಶ್ರೀರಾಮನಿಂದ ಹತರಾದುದನ್ನು ಕಂಡು ಶೂರ್ಪಣಖೆಯು ಅಣ್ಣನಾದ ಖರನ ಬಳಿಗೆ ಓಡಿಹೋಗಿ ಅವನು ಕಳುಹಿಸಿದ್ದ ಹದಿನಾಲ್ಕು ಮಂದಿ ರಾಕ್ಷಸರೂ ಶ್ರೀರಾಮನಿಂದ ಹತರಾದ ವಾರ್ತೆಯನ್ನು ಖರನಿಗೆ ಹೇಳಿದಳು.

೨೦ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೧ನೆಯ ಸರ್ಗ

## ಶೂರ್ಪಣಖೆಯು ಖರನಿಗೆ ರಾಕ್ಷಸರು ಹತರಾದುದನ್ನು ಹೇಳಿದುದು : ರಾಮನೊಡನೆ ಯುದ್ಧಮಾಡಲು ಪುನಃ ಖರನನ್ನು ಪ್ರೋತ್ಸಾಹಿಸಿದುದು

**ಸ ಪುನಃ ಪತಿತಾಂ ದೃಷ್ಟ್ವಾ ಕ್ರೋಧಾಚ್ಛೂರ್ಪಣಖಾಂ ಖರಃ |**
**ಉವಾಚ ವ್ಯಕ್ತಯಾ ವಾಚಾ ತಾಮನರ್ಥಾರ್ಥಮಾಗತಾಮ್ ||೧||**

ತಂಗಿಯಾದ ಶೂರ್ಪಣಖೆಯು ಪುನಃ ತನ್ನ ಮುಂದೆ ಬಂದು ಬಿದ್ದುದನ್ನು ನೋಡಿ ಖರನು ಕೋಪಗೊಂಡು ರಾಕ್ಷಸಕುಲಕ್ಕೆ ಅನರ್ಥವನ್ನುಂಟುಮಾಡಲೆಂದೇ ಪುನಃ ಆಗಮಿಸಿದ ಅವಳಿಗೆ ಸ್ಪಷ್ಟವಾದ ಮಾತುಗಳಿಂದ ಹೇಳಿದನು :

"ಶೂರ್ಪಣಖೇ ! ನಿನಗೆ ಪ್ರಿಯವನ್ನುಂಟುಮಾಡುವ ಸಲುವಾಗಿಯೇ ಶೂರರಾದ, ಮಾಂಸಾಹಾರಿಗಳಾದ ಹದಿನಾಲ್ಕು ಮಂದಿ ರಾಕ್ಷಸರನ್ನು ಈಗ ತಾನೇ ನಿನ್ನ ಜೊತೆಯಲ್ಲಿ ಕಳುಹಿಸಿಕೊಟ್ಟೆನು. ಪುನಃ ನೀನು ಏತಕ್ಕಾಗಿ ಅಳುತ್ತಿರುವೆ? ನಾನು ಕಳುಹಿಸಿರುವ ಆ ರಾಕ್ಷಸರು ನನ್ನ ವಿಷಯದಲ್ಲಿ ವಿಶೇಷವಾದ ಅನುರಾಗವುಳ್ಳವರು. ಪರಮಭಕ್ತರು. ಯಾವಾಗಲೂ ನನ್ನ ಹಿತದಲ್ಲಿಯೇ ಆಸಕ್ತರಾಗಿರತಕ್ಕವರು. ಹಿಂಸಿತರಾದರೂ ಸಾಯುವವ ರಲ್ಲ. (ಶತ್ರುಗಳು ಆಯುಧಗಳಿಂದ ಪ್ರಹರಿಸಬಹುದೇ ಹೊರತು ಅವ ರನ್ನು ಸಂಹರಿಸಲು ಯಾರಿಂದಲೂ ಸಾಧ್ಯವಿಲ್ಲ.) ಅವರು ಇದುವರೆಗೂ ಯಾವಾಗಲೂ ನನ್ನ ಮಾತನ್ನು ನಡೆಸಿಕೊಟ್ಟಿಲ್ಲ-ಎಂಬುದೇ ಇಲ್ಲ. ನನ್ನ ಆಜ್ಞಾನುಸಾರವಾಗಿ ನಡೆಯತಕ್ಕವರು. ಇಂತಹವರನ್ನು ನಿನ್ನ ಕಾರ್ಯಸಿದ್ಧಿ ಗಾಗಿ ಕಳುಹಿಸಿದಮೇಲೂ ನೀನು ರೋದನಮಾಡುತ್ತಿರುವೆ. ಇದರ ಕಾರಣ ವನ್ನು ನಾನು ಕೇಳಬಯಸುತ್ತೇನೆ. 'ಹಾ ನಾಥ'-ಎಂದು ಕೂಗುತ್ತಾ ಗಾಯಗೊಂಡ ಸರ್ಪದಂತೆ ನೆಲದಲ್ಲಿ ಬಿದ್ದು ಹೊರಳಾಡುತ್ತಿರುವೆ. ನಿನ್ನನ್ನು ಸಂರಕ್ಷಿಸುವ ಸಾಮರ್ಥ್ಯವುಳ್ಳ ನಿಮ್ಮಣ್ಣನಾದ ನಾನು ಇಲ್ಲಿಯೇ ಇರುವಾಗ ದಿಕ್ಕಿಲ್ಲದವಳಂತೆ ಗೋಳಾಡುತ್ತಿರುವೆ. ಎದ್ದೇಳು. ಹೆದರಬೇಡ. ಈಗಲೇ ನಿನ್ನ ಕಾತರತೆಯನ್ನು ಬಿಟ್ಟುಬಿಡು."

ಯಾರಿಂದಲೂ ಎದುರಿಸಲಾಗದ ಸೊಕ್ಕಿನಿಂದ ಕೂಡಿದ್ದ ಶೂರ್ಪ ಣಖೆಯು ಖರನಿಂದ ಹೀಗೆ ಸಮಾಧಾನಗೊಳಿಸಲ್ಪಟ್ಟವಳಾಗಿ, ಕಂಬನಿ ದುಂಬಿದ್ದ ಕಣ್ಣುಗಳನ್ನು ಒರೆಸಿಕೊಂಡು ಅಣ್ಣನಿಗೆ ಹೇಳಿದಳು :

"ಅಣ್ಣ ! ನೀನು ಹೇಳಿದ್ದು ನಿಜ. ಈ ಮೊದಲು ನಾನು ಕಿವಿ-ಮೂಗು ಗಳನ್ನು ಕಳೆದುಕೊಂಡು ಅಪಾರವಾದ ರಕ್ತದಿಂದ ತೋಯ್ದುಹೋಗಿ ನಿನ್ನಲ್ಲಿಗೆ ಬಂದಿದ್ದೆನು. ಆ ಸಮಯದಲ್ಲಿ ನೀನು ನನ್ನನ್ನು ಸಂತೈಸಿದೆ. ನನಗೆ ಪ್ರಿಯ ವನ್ನುಂಟುಮಾಡುವ ಸಲುವಾಗಿ ಘೋರಪರಾಕ್ರಮಿಗಳಾದ ರಾಮ-ಲಕ್ಷ್ಮಣ ನನ್ನು ಸಂಹರಿಸಲು ಹದಿನಾಲ್ಕು ಮಂದಿ ಮಹಾಶೂರರಾದ ರಾಕ್ಷಸರನ್ನೂ ನನ್ನೊಡನೆ ಕಳುಹಿಸಿಕೊಟ್ಟೆ. ಆದರೆ ಕ್ರುದ್ಧರಾಗಿದ್ದ, ಶೂಲ-ಪಟ್ಟಿಶಗಳನ್ನು ಹಿಡಿದಿದ್ದ ಆ ರಾಕ್ಷಸರೆಲ್ಲರೂ ಮರ್ಮಭೇದಿಗಳಾದ ಶ್ರೀರಾಮನ ಬಾಣಗಳಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟರು. ಮಹಾಬಲಿಷ್ಠರಾಗಿದ್ದ ಆ ರಾಕ್ಷಸರು ಕ್ಷಣ

ಮಾತ್ರದಲ್ಲಿ ರಾಮನಿಂದ ಹತರಾಗಿ ಭೂಮಿಯ ಮೇಲೆ ಬಿದ್ದುದನ್ನೂ-ಏಕಾಕಿಯಾಗಿ ಎಲ್ಲರನ್ನೂ ಏಕಕಾಲದಲ್ಲಿ ಸಂಹರಿಸಿದ ರಾಮನ ಮಹಾಕಾರ್ಯವನ್ನೂ ನೋಡಿ ನನಗೆ ಬಹಳ ಭಯವಾಯಿತು. ಘೋರಪರಾಕ್ರಮಿಯಾದ ರಾಮನ ಸಾಹಸಕಾರ್ಯವನ್ನು ನೋಡಿ ನಾನು ಉದ್ವಿಗ್ನಳಾಗಿದ್ದೇನೆ. ವಿಷಣ್ಣಳಾಗಿದ್ದೇನೆ. ಎಲ್ಲೆಡೆಗಳಲ್ಲಿಯೂ ಭಯವನ್ನೇ ಕಾಣುತ್ತಿದ್ದೇನೆ. ಇಂತಹ ಸ್ಥಿತಿಯಲ್ಲಿರುವ ನಾನು ಪುನಃ ನಿನ್ನನ್ನೇ ಶರಣುಹೊಂದಲು ಬಂದೆನು.

ವಿಷಾದವೆಂಬ ಮೊಸಳೆಗಳಿಗೆ ವಾಸಸ್ಥಾನವಾಗಿರುವ, ಭಯವೆಂಬ ಅಲೆಗಳಿಂದ ಕೂಡಿರುವ, ವಿಶಾಲವಾದ ಶೋಕಸಾಗರದಲ್ಲಿ ಮುಳುಗಿಹೋಗಿರುವ ನನ್ನನ್ನು ನೀನು ಉದ್ಧರಿಸಲಾರೆಯಾ? ನಿನ್ನ ಆಜ್ಞಾನುಸಾರವಾಗಿ ನನ್ನನ್ನನುಸರಿಸಿ ಬಂದ ಮಾಂಸಾಹಾರಿಗಳಾದ ಆ ರಾಕ್ಷಸರು ರಾಮನ ನಿಶಿತವಾದ ಬಾಣಗಳ ಪ್ರಹಾರದಿಂದ ಅಸುನೀಗಿ ಭೂಮಿಯಲ್ಲಿ ಬಿದ್ದಿದ್ದಾರೆ. ಅಣ್ಣ! ನಿನಗೆ ನನ್ನ ಮೇಲೇನಾದರೂ ಕರುಣೆಯಿದ್ದರೆ-ನನ್ನ ಸಲುವಾಗಿ ಪ್ರಾಣತೊರೆದ ಆ ಹದಿನಾಲ್ಕು ಮಂದಿ ರಾಕ್ಷಸರ ಮೇಲಾದರೂ ಅನುಕಂಪವಿದ್ದರೆ-ರಾಮನಿಗಿಂತಲೂ ಮಿಗಿಲಾದ ತೇಜಸ್ಸೂ ಮತ್ತು ಪರಾಕ್ರಮವೂ ನಿನ್ನಲ್ಲಿರುವುದಾದರೆ-ದಂಡಕಾರಣ್ಯದಲ್ಲಿ ವಾಸಮಾಡುತ್ತಿರುವ ರಾಕ್ಷಸಕಂಟಕನಾದ ಆ ರಾಮನನ್ನು ಈಗಲೇ ಸಂಹರಿಸು. ನನಗೆ ಪರಮಶತ್ರುವಾಗಿರುವ ಆ ರಾಮನನ್ನು ಈಗಲೇ ನೀನೇನಾದರೂ ಸಂಹಾರಮಾಡದಿದ್ದರೆ ಕಿವಿ-ಮೂಗುಗಳನ್ನು ಕಳೆದುಕೊಂಡರೂ ನಾಚಿಕೆಯಿಲ್ಲದೇ ಬದುಕಿರುವ ನಾನು ನಿನ್ನ ಮುಂದೆಯೇ ಪ್ರಾಣಗಳನ್ನು ತೊರೆಯುತ್ತೇನೆ. ಆದರೆ, ಅಣ್ಣ! ನಾನು ಬುದ್ಧಿಯಿಂದ ಈ ವಿಷಯವನ್ನು ಕಂಡುಕೊಂಡಿದ್ದೇನೆ. ನೀನು ಸೈನ್ಯಸಮೇತನಾಗಿಯೂ ಯುದ್ಧದಲ್ಲಿ ರಾಮನನ್ನು ಎದುರಿಸಿ ನಿಲ್ಲಲು ಶಕ್ತನಲ್ಲ. 'ನಾನೇ ಮಹಾಶೂರನು'-ಎಂಬ ಅಭಿಮಾನವು ನಿನಗಿದೆ. ಆದರೆ ನೀನು ನಿಶ್ಚಯವಾಗಿಯೂ ಶೂರನಲ್ಲ. 'ಖರನು ಪರಾಕ್ರಮೀ'-ಎಂಬುದು ಕೇವಲ ಮಿಥ್ಯಾರೋಪವಾಗಿದೆ. ಸುಳ್ಳು-ಸುಳ್ಳಾಗಿಯೇ ನಿನ್ನಲ್ಲಿ ಪರಾಕ್ರಮವನ್ನು ಆರೋಪಿಸುತ್ತಾರೆ. ನಿನ್ನಲ್ಲಿ ನಿಶ್ಚಯವಾದ ಪರಾಕ್ರಮವೇ ಇದ್ದುದಾದರೆ ಈಗಲೇ ನೀನು ಯುದ್ಧದಲ್ಲಿ ರಾಮ-ಲಕ್ಷ್ಮಣರನ್ನು ಸಂಹರಿಸು. ಮೂಢನೇ!

ಮನುಷ್ಯಮಾತ್ರರಾದ ರಾಮ-ಲಕ್ಷ್ಮಣರನ್ನು ಸಂಹರಿಸಲು ನೀನು ಅಸಮರ್ಥನಾದರೆ ಬಂಧು-ಬಾಂಧವರ ಸಮೇತನಾಗಿ ಈಗಲೇ ಜನಸ್ಥಾನದಿಂದ ತೊಲಗಿಹೋಗು. ನಿಃಸತ್ತ್ವನಾದ, ಅಲ್ಪವೀರ್ಯನಾದ ನಿನಗೆ ಜನಸ್ಥಾನದಲ್ಲಿ ವಾಸಿಸಲು ಹೇಗೆತಾನೇ ಸಾಧ್ಯವಾಗುತ್ತದೆ? ರಾಮನ ಪರಾಕ್ರಮದಿಂದ ಅವಮಾನಿತನಾಗಿ ನೀನು ಶೀಘ್ರದಲ್ಲಿಯೇ ವಿನಾಶಹೊಂದುವೆ. ದಶರಥನ ಮಗನಾದ ರಾಮನು ಅತುಲಪರಾಕ್ರಮಿಯು. ನನ್ನನ್ನು ಹೀಗೆ ವಿರೂಪಗೊಳಿಸಿದ ಅವನ ತಮ್ಮನಾದ ಲಕ್ಷ್ಮಣನು ಕೂಡ ಮಹಾವೀರ್ಯನು."

ಇದೇ ಮುಂತಾಗಿ ಹೇಳಿಕೊಂಡು ಗುಹೆಯಂತಹ ಹೊಟ್ಟೆಯಿಂದ ಕೂಡಿದ್ದ ರಾಕ್ಷಸಿಯು ಬಹಳವಾಗಿ ರೋದಿಸಿ ಶೋಕಪೀಡಿತಳಾಗಿ ಅಣ್ಣನಾದ ಖರನ ಬಳಿಯಲ್ಲಿ ಪ್ರಜ್ಞಾಹೀನಳಾಗಿ ಬಿದ್ದುಬಿಟ್ಟಳು. ಸ್ವಲ್ಪ ಹೊತ್ತಿನಲ್ಲಿಯೇ ಚೇತರಿಸಿಕೊಂಡು ಎರಡು ಕೈಗಳಿಂದ ಹೊಟ್ಟೆಯನ್ನು ಗಟ್ಟಿಯಾಗಿ ಬಡಿದುಕೊಳ್ಳುತ್ತಾ ಬಹುದುಃಖಿತೆಯಾಗಿ ಗೋಳಾಡಿದಳು.

೨೧ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೨ನೆಯ ಸರ್ಗ

## ಹದಿನಾಲ್ಕುಸಾವಿರ ರಾಕ್ಷಸಯೋಧರೊಡನೆ ಖರ-ದೂಷಣರು ಪಂಚವಟಿಗೆ ಹೋದುದು

ಏವಮಾಧರ್ಷಿತಃ ಶೂರಃ ಶೂರ್ಪಣಖ್ಯಾ ಖರಸ್ತದಾ ।
ಉವಾಚ ರಕ್ಷಸಾಂ ಮಧ್ಯೇ ಖರಃ ಖರತರಂ ವಚಃ ॥೧॥

ಶೂರನಾದ ಖರನು ಈ ರೀತಿಯಲ್ಲಿ ರಾಕ್ಷಸರ ಮಧ್ಯದಲ್ಲಿ ಶೂರ್ಪಣಖಿಯಿಂದ ಅವಮಾನಿತನಾಗಿ ತಂಗಿಗೆ ಅತ್ಯಂತತೀಕ್ಷ್ಣವಾದ ಮಾತನ್ನು ಹೇಳಿದನು:

"ತಂಗಿ! ನಿನಗಾದ ಅವಮಾನದಿಂದ ನನಗೆ ಅತುಲವಾದ ಕೋಪವುಂಟಾಗಿದೆ. ಪರ್ವಸಮಯಗಳಲ್ಲಿ ಉಕ್ಕಿಬರುವ ಸಮುದ್ರದಂತೆ–ಹೃದಯಾಂತರಾಳದಿಂದ ಉಕ್ಕಿಬರುತ್ತಿರುವ ಈ ಕೋಪವನ್ನು ತಡೆದು

ಕೊಳ್ಳಲು ನನಗೆ ಸಾಧ್ಯವಾಗುತ್ತಿಲ್ಲ. ಮನುಷ್ಯಮಾತ್ರನಾಗಿರುವ ಅಲ್ಪಾಯು ವಾದ ಆ ರಾಮನನ್ನು ಪರಾಕ್ರಮದ ದೃಷ್ಟಿಯಿಂದ ನಾನು ಗಣನೆಗೇ ತೆಗೆದು ಕೊಳ್ಳುವುದಿಲ್ಲ. ತಾನು ಮಾಡಿದ ದುಷ್ಕರ್ಮಗಳಿಂದಾಗಿ ಅವನು ಈಗಾಗಲೇ ಸತ್ತಂತೆಯೇ ಆಗಿದ್ದಾನೆ. ಈಗವನು ನನ್ನಿಂದ ಹತನಾಗಿ ಪ್ರಾಣಗಳಿಂದಲೂ ವಿಮುಕ್ತನಾಗುತ್ತಾನೆ. ಸೋದರಿ ! ಇನ್ನಾದರೂ ನೀನು ಕಣ್ಣೀರನ್ನು ಸುರಿಸ ಬೇಡ. ಭಯವನ್ನು ಬಿಟ್ಟುಬಿಡು. ನಾನು ಆ ರಾಮನನ್ನು ಅವನ ತಮ್ಮ ನೊಡನೆಯೇ ಯಮನ ಅರಮನೆಗೆ ಕಳುಹಿಸಿಕೊಡುತ್ತೇನೆ. ಯುದ್ಧದಲ್ಲಿ ಗಂಡುಗೊಡಲಿಯಿಂದ ಹತನಾಗುವ ಅಲ್ಪಪ್ರಾಣನಾದ ರಾಮನ ಬಿಸಿಯಾದ ಮತ್ತು ಕೆಂಪಾದ ರಕ್ತವನ್ನು ನೀನು ಈಗಲೇ ಕುಡಿಯಲಿರುವೆ."

ಖರನ ಮುಖದಿಂದ ಹೊರಟ ಆ ಮಾತುಗಳನ್ನು ಕೇಳಿ ಶೂರ್ಪ ಣಖೆಯು ಸಂತೋಷಗೊಂಡಳು. ಮೂರ್ಖತ್ವದ ಕಾರಣದಿಂದಾಗಿ ರಾಕ್ಷಸ ಶ್ರೇಷ್ಠನಾದ ಖರನನ್ನು ಪ್ರಶಂಸಿಸಿದಳು. ಈ ಹಿಂದೆ ಅವಳಿಂದಲೇ ನಿಂದಿ ಸಲ್ಪಟ್ಟು ಪುನಃ ಈಗ ಅವಳಿಂದಲೇ ಪ್ರಶಂಸಿತನಾದ ಖರನು ದೂಷಣನೆಂಬ ಸೇನಾಪತಿಗೆ ಹೇಳಿದನು :

"ದೂಷಣ ! ನನ್ನ ಚಿತ್ತಾನುವರ್ತಿಗಳಾದ, ಭಯಂಕರವೇಗವುಳ್ಳ, ಯುದ್ಧದಿಂದ ಹಿಂದಿರುಗದೇ ಇರುವ, ನೀಲಮೇಘವರ್ಣದವರಾದ, ಬಹು ಘೋರರೂಪಿಗಳಾದ, ಕ್ರೂರಕರ್ಮಿಗಳಾದ, ಲೋಕಗಳೆಲ್ಲವನ್ನೂ ಹಿಂಸಿಸುತ್ತಾ ವಿಹರಿಸುತ್ತಿರುವ, ಮಹಾಬಲಿಷ್ಠರಾದ, ಉಗ್ರಪರಾಕ್ರಮಿಗಳಾದ, ಶಾರ್ದೂಲ ದಂತೆ ದರ್ಪಿಷ್ಠರಾದ, ವಿಶಾಲವಾದ ಮುಖಗಳಿಂದ ಕೂಡಿರುವ, ಅತ್ಯಂತ ಓಜಸ್ವಿಗಳಾದ, ಬಹುಗರ್ವಿತರಾದ ಹದಿನಾಲ್ಕು ಸಾವಿರ ರಾಕ್ಷಸರೂ ಯುದ್ಧಕ್ಕೆ ಸಿದ್ಧರಾಗುವಂತೆ ಸಕಲಸಿದ್ಧತೆಗಳನ್ನೂ ಮಾಡು. ಸೌಮ್ಯನೇ ! ನನ್ನ ರಥ ವನ್ನು ಶೀಘ್ರವಾಗಿ ಯುದ್ಧಕ್ಕೆ ಸಜ್ಜುಗೊಳಿಸು. ಆ ರಥದಲ್ಲಿ ಧನುಸ್ಸು ಗಳನ್ನೂ, ವಿಚಿತ್ರತರವಾದ ಬಾಣಗಳನ್ನೂ, ಕತ್ತಿಗಳನ್ನೂ, ವಿಧ-ವಿಧವಾದ ಮತ್ತು ನಿಶಿತವಾದ ಶಕ್ತ್ಯಾಯುಧಗಳನ್ನೂ ಇರಿಸು. ದುರ್ವಿನೀತನಾದ, ಅವಿ ಧೇಯನಾದ ರಾಮನ ಸಂಹಾರಕ್ಕಾಗಿ ಮಹಾತ್ಮರಾದ ಪೌಲಸ್ತ್ಯಸೈನಿಕರ ಮುಂಭಾಗದಲ್ಲಿ ನಾನೇ ಹೋಗಲು ನಿರ್ಧರಿಸಿದ್ದೇನೆ." ಖರನು ಹೀಗೆ ಹೇಳಲು ದೂಷಣನು ಮರುಕ್ಷಣದಲ್ಲಿಯೇ ಚಿತ್ರವರ್ಣದ ಕುದುರೆಗಳಿಂದ ಯುಕ್ತ

ವಾಗಿದ್ದ, ಸೂರ್ಯವರ್ಣದ ಮಹಾರಥವನ್ನು ಖರನ ಸಮೀಪದಲ್ಲಿ ನಿಲ್ಲಿಸಿ ರಥವು ಸಿದ್ಧವಾಗಿರುವುದೆಂದು ನಿವೇದಿಸಿದನು.

ಆ ಮಹಾರಥವು ಮೇರುಪರ್ವತದ ಶಿಖರದಂತಿದ್ದಿತು. ಪುಟಕ್ಕೆ ಹಾಕಿದ ಚಿನ್ನದಿಂದ ವಿಭೂಷಿತವಾಗಿದ್ದಿತು. ಅದಕ್ಕೆ ಸುವರ್ಣಮಯವಾದ ಚಕ್ರಗಳಿದ್ದುವು. ಅದು ಅತ್ಯಂತ ವಿಶಾಲವಾಗಿದ್ದಿತು. ಅದರ ಮೂಕಿಯು ವೈಡೂರ್ಯಮಯವಾಗಿದ್ದಿತು. ಆ ರಥದಲ್ಲಿ ಸುವರ್ಣಮಯವಾದ ಮೀನುಗಳಿದ್ದುವು. ಪುಷ್ಪಭರಿತವಾದ ವೃಕ್ಷಗಳಿದ್ದುವು. ಪರ್ವತಗಳಿದ್ದುವು. ಚಂದ್ರ-ಸೂರ್ಯರಿದ್ದರು. ಮಂಗಳಸೂಚಕವಾದ ಪಕ್ಷಿಗಳ ಗುಂಪೇ ಇದ್ದಿತು. ಅದು ನಕ್ಷತ್ರಗಳಿಂದ ಸಮಾವೃತವಾಗಿದ್ದಿತು. ಧ್ವಜದಿಂದ ಸಮಲಂಕೃತವಾಗಿದ್ದಿತು. ಅನೇಕವಿಧವಾದ ಕತ್ತಿಗಳನ್ನು ಆ ರಥದಲ್ಲಿಟ್ಟದ್ದರು. ಸುತ್ತಲೂ ಶ್ರೇಷ್ಠವಾದ ಗೆಜ್ಜೆಗಳು ತೂಗಾಡುತ್ತಿದ್ದುವು. ಅದು ಒಳ್ಳೆಯ ಕುದುರೆಗಳಿಂದ ಯುಕ್ತವಾಗಿದ್ದಿತು. ಅಂತಹ ಸುಂದರವಾದ ರಥವನ್ನು ಖರನು ಕೋಪಾವಿಷ್ಟನಾಗಿಯೇ ಹತ್ತಿದನು. ಒಡೆಯನಾದ ಖರನು ರಥವೇರಿದುದನ್ನು ನೋಡಿ ಭಯಂಕರಪರಾಕ್ರಮಿಗಳಾದ ರಾಕ್ಷಸರೆಲ್ಲರೂ ಖರನನ್ನೂ ಮತ್ತು ಮಹಾಬಲನಾದ ದೂಷಣನನ್ನೂ ಸುತ್ತುವರಿದು ನಿಂತರು. ರಥಗಳಿಂದಲೂ, ಗುರಾಣಿಗಳಿಂದಲೂ, ಕವಚಗಳಿಂದಲೂ, ಆಯುಧಗಳಿಂದಲೂ, ಧ್ವಜಗಳಿಂದಲೂ ಸಜ್ಜಾಗಿ ನಿಂತಿದ್ದ ರಾಕ್ಷಸಸೈನ್ಯವನ್ನು ನೋಡಿ ಖರನು ಪ್ರಯಾಣಹೊರಡುವಂತೆ ಸೈನ್ಯಕ್ಕೆ ಆಜ್ಞೆ ಮಾಡಿದನು.

ಖರನ ಆಜ್ಞೆಯಾದೊಡನೆಯೇ ಘೋರವಾದ ಗುರಾಣಿಗಳಿಂದಲೂ, ಆಯುಧಗಳಿಂದಲೂ, ಧ್ವಜಗಳಿಂದಲೂ ಸಜ್ಜಾಗಿದ್ದ ರಾಕ್ಷಸಮಹಾಸೈನ್ಯವು ಮಹಾನಿನಾದಗಳೊಡನೆ ಬಹಳ ವೇಗವಾಗಿ ಜನಸ್ಥಾನದಿಂದ ಹೊರಟಿತು. ಮುದ್ಗರಾಯುಧಗಳಿಂದಲೂ, ಪಟ್ಟಿಶಗಳಿಂದಲೂ, ಶೂಲಗಳಿಂದಲೂ, ಸುತೀಕ್ಷ್ಣವಾದ ಗಂಡುಗೊಡಲಿಗಳಿಂದಲೂ, ಖಡ್ಗಗಳಿಂದಲೂ, ಚಕ್ರಗಳಿಂದಲೂ, ಪ್ರಕಾಶಮಾನವಾದ ತೋಮರಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಘೋರವಾದ ಪರಿಘಾಯುಧಗಳಿಂದಲೂ, ದೊಡ್ಡದಾದ ಧನುಸ್ಸುಗಳಿಂದಲೂ, ಗದೆಗಳಿಂದಲೂ, ಕತ್ತಿಗಳಿಂದಲೂ, ಮುಸಲಾಯುಧಗಳಿಂದಲೂ, ಭಯಂಕರವಾಗಿ ಕಾಣುತ್ತಿದ್ದ ವಜ್ರಾಯುಧಗಳಿಂದಲೂ ಸುಶೋಭಿಸುತ್ತಿದ್ದ,

ಬಹುಘೋರದರ್ಶನರಾದ–ಖರನ ಚಿತ್ತಾನುವರ್ತಿಗಳಾದ ಹದಿನಾಲ್ಕು ಸಾವಿರ ರಾಕ್ಷಸಸೈನಿಕರಿಂದ ಕೂಡಿದ್ದ ಆ ಮಹಾಸೈನ್ಯವು ಜನಸ್ಥಾನದಿಂದ ಹೊರಟಿತು. ಭಯಂಕರಪರಾಕ್ರಮಿಗಳಾದ ರಾಕ್ಷಸರು ಹೊರಟುದನ್ನು ನೋಡಿ ಖರನ ರಥವೂ ಹೊರಟಿತು. ಖರನ ಅಭಿಪ್ರಾಯವನ್ನು ತಿಳಿದ ಸಾರಥಿಯು ಪುಟಕ್ಕೆ ಹಾಕಿದ ಚಿನ್ನದ ಭೂಷಣಗಳಿಂದ ಸಮಲಂಕೃತವಾಗಿದ್ದ ಚಿತ್ರವರ್ಣದ ಕುದುರೆಗಳನ್ನು ಮುನ್ನಡೆಯುವಂತೆ ಪ್ರಚೋದಿಸಿದನು. ಸಾರಥಿಯಿಂದ ಪ್ರಚೋದಿತವಾದ ಶತ್ರುಘಾತಿಯಾದ ಖರನ ರಥವು ವೇಗವಾಗಿ ಮುಂದೆ ಹೋಗುತ್ತಾ ದಿಕ್ಕುಗಳನ್ನೂ ಉಪದಿಕ್ಕುಗಳನ್ನೂ ಶಬ್ದದಿಂದ ತುಂಬಿಬಿಟ್ಟಿತು. ಖರನ ಕೋಪವು ಅಡಿಗಡಿಗೂ ಹೆಚ್ಚುತ್ತಿದ್ದಿತು. ಕರ್ಕಶವಾದ ಧ್ವನಿಗಳಿಂದ ಕೂಡಿದ್ದ ಆ ರಾಕ್ಷಸನು ಯಮನೋಪಾದಿಯಲ್ಲಿ ಶತ್ರುವಿನ ವಧೆಗಾಗಿ ತವಕಿಸುತ್ತಿದ್ದನು. ಕಲ್ಲುಮಳೆಯನ್ನು ಸುರಿಸುವ ಬಿರುಗಾಳಿಯಿಂದ ಪ್ರೇರಿತವಾದ ಮೇಘದಂತೆ–ಗಟ್ಟಿಯಾಗಿ ಧ್ವನಿಮಾಡುತ್ತಾ ವೇಗವಾಗಿ ರಥವನ್ನು ಓಡಿಸುವಂತೆ ಸಾರಥಿಯನ್ನು ಕ್ಷಣ-ಕ್ಷಣಕ್ಕೂ ಪ್ರಚೋದಿಸುತ್ತಿದ್ದನು.

೨೨ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೩ನೆಯ ಸರ್ಗ

## ಭಯಂಕರವಾದ ಉತ್ಪಾತಗಳನ್ನು ನೋಡಿಯೂ ಲೆಕ್ಕಿಸದೇ ಖರನ ಮುನ್ನಡೆ: ರಾಕ್ಷಸಸೈನಿಕರು ಶ್ರೀರಾಮನ ಆಶ್ರಮದ ಬಳಿಗೆ ತೆರಳಿದುದು

ತಸ್ಮಿನ್ಯಾತೇ ಜನಸ್ಥಾನಾದಶಿವಂ ಶೋಣಿತೋದಕಮ್ ।
ಅಭ್ಯವರ್ಷನ್ಮಹಾಮೇಘಸ್ತುಮುಲೋ ಗರ್ದಭಾರುಣಃ ॥೧॥

ಜನಸ್ಥಾನದಿಂದ ಆ ಮಹಾಸೈನ್ಯವು ಪ್ರಯಾಣಹೊರಟೊಡನೆಯೇ ಕತ್ತೆಯಂತೆ ಕಂದುಗೆಂಪಾದ ಬಣ್ಣವುಳ್ಳ ಮೇಘವು ಅಮಂಗಳಕರವಾದ ರಕ್ತದಂತೆ ಕೆಂಪಾದ ನೀರನ್ನು ಸುರಿಸತೊಡಗಿತು.

ರಥಕ್ಕೆ ಕಟ್ಟಿದ್ದ ಮಹಾವೇಗಯುಕ್ತವಾದ ಖರನ ಕುದುರೆಗಳು ಸಮತಟ್ಟಾಗಿದ್ದ ಮತ್ತು ಹೂವುಗಳನ್ನೆರಚಿದ್ದ ರಾಜಮಾರ್ಗದಲ್ಲಿಯೂ ದೈವ

ಯೋಗದಿಂದ ಜಾರಿಬಿದ್ದುವು. ಕೆಂಪಾದ ತುದಿಯಿಂದ ಕೂಡಿರುವ ಶ್ಯಾಮಲ ವರ್ಣದ ಕೊಳ್ಳಿಯ ಚಕ್ರದಂತೆ ಕಾಣುತ್ತಿದ್ದ ಪರಿವೇಷವು ಸೂರ್ಯನನ್ನು ಸುತ್ತುಗಟ್ಟಿತು. ದೊಡ್ಡದಾದ ಶರೀರವನ್ನು ಹೊಂದಿದ್ದ ಭಯಂಕರವಾದ ಹದ್ದೊಂದು ಸುವರ್ಣಮಯವಾದ ದಂಡದಿಂದ ಕೂಡಿದ್ದ ಎತ್ತರವಾಗಿದ್ದ ಧ್ವಜವನ್ನು ಏರಿ ಕುಳಿತುಕೊಂಡಿತು. ಮಾಂಸಜೀವಿಗಳಾದ ಭಯಂಕರವಾಗಿ ಶಬ್ದಮಾಡುವ ಮೃಗ-ಪಕ್ಷಿಗಳು ಜನಸ್ಥಾನದ ಬಳಿಗೆ ಬಂದು ಕೆಟ್ಟ ಧ್ವನಿಯಲ್ಲಿ ಕೂಗಿಕೊಳ್ಳುತ್ತಿದ್ದುವು.

ಸೂರ್ಯನಿಂದ ಪ್ರಕಾಶಿತವಾದ ಪೂರ್ವದಿಕ್ಕಿನಲ್ಲಿ ಘೋರವಾದ ಮತ್ತು ಭಯಂಕರವಾದ ಧ್ವನಿಗಳುಳ್ಳ ಹೆಣ್ಣುಗುಳ್ಳೆನರಿಗಳು ರಾಕ್ಷಸರಿಗೆ ಅಮಂಗಳ ಸೂಚಕವಾದ ಕೆಟ್ಟಧ್ವನಿಯಲ್ಲಿ ಊಳಿಡುತ್ತಿದ್ದುವು. ಮದಿಸಿದ ಆನೆಗಳೋಪಾದಿಯಲ್ಲಿದ್ದ ಭಯಂಕರವಾದ ಮೇಘಗಳು ರಕ್ತವರ್ಣದ ನೀರಿನಿಂದ ಕೂಡಿ ಆಕಾಶವನ್ನೆಲ್ಲಾ ವ್ಯಾಪಿಸಿಕೊಂಡುವು. ಆ ಸಮಯದಲ್ಲಿ ಆಕಾಶದಲ್ಲಿ ಮೇಘವಿಲ್ಲದ ಸ್ಥಳವೇ ಇರಲಿಲ್ಲ. ಆಕಾಶವೆಲ್ಲವೂ ಮೇಘಮಯವಾಗಿ ಕಾಣುತ್ತಿದ್ದಿತು. ರೋಮಾಂಚಕರವಾದ ಮತ್ತು ಅದ್ಭುತವಾದ ಕತ್ತಲೆಯು ಎಲ್ಲೆಡೆಗಳಲ್ಲಿಯೂ ಆವರಿಸಿತು. ದಿಕ್ಕುಗಳಾಗಲೀ ಉಪದಿಕ್ಕುಗಳಾಗಲೀ ಸ್ಪಷ್ಟವಾಗಿ ಕಾಣುತ್ತಲೇ ಇರಲಿಲ್ಲ. ರಕ್ತದಲ್ಲಿ ನೆನೆದ ವಸ್ತ್ರದ ಕಾಂತಿಯಂತೆ ಪ್ರಕಾಶಿಸುತ್ತಿದ್ದ ಆ ಸಮಯವು ಸಂಧ್ಯಾಕಾಲವಲ್ಲದಿದ್ದರೂ ಸಂಧ್ಯಾಕಾಲದಂತೆಯೇ ಪ್ರಕಾಶಿಸುತ್ತಿದ್ದಿತು. ಮೃಗ-ಪಕ್ಷಿಗಳು ಖರನಿಗೆ ಎದುರಾಗಿ ನಿಂತು ಘೋರವಾಗಿ ಅರಚುತ್ತಿದ್ದುವು. ಭಯವು ಸನ್ನಿಹಿತವಾಗಿರುವುದನ್ನು ಸೂಚಿಸುವ ಬಿಳೀಹದ್ದುಗಳೂ, ಕೆಂಪುಹದ್ದುಗಳೂ, ಗುಳ್ಳೇನರಿಗಳೂ ಗಟ್ಟಿಯಾಗಿ ಕಿರುಚಿಕೊಳ್ಳುತ್ತಿದ್ದುವು. ಯುದ್ಧಸಮಯದಲ್ಲಿ ಅಮಂಗಳವನ್ನು ಸೂಚಿಸುವ, ಭಯಂಕರವಾಗಿ ಕಾಣುತ್ತಿದ್ದ ಹೆಣ್ಣುಗುಳ್ಳೇನರಿಗಳು ಜ್ವಾಲೆಯನ್ನು ಹೊರಹೊಮ್ಮುತ್ತಿದ್ದ ಮುಖಗಳಿಂದ ಖರನ ಸೈನ್ಯಕ್ಕೆ ಎದುರಾಗಿ ನಿಂತು ಅರಚಿಕೊಳ್ಳುತ್ತಿದ್ದುವು. ಪರಿಘಾಯುಧದಂತೆ ಕಾಣುತ್ತಿದ್ದ ತಲೆಯಿಲ್ಲದ ಪುರುಷನ ಮುಂಡವು ಸೂರ್ಯನ ಸಮೀಪದಲ್ಲಿ ಕಾಣಿಸಿಕೊಂಡಿತು. ಮಹಾಗ್ರಹವಾದ ರಾಹುವು ಅಕಾಲದಲ್ಲಿ (ಅಮಾವಾಸ್ಯೆಯು ಇಲ್ಲದಿದ್ದಾಗ) ಸೂರ್ಯನನ್ನು ಆಕ್ರಮಿಸಿತು. ಸುಂಟರಗಾಳಿಯು ಎಲ್ಲೆಡೆ

ಗಳಲ್ಲಿಯೂ ರಭಸದಿಂದ ಬೀಸುತ್ತಿದ್ದಿತು. ಸೂರ್ಯನು ಕಾಂತಿಹೀನನಾದನು. ರಾತ್ರಿಯಲ್ಲದೇ ಇದ್ದರೂ ಮಿಣಕುಹುಳುಗಳ ಪ್ರಭೆಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ ನಕ್ಷತ್ರಗಳು ಭೂಮಿಯ ಮೇಲೆ ಬೀಳತೊಡಗಿದುವು. ಸರೋವರದಲ್ಲಿದ್ದ ಮೀನುಗಳೂ, ಪಕ್ಷಿಗಳೂ ಅಲ್ಲಿಯೇ ಹುದುಗಿಕೊಂಡುವು. ಕಮಲಗಳು ಬಾಡಿಹೋದುವು. ಆ ಸಮಯದಲ್ಲಿ ವೃಕ್ಷಗಳು ಪುಷ್ಪ-ಫಲಗಳಿಂದ ವಿಹೀನವಾದುವು. ಗಾಳಿಯೇ ಇಲ್ಲದಿದ್ದರೂ ಮೇಘದಂತೆ ಎಣೆಗೆಂಪಾಗಿದ್ದ ಧೂಳಿಯು ಮೇಲೆದ್ದಿತು.

ಶಾರಿಕಾಪಕ್ಷಿಗಳು ಚೀಚೀ-ಕೂಚೀ ಎಂದು ಶಬ್ದಮಾಡುತ್ತಿದ್ದುವು. ಭಯಂಕರವಾಗಿ ಕಾಣುತ್ತಿದ್ದ ಉಲ್ಕೆಗಳು * ಘೋರಧ್ವನಿಗಳೊಡನೆ ಆಕಾಶದಿಂದ ಬೀಳುತ್ತಿದ್ದುವು. ಆ ಸಮಯದಲ್ಲಿ ಪರ್ವತ-ವನ-ಕಾನನಗಳಿಂದ ಯುಕ್ತವಾದ ಭೂಮಿಯು ಕಂಪಿಸಿತು. ರಥದಲ್ಲಿ ಕುಳಿತು ಗರ್ಜಿಸುತ್ತಿದ್ದ ಖರರಾಕ್ಷಸನ ಎಡಭುಜವೂ ಅದುರಿತು. ಅಂತೆಯೇ ಅವನ ಸ್ವರವೂ ಕುಗ್ಗಿಹೋಯಿತು. ಸುತ್ತಲೂ ನೋಡುತ್ತಿದ್ದ ರಾಕ್ಷಸನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ತಲೆಯಲ್ಲಿ ಯಾತನೆಯು ಪ್ರಾರಂಭವಾಯಿತು. ಇಷ್ಟೊಂದು ಅಪಶಕುನಗಳಾದರೂ ಖರನು ಅಜ್ಞಾನದ ಕಾರಣದಿಂದ ಹಿಂದಿರುಗಲಿಲ್ಲ. ಆ ಸಮಯದಲ್ಲಿ ತಾನಾಗಿಯೇ ಹುಟ್ಟಿಕೊಂಡ ರೋಮಾಂಚಕರವಾದ ಮಹಾದುರ್ಘಟನೆಗಳನ್ನು ನೋಡಿ ಖರರಾಕ್ಷಸನು ಗಟ್ಟಿಯಾಗಿ ನಗುತ್ತಾ ಅನುಯಾಯಿಗಳಾದ ರಾಕ್ಷಸರಿಗೆ ಹೇಳಿದನು :

" ರಾಕ್ಷಸರೇ ! ಈಗ ಇಲ್ಲಿ ಆಕಸ್ಮಿಕವಾಗಿ ಹುಟ್ಟಿಕೊಂಡಿರುವ ಭಯಂಕರವಾಗಿ ಕಾಣುತ್ತಿರುವ ಮಹಾದುರ್ಘಟನೆಗಳ ವಿಷಯವಾಗಿ ನಾನು ಸ್ವಲ್ಪ

---

*ಉಲ್ಕೆಯ ವಿಷಯವಾಗಿ ವರಾಹಮಿಹಿರರು ಹೀಗೆ ಹೇಳಿದ್ದಾರೆ: ಉಲ್ಕಾ ಶಿರಸಿ ವಿಶಾಲಾ ನಿಪತನ್ತೀ ವರ್ಧತೇ ತನುಪ್ರಭಯಾ | ಪವನಾಭಿಹತಾ ಗಗನಾದವನೌ ಚ ಯದಾ ಸಮಾಪತತಿ | ಭವತಿ ತದಾ ನಿರ್ಘಾತಃ ಸ ಚ ಪಾಪೋ ದೀರ್ಘಖಗವಿರುತಃ | ಉಲ್ಕಾ ಎಂಬುದು ವಿಶಾಲವಾದ ತಲೆಯುಳ್ಳದ್ದು. ಆಕಾಶದಿಂದ ಕೆಳಕ್ಕೆ ಬೀಳುತ್ತಿದ್ದಂತೆಲ್ಲಾ ಶರೀರದ ಪ್ರಭೆಯಿಂದ ವರ್ಧಿಸುತ್ತಾ ಹೋಗುತ್ತದೆ. ಗಾಳಿಯ ಹೊಡೆತಕ್ಕೆ ಸಿಕ್ಕಿದ ಇದು ಯಾವಾಗ ಭೂಮಿಯ ಮೇಲೆ ಬೀಳುತ್ತದೆಯೋ ಆಗ ದೊಡ್ಡ ಶಬ್ದವುಂಟಾಗುವುದು. ಆಗ ಪಕ್ಷಿಗಳು ಭೀಕರವಾಗಿ ಕೂಗಿಕೊಳ್ಳುತ್ತವೆ. ಇದು ಅನಿಷ್ಟ ಸೂಚಕ.

ವಾದರೂ ಚಿಂತಿಸುವುದಿಲ್ಲ. ವೀರ್ಯಾತಿಶಯಗಳಿಂದ ಕೂಡಿರುವ ಬಲಿಷ್ಠನೊಬ್ಬನು ದುರ್ಬಲರನ್ನು ಅಲಕ್ಷಿಸುವಂತೆ–ನಾನು ಈ ನಿಮಿತ್ತಗಳನ್ನು ಲಕ್ಷಿಸುವುದಿಲ್ಲ. ನಕ್ಷತ್ರಗಳನ್ನಾದರೂ ತೀಕ್ಷ್ಣವಾದ ನನ್ನ ಬಾಣಗಳಿಂದ ಪ್ರಹರಿಸಿ ಆಕಾಶದಿಂದ ಬೀಳಿಸಿಯೇನು. ಅಂತಹ ಸಾಮರ್ಥ್ಯವು ನನಗಿದೆ. ಇಷ್ಟುಮಾತ್ರವಲ್ಲ. ನಾನು ಕೋಪಗೊಂಡೆನೆಂದರೆ ಮೃತ್ಯುವಿಗೂ ಮರಣವನ್ನುಂಟುಮಾಡುವೆನು. ಅಂತಹ ಅತುಲಪರಾಕ್ರಮಿಯಾದ ನಾನು ಬಲದಿಂದ ಗರ್ವಿಷ್ಠನಾಗಿರುವ ರಾಮನನ್ನೂ ಮತ್ತು ಅವನ ತಮ್ಮನಾದ ಲಕ್ಷ್ಮಣನನ್ನೂ ತೀಕ್ಷ್ಣವಾದ ಬಾಣಗಳಿಂದ ಸಂಹರಿಸದೇ ಹಿಂದಿರುಗುವುದಿಲ್ಲ. ಯಾವಳ ಕಾರಣದಿಂದಾಗಿ ರಾಮ-ಲಕ್ಷ್ಮಣರ ಬುದ್ಧಿಯು ವೈಪರೀತ್ಯವನ್ನು ಹೊಂದಿತೋ–ಅಂತಹ ನನ್ನ ತಂಗಿಯು ಆ ಇಬ್ಬರ ರಕ್ತವನ್ನೂ ಕುಡಿದು ತನ್ನ ಮನೋಭೀಷ್ಟವನ್ನು ಪೂರೈಸಿಕೊಳ್ಳಲಿ. ಈ ಹಿಂದೆ ನಡೆದ ಯಾವುದೇ ಯುದ್ಧದಲ್ಲಾಗಲೀ ನನಗೆ ಪರಾಜಯವು ಉಂಟಾಗಿಲ್ಲ. ಇದು ನಿಮಗೆ ತಿಳಿದ ವಿಷಯವೇ ಆಗಿದೆ. ನಾನೆಂದೂ ಸುಳ್ಳುಹೇಳುವವನಲ್ಲ. ಮದಿಸಿದ ಐರಾವತದ ಮೇಲೆ ಕುಳಿತು ಹೋಗುವ ದೇವತೆಗಳ ಒಡೆಯನಾದ, ವಜ್ರಾಯುಧಪಾಣಿಯಾದ ಇಂದ್ರನನ್ನೂ ಕೂಡ ಕ್ರುದ್ಧನಾದ ನಾನು ಯುದ್ಧದಲ್ಲಿ ಸಂಹರಿಸಬಲ್ಲೆನು. ಹೀಗಿರುವಾಗ ಹುಲುಮನುಜರ ವಿಷಯವಾಗಿ ಹೇಳತಕ್ಕದೇನಿದೆ? "

ಮೃತ್ಯುಪಾಶದಿಂದ ಬಿಗಿಯಲ್ಪಟ್ಟಿದ್ದ ರಾಕ್ಷಸರ ಆ ಮಹಾಸೈನ್ಯವು ಖರರಾಕ್ಷಸನ ವೀರಗರ್ಜನೆಯನ್ನು ಕೇಳಿ ಅಪರಿಮಿತವಾದ ಸಂತೋಷವನ್ನು ಹೊಂದಿತು. ಖರನ ಮತ್ತು ರಾಮ-ಲಕ್ಷ್ಮಣರ ನಡುವೆ ನಡೆಯಲಿದ್ದ ಯುದ್ಧವನ್ನು ನೋಡುವ ಆಕಾಂಕ್ಷೆಯಿಂದ ಮಹಾತ್ಮರಾದ ಋಷಿಗಳೂ, ದೇವತೆಗಳೂ, ಗಂಧರ್ವ-ಚಾರಣರೂ, ಸಿದ್ಧರೂ ಅಲ್ಲಿ ಬಂದು ಸೇರಿದರು. ಪುಣ್ಯಕರ್ಮಿಗಳಾದ ಆ ಮಹಾತ್ಮರು ಗುಂಪಾಗಿ ಸೇರಿ ಪರಸ್ಪರವಾಗಿ ಹೀಗೆ ಹೇಳಿಕೊಳ್ಳುತ್ತಿದ್ದರು.

ಸ್ವಸ್ತಿ ಗೋಬ್ರಾಹ್ಮಣೇಭ್ಯೋऽಸ್ತು ಲೋಕಾನಾಂ ಯೇ ಚ
ಸಂಮತಾಃ ।

ಜಯತಾಂ ರಾಘವೋ ಯುದ್ಧೇ ಪೌಲಸ್ತ್ಯಾನ್ರಜನೀಚರಾನ್ ।
ಚಕ್ರಹಸ್ತೋ ಯಥಾ ವಿಷ್ಣುಃ ಸರ್ವಾನಸುರಸತ್ತಮಾನ್ ॥೨೭॥

"ಗೋವುಗಳಿಗೂ-ಬ್ರಾಹ್ಮಣರಿಗೂ ಮಂಗಳವಾಗಲಿ. ಲೋಕಪ್ರಿಯರಾದ ಮಹಾತ್ಮರಿಗೂ ಮಂಗಳವಾಗಲಿ. ಚಕ್ರಪಾಣಿಯಾದ ಮಹಾವಿಷ್ಣುವು ಸಮಸ್ತರಾದ ಅಸುರಶ್ರೇಷ್ಠರನ್ನೂ ಪರಾಜಯಗೊಳಿಸಿದಂತೆ-ರಾವಣನ ಸಂಬಂಧಿಗಳಾದ ಎಲ್ಲ ರಾಕ್ಷಸರನ್ನೂ ಶ್ರೀರಾಮನು ಜಯಿಸಲಿ."

ಅಂತರಿಕ್ಷದಲ್ಲಿ ವಿಮಾನಗಳಲ್ಲಿದ್ದ ಶ್ರೇಷ್ಠರಾದ ಮಹರ್ಷಿಗಳೂ ಮತ್ತು ದೇವತೆಗಳೂ ಇದೇ ಮುಂತಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತಾ ಆಯುಷ್ಯವನ್ನು ಕಳೆದುಕೊಂಡಿದ್ದ ಆ ರಾಕ್ಷಸರ ಮಹಾಸೈನ್ಯವನ್ನು ಕುತೂಹಲಾವಿಷ್ಟರಾಗಿ ಅಂತರಿಕ್ಷದಲ್ಲಿ ನೋಡುತ್ತಿರುವಾಗಲೇ ಖರನು ರಥದಲ್ಲಿ ಕುಳಿತು ವೇಗವಾಗಿ ಸೈನ್ಯದ ಮುಂಭಾಗಕ್ಕೆ ಬಂದನು. ಇತರ ರಾಕ್ಷಸನಾಯಕರೂ ಖರನ ಜೊತೆಗೂಡಿ ಮುಂಭಾಗಕ್ಕೇ ಬಂದರು. ಶ್ಯೇನಗಾಮೀ, ಪೃಥುಗ್ರೀವ, ಯಜ್ಞಶತ್ರು, ವಿಹಂಗಮ, ದುರ್ಜಯ, ಕರವೀರಾಕ್ಷ, ಪರುಷ, ಕಾಲ ಕಾರ್ಮುಕ, ಹೇಮಮಾಲೀ, ಮಹಾಮಾಲೀ, ಸರ್ಪಾಸ್ಯ, ರುಧಿರಾಶನ-ಈ ಹನ್ನೆರಡು ಮಂದಿ ಮಹಾವೀರ್ಯರಾದ ರಾಕ್ಷಸರು ಖರನನ್ನು ಸುತ್ತುವರಿದು ಹೊರಟರು. ಅಂತೆಯೇ ಮಹಾಕಪಾಲ, ಸ್ಥೂಲಾಕ್ಷ, ಪ್ರಮಾಥಿ, ತ್ರಿಶಿರ - ಈ ನಾಲ್ವರು ಸೇನಾನಾಯಕರು ದೂಷಣನನ್ನು ಹಿಂಬಾಲಿಸಿದರು. ಭಯಂಕರವಾದ ವೇಗದಿಂದ ಕೂಡಿದ್ದ, ಯುದ್ಧಮಾಡಲು ಹೆಚ್ಚು ಆಸಕ್ತಿಯನ್ನು ಹೊಂದಿದ್ದ, ದುರ್ಧರವಾಗಿದ್ದ ಆ ರಾಕ್ಷಸಸೈನ್ಯವು-ಚಂದ್ರ-ಸೂರ್ಯರನ್ನು ಗ್ರಹಗಳ ಸಾಲು ಸುತ್ತುವರಿದು ನಿಲ್ಲುವಂತೆ - ರಾಮ-ಲಕ್ಷ್ಮಣರನ್ನು ಆಕ್ರಮಿಸಿತು.

೨೩ನೆಯ ಸರ್ಗವು ಮುಗಿಯಿತು.

## ಶ್ರೀರಾಮನು ಸಂಭವಿಸುತ್ತಿರುವ ಶಕುನಗಳಿಂದ ತನಗೆ ವಿಜಯವು ಲಭಿಸುವುದೆಂಬುದನ್ನೂ, ರಾಕ್ಷಸರ ವಿನಾಶವಾಗುವುದೆಂಬುದನ್ನೂ ತಿಳಿದುಕೊಂಡುದು : ಲಕ್ಷ್ಮಣನೊಡನೆ ಸೀತಾದೇವಿಯನ್ನು ಪರ್ವತದ ಗುಹೆಗೆ ಕಳುಹಿಸಿಕೊಟ್ಟಿದ್ದು

ಆಶ್ರಮಂ ಪ್ರತಿಯಾತೇ ತು ಖರೇ ಖರಪರಾಕ್ರಮೇ ।
ತಾನೇವೌತ್ಪಾತಿಕಾನ್ರಾಮಃ ಸಹ ಭ್ರಾತ್ರಾ ದದರ್ಶ ಹ ॥೧॥

ತೀಕ್ಷ್ಣಪರಾಕ್ರಮಿಯಾದ ಖರನು ಶ್ರೀರಾಮನ ಆಶ್ರಮದ ಕಡೆಗೆ ಹೋಗುತ್ತಿರಲು ಆ ಸಮಯದಲ್ಲಾಗುತ್ತಿದ್ದ ಅದೇ ಉತ್ಪಾತಗಳನ್ನೇ ಶ್ರೀರಾಮನೂ ಲಕ್ಷ್ಮಣನೊಡನೆ ನೋಡಿದನು.

ಪ್ರಜೆಗಳಿಗೆ ಹಿತಕರವಲ್ಲದ, ರೋಮಾಂಚಕಾರಿಯಾದ, ಮಹಾಘೋರವಾದ ಆ ಉತ್ಪಾತಗಳನ್ನು ಕಂಡು ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ಹೇಳಿದನು :

"ಮಹಾಬಾಹುವೇ ! ಇಲ್ಲಿ ಎದ್ದು ಕಾಣುತ್ತಿರುವ ಭಯಂಕರವಾದ ಉತ್ಪಾತಗಳನ್ನು ನೋಡು. ಸಕಲಪ್ರಾಣಿಗಳ ಸಂಹಾರವನ್ನು ಸೂಚಿಸಲು ಹುಟ್ಟಿರುವ ಈ ಉತ್ಪಾತಗಳು ಎಲ್ಲ ರಾಕ್ಷಸರನ್ನೂ ಸಂಹರಿಸುವ ಸಲುವಾಗಿಯೇ ಹುಟ್ಟಿಕೊಂಡಿವೆ. ಆಕಾಶದಲ್ಲಿ ಕಾಣುತ್ತಿರುವ ಈ ಮೇಘಗಳು ಕತ್ತೆಯಂತೆ ಎಣೆಗೆಂಪಿನ ಛಾಯೆಯಿಂದ ಕೂಡಿ ಸುತ್ತಲೂ ಸಂಚರಿಸುತ್ತಿವೆ. ಪ್ರಚಂಡವಾದ ಗರ್ಜನೆಯನ್ನು ಮಾಡುತ್ತಾ ರಕ್ತವನ್ನೇ ಧಾರಾರೂಪದಲ್ಲಿ ಸುರಿಸುತ್ತಿವೆ. ಯುದ್ಧವಾಗುವುದೆಂಬುದನ್ನು ತಿಳಿದು ಆನಂದಿಸುತ್ತಿರುವ ನನ್ನ ಎಲ್ಲ ಬಾಣಗಳೂ ಹೊಗೆಯನ್ನು ಕಾರುತ್ತಿವೆ. ಸ್ವರ್ಣಮಯವಾದ ಹಿಂಭಾಗವುಳ್ಳ ನನ್ನ ಧನುಸ್ಸು ಈಗ ಎದ್ದೆದ್ದು ಕುಣಿಯುತ್ತಿದೆ. ವನಚಾರಿಗಳಾದ ಪಕ್ಷಿಗಳು ಕೂಗುತ್ತಿರುವುದನ್ನು ಗಮನಿಸಿದರೆ ಮುಂದೆ ನಮಗೆ ಭಯವಿದೆಯೆಂಬುದನ್ನೂ ಸೂಚಿಸುತ್ತಿದೆ. ನಮ್ಮ ಜೀವಿತಕ್ಕೇ ಅಪಾಯವು ಒದಗುವ ಸನ್ನಿವೇಶವೂ ಇರುವಂತೆ ಕಾಣುತ್ತಿದೆ. ದೊಡ್ಡದೊಂದು ಮಹಾಯುದ್ಧ

ವೀಗ ನಡೆದೇ ನಡೆಯುತ್ತದೆ. ಇದರಲ್ಲಿ ಸಂಶಯುವೇ ಇಲ್ಲ. ಆದರೆ ನನ್ನ ಬಲತೋಳು ಬಾರಿಬಾರಿಗೂ ಅದರುತ್ತಿದೆ.* ನಿನ್ನ ಮುಖವು ಪ್ರಸನ್ನವಾಗಿ ಪ್ರಭಾಪೂರ್ಣವಾಗಿದೆ. ನನಗೆ ಜಯವೂ ಶತ್ರುವಿಗೆ ಅಪಜಯವೂ ಉಂಟಾಗುವುದೆಂದು ಇದರಿಂದ ಸೂಚಿತವಾಗುತ್ತದೆ.

ಉದ್ಯತಾನಾಂ ಹಿ ಯುದ್ಧಾರ್ಥಂ ಯೇಷಾಂ ಭವತಿ ಲಕ್ಷ್ಮಣ ।
ನಿಷ್ಪ್ರಭಂ ವದನಂ ತೇಷಾಂ ಭವತ್ಯಾಯುಃಪರಿಕ್ಷಯಃ ॥೯॥

ಯುದ್ಧಮಾಡುವ ಸಲುವಾಗಿ ಸಜ್ಜಾಗಿ ನಿಂತವರ ಮುಖವು ಕಾಂತಿಹೀನವಾಗಿ ಬಿಟ್ಟರೆ ಅವರ ಆಯುಷ್ಯವು ಕ್ಷಯಿಸಿ ಹೋಗುತ್ತದೆ. ಯುದ್ಧದಲ್ಲಿ ಅವರು ವಿನಾಶಹೊಂದುತ್ತಾರೆ.

ಘೋರವಾಗಿ ಗರ್ಜನೆಮಾಡುತ್ತಿರುವ ರಾಕ್ಷಸರ ಮಹಾನಿನಾದಗಳೂ ಕ್ರೂರಕರ್ಮಿಗಳಾದ ರಾಕ್ಷಸರಿಂದ ಬಾರಿಸಲ್ಪಡುತ್ತಿರುವ ಭೇರಿಗಳ ಧ್ವನಿಗಳೂ ಕೇಳಿಬರುತ್ತಿವೆ.

ಅನಾಗತವಿಧಾನಂ ತು ಕರ್ತವ್ಯಂ ಶುಭಮಿಚ್ಛತಾ ।
ಆಪದಂ ಶಙ್ಕಮಾನೇನ ಪುರುಷೇಣ ವಿಪಶ್ಚಿತಾ ॥೧೧॥

ತನ್ನ ಕಲ್ಯಾಣವನ್ನು ಬಯಸುವ ವಿದ್ವಾಂಸನು ಆಪತ್ತು ಸಂಭವಿಸುವುದೆಂಬ ಸಂಶಯುವುಂಟಾದೊಡನೆಯೇ – ಅದು ಸನ್ನಿಹಿತವಾಗುವ ಮೊದಲೇ – ಪಾರಾಗುವ ಉಪಾಯವನ್ನು ಯೋಚಿಸುವುದು ಕರ್ತವ್ಯವಾಗಿರುತ್ತದೆ. ಆದುದರಿಂದ ನೀನೀಗಲೇ ಧನುಸ್ಸನ್ನೂ-ಬಾಣಗಳನ್ನೂ ತೆಗೆದುಕೊಂಡು ಸೀತೆಯನ್ನೂ ಕರೆದುಕೊಂಡು, ಪರ್ವತದಲ್ಲಿರುವ ದುರ್ಗಮವಾದ ಮತ್ತು ವೃಕ್ಷಗಳಿಂದ ನಿಬಿಡವಾಗಿರುವ ಗುಹೆಯನ್ನು ಆಶ್ರಯಿಸು. ನೀನು ನನ್ನ ಈ ಮಾತಿಗೆ ಪ್ರತಿಕೂಲವಾಗಿ ನಡೆದುಕೊಳ್ಳಬೇಡ. ಅದು ನನಗೆ ಇಷ್ಟವಿಲ್ಲ. ನನ್ನ ಪಾದಗಳ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ. ನೀನು ತಡಮಾಡದೇ ಸೀತೆಯನ್ನು ಕರೆದುಕೊಂಡು ಹೊರಟುಬಿಡು.

ಲಕ್ಷ್ಮಣ ! ನೀನಾದರೋ ಶೂರನು; ಬಲಿಷ್ಠನು. ರಾಕ್ಷಸರೆಲ್ಲ

---

* ಪುರುಷನಿಗೆ ಬಲತೋಳು ಬಲಗಣ್ಣು ಮುಂತಾದ ಬಲಭಾಗದಲ್ಲಿರುವ ಅಂಗಗಳು ಅದುರುವುದು ಶುಭಸೂಚಕ.

ರನ್ನೂ ನೀನೊಬ್ಬನೇ ಸಂಹರಿಸಬಲ್ಲೆ-ಎಂಬುದರಲ್ಲಿ ನನಗೆ ಸಂಶಯವೇ ಇಲ್ಲ. ಆದರೆ ಈ ಎಲ್ಲ ರಾಕ್ಷಸರನ್ನೂ ನಾನೇ ಸಂಹರಿಸಲು ಇಚ್ಛಿಸಿದ್ದೇನೆ."



ಶ್ರೀರಾಮನು ಹೀಗೆ ಹೇಳಲು ಲಕ್ಷ್ಮಣನು ಧನುರ್ಬಾಣಗಳನ್ನು ತೆಗೆದುಕೊಂಡು ಸೀತೆಯೊಡನೆ ಅತಿದುರ್ಗಮವಾದ ಗುಹೆಯನ್ನು ಆಶ್ರಯಿಸಿದನು. ಲಕ್ಷ್ಮಣನು ಸೀತೆಯೊಡನೆ ಗುಹೆಯನ್ನು ಪ್ರವೇಶಿಸಲು-' ಹನ್ತ ನಿರ್ಯುಕ್ತಂ-ಭಲೆ ! ಹೀಗೆ ಮಾಡಿದ್ದು ಸಮಂಜಸವಾಯಿತು '-ಎಂದು ಹೇಳುತ್ತಾ ಶ್ರೀರಾಮನು ಕವಚವನ್ನು ತೊಟ್ಟುಕೊಂಡನು. ಅಗ್ನಿಸದೃಶವಾದ ಕವಚದಿಂದ ವಿಭೂಷಿತನಾದ ಶ್ರೀರಾಮನು-ಕತ್ತಲೆಯಲ್ಲಿ ಪ್ರಾದುರ್ಭವಿಸಿದ ಹೊಗೆಯಿಲ್ಲದ ಅಗ್ನಿಯಂತೆಯೇ-ಪ್ರಕಾಶಿಸಿದನು. ಬಳಿಕ ವೀರ್ಯವಂತನಾದ ಶ್ರೀರಾಮನು ಧನುಸ್ಸನ್ನೂ ಮಹತ್ತ್ವಪೂರ್ಣವಾದ ಬಾಣಗಳನ್ನೂ ಎತ್ತಿಕೊಂಡು ಧನುಸ್ಸಿನ ಟೇಂಕಾರಶಬ್ದದಿಂದ ಎಲ್ಲ ದಿಕ್ಕುಗಳನ್ನೂ ತುಂಬುತ್ತಾ ಅದೇ ಸ್ಥಳದಲ್ಲಿ ನಿಂತಿದ್ದನು.

ಯುದ್ಧವನ್ನು ನೋಡುವ ಆಕಾಂಕ್ಷೆಯಿಂದ ಗಂಧರ್ವರಿಂದೊಡಗೂಡಿದ ದೇವತೆಗಳೂ, ಸಿದ್ಧ-ಚಾರಣರೂ ಮತ್ತು ಇನ್ನೂ ಅನೇಕಮಹಾತ್ಮರೂ ಅಲ್ಲಿಗೆ ಆಗಮಿಸಿದರು. ಋಷಿಗಳೂ, ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾಗಿದ್ದ ಬ್ರಹ್ಮರ್ಷಿಗಳೂ, ಪುಣ್ಯಕರ್ಮಗಳನ್ನು ಮಾಡಿದ ಮಹಾತ್ಮರೂ ಜೊತೆಗೂಡಿ ಅಲ್ಲಿಗೆ ಬಂದು ಒಂದೆಡೆಯಲ್ಲಿ ಸೇರಿ ಪರಸ್ಪರವಾಗಿ ಮಾತನಾಡಿಕೊಂಡರು :

ಸ್ವಸ್ತಿ ಗೋಬ್ರಾಹ್ಮಣಾನಾಂ ಚ ಲೋಕಾನಾಂ ಯೇಽಭಿಸಂಗತಾಃ ।
ಜಯತಾಂ ರಾಘವೋ ಯುದ್ಧೇ ಪೌಲಸ್ತ್ಯಾನ್ರಜನೀಚರಾನ್ ।
ಚಕ್ರಹಸ್ತೋ ಯಥಾ ಯುದ್ಧೇ ಸರ್ವಾನಸುರಪುಂಗವಾನ್ ॥೨೦॥

" ಗೋ-ಬ್ರಾಹ್ಮಣರಿಗೆ ಮಂಗಳವಾಗಲಿ. ಲೋಕಗಳಿಗೆ ಯಾರು ಅನುಕೂಲರಾಗಿರುವರೋ ಅವರಿಗೂ ಮಂಗಳವಾಗಲಿ. ಚಕ್ರಧರನಾದ ಮಹಾವಿಷ್ಣುವು ಎಲ್ಲ ಅಸುರಶ್ರೇಷ್ಠರನ್ನೂ ಪರಾಜಯಗೊಳಿಸಿದಂತೆ-ಯುದ್ಧದಲ್ಲಿ ಶ್ರೀರಾಮನು ಪುಲಸ್ತ್ಯವಂಶದವರಿಗೆ ಸೇರಿದ ಎಲ್ಲ ರಾಕ್ಷಸರನ್ನೂ ಜಯಿಸಲಿ. "

ಹೀಗೆ ರಾಮನಿಗೆ ಮಂಗಳಾಶಾಸನೆಯನ್ನು ಮಾಡಿ ಪುನಃ ಒಬ್ಬರನ್ನೊಬ್ಬರು ಅವಲೋಕಿಸುತ್ತಾ ಮಾತನಾಡಿಕೊಂಡರು :

" ಭಯಂಕರಕರ್ಮಿಗಳಾದ ರಾಕ್ಷಸರ ಸಂಖ್ಯೆಯು ಹದಿನಾಲ್ಕು ಸಾವಿರವಿದೆ. ಇತ್ತ ಕಡೆ ಧರ್ಮಾತ್ಮನಾದ ಶ್ರೀರಾಮನೊಬ್ಬನೇ ಇದ್ದಾನೆ. ಹೀಗಿರುವಾಗ ಯುದ್ಧವು ನಡೆಯುವ ಬಗೆ ಹೇಗೆ ? "

ಹೀಗೆ ಮಾತನಾಡಿಕೊಳ್ಳುತ್ತಾ ರಾಜರ್ಷಿಗಳೂ, ಸಿದ್ಧರೂ, ವಿದ್ಯಾಧರರೇ ಮೊದಲಾದ ದೇವಗಣಗಳೂ, ಬ್ರಾಹ್ಮಣಶ್ರೇಷ್ಠರೂ, ವಿಮಾನಗಳಲ್ಲಿದ್ದ ದೇವತೆಗಳೂ ಕುತೂಹಲಾವಿಷ್ಟರಾಗಿ ಅಲ್ಲಿಯೇ ನಿಂತಿದ್ದರು.

ಸಂಗ್ರಾಮಭೂಮಿಯ ಮುಂಭಾಗದಲ್ಲಿ ಶತ್ರುಗಳನ್ನೆದುರಿಸಿ ಏಕಾಕಿಯಾಗಿ ನಿಂತಿದ್ದ, ದಿವ್ಯವಾದ ತೇಜಸ್ಸಿನಿಂದ ಆವಿಷ್ಟನಾಗಿದ್ದ ಶ್ರೀರಾಮನನ್ನು ಕಂಡು ಸರ್ವಪ್ರಾಣಿಗಳೂ ಭಯದಿಂದ ದುಃಖಿಸಿದುವು. ಯಾವ ಕಾರ್ಯವನ್ನೇ ಆಗಲೀ ಆಯಾಸಪಡದೇ ಮಾಡುವ ಶ್ರೀರಾಮನ ಅಪ್ರತಿಮ

ವಾದ ಸುಂದರರೂಪವು ಆ ಸಮಯದಲ್ಲಿ ಕೋಪಗೊಂಡ ಪಿನಾಕಪಾಣಿಯಾದ ರುದ್ರನ ರೂಪದಂತೆಯೇ ಪರಿವರ್ತಿತವಾಯಿತು.

ಅನಂತರದಲ್ಲಿ ಕವಚಾಯುಧ-ಧ್ವಜಗಳಿಂದ ಕೂಡಿದ್ದ, ಗಂಭೀರವಾಗಿ ಗರ್ಜಿಸುತ್ತಿದ್ದ ಭಯಂಕರವಾದ ರಾಕ್ಷಸಸೈನ್ಯವು ಸುತ್ತಲೂ ಕಾಣಿಸಿಕೊಂಡಿತು. 'ಖರರಾಜನಿಗೆ ಜಯವಾಗಲಿ' 'ಶತ್ರುವನ್ನು ಈಗಲೇ ಧ್ವಂಸಮಾಡೋಣ' 'ರಾಕ್ಷಸರಿಗೆ ಜಯವಾಗಲಿ' – ಇವೇ ಮುಂತಾಗಿ ವೀರಾಲಾಪಗಳನ್ನು ಮಾಡುತ್ತಾ ಪರಸ್ಪರವಾಗಿ ಗರ್ಜನೆಮಾಡುತ್ತಿದ್ದ, ಧನುಸ್ಸುಗಳನ್ನು ಟೇಂಕರಿಸುತ್ತಲೂ, ಬಾರಿ-ಬಾರಿಗೂ ಹೂಂಕರಿಸುತ್ತಲೂ, ಅತಿಶಯವಾಗಿ ಶಬ್ದಮಾಡುತ್ತಲೂ, ದುಂದುಭಿಗಳನ್ನು ಬಾರಿಸುತ್ತಲೂ ಇದ್ದ ರಾಕ್ಷಸರ ಘೋರನಿನಾದವು ಆ ಅರಣ್ಯವನ್ನೇ ತುಂಬಿಬಿಟ್ಟಿತು. ಆ ಶಬ್ದದಿಂದ ಭಯಗೊಂಡ ಸಿಂಹವೇ ಮೊದಲಾದ ಕಾಡುಮೃಗಗಳು ಭಯಗೊಂಡು ತಿರುಗಿಯೂ ನೋಡದೇ ಶಬ್ದವಿಲ್ಲದ ಕಡೆಗೆ ಓಡಿಹೋದುವು.

ನಾನಾವಿಧವಾದ ಆಯುಧಗಳನ್ನು ಹಿಡಿದಿದ್ದ, ಗಹನವಾಗಿದ್ದ, ಮಹಾಸಾಗರದಂತೆ ವಿಶಾಲವಾಗಿದ್ದ, ಮಹಾವೇಗಯುಕ್ತವಾಗಿದ್ದ ಆ ರಾಕ್ಷಸಸೈನ್ಯವು ಶ್ರೀರಾಮನನ್ನು ಸುತ್ತುವರಿದು ನಿಂತಿತು. ರಣಪಂಡಿತನಾದ ಶ್ರೀರಾಮನು ಕೂಡ ಸುತ್ತಲೂ ಒಮ್ಮೆ ಕಣ್ಣುಗಳನ್ನು ಹಾಯಿಸಿ ಸಾಗರೋಪಮವಾದ ಖರನ ರಾಕ್ಷಸಸೈನ್ಯವನ್ನು ನೋಡಿ ಅದರೊಡನೆ ಯುದ್ಧಮಾಡಲು ಎದುರಾಗಿ ಹೋದನು. ಕೂಡಲೇ ಶ್ರೀರಾಮನು ಬತ್ತಳಿಕೆಯಿಂದ ಬಾಣಗಳನ್ನು ತೆಗೆದುಕೊಂಡು ಧನುಸ್ಸಿನಲ್ಲಿ ಆರೋಪಿಸಿ ಅವರ ನಾಣನ್ನು ಸುದೀರ್ಘವಾಗಿ ಸೆಳೆದು ಸರ್ವರಾಕ್ಷಸರ ವಧೆಯ ಸಲುವಾಗಿ ತೀವ್ರತರವಾದ ಕೋಪವನ್ನು ಬರಮಾಡಿಕೊಂಡನು.* ಅನಂತರ ಶ್ರೀರಾಮನು ಪರಮಕ್ರುದ್ಧನಾಗಿ–ಯುಗದ ಅಂತ್ಯದಲ್ಲಿ ಹುಟ್ಟುವ ಪ್ರಳಯಾಗ್ನಿಯಂತೆಯೇ ಜಾಜ್ವಲ್ಯಮಾನನಾಗಿ ಪ್ರಜ್ವಲಿಸುತ್ತಾ ಯಾರಿಂದಲೂ ಕಣ್ಣೆತ್ತಿ ನೋಡಲೂ ಅಸಾಧ್ಯನಾದನು. ಪ್ರಖರವಾದ ತೇಜಸ್ಸಿನಿಂದ ಕೂಡಿದ್ದ ಶ್ರೀರಾಮ

*ಕ್ರೋಧಂ ಆಹಾರಯತ್ – ಜಿತಕ್ರೋಧನಾದ ರಾಮನ ಬಳಿಗೆ ಕೋಪವು ತಾನಾಗಿಯೇ ಬರುವುದಿಲ್ಲ. ಕರೆದಾಗ ಮಾತ್ರವೇ ಬರಬೇಕು. ರಾಕ್ಷಸರ ಧ್ವಂಸಕ್ಕಾಗಿ ಕೋಪವು ಅತ್ಯಾವಶ್ಯಕ. ಆದುದರಿಂದ ಕೋಪವನ್ನು ಸ್ವೇಚ್ಛೆಯಿಂದ ಬರಮಾಡಿಕೊಂಡನು.

ನನ್ನು ನೋಡಿ ವನದೇವತೆಗಳೂ ಓಡತೊಡಗಿದರು. ಅತ್ಯಂತರುಷ್ಟ ನಾಗಿದ್ದ ಶ್ರೀರಾಮನ ಆಗಿನ ಘೋರರೂಪವು–ಹಿಂದೆ ದಕ್ಷನ ಯಜ್ಞವನ್ನು ವಿನಾಶಮಾಡಲು ಉದ್ಯುಕ್ತನಾಗಿದ್ದ ಪಿನಾಕಪಾಣಿಯಾದ ರುದ್ರನ ರೂಪ ದಂತೆಯೇ ಕಾಣಿಸುತ್ತಿದ್ದಿತು. ಯುದ್ಧಭೂಮಿಯ ಮುಂಭಾಗದಲ್ಲಿ ಏಕಾಕಿ ಯಾಗಿ ರಾಕ್ಷಸರನ್ನು ಎದುರಿಸಿ ನಿಂತಿದ್ದ ತೇಜೋವಿಶಿಷ್ಟನಾಗಿದ್ದ ಶ್ರೀರಾಮ ನನ್ನು ನೋಡಿ ಅರಣ್ಯದಲ್ಲಿದ್ದ ಸಕಲಪ್ರಾಣಿಗಳೂ ಭಯದಿಂದ ಪೀಡಿಸ ಲ್ಪಟ್ಟು ಓಡಿಹೋದುವು.

ಬಿಲ್ಲುಗಳಿಂದಲೂ, ಆಭರಣಗಳಿಂದಲೂ, ಧ್ವಜಗಳಿಂದಲೂ, ಅಗ್ನಿಯ ವರ್ಣಕ್ಕೆ ಸಮಾನವಾದ ವರ್ಣದಿಂದಲೂ ಕೂಡಿದ್ದ, ಕವಚಗಳಿಂದಲೂ ಸನ್ನದ್ಧವಾಗಿದ್ದ ರಾಕ್ಷಸರ ಆ ಸೈನ್ಯವು – ಸೂರ್ಯೋದಯಕಾಲದಲ್ಲಿನ ಕಾರ್ಮುಗಿಲಿನ ರಾಶಿಯಂತೆ ಪ್ರಕಾಶಿಸುತ್ತಿದ್ದಿತು.

೨೪ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೫ನೆಯ ಸರ್ಗ

## ಖರನ ಕಡೆಯ ರಾಕ್ಷಸರಿಂದ ಶ್ರೀರಾಮನ ಆಕ್ರಮಣ: ಶ್ರೀರಾಮನಿಂದ ರಾಕ್ಷಸರ ಸಂಹಾರ

**ಅವಷ್ಟಬ್ಧಧನುಂ ರಾಮಂ ಕ್ರುದ್ಧಂ ತಂ ರಿಪುಘಾತಿನಮ್ ।**
**ದದರ್ಶಾಶ್ರಮಮಾಗಮ್ಯ ಖರಃ ಸಹ ಪುರಃಸರೈಃ ॥೧॥**

ಖರನು ತನ್ನ ಮುಂದಾಳುಗಳೊಡನೆ ಆಶ್ರಮದ ಬಳಿಗೆ ಬಂದು ಧನುಸ್ಸನ್ನು ಹಿಡಿದು ನಿಂತಿದ್ದ, ಶತ್ರುಹಂತಕನಾದ, ಕ್ರುದ್ಧನಾಗಿದ್ದ ರಾಮನನ್ನು ನೋಡಿದನು. ಹಾಗೆ ನಿಂತಿದ್ದ ಶ್ರೀರಾಮನನ್ನು ನೋಡಿ ಖರನು ಕರ್ಕಶವಾದ ಧ್ವನಿಯಿಂದ ಕೂಡಿದ್ದ ಬಾಣಸಹಿತವಾದ ಧನುಸ್ಸನ್ನು ಕೈಗೆತ್ತಿಕೊಂಡು ರಾಮನಿಗೆದುರಾಗಿ ರಥವನ್ನು ನಿಲ್ಲಿಸುವಂತೆ ಸಾರಥಿಗೆ ಹೇಳಿ ದನು. ಅವನ ಆಜ್ಞಾನುಸಾರವಾಗಿ ಸಾರಥಿಯು–ಏಕಾಕಿಯಾಗಿ ನಿಂತು ಧನುಸ್ಸನ್ನು ಹಿಂದಕ್ಕೂ-ಮುಂದಕ್ಕೂ ಓಲಾಡಿಸುತ್ತಿದ್ದ ಶ್ರೀರಾಮನ ಬಳಿಗೆ ಹೋಗುವಂತೆ ಕುದುರೆಗಳನ್ನು ಪ್ರಚೋದಿಸಿದನು. ಖರನು ಶ್ರೀರಾಮನ

ಸಮೀಪಕ್ಕೆ ಹೋದುದನ್ನು ಕಂಡು ಮಂತ್ರಿಗಳು ಗಟ್ಟಿಯಾಗಿ ಗರ್ಜನೆ ಮಾಡುತ್ತಾ ಅವನನ್ನು ಎಲ್ಲ ಕಡೆಗಳಿಂದಲೂ ಸುತ್ತುವರಿದು ನಿಂತರು. ಎಲ್ಲ ರಾಕ್ಷಸರ ಮಧ್ಯದಲ್ಲಿ ರಥದಲ್ಲಿ ಕುಳಿತಿದ್ದ ಖರನು-ನಕ್ಷತ್ರಗಳ ಮಧ್ಯಭಾಗದಲ್ಲಿ ಆಗತಾನೇ ಉದಯಿಸಿದ ಅಂಗಾರಕಗ್ರಹದಂತೆಯೇ ಪ್ರಕಾಶಿಸುತ್ತಿದ್ದನು.

ಅನಂತರ ಖರನು ಅಪ್ರತಿಮವಾದ ತೇಜಸ್ಸಿನಿಂದ ಕೂಡಿದ್ದ ಶ್ರೀರಾಮನನ್ನು ಸಾವಿರಾರು ಬಾಣಗಳಿಂದ ಪ್ರಹರಿಸಿ ಗಟ್ಟಿಯಾಗಿ ಗರ್ಜಿಸಿದನು. ಕ್ರುದ್ಧರಾಗಿದ್ದ ರಾಕ್ಷಸರೂ ಭಯಂಕರವಾದ ಧನುಸ್ಸನ್ನು ಹಿಡಿದಿದ್ದ, ಜಯಿಸಲು ಅಸಾಧ್ಯನಾದ ಶ್ರೀರಾಮನ ಮೇಲೆ ನಾನಾವಿಧವಾದ ಶಸ್ತ್ರಗಳ ಮಳೆಗರೆದರು. ರೋಷಾವಿಷ್ಟರಾಗಿದ್ದ ಆ ರಾಕ್ಷಸರು ಆಹವಶೂರನಾದ ಶ್ರೀರಾಮನನ್ನು ಮುದ್ಗರಗಳಿಂದಲೂ, ಪಟ್ಟಿಶಗಳಿಂದಲೂ, ಶೂಲಗಳಿಂದಲೂ, ಪ್ರಾಸಗಳಿಂದಲೂ, ಖಡ್ಗಗಳಿಂದಲೂ, ಗಂಡುಗೊಡಲಿಗಳಿಂದಲೂ ಏಕಕಾಲದಲ್ಲಿ ಪ್ರಹರಿಸಿದರು. ಮೇಘಸದೃಶರಾಗಿದ್ದ, ಮಹಾಕಾಯರಾಗಿದ್ದ, ಮಹಾಬಲಿಷ್ಠರಾಗಿದ್ದ ಆ ರಾಕ್ಷಸರು ರಥಗಳಲ್ಲಿಯೂ, ಕುದುರೆಗಳ ಮೇಲೂ, ಪರ್ವತಶಿಖರಗಳಂತಿದ್ದ ಆನೆಗಳ ಮೇಲೂ ಕುಳಿತು ಶ್ರೀರಾಮನನ್ನು ಸಂಹರಿಸುವ ಇಚ್ಛೆಯಿಂದ ಅವನಿದ್ದೆಡೆಗೆ ಧಾವಿಸಿ ಬಂದರು. ಆ ರಾಕ್ಷಸಗಣಗಳು-ದೊಡ್ಡ-ದೊಡ್ಡ ಮೇಘಗಳು ಜಲಧಾರೆಗಳನ್ನು ಸುರಿಸುತ್ತಾ ಪರ್ವತರಾಜನನ್ನು ಮುಚ್ಚಿಬಿಡುವಂತೆ-ಶ್ರೀರಾಮನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದುವು. ಕ್ರೂರವಾದ ದೃಷ್ಟಿಯುಳ್ಳ ರಾಕ್ಷಸಸೈನಿಕರಿಂದ ಪರಿವೃತನಾಗಿದ್ದ ಶ್ರೀರಾಮನು-ಪ್ರದೋಷಾದಿ ತಿಥಿಗಳಲ್ಲಿ ಭೂತಗಣಗಳಿಂದ ಪರಿವೃತನಾದ ಮಹಾದೇವನಂತೆಯೇ ಪ್ರಕಾಶಿಸಿದನು. ರಾಕ್ಷಸರಿಂದ ಬಿಡಲ್ಪಟ್ಟ ಸಮಸ್ತವಾದ ಶಸ್ತ್ರಗಳನ್ನೂ ಶ್ರೀರಾಮನು-ಸಮುದ್ರವು ನೂರಾರು ನದಿಗಳನ್ನು ಪ್ರತಿಗ್ರಹಿಸುವಂತೆ-ಬಾಣಗಳ ಪ್ರಯೋಗದಿಂದ ಎದುರಿಸಿ ಸ್ವೀಕರಿಸಿದನು. (ರಾಕ್ಷಸರು ಬಿಟ್ಟ ಬಾಣಗಳೆಲ್ಲವನ್ನೂ ತನ್ನ ಬಾಣಗಳಿಂದ ತಡೆದನು.) ರಾಕ್ಷಸರ ಘೋರವಾದ ಶಸ್ತ್ರಪ್ರಹಾರಗಳಿಂದ ಶ್ರೀರಾಮನು ಗಾಯಗೊಂಡರೂ-ಮಹಾಪರ್ವತವು ಉರಿಯುತ್ತಿರುವ ನೂರಾರು ಸಿಡಿಲುಗಳ ಬಡಿತದಿಂದಲೂ ವಿಚಲಿತವಾಗದೇ ಸುಸ್ಥಿರವಾಗಿರುವಂತೆ-ಸ್ಥಿರನಾಗಿಯೇ ನಿಂತಿದ್ದನು. ವ್ಯಥೆಗೊಳ್ಳಲಿಲ್ಲ. ರಾಕ್ಷಸರಿಂದ ಸತತವಾಗಿ ಪ್ರಹರಿಸಲ್ಪಡುತ್ತಿದ್ದ ರಾಘವನು ಅಂಗಾಂಗಗಳಲ್ಲಿಯೂ

ಗಾಯಗೊಂಡಿದ್ದು ರಕ್ತಸಿಕ್ತನಾಗಿ–ಸಂಧ್ಯಾಕಾಲದ ಮೋಡಗಳಿಂದ ಸಮಾವೃತನಾದ ಸೂರ್ಯನಂತೆಯೇ ಕಾಣುತ್ತಿದ್ದನು. ಏಕಾಕಿಯಾದ ಶ್ರೀರಾಮನು ಬಹುಸಂಖ್ಯಾತರಾದ ರಾಕ್ಷಸರಿಂದ ಸುತ್ತುವರಿಯಲ್ಪಟ್ಟಿರುವುದನ್ನು ಕಂಡು ಆಕಾಶದಲ್ಲಿದ್ದ ದೇವ-ಗಂಧರ್ವರೂ, ಸಿದ್ಧರೂ, ಪರಮರ್ಷಿಗಳೂ ವಿಷಾದಿಸಿದರು. ಅನಂತರ ಶ್ರೀರಾಮನು ಬಹಳ ಕ್ರುದ್ಧನಾಗಿ ಬಿಡುವೇ ಇಲ್ಲದ ಬಾಣಪ್ರಯೋಗದಿಂದ ಧನುಸ್ಸನ್ನು ಚಕ್ರಾಕಾರವಾಗಿ ಮಾಡಿಕೊಂಡು ನೂರಾರು-ಸಾವಿರಾರು ಬಾಣಗಳನ್ನು ರಾಕ್ಷಸರ ಮೇಲೆ ಸುರಿಸಿದನು. ತಡೆಯಲು ಅಸಾಧ್ಯವಾದ, ಸಹಿಸಿಕೊಳ್ಳಲಾಗದ, ಕಾಲಪಾಶಕ್ಕೆ ಸಮಾನವಾಗಿದ್ದ, ಕಣಪಕ್ಷಿಯ ರೆಕ್ಕೆಗಳನ್ನು ಹೊಂದಿದ್ದ, ಸುವರ್ಣಭೂಷಿತವಾಗಿದ್ದ ಅನೇಕಾನೇಕ ಬಾಣಗಳನ್ನು ಸ್ವಲ್ಪವೂ ಪ್ರಯಾಸವಿಲ್ಲದೇ ಲೀಲೆಯಿಂದ ರಾಕ್ಷಸರ ಮೇಲೆ ಪ್ರಯೋಗಿಸಿದನು. ಹಾಗೆ ಶತ್ರುಸೈನ್ಯದ ಮೇಲೆ ಬಿಡಲ್ಪಟ್ಟ ಆ ಬಾಣಗಳು ಯಮಧರ್ಮನಿಂದ ಕಲ್ಪಿತವಾದ ಕಾಲಪಾಶಗಳೋಪಾದಿಯಲ್ಲಿ ರಾಕ್ಷಸರ ಪ್ರಾಣಗಳನ್ನು ಸೆಳೆದು ತರುತ್ತಿದ್ದುವು. ಶ್ರೀರಾಮನಿಂದ ಬಿಡಲ್ಪಡುತ್ತಿದ್ದ ಆ ಬಾಣಗಳು ಎದುರಾಗಿ ನಿಂತು ಯುದ್ಧಮಾಡುತ್ತಿದ್ದ ರಾಕ್ಷಸರ ದೇಹಗಳನ್ನು ಭೇದಿಸಿ ಒಳಹೊಕ್ಕು, ರಕ್ತದಲ್ಲಿ ಮುಳುಗಿ ಹೊರಬಂದು, ಅಂತರಿಕ್ಷಕ್ಕೆ ಚಿಮ್ಮಿ ಪ್ರದೀಪ್ತವಾದ ಅಗ್ನಿಯ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದುವು. ರಾಕ್ಷಸರ ಪ್ರಾಣಾಪಹಾರಿಗಳಾದ, ಅತ್ಯುಗ್ರವಾದ, ಅಸಂಖ್ಯಾತವಾದ ಬಾಣಗಳು ಶ್ರೀರಾಮನ ಧನುರ್ಮಂಡಲದಿಂದ ಸತತವಾಗಿ ಹೊರಬರುತ್ತಲೇ ಇದ್ದುವು. ಶ್ರೀರಾಮನು ಅತ್ಯುಗ್ರವಾದ ಆ ಬಾಣಗಳಿಂದ ರಾಕ್ಷಸರ ಧನುಸ್ಸುಗಳನ್ನೂ, ಧ್ವಜಾಗ್ರಗಳನ್ನೂ, ಕವಚಗಳನ್ನೂ, ಶಿರಸ್ಸುಗಳನ್ನೂ, ತೋಳ್ಬಳೆಗಳಿಂದ ಶೋಭಿತವಾದ ತೋಳುಗಳನ್ನೂ, ಆನೆಯ ಸೊಂಡಿಲಿಗೆ ಸಮಾನವಾದ ತೊಡೆಗಳನ್ನೂ ನೂರಾರು-ಸಾವಿರಾರು ಸಂಖ್ಯೆಯಲ್ಲಿ ಕತ್ತರಿಸಿದನು. ಶ್ರೀರಾಮನ ಧನುಸ್ಸಿನ ಹಗ್ಗದಿಂದ ವೇಗವಾಗಿ ಹೊರಬರುತ್ತಿದ್ದ ಬಾಣಗಳು ರಥಕ್ಕೆ ಹೂಡಲ್ಪಟ್ಟಿದ್ದ, ಸುವರ್ಣಮಯವಾದ ಜೀನುಗಳನ್ನು ಹೊಂದಿದ್ದ ಕುದುರೆಗಳನ್ನೂ, ಸಾರಥಿಗಳನ್ನೂ, ಆನೆಗಳನ್ನೂ, ಗಜಾರೋಹಿಗಳನ್ನೂ, ಅಶ್ವಾರೋಹಿಗಳನ್ನೂ ಕತ್ತರಿಸಿದುವು ಮತ್ತು ಭೇದಿಸಿದುವು. ಆ ಮಹಾಯುದ್ಧದಲ್ಲಿ ಭಾಗವಹಿ

ಸಿದ್ಧ ರಾಕ್ಷಸರ ಪದಾತಿಸೈನ್ಯವೆಲ್ಲವನ್ನೂ ಶ್ರೀರಾಮನು ಸಂಹರಿಸಿ ಯಮಾಲಯಕ್ಕೆ ಕಳುಹಿಸಿದನು. ರಾಮನು ಪ್ರಯೋಗಿಸುತ್ತಿದ್ದ ನಾಲೀಕಗಳಿಂದಲೂ, ತೀಕ್ಷ್ಣವಾದ ತುದಿಗಳುಳ್ಳ ಬಾಣಗಳಿಂದಲೂ, ವಿಕರ್ಣಿಗಳಿಂದಲೂ ಸತತವಾಗಿ ಕತ್ತರಿಸಲ್ಪಡುತ್ತಿದ್ದ ರಾಕ್ಷಸರು ಗಟ್ಟಿಯಾಗಿ ಆರ್ತನಾದಗಳನ್ನು ಮಾಡುತ್ತಿದ್ದರು. ಆ ರಾಕ್ಷಸಸೈನ್ಯವು ಮರ್ಮಸ್ಥಳಗಳನ್ನು ಭೇದಿಸಲು ಸಮರ್ಥವಾದ ವಿಧ-ವಿಧವಾದ ಶ್ರೀರಾಮನ ಬಾಣಗಳಿಂದ ಪೀಡಿಸಲ್ಪಟ್ಟು ಕಾಳ್ಗಿಚ್ಚಿನಿಂದ ಭಸ್ಮವಾಗಿ ಹೋದ ಅರಣ್ಯದಂತಾಯಿತು. ಆ ಸೈನಿಕರಿಗೆ ಸುಖವೆಂಬುದೇ ಇಲ್ಲವಾಯಿತು.

ಭೀಮಬಲರಾದ ಶೂರರಾದ ಕೆಲವರು ರಾಕ್ಷಸರು ಶ್ರೀರಾಮನ ಬಾಣಗಳ ಪ್ರಹಾರಗಳಿಂದ ಪರಮಕ್ರುದ್ಧರಾಗಿ ಪ್ರಾಸಗಳನ್ನೂ, ಶೂಲಗಳನ್ನೂ, ಗಂಡುಗೊಡಲಿಗಳನ್ನೂ ಶ್ರೀರಾಮನ ಮೇಲೆ ರಭಸದಿಂದ ಪ್ರಯೋಗಿಸಿದರು. ಮಹಾಬಾಹುವಾದ ವೀರನಾದ ಶ್ರೀರಾಮನು ಆ ಎಲ್ಲ ಶಸ್ತ್ರಗಳನ್ನೂ ಬಾಣಗಳಿಂದ ತಡೆದು ಮರುಕ್ಷಣದಲ್ಲಿಯೇ ಆ ಎಲ್ಲ ರಾಕ್ಷಸರ ತಲೆಗಳನ್ನೂ ಕತ್ತರಿಸಿ ಪ್ರಾಣಾಪಹಾರಮಾಡಿದನು.

ಗರುಡನ ರೆಕ್ಕೆಗಳ ಗಾಳಿಯಿಂದ ಬುಡಮೇಲಾಗಿ ಮಾಡಲ್ಪಟ್ಟ ಮರಗಳಂತೆ–ಶಿರಸ್ಸುಗಳನ್ನು ಕಳೆದುಕೊಂಡ ಆ ರಾಕ್ಷಸರು ಕೆಳಗುರುಳಿದರು. ಅಳಿದುಳಿದಿದ್ದ ರಾಕ್ಷಸರೂ ಶ್ರೀರಾಮನ ಬಾಣಗಳಿಂದ ಪೀಡಿತರಾಗಿ ವಿಷಣ್ಣರಾಗಿ ಪ್ರಾಣಗಳ ರಕ್ಷಣೆಗಾಗಿ ಖರನ ಸಮೀಪಕ್ಕೆ ಧಾವಿಸಿದರು.

ಸೇನಾಪತಿಯಾದ ದೂಷಣನು ಶರಣಾರ್ಥಿಗಳಾಗಿ ಬಂದ ರಾಕ್ಷಸರೆಲ್ಲರನ್ನೂ ಸಮಾಧಾನಗೊಳಿಸಿ, ಧನುಸ್ಸನ್ನೆತ್ತಿಕೊಂಡು–ಕ್ರುದ್ಧನಾದ ಯಮಧರ್ಮನು ರುದ್ರನ ಬಳಿಗೆ ಹೋಗುವಂತೆ–ಅತ್ಯಂತಕ್ರುದ್ಧನಾಗಿ ಕ್ರುದ್ಧನಾಗಿದ್ದ ಶ್ರೀರಾಮನ ಬಳಿಗೆ ಧಾವಿಸಿದನು. ದೂಷಣನ ಆಶ್ರಯವನ್ನು ಪಡೆದು ಭಯವನ್ನು ತೊರೆದ ಆ ರಾಕ್ಷಸರೆಲ್ಲರೂ ಸಾಲ-ತಾಲ-ಶಿಲಾಯುಧರಾಗಿ ಪುನಃ ರಾಮನನ್ನು ಆಕ್ರಮಿಸಿದರು. ಮಹಾಬಲಿಷ್ಠರಾಗಿದ್ದ ಅವರೆಲ್ಲರೂ ಶೂಲ-ಮುದ್ಗರ-ಪಾಶಗಳನ್ನು ಕೈಗಳಲ್ಲಿ ಹಿಡಿದು ಯುದ್ಧಮಾಡುತ್ತಿದ್ದರು. ಕೆಲವರು ಬಾಣಗಳ ಮಳೆಯನ್ನೇ ಸೃಷ್ಟಿಸಿ ರಾಮನ ಮೇಲೆ ಸುರಿ

ಸುತ್ತಿದ್ದರು. ಕೆಲವರು ಶಸ್ತ್ರಗಳ ಮಳೆಯನ್ನೇ ಸೃಷ್ಟಿಸಿ ರಾಮನ ಮೇಲೆ ಸುರಿಸುತ್ತಿದ್ದರು. ಕೆಲವರು ಅರಣ್ಯದಲ್ಲಿದ್ದ ವೃಕ್ಷಗಳನ್ನು ಕಿತ್ತು ರಾಮನ ಮೇಲೆ ಅಪ್ಪಳಿಸುತ್ತಿದ್ದರು. ಕೆಲವರು ರಾಮನ ಮೇಲೆ ಕಲ್ಲಿನ ಮಳೆಗರೆಯು ತ್ತಿದ್ದರು. ರಾಮ-ರಾಕ್ಷಸರ ಆ ಯುದ್ಧವು ಅದ್ಭುತವಾಗಿದ್ದಿತು. ಭಯಂಕರ ವಾಗಿದ್ದಿತು. ರೋಮಾಂಚಕಾರಿಯಾಗಿದ್ದಿತು. ಪುನಃ ರಾಮನಿಗೂ ರಾಕ್ಷಸ ರಿಗೂ ಅತ್ಯಂತಭಯಂಕರವಾದ ಯುದ್ಧವು ಪ್ರಾರಂಭವಾಯಿತು. ಪರಮ ಕ್ರುದ್ಧರಾಗಿದ್ದ ರಾಕ್ಷಸರು ಎಲ್ಲ ಕಡೆಗಳಿಂದಲೂ ರಾಮನನ್ನು ಘೇರಾ ಯಿಸಿಕೊಂಡು ಬಹಳವಾಗಿ ಪೀಡಿಸತೊಡಗಿದರು. ಆ ಸಮಯದಲ್ಲಿ ಶ್ರೀರಾಮನು ದಿಕ್ಕುಗಳಲ್ಲಿಯೂ ಉಪದಿಕ್ಕುಗಳಲ್ಲಿಯೂ ರಾಕ್ಷಸರು ಘೇರಾ ಯಿಸಿರುವುದನ್ನು ನೋಡಿದನು. ಎಲ್ಲ ಕಡೆಗಳಿಂದಲೂ ಆ ರಾಕ್ಷಸರು ಅವಿರತ ವಾಗಿ ಬಿಡುತ್ತಿದ್ದ ಬಾಣಗಳಿಂದ ಶ್ರೀರಾಮನು ಮುಚ್ಚಿಹೋಗಿದ್ದನು. ಅದ ರಿಂದ ಕ್ರುದ್ಧನಾದ ಶ್ರೀರಾಮನು ಭಯಂಕರವಾಗಿ ಸಿಂಹನಾದವನ್ನು ಮಾಡುತ್ತಾ ಅತ್ಯಂತಪ್ರಕಾಶಮಾನವಾಗಿದ್ದ ಗಂಧರ್ವಾಸ್ತ್ರವನ್ನು ರಾಕ್ಷಸರ ಮೇಲೆ ಪ್ರಯೋಗಿಸಿದನು. ಒಡನೆಯೇ ಅವನ ಧನುರ್ಮಂಡಲದಿಂದ ಸಾವಿ ರಾರು ಬಾಣಗಳು ಹೊರಬಂದುವು. ಆ ಬಾಣಗಳಿಂದ ಶ್ರೀರಾಮನು ಹತ್ತು ದಿಕ್ಕುಗಳನ್ನೂ ತುಂಬಿಬಿಟ್ಟನು.

ಆದದಾನಂ ಶರಾನ್ಘೋರಾನ್ವಿಮುಞ್ಚನ್ತಂ ಶರೋತ್ತಮಾನ್ ।
ವಿಕರ್ಷಮಾಣಂ ಪಶ್ಯನ್ತಿ ರಾಕ್ಷಸಾಸ್ತೇ ಶರಾರ್ದಿತಾಃ ॥೩೮॥

ಶ್ರೀರಾಮನು ಘೋರವಾದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಕೊಳ್ಳುವುದನ್ನಾಗಲೀ-ಅವುಗಳನ್ನು ಧನುಸ್ಸಿನಲ್ಲಿ ಆರೋಪಿಸಿ ಸೆಳೆದು ಬಿಡು ತ್ತಿದ್ದುದನ್ನಾಗಲೀ-ಶರಪೀಡಿತರಾದ ರಾಕ್ಷಸರು ಕಾಣುತ್ತಿರಲಿಲ್ಲ. ಶರ ಪ್ರಹಾರದ ಅನುಭವವು ಮಾತ್ರವೇ ಅವರಿಗಾಗುತ್ತಿದ್ದಿತು. ಬಾಣಗಳ ಆದಾನ-ಸಂಧಾನ-ಪ್ರಯೋಗಗಳಲ್ಲಿ ಅಂತಹ ಅನುಪಮವಾದ ಕೈಚಳಕವು ಶ್ರೀರಾಮನಿಗಿದ್ದಿತು.

ಶ್ರೀರಾಮನು ಬಿಟ್ಟ ಬಾಣಗಳು ಆಕಾಶವನ್ನೂ ಸೂರ್ಯನನ್ನೂ ಆವರಿಸಿದುವು. ಆ ಕಾರಣದಿಂದಾಗಿ ಬಾಣಗಳ ಸಂಬಂಧವಾದ ಅಂಧಕಾರವು ಭೂಮಿಯನ್ನು ವ್ಯಾಪಿಸಿತು. ಶ್ರೀರಾಮನ ಕಡೆಯಿಂದ ಪುಂಖಾನುಪುಂಖ

ವಾಗಿ ಬಾಣಗಳು ಬರುತ್ತಿದ್ದುದನ್ನು ನೋಡಿದರೆ ರಾಮನೊಂದೆಡೆಯಲ್ಲಿ ನಿಂತು ಬಾಣಗಳನ್ನೇ ಕಕ್ಕುತ್ತಿರುವನೋ ಎಂಬಂತೆ ಕಾಣುತ್ತಿದ್ದಿತು. ಒಂದೇ ಕಾಲದಲ್ಲಿ ಹಲವು ಕಾರ್ಯಗಳು ನಡೆದುಹೋಗುತ್ತಿದ್ದುವು. ಒಂದು ಕ್ರಿಯೆಗೂ ಮತ್ತೊಂದು ಕ್ರಿಯೆಗೂ ಅಂತರವನ್ನೇ ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಒಮ್ಮೆಲೇ ಬಾಣಗಳು ಸರಸರನೆ ರಾಕ್ಷಸರ ಮೇಲೆ ಬೀಳುತ್ತಿದ್ದುವು. ಒಮ್ಮೆಲೇ ರಾಕ್ಷಸರು ಸಾಯುತ್ತಿದ್ದರು. ಒಮ್ಮೆಲೇ ಅವರು ಭೂಮಿಯ ಮೇಲೆ ಬೀಳುತ್ತಿದ್ದರು. ಇದರಿಂದಾಗಿ ಕ್ಷಣಮಾತ್ರದಲ್ಲಿ ಭೂಮಿಯೆಲ್ಲವೂ ರಾಕ್ಷಸರ ಶವಗಳಿಂದ ತುಂಬಿಹೋಯಿತು. ರಾಮನ ಬಾಣಗಳಿಗೆ ತುತ್ತಾದ ರಾಕ್ಷಸರಲ್ಲಿ ಕೆಲವರು ಒಡನೆಯೇ ಸತ್ತುಹೋದರು. ಕೆಲವರು ಕೆಳಕ್ಕೆ ಬಿದ್ದರು. ಕೆಲವರು ಕತ್ತರಿಸಲ್ಪಟ್ಟಿದ್ದರು. ಕೆಲವರ ಅಂಗಾಂಗಗಳು ಛಿದ್ರ-ಛಿದ್ರವಾಗಿದ್ದುವು. ಕೆಲವರ ಶರೀರಗಳು ಸೀಳಿಹೋಗಿದ್ದುವು. ಇಂತಹ ದುರವಸ್ಥೆಯಲ್ಲಿದ್ದ ರಾಕ್ಷಸರು ಆ ರಣರಂಗದಲ್ಲಿ ಸಾವಿರಾರು ಸಂಖ್ಯೆಯಲ್ಲಿದ್ದರು. ಕಿರೀಟಗಳಿಂದ ಕೂಡಿದ ರಾಕ್ಷಸರ ತಲೆಗಳು ರಾಮನ ಬಾಣಗಳಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದಿದ್ದುವು. ತೋಳ್ಬಳೆಗಳೇ ಮೊದಲಾದ ಆಭರಣಗಳಿಂದ ಸಮಲಂಕೃತವಾದ ತೋಳುಗಳೂ, ನಾನಾ ವಿಧವಾದ ಸಮವಸ್ತ್ರಗಳಿಂದ ಸಮಲಂಕೃತವಾಗಿದ್ದ ತೊಡೆಗಳೂ, ಮೊಳಕಾಲುಗಳೂ ರಾಮನ ಬಾಣಗಳಿಂದ ಕತ್ತರಿಸಲ್ಪಟ್ಟು ರಾಶಿ-ರಾಶಿಯಾಗಿ ಬಿದ್ದಿದ್ದುವು. ನೂರಾರು ಕುದುರೆಗಳೂ ಆನೆಗಳೂ ಸತ್ತುಬಿದ್ದಿದ್ದುವು. ಹಲವಾರು ರಥಗಳು ನುಚ್ಚುನೂರಾಗಿದ್ದುವು. ಚಾಮರಗಳೂ, ಬೀಸಣಿಗೆಗಳೂ, ಛತ್ರಗಳೂ ಮತ್ತು ನಾನಾವಿಧವಾದ ಧ್ವಜಗಳೂ ಶ್ರೀರಾಮನ ಬಾಣಗಳಿಂದ ಕತ್ತರಿಸಲ್ಪಟ್ಟು ರಾಶಿ-ರಾಶಿಯಾಗಿ ಬಿದ್ದಿದ್ದುವು. ಶೂಲಗಳೂ, ಪಟ್ಟಿಶಗಳೂ, ಖಡ್ಗಗಳೂ, ಪ್ರಾಸಗಳೂ, ಗಂಡುಗೊಡಲಿಗಳೂ, ಶಿಲಾಯುಧಗಳೂ, ಚಿತ್ರ-ವಿಚಿತ್ರವಾದ ಬಾಣಗಳೂ ರಾಮನ ಬಾಣಗಳಿಂದ ಛಿದ್ರ-ವಿಚ್ಛಿದ್ರವಾಗಿ ಮಾಡಲ್ಪಟ್ಟು ರಾಶಿ-ರಾಶಿಯಾಗಿ ಭೂಮಿಯ ಮೇಲೆ ಬಿದ್ದಿದ್ದುವು. ರಾಕ್ಷಸರಿಗೆ ಸಂಬಂಧಿಸಿದ ಎಲ್ಲ ವಸ್ತುಗಳೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದು ಭೂಮಿಯು ಬಹಳ ಭಯಂಕರವಾಗಿ ಕಾಣುತ್ತಿದ್ದಿತು.

ವಿಶೇಷವಾಗಿ ಗಾಯಗೊಂಡಿದ್ದ ಉಳಿದ ರಾಕ್ಷಸರು ತಮ್ಮ ಜೊತೆಗಾರ

ಶೆಲ್ಲರೂ ಹತರಾಗಿರುವುದನ್ನು ನೋಡಿ ಭೀತರಾಗಿ ಆ ರಣರಂಗದಲ್ಲಿ ಪರಪುರಂಜಯನಾದ ಶ್ರೀರಾಮನನ್ನು ಆಳ್ಳಾಡಿಸಲು ಕೂಡ ಅಸಮರ್ಥರಾದರು.

೨೫ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೬ನೆಯ ಸರ್ಗ

## ಶ್ರೀರಾಮನು ದೂಷಣನೂ ಸೇರಿದಂತೆ ರಾಕ್ಷಸರೆಲ್ಲರನ್ನೂ ಸಂಹರಿಸಿದುದು

ದೂಷಣಸ್ತು ಸ್ವಕಂ ಸೈನ್ಯಂ ಹನ್ಯಮಾನಂ ನಿರೀಕ್ಷ್ಯ ಸಃ ।
ಸಂದಿದೇಶ ಮಹಾಬಾಹುರ್ಭೀಮವೇಗಾನ್ದುರಾಸದಾನ್ ।
ರಾಕ್ಷಸಾನ್ಪಞ್ಚ ಸಾಹಸ್ರಾನ್ಸಮರೇಷ್ವನಿವರ್ತಿನಃ ॥೧॥

ತನ್ನ ಸೈನಿಕರು ಅಪಾರಸಂಖ್ಯೆಯಲ್ಲಿ ಶ್ರೀರಾಮನ ಬಾಣಗಳಿಗೆ ಸಿಕ್ಕಿ ಹತರಾಗುತ್ತಿರುವುದನ್ನು ಕಂಡು ಮಹಾಬಾಹುವಾದ ದೂಷಣನು ದುರಾಸದರಾದ, ಭಯಂಕರವೇಗವುಳ್ಳ, ಯುದ್ಧದಿಂದ ಹಿಂದಿರುಗದೇ ಇರತಕ್ಕ ಐದು ಸಾವಿರ ರಾಕ್ಷಸರಿಗೆ ಯುದ್ಧಕ್ಕೆ ಸನ್ನದ್ಧರಾಗುವಂತೆ ಆದೇಶವನ್ನು ನೀಡಿದನು.

ದೂಷಣನ ಆಜ್ಞಾಧಾರಕರಾಗಿದ್ದ ಆ ಸೈನಿಕರು ಶೂಲಗಳಿಂದಲೂ, ಪಟ್ಟಿಶಗಳಿಂದಲೂ, ಕತ್ತಿಗಳಿಂದಲೂ, ಮಳೆಯಂತೆ ಸುರಿಸುತ್ತಿದ್ದ ಬಂಡೆಗಳಿಂದಲೂ, ಮರಗಳಿಂದಲೂ, ಬಾಣಗಳಿಂದಲೂ ಅವಿಚ್ಛಿನ್ನವಾಗಿ ಶ್ರೀರಾಮನನ್ನು ಪೀಡಿಸತೊಡಗಿದರು. ಮಳೆಯಂತೆ ತನ್ನ ಮೇಲೆ ಅವಿರತವಾಗಿ ಸುರಿಸಲ್ಪಡುತ್ತಿದ್ದ ಪ್ರಾಣಾಪಹಾರಕಗಳಾದ ವೃಕ್ಷಗಳನ್ನೂ ಬಂಡೆಗಳನ್ನೂ ಧರ್ಮಾತ್ಮನಾದ ಶ್ರೀರಾಮನು ತೀಕ್ಷ್ಣವಾದ ಬಾಣಗಳ ಮೂಲಕವಾಗಿ ತಡೆಯುತ್ತಿದ್ದನು. ರಾಕ್ಷಸರು ಸುರಿಸುತ್ತಿದ್ದ ಕಲ್ಲುಗಳಾಗಲೀ ಬಾಣಗಳಾಗಲೀ ತನ್ನ ಮೇಲೆ ಬೀಳದಿರುವಂತೆ ಬಾಣಗಳ ಮೂಲಕವಾಗಿ ಅವೆಲ್ಲವನ್ನೂ ಕ್ಷಣಮಾತ್ರದಲ್ಲಿ ನಿರಸನಗೊಳಿಸುತ್ತಿದ್ದನು.

ಗೂಳಿಯು ಕಣ್ಣುಮುಚ್ಚಿಕೊಂಡು ಮಳೆಯನ್ನು ಸಹಿಸಿಕೊಳ್ಳುವಂತೆ–ಪುರುಷಶ್ರೇಷ್ಠನಾದ ಶ್ರೀರಾಮನು ವೃಕ್ಷ-ಶಿಲಾ-ಬಾಣಗಳ ಮಳೆಯನ್ನು

ಸಹಿಸಿಕೊಂಡು ಸರ್ವರಾಕ್ಷಸರ ವಧೆಗಾಗಿ ಅತಿಯಾದ ಕೋಪವನ್ನು ತಾಳಿದನು.* ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೋ ಎಂಬಂತೆ ಕಾಣುತ್ತಿದ್ದ, ಅತ್ಯಂತಕ್ರುದ್ಧನಾಗಿದ್ದ ಶ್ರೀರಾಮನು ದೂಷಣನಿಂದ ಕೂಡಿರುವ ಎಲ್ಲ ಸೈನಿಕರನ್ನೂ ಬಾಣಗಳಿಂದ ಮುಚ್ಚಿಬಿಟ್ಟನು. ಅದಕ್ಕೆ ಪ್ರತಿಯಾಗಿ ಶತ್ರುದೂಷಣನಾದ ಸೇನಾಪತಿಯಾದ ದೂಷಣನೂ ಅತ್ಯಂತಕ್ರುದ್ಧನಾಗಿ ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದ ರಾಮನನ್ನು ಮುಚ್ಚಿದನು. ಅದರಿಂದ ಶ್ರೀರಾಮನು ಇನ್ನೂ ಹೆಚ್ಚು ಕೋಪಗೊಂಡು ಕತ್ತಿಯ ಅಲುಗಿಗೆ ಸಮಾನವಾಗಿದ್ದ ಬಾಣದಿಂದ ದೂಷಣನ ಮಹಾಧನುಸ್ಸನ್ನು ಕತ್ತರಿಸಿದನು. ನಾಲ್ಕು ಬಾಣಗಳಿಂದ ದೂಷಣನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಅರ್ಧಚಂದ್ರವೆಂಬ ಬಾಣದಿಂದ ಸಾರಥಿಯ ತಲೆಯನ್ನೂ ಹಾರಿಸಿದನು. ಬಳಿಕ ದೂಷಣನ ಎದೆಗೆ ಗುರಿಯಿಟ್ಟು ಮೂರು ಬಾಣಗಳನ್ನು ಪ್ರಯೋಗಿಸಿದನು. ಆ ಸಮಯದಲ್ಲಿ ದೂಷಣನ ಧನುಸ್ಸು ಕತ್ತರಿಸಿ ಹೋಗಿದ್ದಿತು. ರಥವೂ ಇರಲಿಲ್ಲ. ಕುದುರೆಗಳೂ–ಸಾರಥಿಯೂ ಸತ್ತುಹೋಗಿದ್ದರು. ಆಗ ದೂಷಣನು ನೋಡಿದ ಮಾತ್ರದಿಂದಲೇ ರೋಮಾಂಚನವನ್ನುಂಟುಮಾಡುವುದಾಗಿದ್ದ ಪರ್ವತೋಪಮವಾಗಿದ್ದ ಪರಿಘಾಯುಧವನ್ನು ಕೈಗೆತ್ತಿಕೊಂಡನು. ಅದು ಚಿನ್ನದ ಪಟ್ಟಿಗಳಿಂದ ಕೂಡಿದ್ದಿತು. ದೇವತೆಗಳ ಸೈನ್ಯವನ್ನಾದರೂ ಮರ್ದನಮಾಡುವ ಸಾಮರ್ಥ್ಯವನ್ನು ಹೊಂದಿದ್ದಿತು. ಲೋಹಮಯವಾದ ಮತ್ತು ಚೂಪಾದ ಗೂಟಗಳು ಪರಿಘಾಯುಧದ ಸುತ್ತಲೂ

---

*ನಿಮೀಲಿತ ಇವರ್ಷಭಃ ಎಂಬುದು ಇಲ್ಲಿ ಸ್ವಾರಸ್ಯವಾಗಿದೆ. ಮಳೆಯು ಸುರಿಯುತ್ತಿರುವಾಗ ಬೀದಿಯಲ್ಲಿ ಗೂಳಿಗಳೂ ಎಮ್ಮೆಗಳೂ ಇರುವುದನ್ನು ನಾವು ಕಾಣುತ್ತೇವೆ. ಅವುಗಳು ಕಣ್ಣಿಗೆ ನೀರು ಬೀಳದಂತೆ ಕಣ್ಣನ್ನು ಮಾತ್ರ ಮುಚ್ಚಿಕೊಂಡಿರುತ್ತವೆಯೇ ಹೊರತು ಮಳೆಯು ಬೀಳುತ್ತಿರುವ ವಿಷಯವಾಗಿ ಅವುಗಳಿಗೆ ಪರಿವೆಯೇ ಇರುವುದಿಲ್ಲ. ಮಳೆಯು ಬೀಳುತ್ತಿದ್ದರೆ ಅವು ಓಡಿಹೋಗುವುದೂ ಇಲ್ಲ. ಮಲಗಿದ್ದಲ್ಲೇ ಮಲಗಿರುತ್ತವೆ. ನಿಂತಿದ್ದಲ್ಲೇ ನಿಂತಿರುತ್ತವೆ. ಮಳೆಸುರಿಯುವುದರಿಂದ ಅವುಗಳಿಗೆ ಒಂದು ವಿಧವಾದ ಆನಂದವೂ ಆಗಬಹುದು. ಎಮ್ಮೆ ಮೇಲೆ ಮಳೆ ಚಚ್ಚಿದಂತೆ ಎಂಬ ಗಾದೆಯೂ ಇದೆ. ಅದೇ ರೀತಿಯಲ್ಲಿ ಶ್ರೀರಾಮನು ತನ್ನೆದುರಾಗಿ ಬಂದ ಬಾಣಗಳ ವಿಷಯವಾಗಿ ನಿರ್ಲಕ್ಷ್ಯದಿಂದಲೇ ಇದ್ದುಬಿಟ್ಟನು. ನೂರಾರು ಬಾಣಗಳು ತನ್ನ ಮೇಲೆ ಬೀಳುತ್ತಿವೆಯೆಂಬುದರ ಪರಿವೆಯೇ ಅವನಿಗೆ ಇರಲಿಲ್ಲ. ಯದ್ಯಪಿ ಶ್ರೀರಾಮನು ಕಣ್ಣು ಬಿಟ್ಟು

ಇದ್ದುವು. ಅದು ಈವರೆಗಾಗಲೇ ಹಲವರನ್ನು ಸಂಹರಿಸಿ ಎದುರಾಳಿಗಳ ಮೇದಸ್ಸಿನ ರುಚಿಯನ್ನು ಸವಿದಿದ್ದಿತು. ಅದರ ಸ್ಪರ್ಶವು ವಜ್ರಾಯುಧದ ಸ್ಪರ್ಶದಷ್ಟು ಕಠಿಣವಾಗಿದ್ದಿತು. ಶತ್ರುಪಕ್ಷದವರ ರಾಜಧಾನಿಗಳ ಗೋಪುರ ಗಳನ್ನು ಹಲವಾರು ಬಾರಿ ಆ ಆಯುಧವು ಉರುಳಿಸಿದ್ದಿತು.

ಅಂತಹ ಹೆಚ್ಚು ದೊಡ್ಡದಾಗಿದ್ದ ಘಟಸರ್ಪಕ್ಕೆ ಸಮಾನವಾಗಿದ್ದ ಪರಿಘವನ್ನು ಹಿಡಿದು ಕ್ರೂರಕರ್ಮನಾದ ದೂಷಣರಾಕ್ಷಸನು ರಾಮನ ಬಳಿಗೆ ಧಾವಿಸಿದನು. ತನ್ನ ಮೇಲೆ ಬೀಳಲು ರಭಸದಿಂದ ಬರುತ್ತಿದ್ದ ದೂಷಣನ ಅಂಗದಾಭರಣಗಳಿಂದ ಸಮಲಂಕೃತವಾಗಿದ್ದ ಎರಡು ತೋಳುಗಳನ್ನೂ ಶ್ರೀರಾಮನು ಎರಡು ಬಾಣಗಳಿಂದ ಕತ್ತರಿಸಿಹಾಕಿದನು. ದೂಷಣನ ಕೈಯ್ಯಿಂದ ಜಾರಿ ಕೆಳಕ್ಕೆ ಬಿದ್ದ ಬೃಹದಾಕಾರದ ಆ ಪರಿಘಾಯುಧವು ಆಕಾಶದಿಂದ ಬಿದ್ದ ಇಂದ್ರಧ್ವಜದೋಪಾದಿಯಲ್ಲಿ ಸಮರಭೂಮಿಯಲ್ಲಿ ಬಿದ್ದಿತು. ಸ್ವೇಚ್ಛೆಯಿಂದ ತಿರುಗುವ ಕಾಡಾನೆಯ ಎರಡು ಕೊಂಬುಗಳನ್ನೂ ಕಿತ್ತುಹಾಕಿದರೆ ಅದು ಪ್ರಾಣತೊರೆದು ಕೆಳಗೆ ಬೀಳುವಂತೆ–ಎರಡು ತೋಳು ಗಳನ್ನೂ ಕಳೆದುಕೊಂಡ ದೂಷಣನು ಪ್ರಾಣಗಳನ್ನು ತೊರೆದು ಕೆಳಗುರುಳಿ ದನು. ಯುದ್ಧದಲ್ಲಿ ಹತನಾಗಿ ಕೆಳಕ್ಕೆ ಬಿದ್ದ ದೂಷಣನನ್ನು ಕಂಡು ಯುದ್ಧವನ್ನು ವೀಕ್ಷಿಸುತ್ತಿದ್ದವರೆಲ್ಲರೂ – 'ಸಾಧು-ಸಾಧು' – ಎಂದು ಹೇಳುತ್ತಾ ಶ್ರೀರಾಮನನ್ನು ಪ್ರಶಂಸಿಸಿದರು.

ಆ ಮಧ್ಯದಲ್ಲಿ ದೂಷಣನು ಹತನಾದುದನ್ನು ತಿಳಿದು ಮೃತ್ಯುಪಾಶ ದಿಂದ ಸೆಳೆಯಲ್ಪಟ್ಟಿದ್ದ ಅತ್ಯಂತಕ್ರುದ್ಧರಾದ ಮಹಾಕಪಾಲ, ಸ್ಥೂಲಾಕ್ಷ

---

ಕೊಂಡೇ ಇದ್ದರೂ ಕಣ್ಣುಮುಚ್ಚಿಕೊಂಡವನೊಬ್ಬನು ವರ್ತಿಸುವಂತೆ ಶಿಲಾವರ್ಷದ ವಿಷಯದಲ್ಲಿ ವರ್ತಿಸಿದನು ಎಂದರೆ ಅಂತಹ ಶಿಲಾವರ್ಷವನ್ನೂ ಅಷ್ಟು ಲಾಘವವಾಗಿ ಕಂಡನು ಎಂದರ್ಥ. ಬಹುಸ್ವಾರಸ್ಯವಾದ ಉಪಮೆಯು ಇದಾಗಿದೆ. ಪರಂ ಕ್ರೋಧಂ ಲೇಭೇ ಅಥವಾ ಭೇಜೇ ಎಂದು ಪ್ರಯೋಗವಿದೆ. ಶ್ರೀರಾಮನು ಕೋಪವನ್ನು ಹೊಂದುತ್ತಾನೆ. ಕುಪಿತನಾಗುವುದಿಲ್ಲ. ಕೋಪವು ಅವನು ಅಪೇಕ್ಷಿಸಿದಾಗ ಬರುತ್ತದೆ. ಬೇಡವಾದಾಗ ದೂರವಾಗುತ್ತದೆ. ರಾಕ್ಷಸರ ಸಂಹಾರಕ್ಕೆ ಕೋಪವು ಆವಶ್ಯಕವಾದುದ ರಿಂದ ಅದನ್ನು ಪಡೆದುಕೊಂಡನು ಎಂಬ ಅಭಿಪ್ರಾಯ. ಕಾಮ-ಕ್ರೋಧಗಳು ರಾಮನಿಗೆ ಕಿಂಕರರಂತಿದ್ದುವು–ಎಂಬುದನ್ನು ಇದು ಸೂಚಿಸುತ್ತದೆ.

ಮತ್ತು ಪ್ರಮಾಥೀ–ಎಂಬ ಮೂವರು ಸೇನಾನಾಯಕರು ಒಟ್ಟಾಗಿ ಶ್ರೀರಾಮನನ್ನು ಎದುರಿಸಿದರು. ಮಹಾಕಪಾಲನು ದೊಡ್ಡದಾಗಿದ್ದ ಶೂಲಾಯುಧವನ್ನೆತ್ತಿಕೊಂಡು ರಾಮನನ್ನು ಎದುರಿಸಿದನು. ಸ್ಥೂಲಾಕ್ಷನು ಪಟ್ಟಿಶವನ್ನೂ–ಪ್ರಮಾಥಿಯು ಗಂಡುಗೊಡಲಿಯನ್ನೂ ಹಿಡಿದಿದ್ದರು.

ತನ್ನ ಮೇಲೆ ರಭಸದಿಂದ ಬೀಳುತ್ತಿದ್ದ ಆ ಮೂವರು ರಾಕ್ಷಸರನ್ನು ನೋಡಿದೊಡನೆಯೇ–ಸದ್ಗೃಹಸ್ಥನು ಮಧ್ಯಾಹ್ನದ ಸಮಯದಲ್ಲಿ ಮನೆಗೆ ಬಂದ ಅತಿಥಿಯನ್ನು ಅವಸರದಿಂದೆದ್ದು ಸ್ವಾಗತಿಸುವಂತೆ–ಶ್ರೀರಾಮನು ತೀಕ್ಷ್ಣವಾದ ತುದಿಗಳಿಂದ ಕೂಡಿದ್ದ ಮೂರು ಬಾಣಗಳಿಂದ ಅವರನ್ನು ಪ್ರತಿಗ್ರಹಿಸಿದನು.* ಬಳಿಕ ಶ್ರೀರಾಮನು ಶ್ರೇಷ್ಠವಾದ ಬಾಣಗಳಿಂದ ಮಹಾಕಪಾಲನ ತಲೆಯನ್ನು ಕತ್ತರಿಸಿದನು. ಅಸಂಖ್ಯೇಯವಾದ ಬಾಣಗಳ ಸಮೂಹಗಳಿಂದ ಪ್ರಮಾಥಿಯನ್ನೂ ಧ್ವಂಸಮಾಡಿದನು. ಸ್ಥೂಲಾಕ್ಷನ ಸ್ಥೂಲವಾದ ಕಣ್ಣುಗಳನ್ನು ಅನೇಕ ಬಾಣಗಳಿಂದ ಮುಚ್ಚಿಬಿಟ್ಟನು. ಹಲವಾರು ರೆಂಬೆಗಳಿಂದ ಕೂಡಿದ ಮಹಾವೃಕ್ಷವು ಬಿರುಗಾಳಿಯ ಬಡಿತಕ್ಕೆ ಸಿಕ್ಕಿ ಕೆಳಕ್ಕೆ ಬೀಳುವಂತೆ–ಸ್ಥೂಲಾಕ್ಷನು ಶ್ರೀರಾಮನ ಬಾಣಗಳಿಗೆ ಲಕ್ಷ್ಯನಾಗಿ ಕೆಳಗುರುಳಿದನು. ಕ್ರುದ್ಧನಾಗಿದ್ದ ರಾಘವನು ದೂಷಣನ ಆಜ್ಞಾಧಾರಕರಾಗಿ ಬಂದಿದ್ದ ಐದು ಸಾವಿರ ರಾಕ್ಷಸರನ್ನೂ ಕ್ಷಣಮಾತ್ರದಲ್ಲಿ ಐದು ಸಾವಿರ ಬಾಣಗಳಿಂದ ಸಂಹರಿಸಿ ಯಮಾಲಯಕ್ಕೆ ಕಳುಹಿಸಿದನು. ದೂಷಣನೂ ಮತ್ತು ಅವನ ಹಿಂಬಾಲಕರೂ ಶ್ರೀರಾಮನಿಂದ ಹತರಾದುದನ್ನು ನೋಡಿ ಕ್ರುದ್ಧನಾದ ಖರನು ಮಹಾಬಲಿಷ್ಠರಾದ ಸೇನಾಧ್ಯಕ್ಷರಿಗೆ ಹೀಗೆ ಆಜ್ಞೆ ನೀಡಿದನು :

" ಸೇನಾಧ್ಯಕ್ಷರೇ ! ಸೇನಾಪತಿಯಾದ ದೂಷಣನು ತನ್ನ ಅನುಯಾಯಿಗಳೊಡನೆ ಯುದ್ಧದಲ್ಲಿ ಮಡಿದನು. ಈಗ ಎಲ್ಲ ರಾಕ್ಷಸನಾಯಕರೂ ದೊಡ್ಡದಾದ ನಿಮ್ಮ-ನಿಮ್ಮ ಸೈನ್ಯದೊಡನೆ ಕಾಪುರುಷನಾದ ರಾಮನನ್ನು

---

*ಬಂದ ಅತಿಥಿಗೆ ಅರ್ಘ್ಯ-ಪಾದ್ಯಾದಿಗಳನ್ನು ನೀಡುವಂತೆ ಶ್ರೀರಾಮನು ತನ್ನ ಬಳಿಗೆ ಬಂದ ಮೂವರು ರಾಕ್ಷಸಾತಿಥಿಗಳಿಗೆ ಯುದ್ಧವೆಂಬ ಸತ್ಕಾರದಲ್ಲಿ ಪೂರ್ವಾಂಗವಾಗಿ ಮೂರು ಬಾಣಗಳನ್ನು ಅರ್ಪಿಸಿದನು.

ಆಕ್ರಮಿಸಿ ಯುದ್ಧಮಾಡಿ ನಾನಾಪ್ರಕಾರವಾದ ಆಕಾರವುಳ್ಳ ಘೋರವಾದ ಶಸ್ತ್ರಗಳಿಂದ ಅವನನ್ನು ಸಂಹರಿಸಿರಿ. ”

ಹೀಗೆ ಸೇನಾಧ್ಯಕ್ಷರಿಗೆ ಆಜ್ಞಾಪಿಸಿ ತಾನೂ ಕೂಡ ಪರಮಕ್ರುದ್ಧನಾಗಿ ರಾಮನಿದ್ದೆಡೆಗೆ ಧಾವಿಸಿದನು. ಖರನ ಆಜ್ಞಾನುಸಾರವಾಗಿ ಶ್ಯೇನಗಾಮೀ, ಪೃಥುಗ್ರೀವ, ಯಜ್ಞಶತ್ರು, ವಿಹಂಗಮ, ದುರ್ಜಯ, ಕರವೀರಾಕ್ಷ, ಪರುಷ, ಕಾಲಕಾರ್ಮುಕ, ಮೇಘಮಾಲೀ, ಮಹಾಮಾಲೀ, ಸರ್ಪಾಸ್ಯ, ರುಧಿರಾಶನರೆಂಬ ಹನ್ನೆರಡು ಮಂದಿ ಸೇನಾಧ್ಯಕ್ಷರು ತಮ್ಮ-ತಮ್ಮ ಸೈನಿಕರೊಡನೆ ಧನುಸ್ಸುಗಳಿಂದ ಬಾಣಗಳನ್ನು ಹೊರಚಿಮ್ಮಿಸುತ್ತಾ ಶ್ರೀರಾಮನ ಕಡೆಗೆ ಧಾವಿಸಿದರು.

ಅನಂತರ ಶ್ರೀರಾಮನು ಅಗ್ನಿಗೆ ಸಮಾನವಾಗಿದ್ದ, ಸುವರ್ಣದಿಂದಲೂ ವಜ್ರದಿಂದಲೂ ವಿಭೂಷಿತವಾಗಿದ್ದ ಬಾಣಗಳಿಂದ ಖರನ ಅಳಿದುಳಿದಿದ್ದ ಸೈನಿಕರನ್ನೂ ಸಂಹರಿಸಿದನು. ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ್ದ ಶ್ರೀರಾಮನ ಬಾಣಗಳು ಹೊಗೆಯುಗುಳುವ ಅಗ್ನಿಗಳಂತೆ ಧನುಸ್ಸಿನಿಂದ ಹೊರಟು–ಸಿಡಿಲುಗಳು ದೊಡ್ಡ-ದೊಡ್ಡ ವೃಕ್ಷಗಳನ್ನು ಭಸ್ಮಮಾಡಿಬಿಡುವಂತೆ–ಖರನ ಕಡೆಯ ರಾಕ್ಷಸರನ್ನು ವಿನಾಶಗೊಳಿಸಿದುವು. ಆ ರಣರಂಗದಲ್ಲಿ ಶ್ರೀರಾಮನು ನೂರು ರಾಕ್ಷಸರನ್ನು ಕರ್ಣಿ ಎಂಬ ಹೆಸರಿನ ನೂರು ಬಾಣಗಳಿಂದಲೂ, ಸಾವಿರ ರಾಕ್ಷಸರನ್ನು ಸಾವಿರ ಬಾಣಗಳಿಂದಲೂ ಏಕಕಾಲದಲ್ಲಿ ಸಂಹಾರಮಾಡಿದನು. ರಾಕ್ಷಸಸೈನಿಕರ ಕವಚಗಳೂ ಧನುಸ್ಸುಗಳೂ ಕತ್ತರಿಸಲ್ಪಟ್ಟುವು. ಆಭರಣಗಳು ಚೆಲ್ಲಾಪಿಲ್ಲಿಯಾಗಿ ರಣರಂಗದ ಸುತ್ತಲೂ ಹರಡಿದ್ದುವು. ರಕ್ತದಿಂದ ತೋಯ್ದುಹೋದ ಆ ರಾಕ್ಷಸರು ಹತರಾಗಿ ನೆಲದಮೇಲೆ ತೊಪ-ತೊಪನೆ ಬೀಳುತ್ತಿದ್ದರು. ಬಿಚ್ಚಿಹೋದ ತಲೆಗೂದಲುಗಳಿಂದ ಕೂಡಿದ್ದ ರಕ್ತದಿಂದ ತೊಯ್ದುಹೋಗಿ ಭೂಮಿಯ ಮೇಲೆ ಬಿದ್ದಿದ್ದ ಸೈನಿಕರಿಂದ ಸಮಗ್ರವಾದ ಆ ಭೂಪ್ರದೇಶವು–ದರ್ಭೆಗಳಿಂದ ಹರಡಲ್ಪಟ್ಟ ಯಜ್ಞವೇದಿಯಂತೆಯೇ ಕಾಣುತ್ತಿದ್ದಿತು. ರಾಕ್ಷಸರ ಉಪಸ್ಥಿತಿಯಿಂದ ಮಹಾಘೋರವಾಗಿ ಕಾಣುತ್ತಿದ್ದ ಆ ಮಹಾರಣ್ಯವು ಅವರೆಲ್ಲರ ಸಂಹಾರವಾಗಿ ಕ್ಷಣಮಾತ್ರದಲ್ಲಿಯೇ ಮಾಂಸ-ರಕ್ತಗಳ ಕೆಸರಿನಿಂದಾಗಿ ನರಕಸದೃಶವಾಯಿತು.

ಕ್ರೂರಕರ್ಮಿಗಳಾದ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಮನುಷ್ಯ ಮಾತ್ರದವನಾದ ಅದರಲ್ಲಿಯೂ ಪದಾತಿಯಾಗಿಯೇ ಯುದ್ಧಮಾಡುತ್ತಿದ್ದ ಶ್ರೀರಾಮನೊಬ್ಬನೇ ಸಂಹರಿಸಿದನು. ಖರನ ಮಹಾಸೈನ್ಯದಲ್ಲಿ ಮಹಾರಥನಾದ ಖರನೊಬ್ಬನೇ ಉಳಿದಿದ್ದನು. ಅವನ ಪಕ್ಷದಲ್ಲಿ ತ್ರಿಶಿರಸನೆಂಬ ರಾಕ್ಷಸನಿದ್ದನು. ಆ ರಣಭೂಮಿಯಲ್ಲಿ ಮಹಾವೀರ್ಯರಾದ, ಘೋರರೂಪಿಗಳಾದ ಎದುರಿಸಲು ಅಸಾಧ್ಯರಾದ ಉಳಿದೆಲ್ಲ ರಾಕ್ಷಸರೂ ಲಕ್ಷ್ಮಣನ ಅಣ್ಣನಿಂದ ಹತರಾದರು.

ಆ ಮಹಾಯುದ್ಧದಲ್ಲಿ ಬಲಿಷ್ಠನಾದ ರಾಮನೊಬ್ಬನಿಂದಲೇ ತನ್ನ ಅಪಾರವಾದ ಸೈನ್ಯವೂ ಹತವಾಗಿ ಹೋದುದನ್ನು ಕಂಡು ಖರನು ದೊಡ್ಡದಾದೊಂದು ರಥದಲ್ಲಿ ಕುಳಿತು-ದೇವೇಂದ್ರನು ವಜ್ರಾಯುಧವನ್ನೆತ್ತಿಕೊಂಡು ಶತ್ರುಗಳ ಬಳಿಗೆ ಹೋಗುವಂತೆ – ಆಯುಧವನ್ನು ಹಿಡಿದುಕೊಂಡು ಶ್ರೀರಾಮನ ಬಳಿಗೆ ಧಾವಿಸಿದನು.

೨೬ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೭ನೆಯ ಸರ್ಗ

## ತ್ರಿಶಿರಸನ ವಧೆ

ಖರಂ ತು ರಾಮಾಭಿಮುಖಂ ಪ್ರಯಾನ್ತಂ ವಾಹಿನೀಪತಿಃ ।
ರಾಕ್ಷಸಸ್ತ್ರಿಶಿರಾ ನಾಮ ಸನ್ನಿಪತ್ಯೇದಮಬ್ರವೀತ್ ॥೧॥

ಖರನು ಶ್ರೀರಾಮನಿಗೆ ಎದುರಾಗಿ ಹೋಗುತ್ತಿದ್ದುದನ್ನು ನೋಡಿ ಸೇನಾಪತಿಯಾದ ತ್ರಿಶಿರಸನೆಂಬ ರಾಕ್ಷಸನು ಖರನ ಬಳಿಗೆ ಹೋಗಿ ಹೇಳಿದನು :

" ರಾಕ್ಷಸೋತ್ತಮನೇ ! ರಾಮನನ್ನು ಸಂಹರಿಸಲು ಪರಾಕ್ರಮಿಯಾದ ನನ್ನನ್ನು ಕಳುಹಿಸು. ರಾಮನೊಡನೆ ಯುದ್ಧಮಾಡುವ ಈ ಸಾಹಸಕಾರ್ಯದಿಂದ ವಿರಮಿಸು. ಮಹಾಬಾಹುವಾದ ರಾಮನು ನನ್ನಿಂದ ಯುದ್ಧದಲ್ಲಿ ವಧಿಸಲ್ಪಡುವುದನ್ನು ನೀನೇ ಕಾಣುವೆ. ರಾಕ್ಷಸರೆಲ್ಲರಿಗೂ ವಧಾರ್ಹನಾಗಿರುವ ರಾಮನನ್ನು ಸಂಹರಿಸುವೆನೆಂದು ಆಯುಧವನ್ನು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ.

ಅವನೊಡನೆ ಮಾಡಲಿರುವ ಯುದ್ಧದಲ್ಲಿ ಅವನಿಗೆ ನಾನಾದರೂ ಮೃತ್ಯುವಾಗುತ್ತೇನೆ ಅಥವಾ ಅವನಾದರೂ ನನಗೆ ಮೃತ್ಯುವಾಗುತ್ತಾನೆ. ಈಗ ನೀನು ನಿನ್ನ ರಣೋತ್ಸಾಹವನ್ನು ಮುಹೂರ್ತಕಾಲ ತಡೆಹಿಡಿದು ನಮ್ಮಿಬ್ಬರ ಯುದ್ಧದಲ್ಲಿ ನಿರ್ಣಾಯಕನಾಗಿರು. ರಾಮನೇನಾದರೂ ನನ್ನಿಂದ ಹತನಾದರೆ ಸಂತೋಷಭರಿತನಾಗಿ ನೀನು ಜನಸ್ಥಾನಕ್ಕೆ ಹೋಗುವೆ. ಅಥವಾ ನಾನೇ ರಾಮನಿಂದ ಹತನಾಗಿ ಬಿಟ್ಟರೆ ಅವನೊಡನೆ ಯುದ್ಧಕ್ಕೆ ಹೋಗುವೆ."

ಸಾವಿನ ಆಸೆಯಿಂದ ತ್ರಿಶಿರಸನು ಖರನನ್ನು ತನ್ನ ಪ್ರಾರ್ಥನೆಗೆ ಒಪ್ಪುವಂತೆ ಪ್ರಸನ್ನಗೊಳಿಸಿದನು. 'ಹೋಗು! ಯುದ್ಧಮಾಡು'–ಎಂದು ಖರನಿಂದ ಆಜ್ಞೆಯನ್ನು ಪಡೆದ ತ್ರಿಶಿರಸನು ಯುದ್ಧಮಾಡಲು ರಾಘವನಿಗೆದುರಾಗಿ ಹೋದನು.*

ಕುದುರೆಗಳು ಹೂಡಲ್ಪಟ್ಟು ಪ್ರಕಾಶಮಾನವಾಗಿದ್ದ ರಥದಲ್ಲಿ ಕುಳಿತು ತ್ರಿಶಿರಸನು ಮೂರು ಕೋಡುಗಳುಳ್ಳ ಪರ್ವತದೋಪಾದಿಯಲ್ಲಿ ಯುದ್ಧದಲ್ಲಿ ರಾಮನನ್ನು ಆಕ್ರಮಿಸಿದನು. ಮಹಾಮೇಘವು ಜಲಧಾರೆಯನ್ನು ಸುರಿಸುವಂತೆ–ತ್ರಿಶಿರಸನು ರಾಮನ ಮೇಲೆ ಬಾಣಗಳ ಮಳೆಗರೆದು ನೀರಿನಿಂದ ತೋಯ್ದ ದುಂದುಭಿಯ ಶಬ್ದದಂತೆ ವಿಕಾರವಾಗಿ ಗರ್ಜನೆಮಾಡಿದನು.

ಶ್ರೀರಾಮನು ತ್ರಿಶಿರಸನು ಬರುತ್ತಿರುವುದನ್ನು ಕಂಡು ಧನುಸ್ಸಿನಿಂದ ನೂರಾರು ನಿಶಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಸ್ವಾಗತಿಸಿದನು. ಆ ಸಮಯದಲ್ಲಿ ಮಹಾಬಲಿಷ್ಠರಾದ ರಾಮ-ತ್ರಿಶಿರಸರ ಆ ಭಯಂಕರ ಯುದ್ಧವು ಸಿಂಹ ಮತ್ತು ಆನೆಗಳ ನಡುವೆ ನಡೆಯುವ ಕಾದಾಟದಂತೆಯೇ ಭಯಂಕರವಾಗಿದ್ದಿತು. ತ್ರಿಶಿರಸನು ಮೂರು ಬಾಣಗಳಿಂದ ಶ್ರೀರಾಮನ

---

*ತ್ರಿಶಿರಸನು ರಾಮನೊಡನೆ ಯುದ್ಧಕ್ಕೆ ಬಂದುದರ ಕಾರಣವನ್ನು ವಾಲ್ಮೀಕಿಗಳು ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ. ಒಬ್ಬರಿಗೆ ಧನಲೋಭ, ಮತ್ತೊಬ್ಬರಿಗೆ ವಿದ್ಯಾಲೋಭ, ಮಗದೊಬ್ಬರಿಗೆ ಸ್ತ್ರೀಲೋಭ–ಇವುಗಳಿದ್ದರೆ ತ್ರಿಶಿರಸನಿಗಿದ್ದುದು ಮೃತ್ಯುಲೋಭ. ಮೃತ್ಯುವನ್ನು ಸಾಧ್ಯವಾದಷ್ಟು ಬೇಗ ಪಡೆದುಕೊಂಡು ಬಿಡಬೇಕೆಂಬ ಉತ್ಕಟೇಚ್ಛೆ. ಅದರಲ್ಲಿಯೂ ರಾಮನ ಕೈಯಲ್ಲೇ ಮರಣಹೊಂದಬೇಕೆಂಬ ಕಾತರ. ಇಂತಹ ಮೃತ್ಯುಲೋಭವು ಸಾಮಾನ್ಯರಿಗೆ ಇರಲಾರದು, ಅಲ್ಲವೇ?

ಹಣೆಗೆ ಗುರಿಯಿಟ್ಟು ಪ್ರಹರಿಸಿದನು. ಆದರಿಂದ ಶ್ರೀರಾಮನು ಸಹನೆಯನ್ನು ಕಳೆದುಕೊಂಡು ಕುಪಿತನಾಗಿ ಎದುರಾಳಿಗೆ ಹೇಳಿದನು :

"ಎಂತಹ ಅಗ್ಗಳಿಕೆಯ ವಿಷಯವಿದು! ವಿಕ್ರಾಂತಶೂರನಾದ ರಾಕ್ಷಸನೆ ಬಲವಿಷ್ಟೇನೇ? ನೀನು ಬಿಟ್ಟ ಮೂರು ಬಾಣಗಳು ಮೂರು ಹೂವುಗಳಂತೆ ನನ್ನ ಹಣೆಯನ್ನು ಮುಟ್ಟಿ ಕೆಳಕ್ಕೆ ಬಿದ್ದುವು. ಈಗ ನನ್ನ ಧನುಸ್ಸಿನ ನಾಣಿನಿಂದ ಹೊರಬೀಳಲಿರುವ ಬಾಣಗಳ ಪ್ರಹಾರವನ್ನು ಪ್ರತಿಗ್ರಹಿಸು."

ಹೀಗೆ ಹೇಳಿ ಕ್ರುದ್ಧನಾದ ಶ್ರೀರಾಮನು ಸರ್ಪಗಳಿಗೆ ಸಮಾನವಾದ ಹದಿನಾಲ್ಕು ಬಾಣಗಳಿಂದ ತ್ರಿಶಿರಸನ ವಕ್ಷಸ್ಥಳವನ್ನು ಪ್ರಹರಿಸಿದನು. ರಣಕುಶಲನಾದ ಮತ್ತು ತೇಜಸ್ವಿಯಾದ ಶ್ರೀರಾಮನು ಬಗ್ಗಿದ ಗೆಣ್ಣುಗಳಿಂದ ಕೂಡಿದ್ದ ನಾಲ್ಕು ಬಾಣಗಳಿಂದ ತ್ರಿಶಿರಸನ ವೇಗಯುಕ್ತವಾದ ನಾಲ್ಕು ಕುದುರೆಗಳನ್ನು ಸಂಹರಿಸಿದನು. ಪುನಃ ಎಂಟು ಬಾಣಗಳಿಂದ ತ್ರಿಶಿರಸನ ಸಾರಥಿಯನ್ನು ಪ್ರಹರಿಸಿದನು. ಒಡನೆಯೇ ಸಾರಥಿಯು ರಥದ ಮೇಲ್ಭಾಗದಿಂದ ಕೆಳಗುರುಳಿದನು. ಮತ್ತೊಂದು ಬಾಣದಿಂದ ಎತ್ತರದಲ್ಲಿದ್ದ ಧ್ವಜವನ್ನು ಕತ್ತರಿಸಿದನು. ಸಂಪೂರ್ಣವಾಗಿ ನಾಶವಾಗಿದ್ದ ರಥದಿಂದ ಹಾರಿ ಹೋಗುವುದರಲ್ಲಿದ್ದ ತ್ರಿಶಿರಸ ರಾಕ್ಷಸನ ವಕ್ಷಃಸ್ಥಳಕ್ಕೆ ಗುರಿಯಿಟ್ಟು ಬಾಣಗಳಿಂದ ಪ್ರಹರಿಸಿ ವಕ್ಷಸ್ಥಳವನ್ನು ಭೇದಿಸಿದನು. ಒಡನೆಯೇ ರಾಕ್ಷಸನು ಜಡನಾದನು. ಮಹಾತ್ಮನಾದ ಶ್ರೀರಾಮನು ರಾಕ್ಷಸನ ವಿಷಯದಲ್ಲಿ ಸಹನೆಯಿಲ್ಲದವನಾಗಿ ಅವನ ಮೂರು ತಲೆಗಳನ್ನೂ ವೇಗಯುಕ್ತವಾದ ಮೂರು ಬಾಣಗಳಿಂದ ಕೆಳಗುರುಳಿಸಿದನು. ಶ್ರೀರಾಮನ ಬಾಣಗಳಿಂದ ಪ್ರಹೃತನಾದ ತ್ರಿಶಿರಸನು ರಕ್ತವನ್ನು ಕಾರುತ್ತಾ ಈ ಹಿಂದೆ ಕತ್ತರಿಸಲ್ಪಟ್ಟಿದ್ದ ಮೂರು ಶಿರಸ್ಸುಗಳೊಡನೆ ರಥದಿಂದ ಕೆಳಕ್ಕೆ ಬಿದ್ದನು. (ತಲೆಗಳೂ ಕೆಳಗುರುಳಿದುವು. ಜೊತೆಯಲ್ಲಿಯೇ ಶರೀರವೂ ರಥದಿಂದ ಕೆಳಕ್ಕೆ ಬಿದ್ದಿತು.)

ಅಳಿದುಳಿದ ಖರನ ಅನುಯಾಯಿಗಳೂ ಶ್ರೀರಾಮನ ಬಾಣಗಳಿಂದ ಗಾಯಗೊಂಡವರಾಗಿ ಪಲಾಯನಮಾಡುತ್ತಿದ್ದರು. ವ್ಯಾಧನಿಂದ ಭಯಗೊಂಡ ಮೃಗಗಳಂತೆ-ಹಿಂದೆ ನೋಡದೇ ಓಡುತ್ತಿದ್ದರೇ ಹೊರತು ಕ್ಷಣಮಾತ್ರವೂ ನಿಲ್ಲಲೂ ಇಲ್ಲ. ಹಿಂದಿರುಗಲೂ ಇಲ್ಲ. ಹೀಗೆ ಓಡಿಹೋಗು

ತ್ತಿದ್ದ ಸೈನಿಕರನ್ನು ನೋಡಿ ಖರನು ಅವರಿಗೆ ಧೈರ್ಯ ಹೇಳಿ ಹಿಂದಿರುಗಿಸಿ ಅತ್ಯಂತಕ್ರುದ್ಧನಾಗಿ-ರಾಹುವು ಚಂದ್ರನ ಬಳಿಗೆ ಧಾವಿಸುವಂತೆ-ಶ್ರೀರಾಮನ ಬಳಿಗೆ ಧಾವಿಸಿದನು.*

೨೭ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೨೮ನೆಯ ಸರ್ಗ

## ಖರನೊಡನೆ ಶ್ರೀರಾಮನ ಘೋರಯುದ್ಧ

ನಿಹತಂ ದೂಷಣಂ ದೃಷ್ಟ್ವಾ ರಣೇ ತ್ರಿಶಿರಸಾ ಸಹ ।
ಖರಸ್ಯಾಪ್ಯಭವತ್ತ್ರಾಸೋ ದೃಷ್ಟ್ವಾ ರಾಮಸ್ಯ ವಿಕ್ರಮಮ್ ॥೧॥

ದೂಷಣನಂತೆಯೇ ತ್ರಿಶಿರಸನೂ ಹತನಾದುದನ್ನು ನೋಡಿ ರಾಮನ ಪರಾಕ್ರಮವೆಷ್ಟೆಂಬುದನ್ನು ಅರಿತ ಖರನಿಗೂ ಭಯವಾಯಿತು. ರಾಕ್ಷಸರ ಸೈನ್ಯವು ಎದುರಿಸಲು ಅಸಾಧ್ಯವೂ ಮಹಾಬಲಿಷ್ಠವೂ ಆಗಿದ್ದಿತು. ಪ್ರಧಾನ ಭೂತರಾದ ರಾಕ್ಷಸರನ್ನೊಳಗೊಂಡಿದ್ದ ಅಪಾರವಾದ ಆ ರಾಕ್ಷಸಸೈನ್ಯವನ್ನು ರಾಮನೊಬ್ಬನೇ ಸಂಹರಿಸಿದನು. ತ್ರಿಶಿರ-ದೂಷಣರೂ ಹತರಾದರು. ಹೀಗೆ ತನ್ನ ಕಡೆಯವರೆಲ್ಲರೂ ಸಂಪೂರ್ಣವಾಗಿ ವಿನಾಶಹೊಂದಿರುವುದನ್ನು ನೋಡಿ ಖರರಾಕ್ಷಸನ ಮನಸ್ಸು ದುಃಖದಿಂದ ಉದ್ವಿಗ್ನವಾಯಿತು. ನಮುಚಿಯು ಯುದ್ಧ ಮಾಡಲು ಇಂದ್ರನ ಬಳಿಗೆ ಧಾವಿಸಿದಂತೆ-ಖರನು ವಿಮನಸ್ಕನಾಗಿಯೇ ರಾಮನ ಬಳಿಗೆ ಧಾವಿಸಿದನು. ಒಡನೆಯೇ ಬಲಿಷ್ಠವಾಗಿದ್ದ ತನ್ನ ಧನು

---

*ಹದಿನಾಲ್ಕು ಸಾವಿರ ಸೈನ್ಯದಲ್ಲಿ ಖರನು ಮಾತ್ರವೇ ಉಳಿದಿದ್ದನೆಂದು ಹಿಂದಿನ ಸರ್ಗದಲ್ಲಿ (೨೬-೩೬) ಹೇಳಿದೆ. ಈ ಸರ್ಗದಲ್ಲಿ ಪುನಃ ಹತಶೇಷಾಃ ರಾಕ್ಷಸಾಃ ಎಂದೂ ಹೇಳಿದೆ. (೨೭-೧೯) ಹಿಂದಿನ ಸರ್ಗದಲ್ಲಿ ಖರನೊಬ್ಬನು ಮಾತ್ರವೇ ಉಳಿದಿದ್ದನೆಂದು ಹೇಳಿ ಪುನಃ ಈ ಸರ್ಗದಲ್ಲಿ 'ಅಳಿದುಳಿದ ರಾಕ್ಷಸರು' ಎಂದು ಹೇಳಿರುವುದರಿಂದ ವಿರೋಧವಲ್ಲವೇ ?-ಎಂಬ ಪ್ರಶ್ನೆಯು ಸ್ವಾಭಾವಿಕವಾಗಿಯೇ ಹುಟ್ಟುತ್ತದೆ. ಜನಸ್ಥಾನದಿಂದ ಹದಿನಾಲ್ಕು ಸಾವಿರ ರಾಕ್ಷಸರನ್ನು ಖರನು ಯುದ್ಧಕ್ಕಾಗಿ ಕರೆತಂದಿದ್ದನು. 'ಅವನ ಬಲವೆಲ್ಲವೂ ಇಷ್ಟೇ' ಎಂದೇನಲ್ಲ. ತ್ರಿಶಿರಸನು ತಾನಾಗಿಯೇ ಬಂದಂತೆ ಇನ್ನೂ ಹಲವಾರು ರಾಕ್ಷಸರು ರಾಕ್ಷಸರ ಹಿತಾಕಾಂಕ್ಷಿಗಳಾಗಿ ಪಂಚವಟಿಗೆ ಖರನಿಗೆ ಸಹಾಯಕ

ಸ್ಸನ್ನು ಸೆಳೆದು ಕೋಪಗೊಂಡ ಸರ್ಪಗಳಂತಿದ್ದ ರಕ್ತಭೋಜಿಗಳಾದ ಬಾಣಗಳನ್ನು ಯೋಜಿಸಿ ರಾಮನ ಮೇಲೆ ಪ್ರಯೋಗಿಸಿದನು. ರಥಾರೂಢನಾಗಿದ್ದ ಖರನು ಬಿಲ್ಲಿನ ನಾಣನ್ನು ಬಾರಿಬಾರಿಗೂ ಅಳ್ಳಾಡಿಸಿ ಟೇಂಕರಿಸುತ್ತಾ ಆದಾನ-ಸಂಧಾನ-ಕ್ಷೇಪಣರೂಪವಾದ ಅಸ್ತ್ರಶಿಕ್ಷಣವನ್ನು ಪ್ರದರ್ಶಿಸುತ್ತಾ ರಣರಂಗದಲ್ಲಿ ಸುತ್ತಾಡುತ್ತಿದ್ದನು.

ಮಹಾರಥನಾದ ಖರನು ಬಾಣಗಳಿಂದ ದಿಕ್ಕುಗಳನ್ನೂ ಉಪದಿಕ್ಕುಗಳನ್ನೂ ತುಂಬಿದುದನ್ನು ನೋಡಿದ ಮಹಾಧನುಷ್ಮಂತನಾದ ಶ್ರೀರಾಮನೂ ಹಾಗೆಯೇ ಮಾಡಿದನು. ಕಿಡಿಗಳನ್ನು ಚೆಲ್ಲುತ್ತಾ ಉರಿಯುತ್ತಿರುವ ಅಗ್ನಿಗಳಂತೆ ಜಾಜ್ವಲ್ಯಮಾನವಾಗಿದ್ದ, ಸಹಿಸಲು ಅಸಾಧ್ಯವಾಗಿದ್ದ ಬಾಣಗಳಿಂದ–ಪರ್ಜನ್ಯನು ಮಳೆಯಿಂದ ಆಕಾಶವನ್ನು ಮುಚ್ಚಿಬಿಡುವಂತೆ–ಮುಚ್ಚಿಬಿಟ್ಟನು. ರಾಮ-ರಾಕ್ಷಸರು ಬಿಟ್ಟ ನಿಶಿತವಾದ ಬಾಣಗಳಿಂದ ಸರ್ವತ್ರ ವ್ಯಾಪ್ತವಾಗಿದ್ದ ಆಕಾಶವು* ಅನಾಕಾಶವಾಯಿತು. ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನು ಸಂಹರಿಸಬೇಕೆಂಬ ಕೋಪದಿಂದ ಯುದ್ಧಮಾಡುತ್ತಿರುವಾಗ ಇಬ್ಬರೂ ಬಿಡುತ್ತಿದ್ದ ಬಾಣಗಳ ಸಮೂಹಗಳಿಂದ ಆಕಾಶವು ಮುಚ್ಚಿಹೋಗಿ ಸೂರ್ಯನೇ ಕಾಣುತ್ತಿರಲಿಲ್ಲ. ಅನಂತರ ಖರನು ತೀಕ್ಷ್ಣವಾದ ತುದಿಗಳುಳ್ಳ ನಾಲೀಕ, ನಾರಾಚ, ವಿಕರ್ಣಿ–ಇವೇ ಮುಂತಾದ ಬಾಣವಿಶೇಷಗಳಿಂದ, ಮಹಾಗಜವನ್ನು ಮಾವಟಿಗನು ಅಂಕುಶದಿಂದ ತಿವಿಯುವಂತೆ–

---

ರಾಗಲು ಬಂದಿರಬಹುದು. ಆದುದರಿಂದ ಈ ಸರ್ಗದಲ್ಲಿ 'ಹತಶೇಷರು' ಎಂದು ಹೇಳಿರುವುದರಲ್ಲಿ ದೋಷವೇನೂ ಇಲ್ಲ. ಮಿಗಿಲಾಗಿ ಖರನೊಬ್ಬನೇ ಉಳಿದಿದ್ದನೆಂದರೆ ಮಹಾರಥರಲ್ಲಿ ಹೆಸರಾಂತ ನಾಯಕರಲ್ಲಿ ಅಥವಾ ಸೇನಾಪತಿಗಳಲ್ಲಿ ಮತ್ತಾರೂ ಉಳಿಯಲಿಲ್ಲ ಎಂಬ ಅರ್ಥವೇ ಹೊರತು ಒಬ್ಬನೇ ಒಬ್ಬ ರಾಕ್ಷಸನೂ ಉಳಿಯಲಿಲ್ಲ ಎಂಬ ಅರ್ಥವಲ್ಲ. ರಾಜನೊಬ್ಬನು ಬದುಕಿರಬೇಕಾದರೆ ಅವನಿಗೆ ಸಂಬಂಧಿಸಿದಂತೆ ಯುದ್ಧದಲ್ಲಿ ವಿಶೇಷವಾಗಿ ಪಾಲುಗೊಳ್ಳದೇ ಇರುವ ಅಂಗರಕ್ಷಕರು ಊಳಿಗದವರು ಇದ್ದೇ ಇರುತ್ತಾರೆಂಬುದು ಊಹನೀಯ. ಅವರೇ ಈ ಹತಶೇಷರಾಗಬಹುದು. ಆದುದರಿಂದ ಇಲ್ಲಿ ವಿರೋಧವಿಲ್ಲ.

* ಆಕಾಶ ಎಂದರೆ ಶೂನ್ಯ. ಅನಾಕಾಶ ಎಂದರೆ ಶೂನ್ಯವಲ್ಲದೇ ಇರುವುದು. ತುಂಬಿರುವುದು ಎಂದರ್ಥ. ಶೂನ್ಯವಾಗಿದ್ದುದು ಬಾಣಗಳಿಂದ ತುಂಬಿಹೋಗಿ ಎಲ್ಲಿಯೂ ಅವಕಾಶವೇ ಇಲ್ಲದ ಅನಾಕಾಶವಾಯಿತು.

ಶ್ರೀರಾಮನನ್ನು ಪ್ರಹರಿಸಿದನು. ಧನುಸ್ಸನ್ನು ಹಿಡಿದು ರಥದಲ್ಲಿ ಸ್ವಸ್ಥನಾಗಿ ಕುಳಿತಿದ್ದ ಖರನನ್ನು ಆ ಸಮಯದಲ್ಲಿ ಎಲ್ಲ ಪ್ರಾಣಿಗಳೂ ಪಾಶವನ್ನು ಹಿಡಿದಿರುವ ಯಮನೆಂದೇ ಭಾವಿಸಿದುವು. ಸಮಸ್ತಸೈನ್ಯದ ಹಂತಕನಾದ, ಸುಪ್ರತಿಷ್ಠಿತವಾದ ಪೌರುಷದಿಂದ ಕೂಡಿರುವ, ಮಹಾಸತ್ತ್ವನಾದ ಶ್ರೀರಾಮನು ಬಳಲಿರುವನೆಂದೇ ಖರನು ಭಾವಿಸಿದನು.

ಖರನು ಸಿಂಹವಂತೆಯೇ ಪರಾಕ್ರಮವುಳ್ಳವನಾಗಿದ್ದನು. ಅಂತೆಯೇ ಧೀರೋದಾತ್ತವಾದ ನಡಿಗೆಯುಳ್ಳವನೂ ಆಗಿದ್ದನು. ಆದರೂ ಶ್ರೀರಾಮನು– ಕ್ಷುದ್ರಮೃಗಗಳನ್ನು ನೋಡಿ ಸಿಂಹವು ಉದ್ವೇಗಗೊಳ್ಳದಿರುವಂತೆ – ಖರನನ್ನಾಗಲೀ ಅವನು ಯುದ್ಧಮಾಡುತ್ತಿದ್ದ ವೈಖರಿಯನ್ನಾಗಲೀ ನೋಡಿ ಉದ್ವೇಗಗೊಳ್ಳಲಿಲ್ಲ.

ಅನಂತರ ಸೂರ್ಯಸದೃಶವಾದ ಮಹಾರಥದಲ್ಲಿ ಕುಳಿತಿದ್ದ ಖರನು– ಪತಂಗದ ಹುಳುವು ಬೆಂಕಿಯ ಬಳಿಗೆ ಬರುವಂತೆ–ರಾಮನ ಬಳಿಗೆ ಬಂದನು. ಕಣ್ಣು ಮಿಟುಕಿಸುವುದರೊಳಗಾಗಿಯೇ ಖರನು ತನ್ನ ಕೈಚಳಕವನ್ನು ತೋರಿಸುತ್ತಾ ಮಹಾತ್ಮನಾದ ಶ್ರೀರಾಮನು ಹಿಡಿದಿದ್ದ ಬಾಣಸಹಿತವಾದ ಧನುಸ್ಸನ್ನು ಕತ್ತರಿಸಿದನು. ಮರುಕ್ಷಣದಲ್ಲಿಯೇ ಕ್ರುದ್ಧನಾಗಿದ್ದ ರಾಕ್ಷಸನು ಪುನಃ ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಏಳು ಬಾಣಗಳನ್ನು ಬತ್ತಳಿಕೆಯಿಂದ ಹೊರತೆಗೆದು ಶ್ರೀರಾಮನ ಕವಚದಲ್ಲಿ ಪ್ರಯೋಗಿಸಿದನು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ ಶ್ರೀರಾಮನ ಕವಚವು ಖರನಿಂದ ಬಿಡಲ್ಪಟ್ಟ ಸುಂದರವಾದ ಗಿಣ್ಣುಗಳುಳ್ಳ ಬಾಣಗಳಿಂದ ಕತ್ತರಿಸಲ್ಪಟ್ಟು ನೆಲದಲ್ಲಿ ಬಿದ್ದಿತು. ಪುನಃ ಖರನು ಅಮಿತಪರಾಕ್ರಮಿಯಾದ ಶ್ರೀರಾಮನನ್ನು ಒಂದು ಸಾವಿರ ಬಾಣಗಳಿಂದ ಘಾಸಿಗೊಳಿಸಿ ಆ ಯುದ್ಧಭೂಮಿಯಲ್ಲಿ ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಸಿಂಹಗರ್ಜನೆಯನ್ನು ಮಾಡಿದನು.

ಶರೀರಾದ್ಯಂತವಾಗಿ ಖರನ ಬಾಣಗಳಿಂದ ಗಾಯಗೊಂಡು ಕ್ರುದ್ಧನಾಗಿದ್ದ ಶ್ರೀರಾಮನು ಆ ಸಮಯದಲ್ಲಿ–ಹೊಗೆಯಿಲ್ಲದೇ ಧಗ-ಧಗನೆ ಉರಿಯುತ್ತಿರುವ ಅಗ್ನಿಯಂತೆಯೇ ಪ್ರಕಾಶಿಸಿದನು. ಶತ್ರುಹಂತಕನಾದ ಶ್ರೀರಾಮನು ಶತ್ರುವನ್ನು ಕೊನೆಗಾಣಿಸುವ ಸಲುವಾಗಿ ಗಂಭೀರವಾದ ಧ್ವನಿಯಿಂದ

ಕೂಡಿದ್ದ ಮತ್ತೊಂದು ಧನುಸ್ಸಿಗೆ ನಾಣನ್ನು ಬಿಗಿದು ಸಜ್ಜುಗೊಳಿಸಿದನು. ಮಹರ್ಷಿಗಳಾದ ಅಗಸ್ತ್ಯರು ಕೊಟ್ಟಿದ್ದ ವೈಷ್ಣವಮಹಾಧನುಸ್ಸೇ ಅದಾಗಿದ್ದಿತು. ಶ್ರೇಷ್ಠವಾದ ಆ ಧನುಸ್ಸನ್ನೆತ್ತಿಕೊಂಡು ಶ್ರೀರಾಮನು ಖರನನ್ನು ಎದುರಿಸಲುಹೋದನು. ಚಿನ್ನದ ರೆಕ್ಕೆಗಳನ್ನು ಹೊಂದಿದ್ದ, ಬಗ್ಗಿದ ಗಿಣ್ಣುಗಳಿದ್ದ ಬಾಣಗಳಿಂದ ಖರನ ರಥದಲ್ಲಿದ್ದ ಧ್ವಜವನ್ನು



ಕತ್ತರಿಸಿದನು. ರಾಮನ ಬಾಣಗಳಿಂದ ಕತ್ತರಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಿದ್ದ ಸುಂದರವಾದ ಆ ಧ್ವಜವು ದೇವತೆಗಳ ಆಜ್ಞೆಯಂತೆ ಧರೆಗಿಳಿದು ಬಂದ ಸೂರ್ಯನಂತೆಯೇ ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಅದರಿಂದ ಕ್ರುದ್ಧನಾದ, ಶತ್ರುವಿನ ಮರ್ಮಸ್ಥಳಗಳು ಯಾವುವೆಂಬುದನ್ನು

ತಿಳಿದಿದ್ದ ಖರನು ನಾಲ್ಕು ಬಾಣಗಳಿಂದ–ಮದಿಸಿದ ಆನೆಯನ್ನು ತೋಮರ ಗಳಿಂದ ಪ್ರಹರಿಸುವಂತೆ–ಶ್ರೀರಾಮನ ಶರೀರದ ಮರ್ಮಸ್ಥಳಗಳಲ್ಲಿ ಪ್ರಹರಿಸಿದನು. ಖರನ ಧನುಸ್ಸಿನಿಂದ ಹೊರಹೊರಟ ಹಲವಾರು ಬಾಣ ಗಳಿಂದ ಪ್ರಹೃತವಾದ ಶ್ರೀರಾಮನ ಅಂಗಾಂಗಗಳೆಲ್ಲವೂ ರಕ್ತದಿಂದ ತೋಯ್ದುಹೋದುವು. ಅದರಿಂದಾಗಿ ಶ್ರೀರಾಮನು ಅತ್ಯಂತಕ್ರುದ್ಧನಾ ದನು. ಧನುಷ್ಮಂತರಲ್ಲಿ ಶ್ರೇಷ್ಠನಾದ ಶ್ರೀರಾಮನು ಆ ಮಹಾಯುದ್ಧದಲ್ಲಿ ಧನುಸ್ಸನ್ನು ಬಲವಾಗಿ ಹಿಡಿದು ಲಕ್ಷ್ಯವನ್ನು ಭೇದಿಸುವ ಸಾಮರ್ಥ್ಯವನ್ನು ಹೊಂದಿದ್ದ ಆರು ಬಾಣಗಳನ್ನು ಖರನ ಮೇಲೆ ಪ್ರಯೋಗಿಸಿದನು. ಒಂದು ಬಾಣದಿಂದ ತಲೆಯನ್ನೂ, ಮತ್ತೆರಡು ಬಾಣಗಳಿಂದ ಎರಡು ತೋಳು ಗಳನ್ನೂ, ಅರ್ಧಚಂದ್ರಾಕಾರವಾಗಿದ್ದ ಉಳಿದ ಮೂರು ಬಾಣಗಳಿಂದ ಖರನ ವಕ್ಷಃಸ್ಥಳವನ್ನೂ ಪ್ರಹರಿಸಿದನು. ಪುನಃ ರಾಮನು ರಾಕ್ಷಸನನ್ನು ಸಂಹರಿಸಲು ನಿಶ್ಚಯಿಸಿ ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಉಜ್ಜುಕಲ್ಲಿನಿಂದ ನಿಶಿತವಾಗಿ ಮಸೆಯಲ್ಪಟ್ಟಿದ್ದ ಹದಿಮೂರು ಬಾಣಗಳನ್ನು ಬತ್ತಳಿಕೆಯಿಂದ ಹೊರತೆಗೆದನು. ದೇವೇಂದ್ರಸದೃಶನಾದ ಶ್ರೀರಾಮನು ಒಂದು ಬಾಣದಿಂದ ರಥದ ನೊಗವನ್ನು ಕತ್ತರಿಸಿದನು. ನಾಲ್ಕು ಬಾಣಗಳಿಂದ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ, ಆರನೆಯ ಬಾಣದಿಂದ ಖರನ ಸಾರಥಿಯ ಕತ್ತನ್ನೂ ಕತ್ತರಿಸಿದನು. ಮೂರು ಬಾಣ ಗಳಿಂದ ನೊಗಕ್ಕೆ ಆಧಾರಭೂತವಾಗಿದ್ದ ಬಿದಿರಿನ ದಂಡವನ್ನೂ, ಮತ್ತೆರಡು ಬಾಣಗಳಿಂದ ಚಕ್ರಗಳಿಗೆ ಆಧಾರಭೂತವಾಗಿದ್ದ ಅಚ್ಚಿನ ಮರಗಳನ್ನೂ, ಹನ್ನೆರಡನೆಯ ಬಾಣದಿಂದ ಖರನ ಶರಸಹಿತವಾದ ಧನುಸ್ಸನ್ನೂ ಕತ್ತರಿಸಿ, ವಜ್ರಾಯುಧಕ್ಕೆ ಸಮಾನವಾಗಿದ್ದ ಹದಿಮೂರನೆಯ ಬಾಣದಿಂದ ನಗು-ನಗು ತ್ತಲೇ ಖರನನ್ನು ಪ್ರಹರಿಸಿದನು. ಆ ಸಮಯದಲ್ಲಿ ಖರನ ಧನುಸ್ಸೂ ಭಗ್ನವಾಗಿ ಹೋಗಿದ್ದಿತು. ರಥವೂ ಮುರಿದುಬಿದ್ದಿದ್ದಿತು. ಕುದುರೆಗಳೂ ಸತ್ತುಹೋಗಿದ್ದುವು. ಸಾರಥಿಯೂ ಅಸುನೀಗಿದ್ದನು. ಹೀಗೆ ಎಲ್ಲವನ್ನೂ ಕಳೆದುಕೊಂಡಿದ್ದ ಖರನು ಗದಾಪಾಣಿಯಾಗಿ ರಥದಿಂದ ಕೆಳಕ್ಕೆ ನೆಗೆದು ರಾಮನಿಗೆದುರಾಗಿ ಭೂಮಿಯ ಮೇಲೆ ನಿಂತನು. ಖರರಾಕ್ಷಸನನ್ನು ನಾನಾ ರೀತಿಗಳಲ್ಲಿ ಬಗ್ಗುಬಡಿದ ಮಹಾರಥನಾದ ಶ್ರೀರಾಮನ ಆ ಮಹಾಸಾಹಸ

ಕಾರ್ಯವನ್ನು ಕಂಡು ವಿಮಾನಾರೂಢರಾಗಿದ್ದ ದೇವತೆಗಳೂ ಮತ್ತು ಮಹರ್ಷಿಗಳೂ ಹೆಚ್ಚು ಸಂತೋಷಗೊಂಡವರಾಗಿ ಕೈಗಳನ್ನು ಮುಗಿದುಕೊಂಡು ಶ್ರೀರಾಮನನ್ನು ಕೊಂಡಾಡಿದರು.

೨೮ನೆಯ ಸರ್ಗವು ಮುಗಿಯಿತು.



## ಶ್ರೀರಾಮನಿಂದ ಖರನ ನಿಂದನೆ: ಖರನ ಕಠೋರವಾದ ಪ್ರತ್ಯುತ್ತರ: ಖರನಿಂದ ಗದಾಪ್ರಹಾರ: ಶ್ರೀರಾಮನಿಂದ ಅದರ ಖಂಡನೆ

**ಖರಂ ತು ವಿರಥಂ ರಾಮೋ ಗದಾಪಾಣಿಮವಸ್ಥಿತಮ್ ।**
**ಮೃದುಪೂರ್ವಂ ಮಹಾತೇಜಾಃ ಪರುಷಂ ವಾಕ್ಯಮಬ್ರವೀತ್ ॥೧॥**

ರಥವಿಲ್ಲದೇ ಗದೆಯನ್ನು ಹಿಡಿದು ನೆಲದಲ್ಲಿಯೇ ನಿಂತಿದ್ದ ಖರನೊಡನೆ ಶ್ರೀರಾಮನು ಮೃದುವಾಗಿಯೂ ಮತ್ತು ಕಠಿಣಾರ್ಥಯುಕ್ತವಾಗಿಯೂ ಇದ್ದ ಮಾತುಗಳನ್ನು ಹೇಳತೊಡಗಿದನು: *

"ರಾಕ್ಷಸಶ್ರೇಷ್ಠನೇ! ರಥ-ಗಜಾಶ್ವ-ಪದಾತಿಸೈನಿಕರ ಅಧಿಪತಿಯಾಗಿರುವ ನೀನು ಸಕಲಲೋಕನಿಂದ್ಯವಾದ ದಾರುಣವಾದ ಕಾರ್ಯಗಳನ್ನೇ ಮಾಡುತ್ತಿರುವೆ.

**ಉದ್ವೇಜನೀಯೋ ಭೂತಾನಾಂ ನೃಶಂಸಃ ಪಾಪಕರ್ಮಕೃತ್ ।**
**ತ್ರಯಾಣಾಮಪಿ ಲೋಕಾನಾಮೀಶ್ವರೋಽಪಿ ನ ತಿಷ್ಠತಿ ॥೩॥**

ಪ್ರಾಣಿಗಳಿಗೆ ಭಯವನ್ನುಂಟುಮಾಡುವ, ಕ್ರೂರಿಯಾದ, ಪಾಪಕರ್ಮ

---

* ಮೃದುಪೂರ್ವವಾಗಿ ಮಾತನಾಡುವುದೇ ಶ್ರೀರಾಮನ ಸ್ವಭಾವ. ಸ ತು ನಿತ್ಯಂ ಪ್ರಶಾನ್ತಾತ್ಮಾ ಮೃದುಪೂರ್ವಂ ಚ ಭಾಷತೇ ॥೨-೧-೧೦॥ ಎಂದು ವಾಲ್ಮೀಕಿಗಳು ಶ್ರೀರಾಮನ ಗುಣವನ್ನು ವರ್ಣಿಸಿದ್ದಾರೆ. ಆದರೆ ಇಲ್ಲಿ ಮೃದುಪೂರ್ವಂ ಎಂಬುದಕ್ಕೆ ವ್ಯಾಖ್ಯಾನಕಾರರು ನ್ಯಾಯಾವಲಮ್ಬನೇನ ಉಕ್ತಂ; ನ್ಯಾಯಮವಲಮ್ಬ್ಯ ಮೃದೂಕ್ತಿಪೂರ್ವಂ–ನ್ಯಾಯದ ಅವಲಂಬನೆಯಿಂದ ಹೇಳಿದ್ದು ಮುಂತಾಗಿ ಅರ್ಥಮಾಡಿರುತ್ತಾರೆ. ಇಲ್ಲಿ ಮಾರ್ದವಕ್ಕೆ ಸ್ಥಾನವಿಲ್ಲ ಎಂಬುದು ಅವರ ಅಭಿಪ್ರಾಯವಾಗಿದೆ. ಆದರೆ ಖರನೊಡನೆ ಕರ್ಣಕಠೋರವಾದ ಮಾತನ್ನು (ಪರುಷಂ) ರಾಮನಾಡಿದರೂ ಧ್ವನಿಯಲ್ಲಿ

ಗಳನ್ನು ಮಾಡುವ ಮನುಷ್ಯನು ಮೂರು ಲೋಕಗಳಿಗೂ ಸ್ವಾಮಿಯಾಗಿದ್ದರೂ ಹೆಚ್ಚುಕಾಲ ಉಳಿಯುವುದಿಲ್ಲ.

ಕರ್ಮ ಲೋಕವಿರುದ್ಧಂ ತು ಕುರ್ವಾಣಂ ಕ್ಷಣದಾಚರ ।
ತೀಕ್ಷ್ಣಂ ಸರ್ವಜನೋ ಹನ್ತಿ ಸರ್ಪಂ ದುಷ್ಟಮಿವಾಗತಮ್ ॥೪॥

ರಾತ್ರಿಂಚರನೇ ! ದುಷ್ಟಸರ್ಪವು ಬಂದಿತೆಂದರೆ ಅದನ್ನು ಎಲ್ಲ ಜನರೂ ಸೇರಿ ಕೊಂದುಹಾಕುವಂತೆ–ಲೋಕವಿರುದ್ಧವಾದ, ಕ್ರೂರವಾದ ಕರ್ಮಗಳನ್ನು ಮಾಡುವವನನ್ನು ಎಲ್ಲರೂ ಕೊಂದುಹಾಕುತ್ತಾರೆ.

ಲೋಭಾತ್ಪಾಪಾನಿ ಕುರ್ವಾಣಃ ಕಾಮಾದ್ವಾ ಯೋ ನ ಬುಧ್ಯತೇ ।
ಭ್ರಷ್ಟಃ ಪಶ್ಯತಿ ತಸ್ಯಾನ್ತಂ ಬ್ರಾಹ್ಮಣೀ ಕರಕಾದಿವ ॥೫॥

ಪರಿಣಾಮವನ್ನು ತಿಳಿಯದೇ ಲೋಭದಿಂದಾಗಲೀ ಕಾಮದಿಂದಾಗಲೀ ಪಾಪಕರ್ಮಗಳನ್ನು ಮಾಡುವವನು ಐಶ್ವರ್ಯಭ್ರಷ್ಟನಾಗಿ – ಆಲಿಕಲ್ಲನ್ನು ತಿಂದುಸಾಯುವ ಜಿಗಣೆಯಂತೆ–ತನ್ನ ವಿನಾಶವನ್ನು ತಾನೇ ಕಾಣುತ್ತಾನೆ. *

ಮಹಾಭಾಗರಾದ, ಧರ್ಮಚಾರಿಗಳಾದ, ದಂಡಕಾರಣ್ಯದಲ್ಲಿ ವಾಸ

---

ಮಾರ್ದವವಿರಬಾರದೆಂಬುದೇನೂ ಇಲ್ಲ. ಮಾತಿನ ಅರ್ಥದಲ್ಲಿ ಕಾಠಿಣ್ಯವಿರಬಹುದು. ಆದರೆ ಅವನು ಆ ಮಾತನ್ನು ಹೇಳುವುದರಲ್ಲಿ ಮಾರ್ದವವಿರಬಹುದು. ಸಾಮಾನ್ಯವಾಗಿ ಕ್ಷತ್ರಿಯನ ಸ್ವಭಾವವೂ ಇದೇ ಆಗಿರುವುದು. ಕ್ಷತ್ರಿಯನಾದ ಪೌಷ್ಯನು ಉತ್ತಂಕನೊಡನೆ ಈ ವಿಷಯವನ್ನು ಹೇಳುತ್ತಾನೆ: "ವಾಙ್ನವನೀತಂ ಹೃದಯಂ ತೀಕ್ಷ್ಣಧಾರಮ್ ಮ. ಭಾ. ೩-೧೨೩ ಕ್ಷತ್ರಿಯನ ಮಾತು ಬೆಣ್ಣೆಗೆ ಸಮಾನವಾಗಿರುತ್ತದೆ ; ಆದರೆ ಹೃದಯವು ಬಹಳ ಕಠೋರವಾಗಿರುತ್ತದೆ". ಆದುದರಿಂದ ಈ ಸಂದರ್ಭದಲ್ಲಿಯೂ ಶ್ರೀರಾಮನು ಖರನೊಡನೆ ಮಾರ್ದವಯುಕ್ತವಾದ ಮಾತನ್ನೇ ಹೇಳಿದನೆಂದರೂ ಸಮಂಜಸವಾಗಿಯೇ ಕಾಣುತ್ತದೆ. 'ಅವನ ಮಾತು ಮೃದುತ್ವದಿಂದ ಕೂಡಿದ್ದಿತು ; ಮಾತಿನ ಅರ್ಥವು ಹೃದಯವಿದ್ರಾವಕವಾಗಿದ್ದಿತು' ಎಂದೇ ಅರ್ಥಮಾಡಬಹುದಾಗಿದೆ.

* ಲೋಭ ಮತ್ತು ಕಾಮಗಳು ಪಾಪಹೇತುಗಳು. ಕಾಮ ಎಂದರೆ ತನ್ನಲ್ಲಿಲ್ಲದೇ ಇರುವುದನ್ನು ಪಡೆದುಕೊಳ್ಳುವ ಇಚ್ಛೆ. ಲೋಭ ಎಂದರೆ ತನ್ನಲ್ಲಿರುವುದನ್ನು ಹೆಚ್ಚಿಸಿಕೊಳ್ಳುವ ಇಚ್ಛೆ. ಅಪ್ರಾಪ್ತಪ್ರಾಪ್ತೀಚ್ಛಾ ಕಾಮಃ । ಪ್ರಾಪ್ತಾಧಿಕೇಚ್ಛಾ ಲೋಭಃ । ಈ ಕಾಮ-ಲೋಭಗಳು ಮನುಷ್ಯನಲ್ಲಿ ಮಿತಿಮೀರಿ ಇದ್ದರೆ ಮಾಡಬಾರದ ಕಾರ್ಯಗಳನ್ನು ಮಾಡಿಸುತ್ತವೆ. ಅಂತಹವನಿಗೆ ಕಾರ್ಯಾಕಾರ್ಯಗಳ ವಿವೇಚನೆಯೇ ಇರುವುದಿಲ್ಲ. ಅದರ ಫಲವಾಗಿ ತನಗೆ ಮುಂದೇನಾದೀತೆಂಬುಷ್ಟನ್ನು ಅವನು ಮನಗಾಣುವು

ಮಾಡುತ್ತಿದ್ದ ತಪಸ್ವಿಗಳನ್ನು ಕಾರಣವಿಲ್ಲದೇ ಸಂಹರಿಸುತ್ತಿದ್ದುದರಿಂದ ಯಾವ ಫಲವನ್ನು ಪಡೆಯುವೆಯೆಂಬುದು ನಿನಗೆ ತಿಳಿದಿರುವುದೇ ?

**ನ ಚಿರಂ ಪಾಪಕರ್ಮಾಣಃ ಕ್ರೂರಾ ಲೋಕಜುಗುಪ್ಸಿತಾಃ ।**
**ಐಶ್ವರ್ಯಂ ಪ್ರಾಪ್ಯ ತಿಷ್ಠನ್ತಿ ಶೀರ್ಣಮೂಲಾ ಇವ ದ್ರುಮಾಃ ॥ ೭॥**

ಪಾಪಕರ್ಮಿಗಳು, ಕ್ರೂರಿಗಳು, ಜನರ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸುವವರು–ಯಾವುದಾದರೂ ಮೂಲದಿಂದ ಐಶ್ವರ್ಯವನ್ನು ಸಂಪಾದಿಸಿದ್ದರೂ–ಬೇರುಗಳೇ ಒಣಗಿಹೋದ ವೃಕ್ಷದಂತೆ– ಹೆಚ್ಚುಕಾಲ ಬದುಕಿರುವುದಿಲ್ಲ.[1]

**ಅವಶ್ಯಂ ಲಭತೇ ಜನ್ತುಃ ಫಲಂ ಪಾಪಸ್ಯ ಕರ್ಮಣಃ ।**
**ಘೋರಂ ಪರ್ಯಾಗತೇ ಕಾಲೇ ದ್ರುಮಾಃ ಪುಷ್ಪಮಿವಾರ್ತವಮ್ ॥**

---

ದಿಲ್ಲ. ಯಾವುದೇ ಮಾರ್ಗದಿಂದಲಾದರೂ ತನ್ನ ಗಳಿಕೆಯು ದಿನದಿನಕ್ಕೂ ಹೆಚ್ಚುತ್ತಿರುವುದನ್ನು ಕಂಡು ಹೃಷ್ಟನಾಗುತ್ತಾನೆ. ಅಂತಹವನು ಕಾಲಾನುಕ್ರಮವಾಗಿ ತನ್ನ ವಿನಾಶವನ್ನು ತಾನೇ ಮಾಡಿಕೊಳ್ಳುತ್ತಾನೆ. ಲೋಭದ ಕಾರಣದಿಂದಾಗಿ ಕುಮಾರ್ಗದಿಂದ ಮಾಡುವ ಅವನ ಗಳಿಕೆಯೇ ಅವನ ವಿನಾಶಕ್ಕೆ ಕಾರಣವಾಗುತ್ತದೆ. ಇದಕ್ಕೆ ಕೊಟ್ಟಿರುವ ಉಪಮಾನವು ಪ್ರಸಿದ್ಧವಲ್ಲದಿದ್ದರೂ ಹೃದಯಂಗಮವಾಗಿದೆ. 'ಆಲಿಕಲ್ಲನ್ನು ತಿನ್ನುವ ಜಿಗಣೆಯಂತೆ ಅವನು ನಾಶಹೊಂದುತ್ತಾನೆ'–ಎಂದು ಹೇಳಿದ್ದಾರೆ. ಜಿಗಣೆಯ ಸ್ವಭಾವವೆಂದರೆ ರಕ್ತಹೀರುವುದು. ಯಾವುದಾದರೂ ಪ್ರಾಣಿಯ ರಕ್ತ ಹೀರಲು ಪ್ರಾರಂಭಿಸಿಬಿಟ್ಟರೆ ಅದಕ್ಕೆ ಬಿಡಲೇ ತಿಳಿಯುವುದಿಲ್ಲ. ಬಹಳ ಕಷ್ಟಪಟ್ಟು ನಾವೇ ಬಿಡಿಸಿಕೊಳ್ಳಬೇಕಾಗುತ್ತದೆ. ಲೋಭಿಯಿಂದ ಬಿಡಿಸಿಕೊಳ್ಳಬೇಕಾದರೂ ಇದೇ ಅವಸ್ಥೆಯೇ. 'ಜಿಗಣೆಯಂತೆ ಲೋಭಿಯು ಸಾಲಗಾರನ ರಕ್ತವನ್ನು ಹೀರಿಬಿಡುತ್ತಾನೆ.' ಎಂಬ ನಾಣ್ಣುಡಿಯೂ ಇದೆ. ಜಿಗಣೆಯು ತನ್ನ ಸ್ವಭಾವಾನುಗುಣವಾಗಿ ಆಲಿಕಲ್ಲು ಬಿದ್ದರೆ ಅದನ್ನು ಕಚ್ಚಿ ಹೀರಲು ಪ್ರಾರಂಭಿಸುತ್ತದೆ. ಆದರೆ ಅದರಲ್ಲಿ ರಕ್ತವಿರುವುದಿಲ್ಲ. ಆಲಿಕಲ್ಲು ಅದಕ್ಕೆ ವಿಷವಾಗಿ ಪರಿಣಮಿಸುತ್ತದೆ. ಆಲಿಕಲ್ಲಿನಿಂದಲೇ ಅದಕ್ಕೆ ಮರಣ.

1 ಒಬ್ಬನ ಯಶಸ್ಸಿಗೆ, ಶ್ರೇಯಸ್ಸಿಗೆ, ಪ್ರೇಯಸ್ಸಿಗೆ ಅವನ ಕರ್ಮಾಚರಣೆಯೇ ಕಾರಣವಾಗುತ್ತದೆ. ಕರ್ಮಾಚರಣೆಯೆಂಬುದು ಮರದ ಬೇರಿದ್ದಂತೆ. ಮರದ ಬೇರು ಹಸಿಯಾಗಿದ್ದರೆ ದೃಢವಾಗಿದ್ದರೆ ಮರವು ಒಣಗಿಹೋಗದೇ ಒಳ್ಳೊಳ್ಳೆಯ ಫಲಗಳನ್ನು ಕೊಡುತ್ತಿರುತ್ತದೆ. ಅದೇ ರೀತಿಯಲ್ಲಿ ಮನುಷ್ಯನ ಕರ್ಮಗಳು ಸದ್ಯುಕ್ತವಾಗಿದ್ದರೆ ಅವನಿಗೆ ಅನುಗುಣವಾಗಿ ಶ್ರೇಯಃ-ಪ್ರೇಯಗಳು ಲಭಿಸುತ್ತವೆ. ಅದಕ್ಕೆ ವಿರುದ್ಧವಾಗಿ

ಪಾಪಕರ್ಮಿಯೂ ಕಾಲವು ಪಕ್ವನಾದಾಗ ಆ ಪಾಪಕ್ಕೆ ತಕ್ಕುದಾದ ಘೋರಫಲವನ್ನು ಅನುಭವಿಸಿಯೇ ತೀರುತ್ತಾನೆ. ಋತುವು ( ವಸಂತವು ) ಬಂದೊಡನೆಯೇ ವೃಕ್ಷಗಳು ಹೂಗಳಿಂದ ತುಂಬುವಂತೆ–ಮನುಷ್ಯನು ಕಾಲವು ಪರಿಪಕ್ವವಾದೊಡನೆಯೇ ಅದರ ಫಲವನ್ನು ಪಡೆದೇ ತೀರುತ್ತಾನೆ. *

ನ ಚಿರಾತ್ಪ್ರಾಪ್ಯತೇ ಲೋಕೇ ಪಾಪಾನಾಂ ಕರ್ಮಣಾಂ ಫಲಮ್ ।
ಸವಿಷಾಣಾಮಿವಾನ್ನಾನಾಂ ಭುಂಕ್ತಾನಾಂ ಕ್ಷಣದಾಚರ ॥೯॥

ವಿಷಮಿಶ್ರಿತವಾದ ಆಹಾರವನ್ನು ತಿನ್ನುವವರು ಎಷ್ಟು ಬೇಗ ಅದರ

ಹೀಗೆಯೇ ಪರರಸ್ವತ್ತನ್ನು ಅಪಹರಿಸುವ ಅಥವಾ ಕುಮಾರ್ಗದಲ್ಲಿ ಧನಗಳಿಸುವ ಸ್ವಭಾವವುಳ್ಳ ಲೋಭಿಯೂ ಒಮ್ಮೆ ಸಿಕ್ಕಿಹಾಕಿಕೊಂಡು ವಿನಾಶಹೊಂದುತ್ತಾನೆ. ಕರಕಾತ್ ಬ್ರಾಹ್ಮಣೀವ ಎಂಬುದಕ್ಕೆ ಇಷ್ಟು ವಿವರಣೆಕೊಡಬಹುದಾಗಿದೆ. ಕರಕಾ ಎಂದರೆ ಆಲಿಕಲ್ಲು. ವರ್ಷೋಪಲಸ್ತು ಕರಕಾ (ಅಮರಃ) ಬ್ರಾಹ್ಮಣೀ = ಜಿಗಣೆ. ಬ್ರಾಹ್ಮಣೀ ರಕ್ತಪುಚ್ಛಿಕಾ ( ನಿಘಂಟುಃ )

ಮನುಷ್ಯನ ಕರ್ಮಗಳು ಕ್ರೂರವಾಗಿಯೂ, ಪಾಪಭೂಯಿಷ್ಠವಾಗಿಯೂ, ಇತರರಿಗೆ ಜುಗುಪ್ಸೆಯನ್ನುಂಟುಮಾಡುವುದಾಗಿಯೂ ಆಗಿದ್ದರೆ–ಆ ಕರ್ಮಗಳ ಫಲವಾದ ವಿನಾಶವು ಖಂಡಿತ. ಆದರೆ ಇಂತಹ ದುಷ್ಕರ್ಮಗಳಿಂದಲೂ ಯಥೇಚ್ಛವಾಗಿ ಐಶ್ವರ್ಯವನ್ನು ಸಂಪಾದಿಸಬಹುದು. ಆದರೆ ಮನುಷ್ಯನ ಶ್ರೇಯಃ-ಪ್ರೇಯಗಳು ಕೇವಲ ಐಶ್ವರ್ಯದಿಂದಲೇ ಸಾಧಿತವಾದುವುಗಳಲ್ಲ. ಪಾಪದ ಫಲವಾಗಿ ಬರುವ ಮಹಾರೋಗಗಳಿಗೆ ಹಣವು ಪರಿಹಾರ ನೀಡುವುದಿಲ್ಲ. ಹಣದ ವ್ಯಯದಲ್ಲಿ ಮಾತ್ರವೇ ಪರ್ಯವಸಾನವಾಗುತ್ತದೆ. ಮನುಷ್ಯನು ಮಾಡಿದ ಸತ್ಕರ್ಮಗಳು ಆವನನ್ನು ಕಾಯಬಲ್ಲುವೇ ಹೊರತು ಕುತ್ಸಿತವಾದ ಮಾರ್ಗದಿಂದ ಬರುವ ಹಣವು ಯಾವ ರೀತಿಯಲ್ಲಿಯೂ ಕಾಯಲಾರದು–ಎಂಬ ಆಧ್ಯಾತ್ಮಿಕರಹಸ್ಯವನ್ನು ಶ್ರೀರಾಮನಿಲ್ಲಿ ಮನಮುಟ್ಟುವಂತೆ ಹೇಳಿದ್ದಾನೆ.

* ಒಬ್ಬನು ಪಾಪಕರ್ಮಮಾಡುತ್ತಿರುವುದನ್ನು ನಾವು ನೋಡುತ್ತಲೇ ಇರುತ್ತೇವೆ. ಆದರೆ ಆವನು ಆ ಪಾಪಕರ್ಮದಿಂದ ಸಂಪಾದಿಸಿದ ಹಣದಿಂದ ಸುಖವಾಗಿರುವುದನ್ನೂ ಕಾಣುತ್ತೇವೆ. ಒಬ್ಬನಿಗೆ ಮನೆ-ಮಠ-ಮಡದಿ-ಮಕ್ಕಳು ಇದ್ದು, ಅವನು ಬೆಲೆಬಾಳುವ ಬಟ್ಟೆಯನ್ನು ಧರಿಸಿಕೊಂಡಿರುತ್ತಿದ್ದರೆ ಅವನು ಮಹಾಸುಖಿ–ಎಂದು ಅಭಿಪ್ರಾಯಪಡುತ್ತಾರೆ. ಅವನ ಮನಸ್ಸಿನಲ್ಲಿರುವುದನ್ನು ಯಾರೂ ತಿಳಿಯಲಾರರು. ಇದರಿಂದಾಗಿ ಪಾಪಕರ್ಮಗಳನ್ನು ಮಾಡಿದರೂ ಆವನು ಸುಖವಾಗಿದ್ದಾನೆಂಬ ಅಭಿಪ್ರಾಯವು ಜನರಲ್ಲಿ ಮೂಡುವುದು ಸ್ವಾಭಾವಿಕವಾಗಿರುತ್ತದೆ. ಮೊದಲನೆಯದಾಗಿ ಪಾಪಕಾರ್ಯವು ಒಡನೆಯೇ ಫಲವನ್ನು ಕೊಟ್ಟುಬಿಡುವುದಿಲ್ಲ. ಆದುದರಿಂದಲೇ ಹಿರಿಯರು ಅಧಃಪತನಕ್ಕೆ

ಫಲವನ್ನು ಪಡೆಯುವರೋ ಅಷ್ಟೇ ಶೀಘ್ರವಾಗಿ (ಅತ್ಯುತ್ಕಟವಾದ) ಪಾಪ ಕರ್ಮಗಳನ್ನು ಮಾಡಿದವನು ಅದರ ಫಲವನ್ನು ಪಡೆದುಕೊಳ್ಳುತ್ತಾನೆ. *

ಪಾಪಮಾಚರತಾಂ ಘೋರಂ ಲೋಕಸ್ಯಾಪ್ರಿಯಮಿಚ್ಛತಾಮ್ ।
ಅಹಮಾಸಾದಿತೋ ರಾಜ್ಞಾ ಪ್ರಾಣಾನ್ಹಂತುಂ ನಿಶಾಚರ ॥೧೦॥

ನಿಶಾಚರನೇ! ಘೋರವಾದ ಪಾಪಗಳನ್ನು ಮಾಡುವವರ ಮತ್ತು ಜನರಿಗೆ ಅಹಿತವನ್ನು ಬಯಸುವವರ ಸಂಹಾರಕ್ಕಾಗಿಯೇ ರಾಜನಾದ ದಶರಥನಿಂದ ನಿಯುಕ್ತನಾಗಿ ಇಲ್ಲಿಗೆ ಬಂದಿರುತ್ತೇನೆ.

ಈಗ ನಾನು ಪ್ರಯೋಗಿಸುವ ಚಿನ್ನದ ಆಭೂಷಣಗಳನ್ನು ಹೊಂದಿರುವ ಬಾಣಗಳು ನಿನ್ನನ್ನು ಸೀಳಿಕೊಂಡು–ಹಾವುಗಳು ಹುತ್ತವನ್ನು ಬಿಟ್ಟು ಹೊರ ಬರುವಂತೆ–ನಿನ್ನ ಶರೀರದಿಂದ ಹೊರಬಂದು ಭೂಮಿಯ ಮೇಲೆ ಬೀಳುತ್ತವೆ. ನೀನು ಈ ದಂಡಕಾರಣ್ಯದಲ್ಲಿ ಧರ್ಮಚಾರಿಗಳಾದ ಯಾವ ಋಷಿಗಳನ್ನು ಭಕ್ಷಿ

---

'ಪಾಪದ ಕೊಡ ತುಂಬಬೇಕು' ಎನ್ನುತ್ತಾರೆ. ಆದರೆ ಫಲವನ್ನನುಭವಿಸುವುದಂತೂ ಶತಾಂಶ ಸತ್ಯವಾದುದು. ಇದಕ್ಕೆ ಇಲ್ಲಿ ಕೊಟ್ಟಿರುವ ಉಪಮೆಯೂ ಮನೋಜ್ಞವಾಗಿದೆ. ವಸಂತರ್ತುವು ಬಂದೊಡನೆಯೇ ಮರವು ಚಿಗುರಿ ಕುಸುಮಿತವಾಗುತ್ತದೆ. ಎಷ್ಟೇ ನೀರು ಹಾಕಿ ಕೃಷಿಮಾಡಿದರೂ ಆ ಋತುವು ಬಂದಲ್ಲದೇ ವೃಕ್ಷವು ಕುಸುಮಿತವಾಗುವುದಿಲ್ಲ. ಆ ಋತುವಿನಲ್ಲಿ ಕುಸುಮಿತವಾಗುವುದನ್ನು ತಪ್ಪಿಸುವುದಕ್ಕೂ ಆಗುವುದಿಲ್ಲ. ಅದರಂತೆಯೇ ಪಾಪಕ್ಕೆ ಫಲವಂತೂ ಇದ್ದೇ ಇದೆ. ಆದರೆ ಅದಕ್ಕೆ ಕಾಲ ಬರಬೇಕು. ಪಾಪದ ಕೊಡವು ತುಂಬಿತೆಂದರೆ ಅದರ ದುಷ್ಫಲಗಳು ಒಂದಾದರ ಮೇಲೆ ಮತ್ತೊಂದು ಬರುತ್ತಲೇ ಇರುತ್ತವೆ. ಅನುಭವಿಸುವವನಿಗೆ ಅದರ ಅರಿವು ಚೆನ್ನಾಗಿ ಆಗುತ್ತದೆಯೇ ಹೊರತು ನೋಡುವವರಿಗೆ ಅಷ್ಟಾಗಿ ತಿಳಿಯುವುದಿಲ್ಲ. ಪಾಪಫಲರೂಪದಲ್ಲಿ

---

* ವಿಷ ಎಂದರೆ ತಿಂದೊಡನೆಯೇ ಸತ್ತು ಹೋಗುವ ತೀಕ್ಷ್ಣವಿಷವೂ ಆಗುತ್ತದೆ. ಪಾಪಮಾಡಿದ ಮರುಕ್ಷಣದಲ್ಲಿಯೇ ಅದರ ಫಲವು ಲಭಿಸುತ್ತದೆ ಎಂಬ ಅರ್ಥವಾಗುತ್ತದೆ. ಇದರಲ್ಲಿ ಕಾಲಪರಿಪಕ್ವತೆಯ ಗಡುವಿಲ್ಲ. ಆದುದರಿಂದ ಅರ್ಥೈಸುವಾಗ 'ಅತ್ಯುತ್ಕಟ' ಎಂಬುದನ್ನು ಸೇರಿಸಲಾಗಿದೆ. ಮತ್ತೊಂದು ವಿಧವಾದ ವಿಷವಿದೆ. ಇದಕ್ಕೆ ಗ್ರಾಮ್ಯಭಾಷೆಯಲ್ಲಿ 'ಮದ್ದು' ಎನ್ನುತ್ತಾರೆ. ಇದನ್ನು ಯಾರು ಹಾಕಿದರು ? ಯಾವಾಗ ಹಾಕಿದರು ? ಏತಕ್ಕಾಗಿ ಹಾಕಿದರು ?–ಎಂಬುದು ಯಾವುದೂ ತಿಳಿಯುವುದಿಲ್ಲ. ಮದ್ದು ತಿಂದವನು ಮಾತ್ರ ಕೃಶನಾಗುತ್ತಾ ಕಾಲಕ್ರಮದಲ್ಲಿ ಅಸುವನ್ನು ನೀಗುತ್ತಾನೆ. ಪಾಪ ಕರ್ಮದ ವಿಷಯವೂ ಹೀಗೆಯೇ. ಕಾಲಾನುಕ್ರಮವಾಗಿ ಇದು ಮನುಷ್ಯನನ್ನು ವಿನಾಶಗೊಳಿಸುತ್ತದೆ.

ಸಿದೆಯೋ-ಅವರನ್ನೇ ಅನುಸರಿಸಿ ಸೈನ್ಯಸಮೇತನಾಗಿ ನೀನೂ ಯಮಾಲಯಕ್ಕೆ ಹೋಗುವೆ.

ಅದ್ಯ ತ್ವಾಂ ನಿಹತಂ ಬಾಣೈಃ ಪಶ್ಯನ್ತು ಪರಮರ್ಷಯಃ ।
ನಿರಯಸ್ಥಂ ವಿಮಾನಸ್ಥಾ ಯೇ ತ್ವಯಾ ಹಿಂಸಿತಾಃ ಪುರಾ ॥೧೩॥

ನಿಶಾಚರನೇ! ಹಿಂದೆ ನಿನ್ನಿಂದ ಕೊಲ್ಲಲ್ಪಟ್ಟು ಈಗ ದಿವ್ಯಶರೀರಗಳನ್ನು ಹೊಂದಿ, ನಮ್ಮ ಯುದ್ಧವನ್ನು ನೋಡಲು ವಿಮಾನಾರೂಢರಾಗಿ ಬಂದಿರುವ ಪರಮರ್ಷಿಗಳು ಈಗ ನೀನು ನನ್ನ ಬಾಣಗಳಿಂದ ಹತನಾಗುವುದನ್ನೂ ಮತ್ತು ನರಕದಲ್ಲಿರುವುದನ್ನೂ (ನರಕಸದೃಶವಾದ ದುಃಖದಲ್ಲಿರುವುದನ್ನೂ) ನೋಡಲಿ. *

ರಾಕ್ಷಸಾಧಮನೇ! ನಿನ್ನ ಮನಸ್ಸಿಗೆ ತೃಪ್ತಿಯಾಗುವಷ್ಟು ನನ್ನನ್ನು ಪ್ರಹರಿಸು. ಸಂಹರಿಸುವ ಪ್ರಯತ್ನವನ್ನೂ ಮಾಡು. ಈಗಲೇ ನಾನು ತಾಳೇಹಣ್ಣನ್ನು ಕೆಳಕ್ಕೆ ಕೆಡಹುವಂತೆ-ನಿನ್ನ ತಲೆಯನ್ನು ಕೆಳಗುರುಳಿಸುತ್ತೇನೆ."

---

ಮಾನಸಿಕವ್ಯಾಧಿಯೇ ಹತ್ತಿಕೊಳ್ಳಬಹುದು. ಇದು ಬೇರೆಯವರಿಗೆ ತಿಳಿಯುವುದೆಂತು? ಮಾನಸಿಕವ್ಯಾಧಿಗೆ ಸಿಕ್ಕಿ ನರಳುತ್ತಾ ಮುಂದಿನ ಹಾದಿ ಕಾಣದೇ ದೇಹತ್ಯಾಗವನ್ನೇ ಮಾಡಿರುವವರು ಎಷ್ಟೋ ಮಂದಿ ಇದ್ದಾರೆ. ಆದುದರಿಂದ ಪಾಪಕರ್ಮಿಯು ಸುಖವಾಗಿರುತ್ತಾನೆಂದಾಗಲೀ, ಅವನಿಗೆ ಆ ಪಾಪದ ಫಲವು ಲಭಿಸದೆಂದಾಗಲೀ-ಖಂಡಿತವಾಗಿಯೂ ಭಾವಿಸಬಾರದು. ಪುಣ್ಯಕರ್ಮವನ್ನೇ ಮಾಡಲೀ, ಪಾಪಕರ್ಮವನ್ನೇ ಮಾಡಲೀ-ಅದರ ಫಲವು ಇದ್ದೇ ಇರುತ್ತದೆ. ಆದರೆ ಕಾಲವು ಪಕ್ವವಾದಾಗ ಮಾತ್ರ ಅದರ ಫಲಾನುಭವವಾಗುತ್ತದೆ. ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ-ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಈ ವಿಷಯವನ್ನೇ ಶ್ರೀರಾಮನು ಮುಂದಿನ ಶ್ಲೋಕದಲ್ಲಿ ಇನ್ನೂ ಸ್ಪಷ್ಟವಾಗಿ ಹೇಳುತ್ತಾನೆ.

* ನಿರಯಃ-ಎಂದರೆ ನರಕ; ನಿರಯಸ್ಥಃ-ಎಂದರೆ ನರಕದಲ್ಲಿರುವವನು. ಪ್ರಕೃತ ಸಂದರ್ಭದಲ್ಲಿ ವಿಮಾನಾರೂಢರಾಗಿರುವ ಪರಮರ್ಷಿಗಳು ರಾಮನ ಬಾಣಗಳಿಂದ ಖರನು ಹತನಾಗುವುದನ್ನು ನೋಡಬಲ್ಲರೇ ಹೊರತು ನರಕದಲ್ಲಿರುವುದನ್ನು ಅವರು ನೋಡಲಾರರು. ಏಕೆಂದರೆ: ನರಕವೆಂಬ ಲೋಕವು ಭೂಮಿಯ ಮೇಲಿಲ್ಲ. ಎರಡನೆಯದಾಗಿ ಸಂಹಾರ, ಒಡನೆಯೇ ನರಕವಾಸ ಎರಡನ್ನೂ ಏಕಕಾಲದಲ್ಲಿ ಕಾಣಲು ಸಾಧ್ಯವಾಗುವುದಿಲ್ಲ. ಈ ಕಾರಣಗಳಿಂದಾಗಿ ನಿರಯಸ್ಥಂ ಎಂಬುದಕ್ಕೆ ಒಬ್ಬೊಬ್ಬರೂ ಒಂದೊಂದು

ಶ್ರೀರಾಮನು ಖರನಿಗೆ ಹೀಗೆ ಹೇಳಲು ಕ್ರುದ್ಧನಾಗಿದ್ದ, ಕೆಂಗಣ್ಣನಾಗಿದ್ದ ಖರನು ವಿಕಟಾಟ್ಟಹಾಸದಿಂದ ಗಹ-ಗಹಿಸಿ ನಗುತ್ತಾ ಹೇಳಿದನು :

"ದಶರಥಪುತ್ರನೇ ! ನೀನು ಸಾಧಾರಣರಾದ ರಾಕ್ಷಸರನ್ನು ಯುದ್ಧದಲ್ಲಿ ಸಂಹರಿಸಿ ಆತ್ಮಶ್ಲಾಘನೆಯನ್ನೇಕೆ ಮಾಡಿಕೊಳ್ಳುತ್ತಿರುವೆ? ನೀನು ಪ್ರಶಂಸೆಗೆ ಖಂಡಿತವಾಗಿಯೂ ಯೋಗ್ಯನಾಗಿಲ್ಲ.

ವಿಕ್ರಾನ್ತಾ ಬಲವನ್ತೋ ವಾ ಯೇ ಭವನ್ತಿ ನರರ್ಷಭಾಃ ।
ಕಥಯನ್ತಿ ನ ತೇ ಕಿಂಚಿತ್ತೇಜಸಾ ಸ್ವೇನ ಗರ್ವಿತಾಃ ॥೧೭॥

ಅತ್ಯಂತಪರಾಕ್ರಮಶಾಲಿಗಳಾದ ಮಹಾಬಲಿಷ್ಠರಾದ ಪುರುಷಶ್ರೇಷ್ಠರು ತಮ್ಮ ಬಲ-ಶೌರ್ಯ-ಪರಾಕ್ರಮಗಳ ವಿಷಯವಾಗಿ ಅತಿಗರ್ವಿತರಾಗಿ ಯಾವ ಮಾತನ್ನೂ ಆಡುವುದಿಲ್ಲ.

ಪ್ರಾಕೃತಾಸ್ತ್ವಕೃತಾತ್ಮಾನೋ ಲೋಕೇ ಕ್ಷತ್ರಿಯಪಾಂಸನಾಃ ।
ನಿರರ್ಥಕಂ ವಿಕತ್ಥನ್ತೇ ಯಥಾ ರಾಮ ವಿಕತ್ಥಸೇ ॥೧೮॥

---

ಬಗೆಯಾಗಿ ಅರ್ಥಮಾಡಿರುತ್ತಾರೆ. ೧) ನಿರಯಸ್ಥಂ= ನರಕಸದೃಶಂ ದುಃಖಂ ಭೂಮೌ ಪತಿತ್ವಾತ್ ಅನುಭವನ್ತಂ:–ಭೂಮಿಯಲ್ಲಿ ಬಿದ್ದು ನರಕಸದೃಶವಾದ ದುಃಖವನ್ನು ಅನುಭವಿಸುತ್ತಿರುವವನನ್ನು ೨) ನಿರಯಸ್ಥಂ= ನಿರ್ಗತಃ ಅಯಃ ಪುನರಿಹಲೋಕೇ ಪುತ್ರಪೌತ್ರಾದಿದರ್ಶನಾರ್ಥಂ ಗಮನಂ ಯಸ್ಮಾತ್ ತತ್ ಲೋಕವಿಶೇಷಸ್ಥಂ= ಯಾವ ಲೋಕಕ್ಕೆ ಹೋಗುವುದರಿಂದ ಈ ಲೋಕದಲ್ಲಿ ಪುನಃ ಪುತ್ರ-ಪೌತ್ರಾದಿಗಳ ದರ್ಶನಕ್ಕೆ ಸಾಧ್ಯವಾಗುವುದಿಲ್ಲವೋ ಅಂತಹ ವಿಶೇಷಲೋಕಕ್ಕೆ ಹೋಗುವ ನಿನ್ನನ್ನು (ಇದು ನರಕವೂ ಆಗಬಹುದು; ಸ್ವರ್ಗವೂ ಆಗಬಹುದು.) ೩) ಮತ್ತೊಬ್ಬರು ನಿರಯಃ ಎಂಬುದಕ್ಕೆ ನರಕವೆಂದೇ ಅರ್ಥಮಾಡಿ ಪರಮಾತ್ಮನನ್ನು ದರ್ಶನಮಾಡುತ್ತಾ ಪ್ರಾಣ ತೊರೆದರೂ ನರಕ ಪ್ರಾಪ್ತಿಯಾಗುತ್ತದೆ – ಎಂಬುದಕ್ಕೆ ಹೀಗೆ ಸಮಾಧಾನಹೇಳಿದ್ದಾರೆ. ಅತ್ಯುಗ್ರವಾದ ಬ್ರಹ್ಮವಧೆ ಮುಂತಾದುವಕ್ಕೆ ನರಕವಾಸಪ್ರಾಪ್ತಿಯಾಗಲೇಬೇಕು. ಆದರೆ ಮರಣಕಾಲದಲ್ಲಾಗುವ ಪರಮಾತ್ಮನ ದರ್ಶನವೂ ನಿರರ್ಥಕವಲ್ಲ. ಅತ್ಯುಗ್ರಸ್ಯ ಬ್ರಹ್ಮವಧಕರ್ಮಣಃ ಫಲಸ್ಯ ಅವಶ್ಯಂ ಭೋಕ್ತವ್ಯತ್ವೇನ ಆದೌ ಭಗವದಿಚ್ಛಯೈವ ನಿರಯಭೋಗಪೂರ್ವಂ ಉತ್ತಮಪದಪ್ರಾಪ್ತೇಃ ಸತ್ತ್ವೇನ ನ ದೋಷಃ ನರಕದ ಭೋಗವನ್ನು ಅನುಭವಿಸಿದನಂತರ ಉತ್ತಮಲೋಕದ ಪ್ರಾಪ್ತಿಯೇ ಆಗುತ್ತದೆ–ಎಂದಿದ್ದಾರೆ. ೪) ನಿರಯಸ್ಥಂ= ದುರ್ದಶಾಂ ಪ್ರಾಪ್ತಂ–ದುರ್ದೆಸೆಯನ್ನು ಹೊಂದಿದವನನ್ನು. ಈ ವ್ಯಾಖ್ಯಾನಕಾರರ ಅಭಿಪ್ರಾಯದಂತೆ ಭಗವಂತನ ಕೈಲಿ ಮರಣಹೊಂದಿದವನಿಗೆ ಸದ್ಗತಿಯೇ

ರಾಮ ! ಯುದ್ಧದಲ್ಲಿ ಯಾವ ವಿಧವಾದ ಕೌಶಲವೂ ಇಲ್ಲದಿರುವ ಜಿತೇಂದ್ರಿಯರಲ್ಲದ ಕ್ಷತ್ರಿಯಕುಲಕಳಂಕರು ಮಾತ್ರವೇ-ನೀನು ಬಡಾಯಿ ಕೊಚ್ಚುತ್ತಿರುವಂತೆ ನಿರರ್ಥಕವಾಗಿ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳು ತ್ತಾರೆ.

ಕುಲಂ ವ್ಯಪದಿಶನ್ವೀರಃ ಸಮರೇ ಕೋಽಭಿಧಾಸ್ಯತಿ ।
ಮೃತ್ಯುಕಾಲೇ ತು ಸಂಪ್ರಾಪ್ತೇ ಸ್ವಯಮಪ್ರಸ್ತವೇ ಸ್ತವಪ್ ॥

ಯುದ್ಧವೆಂದರೆ ಮರಣವು ಸನ್ನಿಹಿತವಾದ ಕಾಲ. ಆ ಕಾಲವು ಬಂದಿರುವಾಗ ಪರಸ್ಪರವಾಗಿ ಆಯುಧಪ್ರಹಾರಗಳ ಹೊರತಾಗಿ ಬೇರೆಯ ಪ್ರಸ್ತಾಪಕ್ಕೇ ಅವಕಾಶವಿಲ್ಲದಿರುವಾಗ ಯಾವ ವೀರನು ತಾನೇ ತನ್ನ ಕುಲೀನತೆಯನ್ನು ಪ್ರಕಟಪಡಿಸುತ್ತಾ ನಿನ್ನಂತೆ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆ? ಚಿನ್ನದಂತೆಯೇ ಬಣ್ಣವಿರುವ ಲೋಹವು ಪುಟಕ್ಕೆ ಹಾಕಿದೊಡನೆಯೇ ಅದರ ನಿಜಸ್ವರೂಪವು ತಿಳಿಯುವಂತೆ-ನೀನು ಬಡಾಯಿಕೊಚ್ಚಿದ್ದರಿಂದ ನಿನ್ನ ಸಣ್ಣತನದ ಪ್ರದರ್ಶನವಾಯಿತು. * ಸಕಲವಿಧವಾದ ಗೈರಿಕಾದಿ

---

ಹೊರತು ನರಕವಾಸವು ಖಂಡಿತವಾಗಿಯೂ ಇಲ್ಲ. ಇದನ್ನು ಪ್ರತಿಪಾದಿಸಲು ಇವರು ಸ್ಕಾಂದಪುರಾಣದ ಶ್ಲೋಕವನ್ನು ಉದ್ಧರಿಸಿದ್ದಾರೆ. ನಿಶಾಚರಾ ರಾಮವಿದ್ಧಾಃ ಬಾಣೈರ್ಮರ್ಮಸು ಪೀಡಿತಾಃ । ರಾಮಮಾಸಾದ್ಯ ಸಮರೇ ಸಾಯುಜ್ಯಪದವೀಂ ಗತಾಃ ॥ ಯುದ್ಧದಲ್ಲಿ ರಾಮನನ್ನು ಎದುರಿಸಿ ಅವನ ಬಾಣಗಳಿಂದ ಮರ್ಮಸ್ಥಾನಗಳಲ್ಲಿ ಪೀಡಿತರಾಗಿ ಅಸುವನ್ನು ತೊರೆದು ಸಾಯುಜ್ಯವನ್ನೇ ಪೊಂದಿದರು. ೫) ಆಯುಃ:- ಎಂದರೆ ಒಳ್ಳೆಯ ಅದೃಷ್ಟ ಎಂದಾಗುತ್ತದೆ. ನಿರ್ಗತವಾದ ಆಯುವುಳ್ಳವನು ಎಂದರೆ ಅದೃಷ್ಟಹೀನನು ಎಂದರ್ಥ. ನಿರಯಸ್ಥಃ ಎಂದರೆ ದುರದೃಷ್ಟಸ್ಥಿತಿಯಲ್ಲಿರತಕ್ಕವನು ಎಂದು ಅರ್ಥಮಾಡಬಹುದಾಗಿದೆ. ರಾಮನ ಬಾಣಗಳಿಂದ ನಿಹತನಾದನಂತರ ಖರನು ದುಃಸ್ಥಿತಿಯಲ್ಲಿರುವುದು ಸ್ವಾಭಾವಿಕವಾಗಿಯೇ ಇದೆ. ಹೇಳುವವರಾಗಲೀ ಕೇಳುವವರಾಗಲೀ ಇಲ್ಲದಿರುವ ಸ್ಥಿತಿ. ಹೀಗೆ ಅರ್ಥಮಾಡಿದರೆ ವಿರೋಧಾಭಾಸಗಳಿರುವುದಿಲ್ಲವೆಂಬುದು ನಮ್ಮ ಅಭಿಪ್ರಾಯವಾಗಿದೆ.

* ಕುಶಾಗ್ನಿ ಎಂಬುದಕ್ಕೆ ಮೂಸೆಯಲ್ಲಿರುವ ಅಗ್ನಿ ಎಂದು ನೇರವಾದ ಅರ್ಥವಾಗುವುದಿಲ್ಲ. ಆದುದರಿಂದ ಸುವರ್ಣಪ್ರತಿರೂಪೇಣ ತಪ್ತೇನೇವ ಕುಶಾಗ್ನಿನಾ-ಎಂಬ ಉತ್ತರಾರ್ಧಕ್ಕೆ ಒಬ್ಬ ವ್ಯಾಖ್ಯಾನಕಾರರು ಮತ್ತೊಂದು ರೀತಿಯಲ್ಲಿ ವ್ಯಾಖ್ಯೆಮಾಡಿರುತ್ತಾರೆ. ಹುಲ್ಲಿಗೆ ಹತ್ತಿಕೊಂಡ ಬೆಂಕಿಯು ನೋಡಲು ಕಾದ ಚಿನ್ನದ ರೂಪದಿಂದಲೇ ಬೆಳಗುತ್ತಿರುತ್ತದೆ. ಆದರೆ ಕ್ಷಣಮಾತ್ರದಲ್ಲಿ ಬೆಂಕಿಯು ಉಡುಗಿಹೋಗಿ ಅದಕ್ಕೆ ದಹಿಸುವ ಶಕ್ತಿಯೂ

ಧಾತುಗಳಿಂದಲೂ ಪೂರ್ಣವಾಗಿರುವ ಮತ್ತು ಭೂಮಂಡಲವನ್ನೇ ಧರಿಸಿರುವ ಪರ್ವತದೋಪಾದಿಯಲ್ಲಿ – ಅಚಲನಾಗಿ ಗದೆಯನ್ನು ಹಿಡಿದು ನಿಂತಿರುವ ನನ್ನನ್ನು ನೀನು ನೋಡುತ್ತಿಲ್ಲವೇ ? ಪಾಶವನ್ನು ಹಿಡಿದಿರುವ ಯಮನೋಪಾದಿಯಲ್ಲಿ ಗದೆಯನ್ನು ಹಿಡಿದು ನಿಂತಿರುವ ನಾನು ನಿನ್ನ ಮತ್ತು ಈ ಮೂರು ಲೋಕಗಳಲ್ಲಿರುವ ಎಲ್ಲ ಪ್ರಾಣಿಗಳ ಪ್ರಾಣಗಳನ್ನೂ ಅಪಹರಿಸಲು ಸಾಕಷ್ಟು ಪರಾಕ್ರಮವುಳ್ಳವನಾಗಿರುವೆನು. ನಿನಗೆ ನನ್ನ ಪರಾಕ್ರಮದ ವಿಷಯದಲ್ಲಿ ಹೇಳಬೇಕಾದುದು ಬಹಳವಾಗಿದೆ. ಆದರೆ ಈಗ ಹೆಚ್ಚು ಹೇಳಹೋಗುವುದಿಲ್ಲ. ಏಕೆಂದರೆ : ಸೂರ್ಯನು ಅಸ್ತನಾಗಿಬಿಟ್ಟರೆ ನಮ್ಮ ಯುದ್ಧಕ್ಕೆ ವಿಘ್ನವುಂಟಾಗುತ್ತದೆ.* ನೀನು ಹದಿನಾಲ್ಕು ಸಾವಿರ ರಾಕ್ಷಸರನ್ನು ಕೊಂದಿರುವೆ. ನಿನ್ನನ್ನು ವಿನಾಶಗೊಳಿಸಿ ಆ ಎಲ್ಲ ರಾಕ್ಷಸರ ಬಂಧುಗಳ ಕಣ್ಣೀರನ್ನು ಒರೆಸುತ್ತೇನೆ. ನಿನ್ನ ಸಂಹಾರದಿಂದಲೇ ರಾಕ್ಷಸರ ಬಂಧುಗಳಿಗೆ ಸಮಾಧಾನವಾಗುತ್ತದೆ."

---

ಇರುವುದಿಲ್ಲ. ಅದೇ ರೀತಿಯಲ್ಲಿ ಜಂಬಕೊಚ್ಚುವವರು ಬಾಯಲ್ಲಿ ಬೇಕಾದುದನ್ನು ಹೇಳುತ್ತಿರುತ್ತಾರೆ. ಅವರ ಮಾತನ್ನು ಕೇಳಿದರೆ ಅವರಂತಹ ಪರಾಕ್ರಮಿಗಳು ವಿಶ್ವದಲ್ಲೇ ಇಲ್ಲವೋ ಎಂಬ ಭಾವನೆಯುಂಟಾಗುತ್ತದೆ. ಆದರೆ ಅವರ ಅಸಂಬದ್ಧಪ್ರಲಾಪಗಳು ಕಾರ್ಯಗತವಾಗುವುದೇ ಇಲ್ಲ. ಸುವರ್ಣಪ್ರತಿರೂಪವಾದ ಕುಶಾಗ್ನಿಯಂತೆ. ಕುಶಾಗ್ನಿಯಲ್ಲಿ ಕಣ್ಣಿಗೆ ಮಾತ್ರ ಸುವರ್ಣದ ರೂಪವು ಕಾಣುವುದೇ ಹೊರತು ಅದರಲ್ಲಿ ಸುವರ್ಣದ ಅಂಶವೂ ಇರುವುದಿಲ್ಲ. ಕೆಲವು ಕ್ಷಣಗಳಲ್ಲಿಯೇ ಕುಶಾಗ್ನಿಯು ನಂದಿಹೋಗುತ್ತದೆ. ಅದರಂತೆ ತಮ್ಮ ಪರಾಕ್ರಮದ ವಿಷಯವಾಗಿ ಜಂಬ ಕೊಚ್ಚುವವರು ಪರಾಕ್ರಮವನ್ನು ಪ್ರದರ್ಶಿಸಬೇಕಾದ ಕಾಲವು ಸನ್ನಿಹಿತವಾದಾಗ ವಿನಾಶಹೊಂದುತ್ತಾರೆ.

'ನಾಗ್ನಿನಾ ತಪ್ಯತೇಽಶ್ಮನಾ' ಎಂಬ ಪಾಠಾಂತರವನ್ನಿಟ್ಟುಕೊಂಡು ಮತ್ತೊಬ್ಬರು ಹೀಗೆ ವ್ಯಾಖ್ಯೆಮಾಡಿದ್ದಾರೆ. ಸುವರ್ಣಕ್ಕೆ ಸಮಾನವಾದ ಬಣ್ಣವಿರುವ ಕಲ್ಲು ಕೆಂಡದಂತೆ ಕಾಣುವುದೇನೋ ನಿಜ. ಆದರೆ ಅದು ಅಗ್ನಿಯಂತೆ ಸುಡಲಾರದು. ಅದರಂತೆ 'ನಾನು ಮಹಾಶೂರ ; ಇಂತಹ ಮಹಾವಂಶಕ್ಕೆ ಸೇರಿದವನು' ಎಂದು ಹೇಳಿಕೊಂಡ ಮಾತ್ರದಲ್ಲಿ ನಿನ್ನಲ್ಲಿ ಇಲ್ಲದ ಶೂರತ್ವವು ಬಂದುಬಿಡುವುದಿಲ್ಲ. ಅಥವಾ ನನಗೆ ಅದರಿಂದ ಯಾವ ಬಾಧೆಯೂ ಉಂಟಾಗುವುದಿಲ್ಲ. ಇದರಿಂದ ನಿನ್ನ ಸಣ್ಣತನವು ಮಾತ್ರವೇ ಪ್ರಕಟವಾದಂತಾಯಿತು.

* ಈ ಶ್ಲೋಕದಲ್ಲಿ ಖರನು ತನ್ನ ಧೀರೋದಾತ್ತತೆಯನ್ನು ವ್ಯಕ್ತಪಡಿಸಿದ್ದನೆಂಬುದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ರಾತ್ರಿಯ ಕಾಲದಲ್ಲಿ ರಾಕ್ಷಸರ ಪರಾಕ್ರಮವು

ಖರನು ಹೀಗೆ ಹೇಳಿ ಅತ್ಯಂತಕ್ರುದ್ಧನಾಗಿ ತನ್ನ ಕೈಲಿದ್ದ ಶ್ರೇಷ್ಠವಾದ ಗದೆಯನ್ನು–ಇಂದ್ರನು ಪ್ರದೀಪ್ತವಾದ ವಜ್ರಾಯುಧವನ್ನು ಶತ್ರುಗಳ ಮೇಲೆ ಪ್ರಯೋಗಿಸಿದಂತೆ – ಶ್ರೀರಾಮನ ಮೇಲೆಸೆದನು. ಖರನ ತೋಳಿನಿಂದ ಪ್ರಮುಕ್ತವಾದ ದೇದೀಪ್ಯಮಾನವಾಗಿದ್ದ ಆ ಮಹಾಗದೆಯು ರಾಮನಿಗೂ ಖರನಿಗೂ ನಡುವೆ ಇದ್ದ ವೃಕ್ಷಗಳನ್ನೂ-ಲತೆಗಳನ್ನೂ-ಪೊದರುಗಳನ್ನೂ ಸುಟ್ಟುಹಾಕುತ್ತಾ ರಾಮನ ಸಮೀಪಕ್ಕೆ ಹೋಯಿತು. ಮೃತ್ಯುವಿನ ಪಾಶದಂತೆಯೇ ಇದ್ದ, ಪ್ರಜ್ವಲಿಸುತ್ತಾ ಅಂತರಿಕ್ಷದ ಮಾರ್ಗವಾಗಿ ತನ್ನ ಕಡೆಗೆ ರಭಸದಿಂದ ಬರುತ್ತಿದ್ದ ಆ ಮಹಾಗದೆಯನ್ನು ಶ್ರೀರಾಮನು ಹಲವಾರು ಬಾಣಗಳಿಂದ ಅನೇಕ ಪ್ರಕಾರವಾಗಿ ಕತ್ತರಿಸಿದನು. ಮಂತ್ರೌಷಧಿಗಳ ಬಲದಿಂದ ವಿಷಸರ್ಪವು ನಿಶ್ಚೇಷ್ಟಿತವಾಗಿ ಕೆಳಗೆ ಬೀಳುವಂತೆ – ಆ ಮಹಾಗದೆಯು ಶ್ರೀರಾಮನ ಬಾಣಗಳಿಂದ ಕತ್ತರಿಸಲ್ಪಟ್ಟು ಹಲವಾರು ಚೂರುಗಳಾಗಿ ಕೆಳಕ್ಕೆ ಬಿದ್ದಿತು.

೨೯ನೆಯ ಸರ್ಗವು ಮುಗಿಯಿತು.

---

ಹೆಚ್ಚುತ್ತದೆ. ಆದುದರಿಂದ ಸಾಯಂಕಾಲವಾಗುವ ಮೊದಲೇ ರಾಕ್ಷಸರನ್ನು ಸಂಹರಿಸಬೇಕೆಂದು ಹೇಳಿರುವ ಪ್ರಕರಣಗಳೂ ಇವೆ. ರಾತ್ರಿಯಲ್ಲಿ ಯುದ್ಧಮಾಡುವುದು ಖರನ ದೃಷ್ಟಿಯಿಂದ ಯುಕ್ತವಾಗಿದ್ದರೂ ಮತ್ತು ಜಯಪ್ರದವಾಗಿದ್ದರೂ ಸೂರ್ಯಾಸ್ತವಾದನಂತರ ರಾಮನೊಡನೆ ಯುದ್ಧಮಾಡಲು ಇಚ್ಛಿಸುವುದಿಲ್ಲ. ಮನುಷ್ಯನೊಬ್ಬನ ಮೇಲೆ ಯುದ್ಧಮಾಡಲು ಹೋಗುವುದೇ ಅವಮಾನಕರ. ಅದರಲ್ಲಿಯೂ ರಾತ್ರಿಯಲ್ಲಿ ಮನುಷ್ಯನೊಬ್ಬನೊಡನೆ ಯುದ್ಧಮಾಡುವುದೆಂದರೆ ಮಹಾಪರಾಕ್ರಮಿಯಾದ ರಾಕ್ಷಸನಿಗೆ ಮತ್ತಷ್ಟು ಅವಮಾನಕರ. ಇಲ್ಲಿ ಜಯಾಪಜಯಗಳ ಪ್ರಶ್ನೆಯಲ್ಲ. ತನಗೆ ಸರಿಸಮಾನರಲ್ಲಿ ಯುದ್ಧಮಾಡಬೇಕೆಂಬ ಅಪೇಕ್ಷೆ. ಮಿಗಿಲಾಗಿ ಶತ್ರುವಿಗೆ ಅನಾನುಕೂಲವಾದ ಪರಿಸ್ಥಿತಿಯು ಒದಗಿದಾಗ ಅವನೊಡನೆ ಯುದ್ಧಮಾಡಕೂಡದೆನ್ನುವ ಯುದ್ಧಧರ್ಮ–ಈ ಕಾರಣಗಳಿಂದ ಖರನು ತನಗೆ ಅನುಕೂಲವಾಗುವುದಾಗಿದ್ದರೂ ಸೂರ್ಯಾಸ್ತವಾದನಂತರ ರಾಮನೊಡನೆ ಯುದ್ಧಮಾಡಲು ಇಚ್ಛಿಸುವುದಿಲ್ಲ.

## ಶ್ರೀರಾಮನ ಕಟುನುಡಿಗೆ ಖರನೂ ನಿಂದಿಸುತ್ತಾ ವೃಕ್ಷಗಳನ್ನೇ ಕಿತ್ತು ಪ್ರಹರಿಸಿದುದು : ಶ್ರೀರಾಮನು ತನ್ನೆದುರಾಗಿ ಬಂದ ವೃಕ್ಷಗಳನ್ನು ಕತ್ತರಿಸಿ ತೀಕ್ಷ್ಣವಾದ ಬಾಣದಿಂದ ಖರನನ್ನು ಸಂಹರಿಸಿದುದು : ರಾಮನ ಸಾಹಸಕಾರ್ಯಕ್ಕೆ ದೇವರ್ಷಿಗಳಿಂದ ಪ್ರಶಂಸೆ

ಭಿತ್ತ್ವಾ ತು ತಾಂ ಗದಾಂ ಬಾಣೈ ರಾಘವೋ ಧರ್ಮವತ್ಸಲಃ ।
ಸ್ಮಯಮಾನಃ ಖರಂ ವಾಕ್ಯಂ ಸಂರಬ್ಧಮಿದಮಬ್ರವೀತ್ ॥೧॥

ಧರ್ಮವತ್ಸಲನಾದ ಶ್ರೀರಾಮನು ಖರನು ಬಿಟ್ಟ ಗದೆಯನ್ನು ಬಾಣಗಳಿಂದ ತುಂಡರಿಸಿ ನಸುನಗುತ್ತಾ ಭ್ರಾಂತನಾಗಿದ್ದ ಖರನಿಗೆ ಹೇಳಿದನು :

"ರಾಕ್ಷಸಾಧಮನೇ ! ನಿನ್ನ ಸಂಪೂರ್ಣಬಲವೆಷ್ಟೆಂಬುದನ್ನು ಗದೆಯ ಮೂಲಕವಾಗಿ ಪ್ರದರ್ಶಿಸಿದೆಯಲ್ಲವೇ ? ಇದರಿಂದ ನೀನು ನನಗಿಂತಲೂ ಅತ್ಯಂತಶಕ್ತಿಹೀನನೆಂಬುದು ಸ್ಪಷ್ಟವಾಯಿತು. ಆದರೂ ನೀನು ವ್ಯರ್ಥವಾಗಿ ಗರ್ಜನೆಮಾಡುತ್ತಿರುವೆ. ಮಾತಿನಲ್ಲಿಯೇ ಪ್ರೌಢಿಮೆಯನ್ನು ತೋರಿಸಿಕೊಂಡ ನಿನ್ನ ಈ ಗದೆಯು ನನ್ನ ಬಾಣಗಳಿಂದ ಖಂಡ-ಖಂಡಗಳಾಗಿ ಕತ್ತರಿಸಲ್ಪಟ್ಟು ಅದರ ಮೇಲೆ ನೀನಿಟ್ಟಿದ್ದ ನಂಬಿಕೆಯನ್ನು ಹುಸಿಗೊಳಿಸಿ ಭೂಮಿಯ ಮೇಲೆ ಬಿದ್ದುಬಿಟ್ಟಿತು. "ನಿನ್ನನ್ನು ವಿನಾಶಗೊಳಿಸಿ ಅದರ ಮೂಲಕವಾಗಿ ಹತರಾದ ರಾಕ್ಷಸರ ಬಂಧುಗಳ ಕಣ್ಣೀರನ್ನು ಒರೆಸುತ್ತೇನೆ"–ಎಂದು ಯಾವ ಮಾತನ್ನು ಸ್ವಲ್ಪಹೊತ್ತಿಗೆ ಮುಂಚೆ ಹೇಳಿದ್ದೆಯೋ – ಆ ನಿನ್ನ ಮಾತೂ ಸುಳ್ಳಾಗಿಹೋಯಿತು. ನೀಚನಾದ, ದುಃಶೀಲನಾದ, ಅಸದ್ವೃತ್ತನಾದ, ರಾಕ್ಷಸನಾದ ನಿನ್ನ ಪ್ರಾಣಗಳನ್ನು–ಗರುಡನು ಅಮೃತವನ್ನು ಅಪಹರಿಸಿದಂತೆ–ಈ ಕ್ಷಣದಲ್ಲಿಯೇ ಅಪಹರಿಸುತ್ತೇನೆ. ನನ್ನ ಬಾಣಗಳಿಂದ ಕತ್ತರಿಸಲ್ಪಟ್ಟು ಭಿನ್ನವಾದ ಕುತ್ತಿಗೆಯಿಂದ ಹೊರಬರುವ ನೊರೆಯಿಂದಲೂ, ಗುಳ್ಳೆಗಳಿಂದಲೂ ಕೂಡಿರುವ ನಿನ್ನ ರಕ್ತವನ್ನು ಭೂದೇವಿಯೀಗಲೇ ಪಾನಮಾಡುತ್ತಾಳೆ. ಧೂಳಿನಿಂದ ವ್ಯಾಪ್ತವಾದ ಶರೀರದಿಂದ ಕೂಡಿ ತೋಳುಗಳನ್ನು

ಆಚೀಚೆ ಚಾಚಿಕೊಂಡು–ದುರ್ಲಭಳಾದ ಹೆಂಗಸನ್ನು ಕಾಮಿಯೊಬ್ಬನು ಗಾಢವಾಗಿ ಆಲಿಂಗಿಸಿಕೊಳ್ಳುವಂತೆ–ಭೂಮಿಯನ್ನು ಆಲಿಂಗಿಸಿಕೊಂಡು ಮಲಗುವೆ.

ರಾಕ್ಷಸಾಧಮನಾದ ನೀನು ಎಂದಿಗೂ ಎಚ್ಚರಗೊಳ್ಳದಂತಹ ದೀರ್ಘನಿದ್ರೆಯನ್ನು ಹೊಂದಿದೆಯಾದರೆ–ಈ ದಂಡಕಾವನಗಳು ರಕ್ಷಕರೇ ಇಲ್ಲದಿದ್ದ ಋಷಿಜನರಿಗೆ ಆಶ್ರಯಸ್ಥಾನಗಳಾಗುತ್ತವೆ. ನನ್ನ ಬಾಣಗಳಿಂದ ಈ ಜನಸ್ಥಾನವನ್ನು ರಾಕ್ಷಸಜನರ ಹತಸ್ಥಾನವನ್ನಾಗಿ ಮಾಡಿಬಿಟ್ಟರೆ (ಜನಸ್ಥಾನದಲ್ಲಿರುವ ರಾಕ್ಷಸರನ್ನು ನಿರ್ಮೂಲಮಾಡಿಬಿಟ್ಟರೆ) ಮುನಿಗಳು ಈ ದಂಡಕಾವನಗಳಲ್ಲಿ ಭಯವಿಲ್ಲದೇ ಸಂಚರಿಸುತ್ತಾರೆ. ಋಷಿ-ಮುನಿಗಳನ್ನು ಭಯಗೊಳಿಸುವ, ಘೋರರೂಪಿಣಿಯರಾದ ರಾಕ್ಷಸಿಯರು ಗಂಡಂದಿರನ್ನೂ, ಮಕ್ಕಳನ್ನೂ, ಬಂಧುಗಳನ್ನೂ ಕಳೆದುಕೊಂಡು ದೀನರಾಗಿ ಕಣ್ಣೀರಿನಿಂದ ತೋಯ್ದ ಮುಖವುಳ್ಳವರಾಗಿ ಭಯದಿಂದ ಈ ದಂಡಕಾವನಗಳಿಂದಲೇ ಪಲಾಯನ ಮಾಡುತ್ತಾರೆ. ಯಾವ ರಾಕ್ಷಸಿಯರಿಗೆ ನಿನ್ನಂತಹ ಪತಿಯಿರುವನೋ ಮತ್ತು ಯಾರು ನಿನ್ನಂತೆಯೇ ದುಷ್ಕುಲದಲ್ಲಿ ಹುಟ್ಟಿರುವರೋ – ಅಂತಹ ರಾಕ್ಷಸರ ಪತ್ನಿಯರು ನಿನ್ನ ಅವಸಾನವಾದೊಡನೆಯೇ ಅರ್ಥ-ಕಾಮಗಳಿಂದ ವಂಚಿತರಾಗಿ ಶೋಕವೆಂದರೇನೆಂಬುದನ್ನು ತಿಳಿಯುತ್ತಾರೆ. ನಿರ್ದಯನೇ! ನೀಚನೇ! ಕ್ಷುದ್ರಾತ್ಮನೇ! ಬ್ರಾಹ್ಮಣರಿಗೆ ಕಂಟಕಪ್ರಾಯನಾಗಿರುವವನೇ! ಮುನಿಗಳು ನಿನ್ನ ಸಲುವಾಗಿ ಭಯಪಟ್ಟುಕೊಂಡೇ ಅಗ್ನಿಯಲ್ಲಿ ಹೋಮ ಮಾಡುತ್ತಾರೆ."

ಇವೇ ಮುಂತಾದ ಮಾತುಗಳಿಂದ ಖರನನ್ನು ಖಂಡಿಸುತ್ತಿದ್ದ, ಕುಪಿತನಾಗಿದ್ದ ಶ್ರೀರಾಮನನ್ನು, ಕರ್ಣಕಠೋರವಾದ ಧ್ವನಿಯಿಂದ ಕೂಡಿದ್ದ ಖರನು ಕೋಪದಿಂದ ಗರ್ಜಿಸಿ ಭಯಪಡಿಸಿದನು :

"ರಾಮ! ನೀನು ಅತ್ಯಂತಗರ್ವಿಷ್ಠನಾಗಿರುವೆಯೆಂಬುದು ನಿನ್ನ ಮಾತುಗಳಿಂದಲೇ ದೃಢಪಟ್ಟಿದೆ. ಭಯಪಡುವ ಕಾಲವು ಸನ್ನಿಹಿತವಾಗಿದ್ದರೂ ಭಯವೇ ಇಲ್ಲದವನಂತೆ ಮಾತನಾಡುತ್ತಿರುವೆ. ಮೃತ್ಯುವಿಗೆ ವಶನಾಗಿ ಹೋಗಿರುವ ನೀನು ಯಾವ ಮಾತನ್ನು ಆಡಬಹುದು – ಯಾವ ಮಾತನ್ನು ಆಡಬಾರದು ?–ಎಂಬುದನ್ನೂ ತಿಳಿದವನಾಗಿಲ್ಲ.

**ಕಾಲಪಾಶಪರಿಕ್ಷಿಪ್ತಾ ಭವನ್ತಿ ಪುರುಷಾ ಹಿ ಯೇ ।**
**ಕಾರ್ಯಾಕಾರ್ಯಂ ನ ಜಾನನ್ತಿ ತೇ ನಿರಸ್ತಷಡಿನ್ದ್ರಿಯಾಃ ॥೧೫॥**

ಕಾಲಪಾಶದಿಂದ ಬಿಗಿಯಲ್ಪಟ್ಟ ಪುರುಷರು ಆರು ಇಂದ್ರಿಯಗಳನ್ನೂ ಕಳೆದುಕೊಂಡು ಅದರ ಜೊತೆಯಲ್ಲಿಯೇ ಕಾರ್ಯಾಕಾರ್ಯಗಳ ವಿವೇಚನೆಯನ್ನೂ ಕಳೆದುಕೊಳ್ಳುತ್ತಾರೆ. ಯಾವ ಕಾರ್ಯವನ್ನು ಮಾಡಬಹುದು – ಯಾವ ಕಾರ್ಯವನ್ನು ಮಾಡಬಾರದು ?–ಎಂಬುದನ್ನೂ ಅವರು ತಿಳಿದವರಾಗಿರುವುದಿಲ್ಲ."

ರಣಾಂಗಣದಲ್ಲಿ ಗದೆಯನ್ನು ಕಳೆದುಕೊಂಡ ಮಹಾಬಲನಾದ ಖರನು ರಾಮನಿಗೆ ಹೀಗೆ ಹೇಳಿ, ಕೋಪದಿಂದ ಹುಬ್ಬುಗಳನ್ನು ಗಂಟಿಕ್ಕಿ ಆಯುಧಕ್ಕಾಗಿ ಸುತ್ತಲೂ ಕಣ್ಣುಹಾಯಿಸಿದನು. ಹತ್ತಿರದಲ್ಲಿಯೇ ಎತ್ತರವಾದ ಸರ್ಜವೃಕ್ಷವೊಂದು ದೃಷ್ಟಿಗೆ ಗೋಚರಿಸಿತು. ಅದನ್ನೇ ಎರಡು ಕೈಗಳಿಂದಲೂ ಅವುಡುಗಚ್ಚುತ್ತಾ ಬುಡಸಹಿತ ಕಿತ್ತು 'ಹತಸ್ತ್ವಂ–ನೀನೀಗಲೇ ಸಾಯುವೆ' ಎಂದು ಗಟ್ಟಿಯಾಗಿ ಅರಚುತ್ತಾ ರಾಮನ ಕಡೆಗೆ ರಭಸದಿಂದೆಸೆದನು. ಪ್ರತಾಪವಂತನಾದ ಶ್ರೀರಾಮನು ಬಿರುಸಿನಿಂದ ಬರುತ್ತಿದ್ದ ಆ ಸಾಲವೃಕ್ಷವನ್ನು ಬಾಣಗಳಿಂದ ಕತ್ತರಿಸಿ ಖರನನ್ನು ಯುದ್ಧದಲ್ಲಿ ಸಂಹರಿಸುವ ಸಲುವಾಗಿ ತೀವ್ರವಾಗಿ ಕೋಪಗೊಂಡನು. ಕೋಪದಿಂದ ರಾಮನ ಮೈ ಬೆವರಿತು. ಕಡೆಗಣ್ಣುಗಳು ಕೆಂಪಾದುವು. ಸಾವಿರ ಬಾಣಗಳನ್ನು ಖರನ ಮೇಲೆ ಪ್ರಯೋಗಿಸಿ ಅವನ ಶರೀರವನ್ನು ಗಾಯಗೊಳಿಸಿದನು. ಪ್ರಸ್ರವಣಪರ್ವತದಿಂದ ಜಲಧಾರೆಯು ಹರಿದು ಬರುವಂತೆ–ಬಾಣಾಘಾತಗಳಿಂದ ಉಂಟಾದ ಖರನ ಶರೀರದ ಗಾಯಗಳಿಂದ ನೊರೆಯಿಂದ ಕೂಡಿದ ರಕ್ತದ ಧಾರೆಯು ಹರಿಯತೊಡಗಿತು.

ಶ್ರೀರಾಮನು ಏಕಕಾಲದಲ್ಲಿ ಬಿಟ್ಟ ಸಾವಿರಾರು ಬಾಣಗಳಿಂದ ಖರನು ವ್ಯಾಕುಲಗೊಂಡನು. ಶರೀರದಿಂದ ಸುರಿಯುತ್ತಿದ್ದ ರಕ್ತದ ವಾಸನೆಯಿಂದ ಅಮಲೇರಿದವನಾಗಿ ಶ್ರೀರಾಮನ ಕಡೆಗೆ ಓಡಿಹೋದನು. ಅಸ್ತ್ರವಿಶಾರದನಾದ, ಶೀಘ್ರವಾದ ಪದನ್ಯಾಸವುಳ್ಳ ಶ್ರೀರಾಮನು ಕೋಪಾವಿಷ್ಟನಾಗಿ ಮೇಲೆ ಬೀಳುತ್ತಿದ್ದ, ರಕ್ತದಿಂದ ತೋಯ್ದುಹೋಗಿದ್ದ ಖರನಿಂದ

ಎರಡು ಮೂರು ಹೆಜ್ಜೆಗಳಷ್ಟು ಹಿಂದಕ್ಕೆ ಸರಿದನು.* ಬಳಿಕ ಅಗ್ನಿ ಸದೃಶವಾಗಿದ್ದ ಎರಡನೆಯ ಬ್ರಹ್ಮದಂಡದಂತೆಯೇ ಇದ್ದ ಬಾಣವೊಂದನ್ನು ಖರನ ಸಂಹಾರಕ್ಕಾಗಿಯೇ ಬತ್ತಳಿಕೆಯಿಂದ ಹೊರತೆಗೆದನು. ಧರ್ಮಾತ್ಮನಾದ ರಾಮನು-ಧೀಮಂತನಾದ ಇಂದ್ರನಿಂದ ಕೊಡಲ್ಪಟ್ಟಿದ್ದು ಮಹರ್ಷಿಗಳಾದ ಅಗಸ್ತ್ಯರ ಮೂಲಕವಾಗಿ ತನಗೆ ಬಂದಿದ್ದ ಆ ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಖರನ ಕಡೆಗೆ ಪ್ರಯೋಗಿಸಿದನು. ಕರ್ಣಾಂತವಾಗಿ ಸೆಳೆದು



ರಾಮನಿಂದ ಬಿಡಲ್ಪಟ್ಟ ಮತ್ತು ಬಿರುಗಾಳಿಗೆ ಸಮಾನವಾಗಿ ಶಬ್ದಮಾಡುತ್ತಿದ್ದ ಆ ಮಹಾಬಾಣವು ರಾಕ್ಷಸನ ಎದೆಯಲ್ಲಿ ನಾಟಿಕೊಂಡಿತು. ಶ್ವೇತಾರಣ್ಯದಲ್ಲಿ ರುದ್ರನಿಂದ ಭಸ್ಮೀಭೂತನಾದ ಅಂಧಕಾಸುರನಂತೆ-ಖರನು ಶರಾಗ್ನಿಯಿಂದ ದಗ್ಧನಾಗಿ ಭೂಮಿಯಲ್ಲಿ ಬಿದ್ದನು. ವೃತ್ರನೂ ಮತ್ತು

---

*ಅಪಾಸರ್ಪದ್ದ್ವಿತ್ರಿಪದಂ (ಪ್ರತಿಪದಂ) ಕಿಂಚಿತ್ತ್ವರಿತವಿಕ್ರಮಃ ||೨೩|| ಖರನ ಆಯುಧಗಳೆಲ್ಲವನ್ನೂ ಸಂಪೂರ್ಣವಾಗಿ ಕತ್ತರಿಸಿದ ಶೀಘ್ರಪರಾಕ್ರಮಿಯಾದ ಶ್ರೀರಾಮನು

ಬಲಾಸುರನೂ ವಜ್ರಾಯುಧದಿಂದ ಹತರಾದಂತೆ—ನಮುಚಿಯು ವಜ್ರಾಯುಧಕ್ಕೆ ಸಮಾನವಾಗಿದ್ದ ನೊರೆಯಿಂದ ಹತನಾದಂತೆ—ಖರನು ಶ್ರೀರಾಮನ ಬಾಣದಿಂದ ಹತನಾದನು. ಆ ಮಧ್ಯದಲ್ಲಿ ಖರನ ಸಂಹಾರದಿಂದ ವಿಸ್ಮಿತರಾದ ಮತ್ತು ಸಂತುಷ್ಟರಾದ ದೇವತೆಗಳು ಚಾರಣರೊಡನೆ ದುಂದುಭಿಯೇ ಮೊದಲಾದ ಮಂಗಳವಾದ್ಯಗಳನ್ನು ಬಾರಿಸುತ್ತಾ ಶ್ರೀರಾಮನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು.

ಅರ್ಧಾಧಿಕಮುಹೂರ್ತೇನ ರಾಮೇಣ ನಿಶಿತೈಃ ಶರೈಃ ।
ಚತುರ್ದಶ ಸಹಸ್ರಾಣಿ ರಕ್ಷಸಾಂ ಕಾಮರೂಪಿಣಾಮ್ ।
ಖರದೂಷಣಮುಖ್ಯಾನಾಂ ನಿಹತಾನಿ ಮಹಾಮೃಧೇ ॥೩೧॥
ಅಹೋ ಬತ ಮಹತ್ಕರ್ಮ ರಾಮಸ್ಯ ವಿದಿತಾತ್ಮನಃ ।
ಅಹೋ ವೀರ್ಯಮಹೋ ದಾಕ್ಷ್ಯಂ ವಿಷ್ಣೋರಿವ ಹಿ ದೃಶ್ಯತೇ ॥

"ಶ್ರೀರಾಮನೊಬ್ಬನೇ ಒಂದೂವರೆ ಮುಹೂರ್ತದಲ್ಲಿ (72 ನಿಮಿಷಗಳಲ್ಲಿ) ನಿಶಿತವಾದ ಬಾಣಗಳಿಂದ ಕಾಮರೂಪಿಗಳಾದ ಖರ-ದೂಷಣ ಪ್ರಮುಖರಾದ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಸಂಹರಿಸಿದನು. ವಿದಿತಾತ್ಮನಾದ ಶ್ರೀರಾಮನ ಈ ಸಾಹಸಕಾರ್ಯವು ಅತ್ಯದ್ಭುತವಾದುದು. ಇವನ ಪರಾಕ್ರಮವೂ ಅತ್ಯದ್ಭುತವಾದುದು. ದಾರ್ಢ್ಯವೂ ಅತ್ಯದ್ಭುತ

---

ಮೇಲೆ ಬೀಳುತ್ತಿದ್ದ, ರಕ್ತದಿಂದ ತೋಯ್ದಿದ್ದ ಖರನನ್ನು ಎರಡು-ಮೂರು ಹೆಜ್ಜೆಗಳು ಹಿಮ್ಮೆಟ್ಟಿಸಿದನು.' ಹೀಗೂ ಒಬ್ಬರು ವ್ಯಾಖ್ಯಾನಮಾಡಿರುತ್ತಾರೆ: ಯುದ್ಧದಲ್ಲಿ ಹಿಮ್ಮೆಟ್ಟುವುದು ಸರಿಯಲ್ಲ. ರಾಮನು ಹಿಮ್ಮೆಟ್ಟಲಿಲ್ಲ—ಎಂಬುದು ಇವರ ಅಭಿಪ್ರಾಯವಾಗಿದೆ. ರಾಮನೇ ಹಿಮ್ಮೆಟ್ಟಿದನು—ಎಂದು ಅರ್ಥಮಾಡಿರುವವರು – ಬಾಣಪ್ರಯೋಗಮಾಡಲು ಸ್ಥಳಾವಕಾಶವು ಬೇಕೆಂಬ ಕಾರಣದಿಂದಲೂ, ರಕ್ತಸಿಕ್ತನಾಗಿದ್ದ ಖರನು ತನ್ನ ಮೇಲೆ ಬಿದ್ದುಬಿಡುತ್ತಾನೆಂಬ ಭಾವನೆಯಿಂದಲೂ ರಾಮನು ಹಿಮ್ಮೆಟ್ಟಿದನು. ಅಪಸರ್ಪಣಂ ವಿನಾ ತತ್ಸಂಹಾರಹೇತ್ವಲಾಭಾತ್ ಅಪಸರ್ಪಣಂ ನ ದೋಷಃ—ಹಿಂದಕ್ಕೆ ಸರಿಯದೇ ಅವನನ್ನು ಸಂಹಾರಮಾಡಲು ಸಾಧ್ಯವಾಗುತ್ತಿರಲಿಲ್ಲವಾದುದರಿಂದ ಹಿಮ್ಮೆಟ್ಟಿದುದು ದೋಷವಲ್ಲ—ಎಂದು ಇವರು ಅಭಿಪ್ರಾಯಪಟ್ಟಿದ್ದಾರೆ. ಕ್ವಚಿದತಿಸಂಕಟವಿಷಯೇ ಸುಭಟಾನಾಂ ಅಭಿಮತೋಽಯಂ ಅಪಸರ್ಪಃ—ಎಂದು ವೇದಾಂತದೇಶಿಕರ ಅಭಿಪ್ರಾಯ. ಈ ಶ್ಲೋಕವು ಖರನ ಪರಾಕ್ರಮವೆಷ್ಟೆಂಬುದನ್ನು ಸೂಚಿಸುತ್ತದೆಂದು ಮತ್ತೊಬ್ಬ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಅನೇನ ಮಹಾಬಲತ್ವಂ ಖರಸ್ಯೋಕ್ತಂ.

ವಾದುದು. ಇವನ ವೀರ್ಯ-ಪರಾಕ್ರಮಗಳು ಮಹಾವಿಷ್ಣುವಿನ ವೀರ್ಯ-ಪರಾಕ್ರಮಗಳಂತೆಯೇ ಕಾಣುತ್ತಿವೆ."

ಹೀಗೆ ಮಾತನಾಡಿಕೊಳ್ಳುತ್ತಾ ಎಲ್ಲ ದೇವರ್ಷಿ-ಚಾರಣರೂ ತಮ್ಮ-ತಮ್ಮ ಸ್ಥಳಗಳಿಗೆ ತೆರಳಿದರು.

ಅನಂತರ ಎಲ್ಲ ರಾಜರ್ಷಿಗಳೂ – ಮಹರ್ಷಿಗಳೂ ರಾಮನನ್ನು ಸಂಪೂಜಿಸಿ ಹೇಳಿದರು :

"ಮಹಾನುಭಾವನೇ ! ಬ್ರಾಹ್ಮಣರ ಕಂಟಕರಾಗಿದ್ದ ರಾಕ್ಷಸರನ್ನು ನಿನ್ನ ಮೂಲಕ ಸಂಹಾರಮಾಡಿಸುವ ಸಲುವಾಗಿಯೇ ಪಾಕಶಾಸನನಾದ ಪುರಂದರನು ಶರಭಂಗರ ಆಶ್ರಮಕ್ಕೆ ಬಂದಿದ್ದನು. ಕ್ರೂರಿಗಳಾದ ಮತ್ತು ಪಾಪಕರ್ಮಿಗಳಾದ ಅವರೆಲ್ಲರನ್ನೂ ನಿನ್ನಿಂದ ಸಂಹಾರಮಾಡಿಸುವ ಸಲುವಾಗಿಯೇ ಮಹರ್ಷಿಗಳೂ ನಿನ್ನನ್ನು ಈ ಪ್ರದೇಶಕ್ಕೆ ಕರೆತಂದರು. ಈಗ ನೀನು ನಾವು ಆಶಿಸಿದ್ದ ಕಾರ್ಯವನ್ನು ಮಾಡಿ ಮುಗಿಸಿರುವೆ. ಇನ್ನು ಮುಂದೆ ಈ ದಂಡಕಾರಣ್ಯಗಳಲ್ಲಿ ಮಹರ್ಷಿಗಳು ಯಾವ ವಿಧವಾದ ಈತಿಬಾಧೆಗಳೂ ಇಲ್ಲದೇ ಧರ್ಮಕಾರ್ಯಗಳನ್ನು ಸುಖವಾಗಿ ಆಚರಿಸುತ್ತಾರೆ."

ಮಹರ್ಷಿಗಳು ಹೀಗೆ ಹೇಳುತ್ತಿರುವಾಗಲೇ ಲಕ್ಷ್ಮಣನು ದುರ್ಗಮವಾಗಿದ್ದ ಗಿರಿಗುಹೆಯಿಂದ ಸೀತೆಯೊಡನೆ ಹೊರಬಂದು ಸುಖವಾಗಿ ಆಶ್ರಮವನ್ನು ಸೇರಿದನು. ವಿಜಯಿಯಾದ ಶ್ರೀರಾಮನೂ ಮಹರ್ಷಿಗಳಿಂದಲೂ ಲಕ್ಷ್ಮಣನಿಂದಲೂ ಪೂಜಿಸಲ್ಪಟ್ಟವನಾಗಿ ಆಶ್ರಮವನ್ನು ಪ್ರವೇಶಿಸಿದನು. ದೇವ-ಬ್ರಾಹ್ಮಣರ ಶತ್ರುಗಳ ಸಂಹಾರಕನಾದ, ಮಹರ್ಷಿಗಳಿಗೆ ಸುಖಾವಹನಾದ ಶ್ರೀರಾಮನನ್ನು ನೋಡಿ ವೈದೇಹಿಯು ಪರಮಹೃಷ್ಟಳಾಗಿ ಗಂಡನನ್ನು ಗಾಢವಾಗಿ ಆಲಿಂಗಿಸಿಕೊಂಡಳು.

ಅಸಂಖ್ಯಾತರಾದ ರಾಕ್ಷಸರು ಹತರಾಗಿರುವುದನ್ನು ನೋಡಿ ಅತ್ಯಂತಸಂತೋಷಗೊಂಡ ಸೀತಾದೇವಿಯು ಯುದ್ಧದಿಂದ ವಿಜಯಿಯಾಗಿ ಮತ್ತು ಸ್ವಲ್ಪವಾದರೂ ಗಾಯಗೊಳ್ಳದೇ ಹಿಂದಿರುಗಿದ ಶ್ರೀರಾಮನನ್ನು ನೋಡಿ ಪರಮಹೃಷ್ಟಳಾದಳು. ರಾಕ್ಷಸರ ಸಮೂಹವನ್ನೇ ಸಂಪೂರ್ಣವಾಗಿ ನಿರ್ನಾಮಮಾಡಿದ, ಸಂತುಷ್ಟರಾದ ಮತ್ತು ಮಹಾತ್ಮರಾದ ಮಹರ್ಷಿಗಳಿಂದ

ಸಂಪೂಜಿತನಾದ ಶ್ರೀರಾಮನನ್ನು – ಜನಕನ ಮಗಳಾದ ಸೀತಾದೇವಿಯು ಆನಂದದಿಂದರಳಿದ ಮುಖಾರವಿಂದದಿಂದ ಕೂಡಿದವಳಾಗಿ ಪುನಃ ಪುನಃ ತಬ್ಬಿಕೊಂಡು ಆನಂದಪಟ್ಟಳು.

ಖ೦ನೆಯ ಸರ್ಗವು ಮುಗಿಯಿತು.



## ರಾವಣನು ಅಕಂಪನನ ಸಲಹೆಯಂತೆ ಸೀತೆಯನ್ನು ಅಪಹರಿಸಿಕೊಂಡು ಬರಲು ಹೊರಟುದು : ಮಾರೀಚನ ಸಲಹೆಯಂತೆ ಪುನಃ ಲಂಕೆಗೆ ಹಿಂದಿರುಗಿದುದು

ತ್ವರಮಾಣಸ್ತತೋ ಗತ್ವಾ ಜನಸ್ಥಾನಾದಕಮ್ಪನಃ ।
ಪ್ರವಿಶ್ಯ ಲಙ್ಕಾಂ ವೇಗೇನ ರಾವಣಂ ವಾಕ್ಯಮಬ್ರವೀತ್ ॥೧॥

ರಾಮನ ಬಾಣಕ್ಕೆ ಲಕ್ಷ್ಯನಾಗದೇ ಉಳಿದುಕೊಂಡ ಅಕಂಪನನೆಂಬ ರಾಕ್ಷಸನು ಜನಸ್ಥಾನದಿಂದ ಅವಸರವಾಗಿ ಹೊರಟು ಲಂಕೆಗೆ ಹೋಗಿ ರಾವಣನಿಗೆ ಈ ಮಾತನ್ನು ಹೇಳಿದನು : *

"ಮಹಾರಾಜ ! ಜನಸ್ಥಾನದಲ್ಲಿದ್ದ ರಾಕ್ಷಸರಲ್ಲಿ ಬಹುಪಾಲು ರಾಕ್ಷಸರು ಸತ್ತುಹೋದರು. ಖರನೂ ಕೂಡ ರಾಮನೊಡನೆ ಮಾಡಿದ ಯುದ್ಧದಲ್ಲಿ ಅಸುನೀಗಿದನು. ಹೇಗೋ ಮಾಡಿ ನಾನಿಲ್ಲಿಗೆ ಸಮಾಚಾರವನ್ನು ತಿಳಿಸಲು ಬಂದೆನು."

ಅಕಂಪನನು ಹೀಗೆ ಹೇಳುತ್ತಲೇ ರಾವಣನು ಕ್ರುದ್ಧನಾದನು. ಕಣ್ಣುಗಳು ಕೆಂಡದಂತಾದುವು. ಮೂರು ಲೋಕಗಳನ್ನೂ ತನ್ನ ತೇಜಸ್ಸಿನಿಂದ

---

*ದಂಡಕಾರಣ್ಯದ ಒಂದು ಭಾಗವನ್ನು ಜನಸ್ಥಾನವೆಂದು ಕರೆಯುತ್ತಿದ್ದರು. ಆದುದರಿಂದ ಅಕಂಪನನು ಖರನ ವಧೆಯಾದನಂತರ ಗೋದಾವರೀತೀರದಿಂದ ಹೊರಟವನಾದರೂ ಜನಸ್ಥಾನದಿಂದ ಹೊರಟನೆಂದೇ ಹೇಳಿದ್ದಾರೆ. ಶೂರ್ಪಣಖಿಯು ಹೋಗುವುದಕ್ಕೂ ಮೊದಲೇ ಅಕಂಪನನು ರಾವಣನ ಬಳಿಗೆ ಹೋಗಿದ್ದನು. ಅಕಂಪನನು ರಾವಣನ ಚಾರನೆಂದು ಒಬ್ಬ ವ್ಯಾಖ್ಯಾನಕಾರರೂ, ಖರನ ಚಾರನೆಂದು ಒಬ್ಬ ವ್ಯಾಖ್ಯಾನಕಾರರೂ ಹೇಳಿದ್ದಾರೆ. ಎರಡೂ ಒಂದೇ ಆಗುತ್ತದೆ. ಖರನೇ ಮೊದಲಾಗಿ ಎಲ್ಲ ರಾಕ್ಷಸರೂ ರಾವಣನ ಚಾರರೇ ಆಗಿದ್ದರು. ಸೀತಾಪಹರಣಕ್ಕೆ ಈ ಶ್ಲೋಕವೇ ಬೀಜರೂಪವಾಗಿದೆಯೆಂದು ಒಬ್ಬ ವ್ಯಾಖ್ಯಾನಕಾರರು ಹೇಳಿದ್ದಾರೆ.

ಸುಟ್ಟುಬಿಡುವನೋ – ಎಂಬಂತೆ ಕಾಣುತ್ತಿದ್ದ ಅವನು ಅಕಂಪನನನ್ನು ಪ್ರಶ್ನಿಸಿದನು :

ಕೇನ ರಮ್ಯಂ ಜನಸ್ಥಾನಂ ಹತಂ ಮಮ ಪರಾಸುನಾ ।
ಕೋ ಹಿ ಸರ್ವೇಷು ಲೋಕೇಷು ಗತಿಂ ನಾಧಿಗಮಿಷ್ಯತಿ ॥೪॥

ನ ಹಿ ಮೇ ವಿಪ್ರಿಯಂ ಕೃತ್ವಾ ಶಕ್ಯಂ ಮಘವತಾ ಸುಖಮ್ ।
ಪ್ರಾಪ್ತುಂ ವೈಶ್ರವಣೇನಾಪಿ ನ ಯಮೇನ ಚ ವಿಷ್ಣುನಾ ॥೫॥

ಕಾಲಸ್ಯ ಚಾಪ್ಯಹಂ ಕಾಲೋ ದಹೇಯಮಪಿ ಪಾವಕಮ್ ।
ಮೃತ್ಯುಂ ಮರಣಧರ್ಮೇಣ ಸಂಯೋಜಯಿತುಮುತ್ಸಹೇ ॥೬॥

ವಾತಸ್ಯ ತರಸಾ ವೇಗಂ ನಿಹನ್ತುಮಪಿ ಚೋತ್ಸಹೇ ।
ದಹೇಯಮಪಿ ಸಂಕ್ರುದ್ಧಸ್ತೇಜಸಾದಿತ್ಯಪಾವಕೌ ॥೭॥

"ಪ್ರಾಣತೊರೆಯಲು ಸಿದ್ಧನಾಗಿರುವ ಯಾವನು ಭಯಂಕರವಾದ ಜನಸ್ಥಾನವನ್ನು ವಿನಾಶಗೊಳಿಸಿದನು? ಈ ದುಷ್ಕಾರ್ಯವನ್ನು ಮಾಡಿರುವ ಅವನು ಯಾವ ಲೋಕದಲ್ಲಿಯೂ ಆಶ್ರಯವನ್ನು ಪಡೆಯಲಾರನು. ಅಂತಹವನಾರು? ನನಗೆ ಅಪ್ರಿಯವಾಗಿರುವ ಈ ಕಾರ್ಯವನ್ನು ಮಾಡಿರುವವನು ಇಂದ್ರನೇ ಆಗಿರಲಿ; ಕುಬೇರನೇ ಆಗಿರಲಿ; ಯಮನೇ ಆಗಿರಲಿ; ವಿಷ್ಣುವೇ ಆಗಿರಲಿ–ಅವನಂತೂ ಇನ್ನು ಮುಂದೆ ಸುಖವಾಗಿರಲು ಸಾಧ್ಯವೇ ಇಲ್ಲ. ನಾನು ಕಾಲನಿಗೂ ಕಾಲನಾಗಿದ್ದೇನೆ. ಅಗ್ನಿಯನ್ನೂ ದಹಿಸಬಲ್ಲೆನು. ಮೃತ್ಯುವಿಗೂ ಕೂಡ ಮರಣಧರ್ಮವನ್ನು ಹೊಂದಿಸಬಲ್ಲೆನು. ವಾಯುವಿನ ವೇಗವನ್ನೂ ಪ್ರತಿರೋಧಿಸಬಲ್ಲೆನು. ನಾನು ಕ್ರುದ್ಧನಾದೆನೆಂದರೆ ನನ್ನ ತೇಜಸ್ಸಿನಿಂದ ಸೂರ್ಯಾಗ್ನಿಗಳಿಬ್ಬರನ್ನೂ ಏಕಕಾಲದಲ್ಲಿ ದಹಿಸಿಬಿಡಬಲ್ಲೆನು."

ಹೀಗೆ ಕೋಪದಿಂದ ಬಡ-ಬಡಿಸುತ್ತಿದ್ದ ರಾವಣನನ್ನು ನೋಡಿ ಅಕಂಪನನಿಗೆ ಭಯವಾಯಿತು. ಅವನ ಬಾಯಿಂದ ಮಾತೇ ಹೊರಡಲಿಲ್ಲ. ಕೈಮುಗಿದುಕೊಂಡು ತೊದಲುಮಾತುಗಳಿಂದಲೇ ಅಭಯವನ್ನು ಯಾಚಿಸಿದನು.

ರಾಕ್ಷಸಶ್ರೇಷ್ಠನಾದ ರಾವಣನು ಅಕಂಪನನಿಗೆ ಭಯಪಡುವ ಕಾರಣವಿಲ್ಲವೆಂದು ಹೇಳಿ ಅಭಯದಾನಮಾಡಿದನು. ಇನ್ನು ತನಗೆ ಯಾವ ರೀತಿಯಲ್ಲಿಯೂ

ತೊಂದರೆಯಾಗಲಾರದೆಂಬ ವಿಶ್ವಾಸದಿಂದ ಅಕಂಪನನು ಸಂದೇಹಕ್ಕೆ ಅವಕಾಶವೇ ಇಲ್ಲದಂತಹ ಮಾತುಗಳನ್ನು ಹೇಳಿದನು :

" ಮಹಾರಾಜ ! ದಶರಥಮಹಾರಾಜನಿಗೆ ರಾಮನೆಂಬ ಹೆಸರಿನ ಮಗನಿದ್ದಾನೆ. ಅವನು ಶ್ರೇಷ್ಠವಾದ ಮತ್ತು ಸುಂದರವಾದ ಶರೀರವಿರತಕ್ಕವನು. ಇನ್ನೂ ಯುವಕನು. ಎತ್ತರವಾದ ಹೆಗಲುಗಳುಳ್ಳವನು. ನೀಳವಾಗಿಯೂ ದುಂಡಾಗಿಯೂ ಇರುವ ತೋಳುಗಳುಳ್ಳವನು. ಶ್ಯಾಮಲವರ್ಣನು. ಮಹಾಯಶಸ್ವಿಯು. ಕಾಂತಿಮಂತನು. ಅಮಿತವಾದ, ಅನುಪಮವಾದ ಬಲ-ಪರಾಕ್ರಮಗಳುಳ್ಳವನು. ಅವನಿಂದ ಜನಸ್ಥಾನವು ವಿನಾಶವಾಯಿತು. ಖರ-ದೂಷಣರೂ ವಿನಾಶಹೊಂದಿದರು."

ಅಕಂಪನನ ಮಾತುಗಳನ್ನು ಕೇಳಿ ರಾಕ್ಷಸೇಶ್ವರನಾದ ರಾವಣನು ಘಟಸರ್ಪದಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಅಕಂಪನನನ್ನು ಪ್ರಶ್ನಿಸಿದನು : " ಆ ರಾಮನೇನಾದರೂ ಇಂದ್ರನೊಡನೆ ಕೂಡಿಕೊಂಡು ಸಕಲದೇವತೆಗಳೊಡನೆ ಜನಸ್ಥಾನಕ್ಕೆ ಬಂದಿರುವನೇ ? ಹೇಳು ; ಅಕಂಪನ ! "

ರಾವಣನ ಮಾತನ್ನು ಕೇಳಿ ಅಕಂಪನನು ಮಹಾತ್ಮನಾದ ಶ್ರೀರಾಮನ ಬಲವನ್ನೂ ಮತ್ತು ಪರಾಕ್ರಮವನ್ನೂ ಪುನಃ ವಿವರಿಸಿ ಹೇಳತೊಡಗಿದನು :

" ರಾಮನೆಂದರೆ ಸಾಮಾನ್ಯನಲ್ಲ, ರಾವಣೇಶ್ವರ ! ಅವನು ಮಹಾತೇಜಸ್ವಿಯು. ಧನುರ್ಧಾರಿಗಳಲ್ಲಿಯೇ ಶ್ರೇಷ್ಠನು. ದಿವ್ಯಾಸ್ತ್ರಗಳ ಆದಾನ-ಅನುಸಂಧಾನ-ಪ್ರಯೋಗಗಳೆಂಬ ಗುಣಗಳಲ್ಲಿ ಪರಿಣತನು. ಯುದ್ಧಮಾಡುವುದರಲ್ಲಿ ಇಂದ್ರನಿಗೆ ಸಮಾನನು. ಲಕ್ಷ್ಮಣನೆಂಬ ಹೆಸರಿನ ಅವನ ಕಿರಿಯ ತಮ್ಮನೂ ಶೌರ್ಯ-ಪರಾಕ್ರಮಗಳಲ್ಲಿ ರಾಮನಿಗೆ ಅನುರೂಪನು. ಮಹಾಬಲಿಷ್ಠನು. ರಕ್ತಾಕ್ಷನು. ದುಂದುಭಿಯ ಶಬ್ದಕ್ಕೆ ಸಮಾನವಾದ ಧ್ವನಿಯುಳ್ಳವನು ಮತ್ತು ಪೂರ್ಣಚಂದ್ರನಿಗೆ ಸದೃಶವಾದ ಮುಖವುಳ್ಳವನು. ಅಗ್ನಿಯೊಡನೆ ವಾಯುವಿರುವಂತೆಯೇ ಲಕ್ಷ್ಮಣನು ರಾಮನ ಜೊತೆಯಲ್ಲಿರುವವನು. ಆದರೆ ಶ್ರೀಮಂತನಾದ ರಾಜಶ್ರೇಷ್ಠನಾದ ರಾಮನೊಬ್ಬನೇ ಜನಸ್ಥಾನವನ್ನು ವಿನಾಶಗೊಳಿಸಿದನು. ರಾಮನ ಸಹಾಯಕ್ಕೆ ಮಹಾತ್ಮರಾದ ಯಾವ ದೇವತೆಗಳೂ ಬರಲಿಲ್ಲ. ಈ ವಿಷಯವನ್ನು ಪುನಃ ಪುನಃ ವಿಮರ್ಶೆ ಮಾಡುವ ಅಗತ್ಯವೇ ಇಲ್ಲ.

ಶರಾ ರಾಮೇಣ ತೂತ್ಸೃಷ್ಟಾ ರುಕ್ಮಪುಙ್ಖಾಃ ಪತತ್ರಿಣಃ ।
ಸರ್ಪಾಃ ಪಞ್ಚಾನನಾ ಭೂತ್ವಾ ಭಕ್ಷಯನ್ತಿ ಸ್ಮ ರಾಕ್ಷಸಾನ್ ॥೧೮॥
ಯೇನ ಯೇನ ಚ ಗಚ್ಛನ್ತಿ ರಾಕ್ಷಸಾ ಭಯಕರ್ಶಿತಾಃ ।
ತೇನ ತೇನ ಸ್ಮ ಪಶ್ಯನ್ತಿ ರಾಮಮೇವಾಗ್ರತಃ ಸ್ಥಿತಮ್ ॥೧೯॥
ಇತ್ಥಂ ವಿನಾಶಿತಂ ತೇನ ಜನಸ್ಥಾನಂ ತದಾನಘ ॥೨೦॥

ರಾಮನು ವೇಗವಾಗಿ ಬಿಡುತ್ತಿದ್ದ ಚಿನ್ನದ ರೆಕ್ಕೆಗಳುಳ್ಳ ಬಾಣಗಳು ಐದುಹೆಡೆಯ ಸರ್ಪಗಳಾಗಿ ರಾಕ್ಷಸರನ್ನು ಬಕ-ಬಕನೆ ನುಂಗಿಹಾಕುತ್ತಿದ್ದುವು. ರಾಮಬಾಣಗಳ ಭಯದಿಂದ ಪೀಡಿತರಾದ ರಾಕ್ಷಸರು ಪ್ರಹಾರವನ್ನು ತಪ್ಪಿಸಿಕೊಳ್ಳಲು ಯಾವ ಯಾವ ಮಾರ್ಗವನ್ನು ಹಿಡಿದು ಹೋಗುತ್ತಿದ್ದರೋ ಆಯಾ ಸ್ಥಳಗಳಲ್ಲಿ ರಾಮನು ಧನುಷ್ಪಾಣಿಯಾಗಿ ನಿಂತಿರುವುದನ್ನು ರಾಕ್ಷಸರು ಕಾಣುತ್ತಿದ್ದರು. ಹಿಂದೆ ಹೋದರೂ ರಾಮನೇ; ಮುಂದೆ ಬಂದರೂ ರಾಮನೇ. ರಾಮನ ಬಾಣಗಳಿಂದ ತಪ್ಪಿಸಿಕೊಳ್ಳಲು ಅವರಿಗೆ ಸಾಧ್ಯವೇ ಆಗುತ್ತಿರಲಿಲ್ಲ. ಹೀಗೆ ರಾಮನು ಜನಸ್ಥಾನವನ್ನು ಸಂಪೂರ್ಣವಾಗಿ ವಿನಾಶಗೊಳಿಸಿದನು."

"ಹಾಗಾದರೆ ನಾನೀಗಲೇ ರಾಮ-ಲಕ್ಷ್ಮಣರನ್ನು ಸಂಹರಿಸಲು ಜನಸ್ಥಾನಕ್ಕೆ ಹೋಗುವೆನು"–ಎಂದು ಹೇಳಿದ ರಾವಣನಿಗೆ ಅಕಂಪನನು ಪುನಃ ಹೇಳಿದನು :

"ರಾಕ್ಷಸೇಶ್ವರ! ರಾಮನ ಬಲ-ಪೌರುಷಗಳು ಜನಸ್ಥಾನದಲ್ಲಿ ಯಾವ ರೀತಿಯಲ್ಲಿವೆಯೆಂಬುದನ್ನು ಯಥಾರ್ಥವಾಗಿ ಹೇಳುವೆನು; ಕೇಳು. ಯಶಸ್ವಿಯಾದ ರಾಮನು ಕ್ರುದ್ಧನಾದನೆಂದರೆ ಎಂತಹ ಪರಾಕ್ರಮದಿಂದಲೂ ಜಯಿಸಲು ಅಸಾಧ್ಯನು.

ಆಪಗಾಯಾಃ ಸುಪೂರ್ಣಾಯಾ ವೇಗಂ ಪರಿಹರೇಚ್ಛರೈಃ ॥೨೩॥
ಸತಾರಾಗ್ರಹನಕ್ಷತ್ರಂ ನಭಶ್ಚಾಪ್ಯವಸಾದಯೇತ್ ।
ಅಸೌ ರಾಮಸ್ತು ಮಜ್ಜನ್ತೀಂ ಶ್ರೀಮಾನಭ್ಯುದ್ಧರೇನ್ಮಹೀಮ್ ॥
ಭಿತ್ತ್ವಾ ವೇಲಾಂ ಸಮುದ್ರಸ್ಯ ಲೋಕಾನಾಪ್ಲಾವಯೇದ್ವಿಭುಃ ।
ವೇಗಂ ಚಾಪಿ ಸಮುದ್ರಸ್ಯ ವಾಯುಂ ವಾ ವಿಧಮೇಚ್ಛರೈಃ ॥೨೫॥

**ಸಂಹೃತ್ಯ ವಾ ಪುನರ್ಲೋಕಾನ್ವಿಕ್ರಮೇಣ ಮಹಾಯಶಾಃ ।**
**ಶಕ್ತಃ ಸ ಪುರುಷವ್ಯಾಘ್ರಃ ಸ್ರಷ್ಟುಂ ಪುನರಪಿ ಪ್ರಜಾಃ ॥೨೩॥**

ರಾಮನು ಪೂರ್ಣಪ್ರವಾಹದಿಂದ ತುಂಬಿಹರಿಯುವ ನದಿಯ ವೇಗವನ್ನು ಬಾಣಗಳ ಪ್ರಯೋಗದಿಂದಲೇ ತಡೆಯಬಲ್ಲನು. ತಾರಾ-ಗ್ರಹ-ನಕ್ಷತ್ರಗಳಿಂದ ಕೂಡಿರುವ ಆಕಾಶವನ್ನು ಬಾಣಗಳಿಂದ ಸೀಳಬಲ್ಲನು. ಮುಳುಗುತ್ತಿರುವ ಭೂಮಿಯನ್ನು ಬಾಣಗಳ ಪ್ರಯೋಗದಿಂದಲೇ ಮೇಲೆತ್ತಬಲ್ಲನು. ವಿಭುವಾದ ಅವನು ಸಮುದ್ರದ ದಡಗಳನ್ನು ಭೇದಿಸಿ ಲೋಕಗಳನ್ನೇ ಮುಳುಗಿಸಿಬಿಡಬಲ್ಲನು. ಸಮುದ್ರದ ರಭಸವನ್ನೂ, ವಾಯುವಿನ ವೇಗವನ್ನೂ ಬಾಣಗಳಿಂದಲೇ ತಡೆಯಬಲ್ಲನು. ತನ್ನ ಅತುಲಪರಾಕ್ರಮದಿಂದ ಎಲ್ಲ ಲೋಕಗಳನ್ನೂ ವಿನಾಶಗೊಳಿಸಿ ಪುನಃ ಮೊದಲಿದ್ದಂತೆಯೇ ಲೋಕಗಳನ್ನೂ ಪ್ರಜೆಗಳನ್ನೂ ಸೃಷ್ಟಿಸಲು ಕೂಡ ಪುರುಷವ್ಯಾಘ್ರನಾದ ರಾಮನು ಸಮರ್ಥನಾಗಿರುವನು.

ದಶಕಂಠನೇ! ಆದುದರಿಂದ ನೀನು ಯುದ್ಧದಲ್ಲಿ ರಾಮನನ್ನು ಜಯಿಸುವ ಸಾಧ್ಯತೆಯಿಲ್ಲ. ಪಾಪಮಾಡಿದ ಜನರಿಗೆ ಸ್ವರ್ಗಕ್ಕೆ ಹೋಗಲು ಸಾಧ್ಯವಾಗದಂತೆ-ವಿಶ್ವದಲ್ಲಿರುವ ಸರ್ವರಾಕ್ಷಸರಿಂದಲೂ ರಾಮನನ್ನು ಜಯಿಸಲು ಸಾಧ್ಯವಾಗುವುದಿಲ್ಲ.

ಸಮಸ್ತದೇವತೆಗಳಿಂದಲೂ ಅಸುರರಿಂದಲೂ ಅವನು ಅವಧ್ಯನೆಂದೇ ನನ್ನ ಭಾವನೆಯಾಗಿದೆ. ಆದರೆ ಅವನನ್ನು ವಧಿಸಲು ಒಂದು ಉಪಾಯವಿದೆ. ಅದನ್ನು ಹೇಳುವೆನು ; ಏಕಾಗ್ರಚಿತ್ತನಾಗಿ ಕೇಳು.

ರಾಮನಿಗೆ ಸುಂದರವಾದ ನಡುವುಳ್ಳ ಸೀತಾ ಎಂಬ ಹೆಸರಿನ ಉತ್ತಮಳಾದ ಭಾರ್ಯೆಯಿದ್ದಾಳೆ. ಅವಳು ಯೌವನಮಧ್ಯಸ್ಥಳು.* ಯಾವ ಯಾವ ಅಂಗಗಳು ಎಷ್ಟೆಷ್ಟು ಪರಿಮಾಣದಲ್ಲಿರಬೇಕೋ – ಅಷ್ಟೇ ಪರಿಮಾಣದಲ್ಲಿ

---

*ಶ್ಯಾಮಾ= ನಡುಹರೆಯದಲ್ಲಿರುವ ಹೆಂಗಸು. ಇನ್ನೂ ಪ್ರಸವಿಸದ ಹೆಂಗಸು. ಉತ್ತಮಜಾತಿಯ ಹೆಂಗಸು. ಶೀತೇ ಸುಖೋಷ್ಣಸರ್ವಾಙ್ಗೀ ಗ್ರೀಷ್ಮೇ ಚ ಸುಖಶೀತಲಾ । ತಪ್ತಕಾಞ್ಚನವರ್ಣಾಭಾ ಸಾ ಸ್ತ್ರೀ ಶ್ಯಾಮೇತಿ ಕಥ್ಯತೇ ॥ ಶೀತಕಾಲದಲ್ಲಿ ಸುಖಕರವಾದ ಉಷ್ಣವಿರುವ ಸರ್ವಾಂಗಗಳಿಂದ ಕೂಡಿರುವವಳು. ಬೇಸಿಗೆಯಲ್ಲಿ ಸುಖಕರ

ಸಮವಾಗಿ ವಿಭಕ್ತವಾಗಿವೆ. ರತ್ನಾಭರಣಗಳಿಂದ ಭೂಷಿತೆಯಾಗಿರುವ ಅವಳು ಸ್ತ್ರೀರತ್ನಳೇ ಆಗಿದ್ದಾಳೆ. ದೇವಸ್ತ್ರೀಯೂ ಅವಳಿಗೆ ಸಮಾನಳಲ್ಲ; ಗಂಧರ್ವಿಯೂ ಸಮಾನಳಲ್ಲ; ಅಪ್ಸರೆಯಾಗಲೀ, ನಾಗಕನ್ಯೆಯಾಗಲೀ ಸೀತೆಗೆ ಸಮಾನರಾದ ಸ್ತ್ರೀಯರಲ್ಲ. ದೇವ-ಗಂಧರ್ವಾಪ್ಸರ-ಪನ್ನಗರಲ್ಲಿಯೇ ಅವಳಿಗೆ ಸಮಾನರಾದ ಸ್ತ್ರೀಯರಿಲ್ಲವೆಂದ ಮೇಲೆ ಮನುಷ್ಯರಲ್ಲಿ ಹೇಗಿರಲು ಸಾಧ್ಯ? ಆದುದರಿಂದ ನೀನೀಗಲೇ ಮಹಾರಣ್ಯಕ್ಕೆ ಹೋಗಿ ರಾಮನನ್ನು ವಂಚಿಸಿ ಅವನ ಭಾರ್ಯೆಯನ್ನು ಬಲಾತ್ಕಾರವಾಗಿ ಅಪಹರಿಸು. ಸೀತೆ ಯಿಲ್ಲದೇ ರಾಮನು ಖಂಡಿತವಾಗಿಯೂ ಬದುಕಿರುವುದಿಲ್ಲ."

ಅಕಂಪನನು ಹೇಳಿದ ಆ ಮಾತು ರಾವಣನಿಗೆ ಹಿಡಿಸಿತು. ಸ್ವಲ್ಪ ಹೊತ್ತು ಚಿಂತಿಸಿ ಹೇಳಿದನು:

"ಅಕಂಪನ! ನೀನು ಹೇಳಿದಂತೆಯೇ ಮಾಡುತ್ತೇನೆ. ಬೆಳಗಾದೊಡ ನೆಯೇ ಸಾರಥಿಯೊಡನೆ ದಂಡಕಾರಣ್ಯಕ್ಕೆ ಹೋಗುತ್ತೇನೆ. ವೈದೇಹಿಯನ್ನು ಈ ನಮ್ಮ ಮಹಾನಗರಿಗೆ ಸಂತೋಷದಿಂದ ಕರೆತರುತ್ತೇನೆ."

ರಾವಣನು ಅಕಂಪನನೊಡನೆ ಹೀಗೆ ಹೇಳಿ ಮರುದಿನ ಮುಂಜಾನೆ ಹೇಸರಗತ್ತೆಗಳಿಂದ ಸಜ್ಜಾಗಿದ್ದ, ಸೂರ್ಯನ ವರ್ಣದಿಂದ ಕೂಡಿದ್ದ ರಥದಲ್ಲಿ ಕುಳಿತು ಎಲ್ಲ ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ಪ್ರಯಾಣಮಾಡಿದನು. ನಕ್ಷತ್ರಮಾರ್ಗದಲ್ಲಿ ಹೋಗುತ್ತಿದ್ದ ರಾಕ್ಷಸೇಂದ್ರನ ಆ ಮಹಾರಥವು ಮೇಘ ಮಂಡಲದಲ್ಲಿ ಕಾಣುವ ಚಂದ್ರನಂತೆಯೇ ಪ್ರಕಾಶಿಸುತ್ತಿದ್ದಿತು.

ಅನಂತರ ರಾವಣನು ತಾಟಕಿಯ ಮಗನಾದ ಮಾರೀಚನ ಆಶ್ರಮಕ್ಕೆ ಹೋಗಿ ಅವನನ್ನು ಸಂಧಿಸಿದನು. ಮಾರೀಚನು ಮನುಷ್ಯರಿಗೆ ದುರ್ಲಭ ವಾದ ಭಕ್ಷ್ಯ-ಭೋಜ್ಯಾದಿಗಳಿಂದ ರಾವಣನನ್ನು ಸತ್ಕರಿಸಿದನು. ಅರ್ಘ್ಯ-ಪಾದ್ಯಾದಿಗಳಿಂದ ಮಾರೀಚನೇ ಸ್ವತಃ ರಾವಣನನ್ನು ಸತ್ಕರಿಸಿ ಗೂಢಾರ್ಥ ಯುಕ್ತವಾದ ಮಾತುಗಳಿಂದ ರಾವಣನನ್ನು ಪ್ರಶ್ನಿಸಿದನು:

"ರಾಕ್ಷಸೇಶ್ವರನೇ! ಲೋಕಗಳೆಲ್ಲವೂ ಕ್ಷೇಮದಿಂದಿರುವುವಲ್ಲವೇ?

---

ವಾದ ಶೈತ್ಯವಿರುವ ಸರ್ವಾಂಗಗಳಿಂದ ಕೂಡಿರುವವಳು. ಪುಟಕ್ಕೆ ಹಾಕಿದ ಚಿನ್ನದಂತೆ ಮೈಬಣ್ಣವಿರುವವಳು. ಇಂತಹ ಸ್ತ್ರೀಯನ್ನು ಶ್ಯಾಮಾ ಎಂದು ಕರೆಯುತ್ತಾರೆ. ಶ್ಯಾಮಾ ಯೌವನಮಧ್ಯಸ್ಥಾ [ಅಮರಃ]

ನೀನು ಯಾವ ಪೂರ್ವಸೂಚನೆಯೂ ಇಲ್ಲದೇ ಇಷ್ಟು ಅವಸರವಾಗಿ ಇಲ್ಲಿಗೆ ಬಂದಿರುವುದನ್ನು ನೋಡಿದರೆ ಸಂದೇಹವುಂಟಾಗುತ್ತದೆ."

ಮಾರೀಚನು ಮಹಾತೇಜಸ್ವಿಯಾದ ರಾವಣನಿಗೆ ಹೀಗೆ ಹೇಳಲು ವಾಕ್ಯಕೋವಿದನಾದ ರಾವಣನು ಯಥೋಚಿತವಾಗಿ ಉತ್ತರಿಸಿದನು :

"ಜನಸ್ಥಾನದ ರಕ್ಷಕನಾಗಿದ್ದ ಖರನು ಶ್ರಮವಿಲ್ಲದೇ ಕಾರ್ಯಗಳನ್ನು ಮಾಡುವ ರಾಮನಿಂದ ಹತನಾದನು. ಯಾರಿಂದಲೂ ನಾಶಪಡಿಸಲು ಅಸಾಧ್ಯವಾಗಿದ್ದ ಜನಸ್ಥಾನವನ್ನು ಯುದ್ಧದಲ್ಲಿ ರಾಮನು ಸಂಪೂರ್ಣವಾಗಿ ವಿನಾಶಗೊಳಿಸಿದ್ದಾನೆ. ಜನಸ್ಥಾನದಲ್ಲಿದ್ದ ರಾಕ್ಷಸರೆಲ್ಲರೂ ಹತರಾಗಿದ್ದಾರೆ. ಇದಕ್ಕೆ ಪ್ರತೀಕಾರವಾಗಿ ನಾನು ಅವನ ಭಾರ್ಯೆಯನ್ನು ಅಪಹರಿಸಬೇಕೆಂದಿರುವೆನು. ಈ ಕಾರ್ಯದಲ್ಲಿ ನೀನು ನನಗೆ ನೆರವಾಗಬೇಕಾಗಿದೆ."

"ರಾವಣೇಶ್ವರ ! ಮಿತ್ರರೂಪಿಯಾದ – ಆದರೆ ಶತ್ರುವೇ ಆಗಿರುವ ಯಾವನು ನಿನಗೆ ಸೀತಾಪಹರಣದ ವಿಷಯವಾಗಿ ಹೇಳಿದನು ? ಹಿಂದೆ ನಿನ್ನಿಂದ ನಿಂದಿತನಾಗಿರುವ ಯಾವನು ಅಸಮಾಧಾನಗೊಂಡು ಹೀಗೆ ಮಾಡಿದ್ದಾನೆ ? ಸೀತೆಯನ್ನು ಇಲ್ಲಿಗೆ ಅಪಹರಿಸಿಕೊಂಡು ಬರುವಂತೆ ಯಾವನು ಹೇಳಿದನೆಂಬುದನ್ನು ಹೇಳು. ರಾಕ್ಷಸಲೋಕದ ಶಿಖರವನ್ನೇ ಯಾವನು ಕಳಚಲು ಬಯಸಿದ್ದಾನೆ ? ಸೀತಾಪಹರಣವನ್ನು ಮಾಡಲು ಯಾವನು ಪ್ರೋತ್ಸಾಹಿಸಿರುವನೋ ಅವನು ನಿಶ್ಚಯವಾಗಿಯೂ ನಿನ್ನ ಶತ್ರುವೇ ಸರಿ. ಇದರಲ್ಲಿ ಸಂಶಯವೇ ಇಲ್ಲ. ನಿನ್ನಿಂದವನು ಸರ್ಪದ ಬಾಯಿಂದ ವಿಷದ ಹಲ್ಲನ್ನು ಕೀಳಿಸಲು ಬಯಸಿದ್ದಾನೆ. ಸೀತಾಪಹರಣವನ್ನು ಮಾಡ ಹೇಳಿ ಈ ದುರ್ಮಾರ್ಗವು ಪ್ರತೀಕಾರಕ್ಕೆ ತಕ್ಕುದಾಗಿರುವುದೆಂದು ಪ್ರತಿಪಾದಿಸಿದವನು ಯಾರು ? ಸುಖವಾಗಿ ಮಲಗಿದ್ದ ನಿನ್ನ ತಲೆಗೆ ಪೆಟ್ಟುಕೊಟ್ಟವರು ಯಾರು ? ( ನಿನ್ನ ತಲೆಯನ್ನು ಕೆಡಿಸಿದವರು ಯಾರು ? )

ರಾವಣೇಶ್ವರ ! ರಾಮನು ಗಂಧಹಸ್ತಿ[1] ( ಮದ್ದಾನೆ ) ಯಂತಿದ್ದಾನೆ. ಸತ್ಕುಲದಲ್ಲಿ ಹುಟ್ಟಿರುವುದೇ ರಾಮನೆಂಬ ಮದ್ದಾನೆಯ ಸೊಂಡಿಲಾಗಿದೆ. ಪ್ರತಾಪವೆಂಬುದೇ ಮದೋದಕವಾಗಿದೆ. ಅವನ ನೀಳವಾದ ತೋಳುಗಳೇ

---

[1] ಯಸ್ಯ ಗಂಧಮಾತ್ರೇಣ ಅನ್ಯೇ ಗಜಾಃ ಪಲಾಯಂತೇ ಸ ಗಂಧಹಸ್ತೀತ್ಯುಚ್ಯತೇ

ಎರಡು ದಂತಗಳ ರೂಪದಲ್ಲಿವೆ. ಗಂಧಹಸ್ತಿಯು ಬಂದೊಡನೆಯೇ ಪ್ರಾಣಿಗಳು ಓಡಿಹೋಗುವಂತೆ–ಯುದ್ಧದಲ್ಲಿ ರಾಮನನ್ನು ಕಂಡೊಡನೆಯೇ ವೀರರೆಲ್ಲರೂ ಪಲಾಯನಮಾಡುತ್ತಾರೆ. ಅಂತಹವನನ್ನು ಕಣ್ಣೆತ್ತಿ ನೋಡುವುದೂ ಯುಕ್ತವಾಗಿ ಕಾಣುವುದಿಲ್ಲ.

ರಾಕ್ಷಸೇಶ್ವರ ! ರಾಮನನ್ನು ಮನುಷ್ಯರೂಪದಲ್ಲಿರುವ ಸಿಂಹವೆಂದು ತಿಳಿ. ರಣಾಗ್ರದಲ್ಲಿ ದಾರ್ಢ್ಯದಿಂದಿರುವುದೇ ರಾಮನೆಂಬ ಸಿಂಹದ ಸಂಧಿವಾಲವಾಗಿದೆ.* ರಾಮನೆಂಬ ಸಿಂಹವು ರಣಚತುರರಾದ ರಾಕ್ಷಸರೂಪಿಗಳಾದ ಮೃಗಗಳನ್ನು ಸಂಹರಿಸುತ್ತದೆ. ಬಾಣಗಳೆಂಬ ಉಗುರು–ಮುಂತಾದ ಅವಯವಗಳಿಂದ ಕೂಡಿರುವ, ನಿಶಿತವಾದ ಕತ್ತಿಯನ್ನೇ ಕೋರೆದಾಡೆಯನ್ನಾಗಿ ಹೊಂದಿರುವ, ಮಲಗಿರುವ ರಾಮರೂಪವಾದ ಸಿಂಹವನ್ನು ಎಚ್ಚರಗೊಳಿಸುವುದು ಖಂಡಿತವಾಗಿಯೂ ಯುಕ್ತವಲ್ಲ. ರಾಮನೊಂದು ಪಾತಾಳವ್ಯಾಪಿಯಾದ ಸಾಗರವಿದ್ದಂತೆ. ರಾಮನ ಧನುಸ್ಸೇ ಸಾಗರದಲ್ಲಿರುವ ಮೊಸಳೆಯಾಗಿದೆ. ಭುಜಗಳ ವೇಗವೇ ಕೆಸರು. ಬಾಣಗಳೇ ಅಲೆಗಳು. ಮಹಾಯುದ್ಧವೇ ಜಲರಾಶಿ. ರಾಕ್ಷಸರಾಜನೇ ! ಇಂತಹ ಅತಿಘೋರವಾದ ರಾಮರೂಪವಾದ ಪಾತಾಳದಲ್ಲಿ ಧುಮುಕುವುದು ಖಂಡಿತವಾಗಿಯೂ ಯುಕ್ತವಲ್ಲ.

ಲಂಕೇಶ್ವರ ! ಪ್ರಸನ್ನನಾಗು. ಪ್ರಸನ್ನವಾದ ಮನಸ್ಸಿನಿಂದ ಲಂಕೆಗೆ ಹಿಂದಿರುಗು. ಇದೇ ಒಳ್ಳೆಯದು. ನಿನ್ನ ಪತ್ನಿಯರೊಡನೆ ಅನುದಿನವೂ ಸುಖದಿಂದ ವಿಹರಿಸು. ರಾಮನು ಭಾರ್ಯಾಸಮೇತನಾಗಿ ಅರಣ್ಯದಲ್ಲಿ ವಿಹರಿಸಲಿ."

ಮಾರೀಚನು ಹೀಗೆ ಹೇಳಲು ದಶಗ್ರೀವನಾದ ರಾವಣನು ಲಂಕೆಗೆ ಹಿಂದಿರುಗಿ ಉತ್ತಮೋತ್ತಮವಾದ ತನ್ನ ಅರಮನೆಯನ್ನು ಪ್ರವೇಶಿಸಿದನು.

ಳ೧ನೆಯ ಸರ್ಗವು ಮುಗಿಯಿತು.

---

*ಸಂಧಿವಾಲಃ : ಸಿಂಹವು ಕೋಪಗೊಂಡು ಬೇರೆಡೆಗೆ ಹೊರಟಾಗ ಅದರ ಬಾಲವು ನಡುವಿನ ಮೇಲ್ಭಾಗದಲ್ಲಿರುವುದೆಂದು ಪ್ರಸಿದ್ಧಿಯಾಗಿದೆ.

## ಶೂರ್ಪಣಖೆಯು ಲಂಕೆಯಲ್ಲಿ ರಾವಣನನ್ನು ಸಂಧಿಸಿದುದು

ತತಃ ಶೂರ್ಪಣಖಾ ದೃಷ್ಟ್ವಾ ಸಹಸ್ರಾಣಿ ಚತುರ್ದಶ ।
ಹತಾನ್ಯೇಕೇನ ರಾಮೇಣ ರಕ್ಷಸಾಂ ಭೀಮಕರ್ಮಣಾಮ್ ॥೧॥

ದೂಷಣಂ ಚ ಖರಂ ಚೈವ ಹತಂ ತ್ರಿಶಿರಸಾ ಸಹ ।
ದೃಷ್ಟ್ವಾ ಪುನರ್ಮಹಾನಾದಂ ನನಾದ ಜಲದೋ ಯಥಾ ॥೨॥

ಬಳಿಕ ಭಯಂಕರವಾದ ಕಾರ್ಯವನ್ನು ಮಾಡುವವರಾಗಿದ್ದ ಹದಿನಾಲ್ಕು ಸಾವಿರ ರಾಕ್ಷಸ ಸೈನಿಕರೂ, ರಾಕ್ಷಸರ ನಾಯಕರಾದ ಖರ-ದೂಷಣ-ತ್ರಿಶಿರಸರೂ ರಾಮನೊಬ್ಬನಿಂದಲೇ ಹತರಾದುದನ್ನು ಕಂಡು ಶೂರ್ಪಣಖೆಯು ಕಾರ್ಮುಗಿಲು ಶಬ್ದಮಾಡುವಂತೆ ಗಟ್ಟಿಯಾಗಿ ಕೂಗಿಕೊಂಡಳು.

ಇತರರಿಂದ ಮಾಡಲು ಸಾಧ್ಯವಾಗಲಾರದ ಅತ್ಯಂತದುಷ್ಕರವಾದ ಸಂಹಾರಕಾರ್ಯವನ್ನು ರಾಮನೊಬ್ಬನೇ ಮಾಡಿರುವುದನ್ನು ನೋಡಿ ರಾಕ್ಷಸಿಯು ಅತ್ಯಂತಭೀತಳಾಗಿ ರಾವಣನಿಂದ ಪರಿಪಾಲಿತವಾದ ಲಂಕೆಗೆ ಹೋದಳು.

ಇಂದ್ರನು ಮರುದ್ಗಣಗಳಿಂದ ಪರಿವೃತನಾಗಿ ಕುಳಿತಿರುವಂತೆ – ಅರಮನೆಯ ಉಪ್ಪರಿಗೆಯ ಮೇಲ್ಭಾಗದಲ್ಲಿ ಸಚಿವರಿಂದ ಪರಿವೃತನಾಗಿ ಕುಳಿತಿದ್ದ, ಮಹಾತೇಜಸ್ವಿಯಾಗಿದ್ದ ರಾವಣನನ್ನು ಶೂರ್ಪಣಖೆಯು ನೋಡಿದಳು. ಸುವರ್ಣಮಯವಾದ ಇಟ್ಟಿಗೆಗಳಿಂದ ರಚಿತವಾದ ವೇದಿಕೆಯ ಮಧ್ಯಭಾಗದಲ್ಲಿ – ವಿಶೇಷವಾದ ಆಜ್ಯಾಹುತಿಯನ್ನು ಸ್ವೀಕರಿಸಿ ಪ್ರಜ್ವಲಿಸುವ ಯಜ್ಞೇಶ್ವರನಂತೆ–ಸೂರ್ಯಸದೃಶವಾದ, ಸ್ವರ್ಣಮಯವಾದ, ಶ್ರೇಷ್ಠವಾದ ಆಸನದಲ್ಲಿ ಕುಳಿತಿದ್ದ ರಾವಣನನ್ನು ರಾಕ್ಷಸಿಯು ನೋಡಿದಳು. ದೇವತೆಗಳಿಗೂ, ಗಂಧರ್ವರಿಗೂ ಭೂತಗಣಗಳಿಗೂ, ಮಹಾತ್ಮರಾದ ಋಷಿಗಳಿಗೂ ಯುದ್ಧದಲ್ಲಿ ಅಜೇಯನಾದ, ಭಯಂಕರನಾದ, ಬಾಯ್ದೆರೆದ ಯಮರಾಜನಂತೆಯೇ ಕಾಣುತ್ತಿದ್ದ ರಾವಣನನ್ನು ರಾಕ್ಷಸಿಯು ನೋಡಿದಳು. ದೇವಾಸುರರಿಗೆ ನಡೆದ ಯುದ್ಧದಲ್ಲಿ ಇಂದ್ರನು ಪ್ರಯೋಗಿಸಿದ ಸಿಡಿಲಿಗೆ ಸಮಾನವಾದ

ವಜ್ರಾಯುಧದಿಂದ ಸ್ವಲ್ಪಮಾತ್ರವೇ ಗಾಯಗೊಂಡಿದ್ದ, ಇಂದ್ರನ ಪಟ್ಟದಾನೆ ಯಾದ ಐರಾವತದ ಕೊಂಬಿನ ಅಗ್ರಭಾಗದಿಂದ ಗೀರಲ್ಪಟ್ಟು ಜಡ್ಡುಗಟ್ಟಿದ ವಕ್ಷಃಸ್ಥಳವುಳ್ಳವನಾಗಿದ್ದ ರಾವಣನನ್ನು ರಾಕ್ಷಸಿಯು ನೋಡಿದಳು.* ಇಪ್ಪತ್ತು ತೋಳುಗಳಿಂದಲೂ ಹತ್ತು ತಲೆಗಳಿಂದಲೂ ಯುಕ್ತನಾಗಿದ್ದ, ದರ್ಶನೀಯವಾದ ಛತ್ರ-ಚಾಮರಾದಿಗಳಿಂದ ಸಮಲಂಕೃತನಾಗಿದ್ದ, ವಿಶಾಲವಾದ ವಕ್ಷಃಸ್ಥಳವನ್ನು ಹೊಂದಿದ್ದ, ರಾಜಲಕ್ಷಣಗಳಿಂದ ಸುಶೋಭಿತನಾಗಿದ್ದ ವೀರನಾದ ರಾವಣೇಶ್ವರನನ್ನು ರಾಕ್ಷಸಿಯು ಉಪ್ಪರಿಗೆಯ ಮೇಲೆ ನೋಡಿದಳು. ಶರೀರದಲ್ಲಿ ಧರಿಸಿದ್ದ ವೈಡೂರ್ಯಮಣಿಗಳ ಆಭರಣಗಳ ಕಾಂತಿಯಂತೆ ಶರೀರ ಕಾಂತಿಯುಳ್ಳವನಾಗಿದ್ದ, ಪುಟಕ್ಕೆ ಹಾಕಿದ ಚಿನ್ನದ ಕುಂಡಲಗಳನ್ನು ಧರಿಸಿದ್ದ, ಸುಂದರವಾದ ಭುಜಗಳಿಂದ ಕೂಡಿದ್ದ, ಬಿಳುಪಾದ ಹಲ್ಲುಗಳಿಂದಲೂ ವಿಶಾಲವಾದ ಮುಖದಿಂದಲೂ ಶೋಭಿಸುತ್ತಿದ್ದ, ಪರ್ವತಸದೃಶನಾದ ರಾವಣ ರಾಕ್ಷಸನನ್ನು ಶೂರ್ಪಣಖೆಯು ನೋಡಿದಳು.

ದೇವತೆಗಳೊಡನೆ ಮಾಡಿದ ಯುದ್ಧದಲ್ಲಿಯೂ ಇನ್ನೂ ಇತರ ಮಹಾ ಯುದ್ಧಗಳಲ್ಲಿಯೂ ಉಪೇಂದ್ರನಾದ ವಿಷ್ಣುವಿನ ಚಕ್ರದಿಂದ ನೂರಾರು ಬಾರಿ ಪ್ರಹೃತನಾದ ಮತ್ತು ಇತರ ಅನೇಕ ಶಸ್ತ್ರಗಳಿಂದಲೂ ತಾಡಿತನಾದ

*ಇಂದ್ರನ ವಜ್ರಾಯುಧದಿಂದ ರಾವಣನು ಸಾಯಲಿಲ್ಲ. ಪ್ರಾಣಾಂತಕವಾದ ಪೆಟ್ಟೂ ಬೀಳಲಿಲ್ಲ. ಒಂದು ಸಣ್ಣ ಗಾಯವು ಮಾತ್ರವೇ ಆಯಿತು. ಎಂದರೆ: ರಾವಣನ ಪರಾಕ್ರಮವೆಷ್ಟೆಂಬುದನ್ನು ಇದು ಸೂಚಿಸುತ್ತದೆ. ಇಂದ್ರನ ವಜ್ರಾಯುಧದ ಪ್ರಹಾರಕ್ಕೆ ಸಿಕ್ಕಿದವನು ಪ್ರಾಣವುಳಿಸಿಕೊಳ್ಳುವುದೇ ಸಾಧ್ಯವಿಲ್ಲದಿರುವಾಗ ಅಂತಹ ವಜ್ರಾಯುಧವು ರಾವಣನ ಶರೀರದ ಮೇಲೆ ಒಂದು ಸಣ್ಣ ಗಾಯವನ್ನು ಮಾಡಲು ಮಾತ್ರವೇ ಸಮರ್ಥವಾಯಿತು ಎಂದರೆ ರಾವಣನ ವಿಷಯದಲ್ಲಿ ವಜ್ರಾಯುಧವೆಂಬುದು ಸಣ್ಣ ಆಯುಧಕ್ಕೆ ಸಮಾನವೆಂದಂತಾಯಿತು. ಅದರಂತೆಯೇ ಐರಾವತಕ್ಕೆ ಎದುರಾಗಿ ಸಿಕ್ಕಿದವರಾರೂ ಪ್ರಾಣವುಳಿಸಿಕೊಳ್ಳಲಾರರು. ದಂತಗಳಿಂದ ಅದು ಎಂತಹ ಎದುರಾಳಿಯನ್ನೂ ನಿಗ್ರಹಿಸಬಲ್ಲುದು. ಹೀಗಿರುವಾಗ ಒಬ್ಬನಿಗೆ ಮುಳ್ಳಿನ ಗಿಡವು ತಗುಲಿದರೆ ಆ ಮುಳ್ಳು ಶರೀರವನ್ನು ಸ್ವಲ್ಪ ಗೀರಿಕೊಂಡು ಹೋಗುವಂತೆ ಐರಾವತದ ಕೊಂಬು ರಾವಣನ ಶರೀರವನ್ನು ಗೀರಲು ಮಾತ್ರವೇ ಸಮರ್ಥವಾಯಿತು. ಅದೂ ಒಣಗಿಹೋಗಿ ಸಣ್ಣ ಕಲೆಯು ಮಾತ್ರವೇ ಉಳಿದುಕೊಂಡಿತ್ತೆಂದರೆ–ಅವನ ವಜ್ರದೇಹಕ್ಕೆ ಐರಾವತನ ಕೊಂಬೂ ನಾಟಲಿಲ್ಲ ಎಂಬುದನ್ನು ಇದು ಸೂಚಿಸುತ್ತದೆ.

ರಾವಣೇಶ್ವರನು ವಿಮಾನಾಗ್ರದಲ್ಲಿ ಕುಳಿತಿರುವುದನ್ನು ಶೂರ್ಪಣಖೆಯು ನೋಡಿದಳು.* ದೇವತೆಗಳ ಸಮಸ್ತವಾದ ಆಯುಧಗಳಿಂದಲೂ ಪ್ರಹೃತವಾದ ಅವಯುವಗಳಿಂದ ಕೂಡಿದ್ದ, ಕ್ಷೋಭೆಗೊಳ್ಳದಿರುವ ಸಮುದ್ರಗಳನ್ನೂ ಕ್ಷೋಭೆಗೊಳಿಸುವ ಸಾಮರ್ಥ್ಯವನ್ನು ಹೊಂದಿದ್ದ, ಬಹುಶೀಘ್ರವಾಗಿ ಕಾರ್ಯಗಳನ್ನು ಮಾಡಿ ಮುಗಿಸುತ್ತಿದ್ದ ರಾವಣನನ್ನು ರಾಕ್ಷಸಿಯು ನೋಡಿದಳು. ದೊಡ್ಡ ದೊಡ್ಡ ಪರ್ವತಗಳನ್ನಾದರೂ ಕಿತ್ತು ಬಿಸುಡುವ ಸಾಮರ್ಥ್ಯವನ್ನು ಹೊಂದಿದ್ದ, ದೇವತೆಗಳನ್ನು ಬಾರಿಬಾರಿಗೂ ಮರ್ದನಮಾಡುತ್ತಿದ್ದ, ಸದ್ಧರ್ಮಗಳ ನಾಶಕನಾದ, ಪರಸ್ತ್ರೀಯರಲ್ಲಿ ಆಸಕ್ತನಾದ ರಾವಣನನ್ನು ಶೂರ್ಪಣಖೆಯು ನೋಡಿದಳು.

ಸಮಸ್ತದಿವ್ಯಾಸ್ತ್ರಗಳ ಆದಾನ-ಸಂಧಾನ-ಪ್ರಯೋಗೋಪಸಂಹಾರಗಳನ್ನು ಬಲ್ಲವನಾಗಿದ್ದ, ಋಷಿಗಳು ದೇವತೆಗಳ ಪ್ರೀತ್ಯರ್ಥವಾಗಿ ಮಾಡುತ್ತಿದ್ದ ಯಜ್ಞಗಳಿಗೆ ಸದಾ ವಿಘ್ನವನ್ನುಂಟುಮಾಡುತ್ತಿದ್ದ, ಭೋಗವತೀ ಹಟ್ಟಣಕ್ಕೆ ಹೋಗಿ ವಾಸುಕಿಯನ್ನೂ ಮತ್ತು ತಕ್ಷಕನನ್ನೂ ಪರಾಜಯಗೊಳಿಸಿ ತಕ್ಷಕನ ಭಾರ್ಯೆಯನ್ನು ಅಪಹರಿಸಿ ತಂದ ರಾವಣೇಶ್ವರನನ್ನು ಶೂರ್ಪಣಖೆಯು ನೋಡಿದಳು.

ಕೈಲಾಸಪರ್ವತಕ್ಕೆ ಹೋಗಿ ನರವಾಹನನಾದ ಕುಬೇರನನ್ನು ಜಯಿಸಿ ಅವನಲ್ಲಿದ್ದ ಇಚ್ಛಿಸಿದಲ್ಲಿಗೆ ಹೋಗುವ ಪುಷ್ಪಕವಿಮಾನವನ್ನು[1] ಅಪಹರಿಸಿ ತಂದ ರಾವಣೇಶ್ವರನನ್ನು ಶೂರ್ಪಣಖೆಯು ನೋಡಿದಳು.

ಕುಬೇರನ ದಿವ್ಯವಾದ ಚೈತ್ರರಥವೆಂಬ ಉದ್ಯಾನವನವನ್ನೂ, ಅಲ್ಲಿದ್ದ

---

*ಪ್ರಪಂಚದಲ್ಲಿ ವಿಷ್ಣುಚಕ್ರಕ್ಕೆ ಎದುರಾಗಿ ಯಾರೂ ನಿಲ್ಲಲಾರರು. 'ಸುರದ್ವಿಷಾಂ ಪ್ರಾಣನಾಶೀ' ಎಂದೇ ವಿಷ್ಣುಚಕ್ರವನ್ನು ಪ್ರಾರ್ಥನೆಮಾಡುತ್ತಾರೆ. ಅಂತಹ ವಿಷ್ಣುಚಕ್ರವು ನೂರಾರು ಬಾರಿ ರಾವಣನ ಮೇಲೆ ಬಿದ್ದರೂ ಅವನ ಪ್ರಾಣವನ್ನು ಅಪಹರಿಸಲು ಅದು ಸಮರ್ಥವಾಗಲಿಲ್ಲ. ಇನ್ನು ಉಳಿದ ಆಯುಧಗಳ ವಿಷಯವಾಗಿ ಹೇಳಬೇಕಾಗಿಯೇ ಇಲ್ಲ. ರಾವಣನು ಇಂದ್ರನ ವಜ್ರಾಯುಧದಿಂದಲೂ ಅವಧ್ಯನು; ವಿಷ್ಣುವಿನ ಚಕ್ರದಿಂದಲೂ ಅವಧ್ಯನು. ಅಷ್ಟು ಅತುಲಪರಾಕ್ರಮೀ ಎಂಬುದನ್ನಿದು ಸೂಚಿಸುತ್ತದೆ.

1 ಪುಷ್ಪಕವಿಮಾನವು ಬ್ರಹ್ಮನಿಂದ ಕುಬೇರನಿಗೆ ಅನುಗ್ರಹಪೂರ್ವಕವಾಗಿ ಕೊಡಲ್ಪಟ್ಟಿದ್ದಿತು. ಅದು ಎಷ್ಟು ಮಂದಿಯನ್ನಾದರೂ ಕುಳ್ಳಿರಿಸಿಕೊಳ್ಳುವ ಮತ್ತು ಎಲ್ಲಿಗೆ ಬೇಕಾದರೂ ಹೋಗಬಲ್ಲ ಸಾಮರ್ಥ್ಯವನ್ನು ಹೊಂದಿದ್ದಿತು.

ಸುಂದರವಾದ ಸರೋವರವನ್ನೂ, ನಂದನವನವನ್ನೂ ಮತ್ತು ದೇವತೆಗಳ ಸುಂದರವಾದ ಉದ್ಯಾನವನಗಳನ್ನೂ ಕೋಪದಿಂದ ವಿನಾಶಮಾಡಿದ ವೀರ್ಯವಂತನಾದ ರಾವಣನು ವಿಮಾನಾಗ್ರದಲ್ಲಿರುವುದನ್ನು ಶೂರ್ಪಣಖೆಯು ನೋಡಿದಳು. ಪರಂತಪರಾದ, ಮಹಾಭಾಗರಾದ, ಉದಯಿಸುತ್ತಿರುವ ಚಂದ್ರ-ಸೂರ್ಯರನ್ನು ತೋಳುಗಳಿಂದಲೇ ತಡೆಹಿಡಿಯುವ ಸಾಮರ್ಥ್ಯವಿದ್ದ ರಾವಣನನ್ನು ರಾಕ್ಷಸಿಯು ನೋಡಿದಳು. ಹತ್ತುಸಾವಿರ ವರ್ಷಗಳ ಕಾಲ ಮಹಾವನದಲ್ಲಿ ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಿ ಕಡೆಯಲ್ಲಿ ತನ್ನ ತಲೆಗಳನ್ನೇ ಕತ್ತರಿಸಿ ಬ್ರಹ್ಮನಿಗೆ ಅರ್ಪಿಸಿದ ಧೀರನಾದ ರಾವಣೇಶ್ವರನನ್ನು ರಾಕ್ಷಸಿಯು ನೋಡಿದಳು. ಮನುಷ್ಯನೊಬ್ಬನನ್ನು ಬಿಟ್ಟು ದೇವ-ದಾನವ-ಗಂಧರ್ವರಿಂದಾಗಲೀ, ಪಿಶಾಚ-ಪಕ್ಷಿಗಳಿಂದಾಗಲೀ, ಸರ್ಪಗಳಿಂದಾಗಲೀ-ಯುದ್ಧದಲ್ಲಿ ಮರಣವಿಲ್ಲವೆಂಬ ಅಭಯವನ್ನು ಬ್ರಹ್ಮನಿಂದ ಪಡೆದುಕೊಂಡಿದ್ದ ರಾವಣೇಶ್ವರನನ್ನು ರಾಕ್ಷಸಿಯು ನೋಡಿದಳು. ಸೋಮುಸವನ ಕರ್ಮವಿಶಿಷ್ಟವಾದ ಯಾಗಶಾಲೆಗಳಲ್ಲಿ ಬ್ರಾಹ್ಮಣರಿಂದ ಅಭಿಮಂತ್ರಿಸಲ್ಪಟ್ಟ ಪುಣ್ಯಪ್ರಾಪಕವಾದ ಸೋಮರಸವನ್ನು ಬಲಾತ್ಕಾರದಿಂದ ಅಪಹರಿಸಿ ವಿನಾಶಗೊಳಿಸುವ ಸ್ವಭಾವದಿಂದ ಕೂಡಿದ್ದ ರಾವಣನನ್ನು ತಂಗಿಯಾದ ಶೂರ್ಪಣಖೆಯು ನೋಡಿದಳು. ಯಜ್ಞವೆಲ್ಲವೂ ಮುಗಿದು ಋತ್ವಿಜರಿಗೆ ದಕ್ಷಿಣೆಗಳನ್ನು ಕೊಡಬೇಕಾದ ಕಾಲವು ಸನ್ನಿಹಿತವಾಗಿದ್ದಾಗ ಯಜ್ಞಶಾಲೆಗಳಿಗೆ ನುಗ್ಗಿ ಎಲ್ಲವನ್ನೂ ಹಾಳುಮಾಡಿಹೋಗುತ್ತಿದ್ದ, ದುಷ್ಟನಾದ, ಬ್ರಾಹ್ಮಣಹಂತಕನಾದ, ಕ್ರೂರವಾದ ಕಾರ್ಯಗಳನ್ನೇ ಯಾವಾಗಲೂ ಮಾಡುತ್ತಿದ್ದ, ಸಾಹಸಿಯಾದ, ದಾಕ್ಷಿಣ್ಯರಹಿತನಾದ, ಯಾವಾಗಲೂ ಪ್ರಜೆಗಳಿಗೆ (ಮನುಷ್ಯರಿಗೆ) ಅಹಿತವನ್ನು ಮಾಡುವುದರಲ್ಲಿಯೇ ಆಸಕ್ತನಾಗಿದ್ದ, ಸರ್ವಪ್ರಾಣಿಗಳಿಗೂ-ಎಲ್ಲ ಲೋಕಗಳಿಗೂ ಭಯವನ್ನುಂಟುಮಾಡುತ್ತಿದ್ದ, ಮಹಾಬಲನಾದ, ಶೂರನಾದ ಅಣ್ಣನನ್ನು ರಾಕ್ಷಸಿಯು ನೋಡಿದಳು. ದಿವ್ಯವಾದ ವಸ್ತ್ರಗಳನ್ನುಟ್ಟು ಆಭರಣಗಳನ್ನು ತೊಟ್ಟಿದ್ದ, ದಿವ್ಯವಾದ ಪುಷ್ಪಮಾಲಿಕೆಗಳಿಂದ ಸಮಲಂಕೃತನಾಗಿದ್ದ, ಪ್ರಳಯಕಾಲದಲ್ಲಿ ಉದಯಿಸಿದ ಮಹಾಮೃತ್ಯುವಿನಂತೆಯೇ ಕಾಣುತ್ತಿದ್ದ, ಉಪ್ಪರಿಗೆಯ ಮೇಲ್ಭಾಗದಲ್ಲಿದ್ದ ಆಸನ

ದಲ್ಲಿ ಕುಳಿತಿದ್ದ, ಪೌಲಸ್ತ್ಯಕುಲಕ್ಕೆ ಆನಂದದಾಯಕನಾದ, ಮಹಾಭಾಗನಾದ, ರಾಕ್ಷಸೇಂದ್ರನಾದ, ಶತ್ರುಸಂಹಾರಕನಾದ, ಮಂತ್ರಿಗಳಿಂದ ಪರಿವೃತನಾಗಿದ್ದ ರಾವಣನನ್ನು ಸಮೀಪಿಸಿ ಭಯದಿಂದ ಕಂಗೆಟ್ಟಿದ್ದ ರಾಕ್ಷಸಿಯು ಹೇಳಿದಳು.

ಭಯವೆಂದರೇನೆಂಬುದನ್ನೇ ತಿಳಿಯದೇ ಎಲ್ಲ ಲೋಕಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುವ ಸಾಮರ್ಥ್ಯವುಳ್ಳವಳಾಗಿದ್ದರೂ ಸದ್ಯದಲ್ಲಿ ಭಯದಿಂದಲೂ ಮೋಹದಿಂದಲೂ ಭ್ರಾಂತಳಾಗಿದ್ದ, ಮಹಾತ್ಮನಾದ ಲಕ್ಷ್ಮಣನಿಂದ ವಿರೂಪಗೊಳಿಸಲ್ಪಟ್ಟಿದ್ದ ಶೂರ್ಪಣಖೆಯು ತನ್ನ ವಿರೂಪವನ್ನು ರಾವಣನ ಮುಂದೆ ಪ್ರದರ್ಶಿಸುತ್ತಾ, ಥಳ-ಥಳಿಸುತ್ತಲೂ ವಿಶಾಲವಾಗಿಯೂ ಇದ್ದ ಕಣ್ಣುಗಳಿಂದ ವಿರಾಜಿಸುತ್ತಿದ್ದ ರಾವಣನಿಗೆ ತನ್ನ ಸುದಾರುಣವಾದ ಸ್ಥಿತಿಯನ್ನು ಹೇಳಿದಳು.

೩೨ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೩೩ನೆಯ ಸರ್ಗ

## ಶೂರ್ಪಣಖೆಯಿಂದ ರಾವಣನ ನಿಂದನೆ

**ತತಃ ಶೂರ್ಪಣಖಾ ದೀನಾ ರಾವಣಂ ಲೋಕರಾವಣಮ್ ।**
**ಅಮಾತ್ಯಮಧ್ಯೇ ಸಂಕ್ರುದ್ಧಾ ಪರುಷಂ ವಾಕ್ಯಮಬ್ರವೀತ್ ॥೧॥**

ವಿರೂಪಿತಳಾದುದರಿಂದ ಅತ್ಯಂತದೀನಳೂ, ಸೇಡನ್ನು ತೀರಿಸಿಕೊಳ್ಳಲು ಸಾಧ್ಯವಾಗದುದಕ್ಕಾಗಿ ಅತಿಕ್ರುದ್ಧಳೂ ಆಗಿದ್ದ ಶೂರ್ಪಣಖೆಯು–ಮಂತ್ರಿಗಳ ಮಧ್ಯದಲ್ಲಿದ್ದ, ಲೋಕವನ್ನೇ ಆಕ್ರಂದನಗೊಳ್ಳುವಂತೆ ಮಾಡಲು ಸಮರ್ಥನಾದ ರಾವಣನಿಗೆ ಅತಿಕಠೋರವಾದ ಮಾತುಗಳನ್ನು ಹೇಳತೊಡಗಿದಳು :

"ಅಣ್ಣಾ ! ನೀನು ಪ್ರಮತ್ತನಾಗಿರುವೆ. ಕಾಮೋಪಭೋಗಗಳಲ್ಲಿ ಸ್ವೇಚ್ಛೆಯಿಂದ ವರ್ತಿಸುತ್ತಿರುವೆ. ನಿನಗೆ ಹೇಳುವವರು-ಕೇಳುವವರೇ ಇಲ್ಲವಾಗಿದೆ. ಘೋರವಾದ ಭಯವೀಗ ಸನ್ನಿಹಿತವಾಗಿದೆ. ರಾಜನಾಗಿರುವ ನೀನು ಈ ಮೊದಲೇ ಇದನ್ನು ತಿಳಿದುಕೊಳ್ಳಬೇಕಾಗಿತ್ತು. ಆದರೆ ನೀನು ತಿಳಿದುಕೊಂಡಿಲ್ಲ.

ಸಕ್ತಂ ಗ್ರಾಮ್ಯೇಷು ಭೋಗೇಷು ಕಾಮವೃತ್ತಂ ಮಹೀಪತಿಮ್ ।
ಲುಬ್ಧಂ ನ ಬಹು ಮನ್ಯಂತೇ ಶ್ಮಶಾನಾಗ್ನಿಮಿವ ಪ್ರಜಾಃ ॥೩॥

ಸ್ಮಶಾನದಲ್ಲಿರುವ ಅಗ್ನಿಯನ್ನು ಜನರು ಯಾವ ಕಾರ್ಯಕ್ಕೂ ಬಳಸುವುದಿಲ್ಲ. ಹಾಗೆಯೇ ನಿದ್ರಾ-ಮೈಥುನಾದಿ ಗ್ರಾಮ್ಯಭೋಗಗಳಲ್ಲಿಯೇ ಆಸಕ್ತನಾದ, ಸ್ವೇಚ್ಛಾಚಾರಿಯಾದ, ಲುಬ್ಧನಾದ ರಾಜನನ್ನು ಪ್ರಜೆಗಳು ಮಾನ್ಯ ಮಾಡುವುದಿಲ್ಲ.

ಸ್ವಯಂ ಕಾರ್ಯಾಣಿ ಯಃ ಕಾಲೇ ನಾನುತಿಷ್ಠತಿ ಪಾರ್ಥಿವಃ ।
ಸ ತು ವೈ ಸಹ ರಾಜ್ಯೇನ ತೈಶ್ಚ ಕಾರ್ಯೈರ್ವಿನಶ್ಯತಿ ॥೪॥

ಮಾಡಬೇಕಾದ ಕಾರ್ಯವನ್ನು ಯಾವ ರಾಜನು ಸಕಾಲದಲ್ಲಿ ತಾನಾಗಿಯೇ ಮಾಡುವುದಿಲ್ಲವೋ-ಅವನು ಅದರ ಪರಿಣಾಮವಾಗಿಯೇ ರಾಜ್ಯ-ಕೋಶಾದಿಗಳೊಂದಿಗೆ ವಿನಾಶವನ್ನೇ ಹೊಂದುತ್ತಾನೆ.

ಅಯುಕ್ತಚಾರಂ ದುರ್ದರ್ಶಮಸ್ವಾಧೀನಂ ನರಾಧಿಪಮ್ ।
ವರ್ಜಯಂತಿ ನರಾ ದೂರಾನ್ನದೀಪಙ್ಕಮಿವ ದ್ವಿಪಾಃ ॥೫॥

ಆನೆಗಳು ಕೆಸರಿನಿಂದ ಬಹಳ ದೂರವಿರುತ್ತವೆ. ಹಾಗೆಯೇ ಮುಖ್ಯ-ಮುಖ್ಯವಾದ ಸ್ಥಳಗಳಲ್ಲಿ ಗುಪ್ತಚಾರರನ್ನು ಇಡದಿರುವ, ಸಂದರ್ಶಿಸಲು ಬಹಳ ಕಷ್ಟಸಾಧ್ಯನಾದ (ಪ್ರಜೆಗಳಿಗೆ ಆಗಿಂದಾಗ್ಗೆ ಸಂದರ್ಶಿಸಲು ಅವಕಾಶವಿತ್ತು ಅವರ ಕಷ್ಟ-ಸುಖಗಳನ್ನು ವಿಚಾರಿಸದೇ ಇರುವ), ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳದಿರುವ, ಆಶಾಪರನಾಗಿರುವ ರಾಜನಿಂದ ಪ್ರಜೆಗಳು ದೂರವಿರುತ್ತಾರೆ.

ಯೇ ನ ರಕ್ಷಂತಿ ವಿಷಯಮಸ್ವಾಧೀನಾ ನರಾಧಿಪಾಃ ।
ತೇ ನ ವೃದ್ಧ್ಯಾ ಪ್ರಕಾಶಂತೇ ಗಿರಯಃ ಸಾಗರೇ ಯಥಾ ॥೬॥

ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳದೇ ಕಾಮವಶರಾಗಿ ಯಾವ ರಾಜರು ತಮ್ಮ ದೇಶವನ್ನು ರಕ್ಷಿಸುವುದಿಲ್ಲವೋ ಅವರು-ಸಮುದ್ರದಲ್ಲಿ ಮುಳುಗಿಹೋದ ಪರ್ವತಗಳಂತೆ ಸಂಪತ್ಸಮೃದ್ಧಿಯಿಂದ ಪ್ರಕಾಶಿಸುವುದಿಲ್ಲ.

ಜಿತೇಂದ್ರಿಯರಾದ ದೇವ-ಗಂಧರ್ವ-ದಾನವರೊಡನೆ ದ್ವೇಷವನ್ನು ಕಟ್ಟಿಕೊಂಡಿರುವ, ಸರಿಯಾದ ಸ್ಥಳಗಳಲ್ಲಿ ಬೇಹುಗಾರರನ್ನು ನಿಯಮಿಸದಿರುವ,

ಚಪಲಚಿತ್ತನಾದ ನೀನು ರಾಜನೆಂತಾಗುವೆ? ನೀನಾದರೋ ಬಾಲಕನಂತೆ ವಿವೇಕಶೂನ್ಯನು. ಬುದ್ಧಿಹೀನನು. ರಾಜನಾದವನು ಯಾವುದನ್ನು ಅವಶ್ಯವಾಗಿ ತಿಳಿದಿರಬೇಕೋ ಅದೇ ನಿನಗೆ ತಿಳಿಯದಾಗಿದೆ. ಹೀಗಿರುವಾಗ ನೀನು ಹೇಗೆ ರಾಜನಾಗಿ ಉಳಿಯುವೆ?

ಯೇಷಾಂ ಚಾರಾಶ್ಚ ಕೋಶಶ್ಚ ನಯಶ್ಚ ಜಯತಾಂ ವರ ।
ಅಸ್ವಾಧೀನಾ ನರೇನ್ದ್ರಾಣಾಂ ಪ್ರಾಕೃತೈಸ್ತೇ ಜನೈಃ ಸಮಾಃ ॥೯॥

ಯಾವ ರಾಜರಿಗೆ ಗೂಢಚಾರರು ಅಧೀನರಾಗಿರುವುದಿಲ್ಲವೋ, ಬೊಕ್ಕಸವು ಸ್ವಾಧೀನವಾಗಿರುವುದಿಲ್ಲವೋ, ರಾಜನೀತಿಯು ತಿಳಿದಿರುವುದಿಲ್ಲವೋ ಅಂತಹ ರಾಜರು ಮೂಢಜನರಿಗೆ ಸಮಾನರಾದವರಾಗುತ್ತಾರೆ.

ಯಸ್ಮಾತ್ಪಶ್ಯನ್ತಿ ದೂರಸ್ಥಾನ್ಸರ್ವಾನರ್ಥಾನ್ನರಾಧಿಪಾಃ ।
ಚಾರೇಣ ತಸ್ಮಾದುಚ್ಯನ್ತೇ ರಾಜಾನೋ ದೀರ್ಘಚಕ್ಷುಷಃ ॥೧೦॥

ರಾಜರು ಬಹಳ ದೂರದಲ್ಲಿರುವ, ತಮ್ಮ ರಾಜ್ಯಕ್ಕೆ ಸಂಬಂಧಿಸಿದ ಸಕಲ ವಿಷಯಗಳನ್ನೂ ಗೂಢಚಾರರ ಮೂಲಕವಾಗಿ ನೋಡುತ್ತಿರುವುದರಿಂದಲೇ– ಅವರು 'ದೀರ್ಘಚಕ್ಷುಷಃ–ದೂರಗಣ್ಣಿನವರು ಅಥವಾ ದೂರದರ್ಶಿಗಳು' ಎಂಬ ಅನ್ವರ್ಥನಾಮವನ್ನು ಪಡೆದಿರುತ್ತಾರೆ.

ನೀನು ಗೂಢಚಾರರನ್ನೇ ಇಟ್ಟುಕೊಂಡಿಲ್ಲವೆಂದು ನಾನು ಭಾವಿಸುತ್ತೇನೆ. ಮೂಢರಾದ ಮಂತ್ರಿಗಳಿಂದ ಕೂಡಿರುವೆ. ಈ ಕಾರಣದಿಂದಲೇ ನೀನು ನಮ್ಮ ಜನರಿರುವ ಜನಸ್ಥಾನವು ನಾಶವಾದ ವಿಷಯವನ್ನೇ ತಿಳಿದಿಲ್ಲ. ಭಯಂಕರಕರ್ಮಿಗಳಾದ ಹದಿನಾಲ್ಕುಸಾವಿರ ರಾಕ್ಷಸರೂ, ಖರ-ದೂಷಣರೂ ರಾಮನೊಬ್ಬನಿಂದಲೇ ಹತರಾದರು. ರಾಮನು ರಾಕ್ಷಸರ ಉಪಟಳವನ್ನು ತಪ್ಪಿಸುವುದಾಗಿ ಋಷಿಗಳಿಗೆ ಅಭಯದಾನವನ್ನು ಮಾಡಿದ್ದನು. ಅದರಂತೆಯೇ ಈಗ ದಂಡಕಾರಣ್ಯಗಳು ರಾಕ್ಷಸರ ಉಪಟಳವಿಲ್ಲದೇ ಕ್ಷೇಮವಾಗಿವೆ. ಆಯಾಸವಿಲ್ಲದೇ ಕಾರ್ಯಮಾಡುವ ರಾಮನು ನಮ್ಮದಾಗಿದ್ದ ಜನಸ್ಥಾನವನ್ನು ಸಂಪೂರ್ಣವಾಗಿ ವಿನಾಶಗೊಳಿಸಿದ್ದಾನೆ. ರಾವಣ! ನೀನಾದರೋ ಲುಬ್ಧನು, ಪ್ರಮತ್ತನು, ಪರಾಧೀನನೂ ಆಗಿರುವೆ. ಈ ಕಾರಣದಿಂದಲೇ ನಿನ್ನ ರಾಜ್ಯದಲ್ಲಿಯೇ ಉಂಟಾಗಿರುವ ಮಹಾಭಯದ ವಿಷಯವನ್ನೂ ನೀನು ತಿಳಿದಿಲ್ಲ.

ತೀಕ್ಷ್ಣಮಲ್ಪಪ್ರದಾತಾರಂ ಪ್ರಮತ್ತಂ ಗರ್ವಿತಂ ಶಠಮ್ ।
ವ್ಯಸನೇ ಸರ್ವಭೂತಾನಿ ನಾಭಿಧಾವನ್ತಿ ಪಾರ್ಥಿವಮ್ ॥೧೫॥

ಮಹಾಕ್ರೂರಿಯನ್ನೂ, ಸೇವಕರಿಗೆ ಅತ್ಯಲ್ಪವಾದ ವೇತನವನ್ನು ಕೊಡುವವನನ್ನೂ, ಪ್ರಮತ್ತನನ್ನೂ, ಗರ್ವಿಷ್ಠನನ್ನೂ-ವ್ಯಸನಕಾಲದಲ್ಲಿ ರಕ್ಷಿಸಲು ಅಮಾತ್ಯರಾಗಲೀ, ಭೃತ್ಯರಾಗಲೀ ಮುಂದೆ ಬರುವುದಿಲ್ಲ.

ಅತಿಮಾನಿನಮಗ್ರಾಹ್ಯಮಾತ್ಮಸಂಭಾವಿತಂ ನರಮ್ ।
ಕ್ರೋಧನಂ ವ್ಯಸನೇ ಹನ್ತಿ ಸ್ವಜನೋಽಪಿ ಮಹೀಪತಿಮ್ ॥೧೬॥

ಅತಿಮಾನಿಷ್ಠನೂ, ಸಾಧುಸಮ್ಮತನಲ್ಲದವನೂ, ಆತ್ಮಪ್ರತಿಷ್ಠೆಯಿರುವವನೂ, ಕೋಪಿಷ್ಠನೂ ಆಗಿರುವ ರಾಜನನ್ನು ಕಷ್ಟವು ಸಂಭವಿಸಿದಾಗ ಸ್ವಜನರೇ ಸಂಹಾರಮಾಡುತ್ತಾರೆ.

ನಾನುತಿಷ್ಠತಿ ಕಾರ್ಯಾಣಿ ಭಯೇಷು ನ ಬಿಭೇತಿ ಚ ।
ಕ್ಷಿಪ್ರಂ ರಾಜ್ಯಾಚ್ಚ್ಯುತೋ ದೀನಸ್ತೃಣೈಸ್ತುಲ್ಯೋ ಭವಿಷ್ಯತಿ ॥೧೭॥

ಮಾಡಬೇಕಾದ ಕಾರ್ಯಗಳನ್ನು ಸಮಯವರಿತು ಯಾವನು ಮಾಡುವುದಿಲ್ಲವೋ, ಭಯವು ಹತ್ತಿರ ಬಂದಿರುವಾಗಲೂ ಯಾವನು ಭಯಪಡದೇ ಇರುವನೋ ಮತ್ತು ಆ ಭಯವನ್ನು ಹೋಗಲಾಡಿಸಲು ಸರಿಯಾದ ಕಾರ್ಯಕ್ರಮವನ್ನು ಕೈಗೊಳ್ಳುವುದಿಲ್ಲವೋ-ಅಂತಹ ರಾಜನು ಬಹಳ ಬೇಗ ರಾಜ್ಯದಿಂದ ಚ್ಯುತನಾಗಿ ದೀನನೂ ತೃಣಪ್ರಾಯನೂ ಆಗುವನು.

ಶುಷ್ಕೈಃ ಕಾಷ್ಠೈರ್ಭವೇತ್ಕಾರ್ಯಂ ಲೋಷ್ಟೈರಪಿ ಚ ಪಾಂಸುಭಿಃ
ನ ತು ಸ್ಥಾನಾತ್ಪರಿಭ್ರಷ್ಟೈಃ ಕಾರ್ಯಂ ಸ್ಯಾದ್ವಸುಧಾಧಿಪೈಃ ॥೧೮॥

ಒಣಗಿದ ಕಟ್ಟಿಗೆಗಳಿಂದಲೂ ಪ್ರಯೋಜನವಾಗುತ್ತದೆ. ಮಣ್ಣುಹೆಂಟೆಗಳಿಂದಲೂ ಪ್ರಯೋಜನವಾಗುತ್ತದೆ. ಕಟ್ಟಕಡೆಗೆ ಧೂಳಿನಿಂದಲೂ ಉಪಯೋಗವಾಗುತ್ತದೆ. ಕಟ್ಟಿಗೆ-ಮಣ್ಣುಹೆಂಟೆ-ಧೂಳುಗಳೂ ಸಮಯದಲ್ಲಿ ಕೆಲಸಕ್ಕೆ ಬರುತ್ತವೆ. ಆದರೆ ಸ್ಥಾನಭ್ರಷ್ಟರಾದ ರಾಜರಿಂದ ಯಾವುದೊಂದು ಸಣ್ಣ ಕೆಲಸವೂ ಆಗುವುದಿಲ್ಲ. ಅವರು ಯಾವ ಕೆಲಸಕ್ಕೂ ಬಾರದವರಾಗುತ್ತಾರೆ.

ಉಪಭುಕ್ತಂ ಯಥಾ ವಾಸಃ ಸ್ರಜೋ ವಾ ಮೃದಿತಾ ಯಥಾ ।
ಏವಂ ರಾಜ್ಯಾತ್ಪರಿಭ್ರಷ್ಟಃ ಸಮರ್ಥೋಽಪಿ ನಿರರ್ಥಕಃ ॥೧೯॥

ಉಟ್ಟು ಬಿಚ್ಚಿದ ಬಟ್ಟೆಯು ಯಾವ ರೀತಿಯಲ್ಲಿ ಬೆಲೆಯಿಲ್ಲದ್ದಾಗು ವುದೋ, ಬಾಡಿಹೋದ ಹೂವಿನ ಮಾಲೆಯು ಯಾವ ರೀತಿಯಲ್ಲಿ ಉಪ ಯೋಗಕ್ಕೆ ಬಾರದಾಗುವುದೋ – ಅದೇ ರೀತಿಯಲ್ಲಿ ರಾಜ್ಯಭ್ರಷ್ಟನಾದ ರಾಜನು ಸಮರ್ಥನೇ ಆಗಿದ್ದರೂ ಕೆಲಸಕ್ಕೆ ಬಾರದವನಾಗುತ್ತಾನೆ.

ಅಪ್ರಮತ್ತಶ್ಚ ಯೋ ರಾಜಾ ಸರ್ವಜ್ಞೋ ವಿಜಿತೇನ್ದ್ರಿಯಃ ।
ಕೃತಜ್ಞೋ ಧರ್ಮಶೀಲಶ್ಚ ಸ ರಾಜಾ ತಿಷ್ಠತೇ ಚಿರಮ್ ॥೨೦॥

ಯಾವ ರಾಜನು ಜಾಗರೂಕನಾಗಿರುವನೋ, ರಾಜ್ಯದಲ್ಲಿನ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿ ತಿಳಿದಿರುವನೋ, ಜಿತೇಂದ್ರಿಯನಾಗಿರು ವನೋ, ಮಾಡಿದ ಉಪಕಾರವನ್ನು ಸ್ಮರಿಸುವನೋ, ಧರ್ಮಶೀಲನೋ– ಅಂತಹ ರಾಜನು ಬಹಳ ಕಾಲ ರಾಜ್ಯವಾಳುತ್ತಾನೆ.

ನಯನಾಭ್ಯಾಂ ಪ್ರಸುಪ್ತೋಽಪಿ ಜಾಗರ್ತಿ ನಯಚಕ್ಷುಷಾ ।
ವ್ಯಕ್ತಕ್ರೋಧಪ್ರಸಾದಶ್ಚ ಸ ರಾಜಾ ಪೂಜ್ಯತೇ ಜನೈಃ ॥೨೧॥

ಯಾವ ರಾಜನು ಕಣ್ಣುಗಳನ್ನು ಮುಚ್ಚಿಕೊಂಡು ನಿದ್ರೆಮಾಡುತ್ತಿದ್ದರೂ ರಾಜನೀತಿಯೆಂಬ ಕಣ್ಣುಗಳ ಮೂಲಕವಾಗಿ ಸರ್ವಕಾಲದಲ್ಲಿಯೂ ಜಾಗ ರೂಕನಾಗಿಯೇ ಇರುವನೋ, ಕ್ರೋಧವನ್ನು ದಂಡದ ಮೂಲಕವೂ–ಪ್ರಸ ನ್ನತೆಯನ್ನು ದಾನದ ಮೂಲಕವೂ ವ್ಯಕ್ತಪಡಿಸುವನೋ–ಅಂತಹ ರಾಜ ನನ್ನು ಎಲ್ಲ ಜನರೂ ಗೌರವಿಸುತ್ತಾರೆ.

ಅಣ್ಣ ! ದುರ್ಬುದ್ಧಿಯಾದ ನೀನು ಈ ಎಲ್ಲ ರಾಜಗುಣಗಳಿಂದಲೂ ಬಿಡಲ್ಪಟ್ಟಿರುವೆ. ಗೂಢಚಾರರ ಮೂಲಕವಾಗಿ ನಿನ್ನ ದೇಶದಲ್ಲಿಯೇ ರಾಕ್ಷ ಸರ ಮಹಾಸಂಹಾರಕಾರ್ಯವು ನಡೆದುಹೋಗಿದೆಯೆಂಬುದನ್ನೂ ನೀನು ತಿಳಿದುಕೊಂಡಿರುವುದಿಲ್ಲ.

ರಾವಣೇಶ್ವರ ! ನೀನು ಇತರರನ್ನು ಕಾರಣವಿಲ್ಲದೇ ಅವಮಾನಗೊಳಿ ಸಿರುವೆ. ಯಾವಾಗಲೂ ವಿಷಯಸುಖಗಳಲ್ಲಿಯೇ ಮುಳುಗಿರುವೆ. ದೇಶದ ಹಿತಕ್ಕಾಗಿ ಯಾವ ಸಮಯದಲ್ಲಿ ಏನು ಮಾಡಬೇಕೆಂಬುದು ನಿನಗೆ ತಿಳಿಯದು. ದಿನವನ್ನು ಭಾಗಮಾಡಿಕೊಂಡು ಯಾವ ಸಮಯದಲ್ಲಿ ಏನು ಮಾಡಬೇಕೆಂಬು ದನ್ನೂ ನೀನು ತಿಳಿಯದವನಾಗಿರುವೆ. ಗುಣವು ಯಾವುದು ?–ದೋಷವು

ಯಾವುದು ?–ಎಂಬುದನ್ನು ನಿರ್ಧರಿಸಲು ಕೂಡ ನಿನಗೆ ಸರಿಯಾದ ಬುದ್ಧಿಯಿಲ್ಲ. ಈ ಕಾರಣಗಳಿಂದ ನೀನು ಈ ನಿನ್ನ ರಾಜ್ಯವನ್ನು ಬಹಳ ಬೇಗ ಕಷ್ಟಕ್ಕೊಳಪಡಿಸುವೆ ಮತ್ತು ನೀನೂ ವಿಪತ್ತಿಗೊಳಗಾಗುವೆ.”

ಐಶ್ವರ್ಯದಿಂದಲೂ, ದರ್ಪದಿಂದಲೂ, ಬಲದಿಂದಲೂ ಕೂಡಿದ್ದ ರಾಕ್ಷಸೇಶ್ವರನು ತಂಗಿಯಾದ ಶೂರ್ಪಣಖೆಯು ಮಾಡಿದ ದೋಷಾರೋಪಣೆಗಳನ್ನು ಕೇಳಿ, ಬುದ್ಧಿಯಿಂದ ಚೆನ್ನಾಗಿ ವಿಮರ್ಶಿಸಿ ಮುಂದೇನು ಮಾಡಬೇಕೆಂಬುದರ ಬಗೆಗೆ ಬಹಳ ಹೊತ್ತು ಚಿಂತಿಸುತ್ತಾ ಕುಳಿತಿದ್ದನು.*

೩೩ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೩೪ನೆಯ ಸರ್ಗ

## ಶೂರ್ಪಣಖಿಯು ರಾವಣನಿಗೆ ಸೀತಾ-ರಾಮ-ಲಕ್ಷ್ಮಣರನ್ನು ಪರಿಚಯಿಸಿಕೊಟ್ಟುದು : ಸೀತೆಯನ್ನು ಭಾರ್ಯೆಯನ್ನಾಗಿ ಮಾಡಿಕೊಳ್ಳುವಂತೆ ಹುರಿದುಂಬಿಸಿದುದು

ತತಃ ಶೂರ್ಪಣಖಾಂ ಕ್ರುದ್ಧಾಂ ಬ್ರುವತೀಂ ಪರುಷಂ ವಚಃ ।
ಅಮಾತ್ಯಮಧ್ಯೇ ಸಂಕ್ರುದ್ಧಃ ಪರಿಪಪ್ರಚ್ಛ ರಾವಣಃ ॥೧॥

ಮಂತ್ರಿಗಳ ಮಧ್ಯದಲ್ಲಿ ಕುಳಿತಿದ್ದ ರಾವಣನು ಅತ್ಯಂತಕ್ರುದ್ಧನಾಗಿ, ಅತಿಕ್ರುದ್ಧಳಾಗಿ ನಿಷ್ಠುರವಾದ ಮಾತನಾಡುತ್ತಿದ್ದ ಶೂರ್ಪಣಖೆಯನ್ನು ಪ್ರಶ್ನಿಸಿದನು :

“ಮನೋಜ್ಞವಾದ ಅವಯವಗಳುಳ್ಳವಳೇ ! ತಂಗೀ ! ರಾಮನೆಂಬುವನು ಯಾರು ? ಅವನ ರೂಪವು ಹೇಗಿದೆ ? ಎಂತಹ ವೀರ್ಯವಂತನು ? ಅವನ ಪರಾಕ್ರಮವೆಷ್ಟು ? ದುಸ್ತರವಾದ ದಂಡಕಾರಣ್ಯಕ್ಕೆ ಅವನೇಕೆ ಬಂದನು ? ಯಾವ ಆಯುಧದಿಂದ ನಮ್ಮ ಎಲ್ಲ ರಾಕ್ಷಸರನ್ನೂ ಸಂಹರಿ

*ಶೂರ್ಪಣಖೆಯು ರಾಕ್ಷಸಿಯೇ ಆಗಿದ್ದರೂ ಈ ಪ್ರಕರಣದಲ್ಲಿ ಅವಳು ಹೇಳಿರುವ ರಾಜನೀತಿಗಳು ಸರ್ವರಿಂದಲೂ ಅನುಕರಣೀಯವಾದುವುಗಳೇ ಆಗಿವೆ. ಆದರೆ ಅವಳು ಸ್ವಾರ್ಥಸಾಧನೆಗಾಗಿ ಹೀಗೆ ಮಾತನಾಡುತ್ತಿದ್ದಾಳೆಂಬುದೇನೋ ನಿಜ. ಹಿಂದೆಯೂ ಹೀಗೆಯೇ ಮಾತನಾಡಿ ಜನಸ್ಥಾನದ ರಾಕ್ಷಸರ ಸಂಹಾರಕ್ಕೆ ಅವಳೇ ಕಾರಣಳಾದಳು.

ಸಿದನು? ಖರ-ದೂಷಣ ಮತ್ತು ತ್ರಿಶಿರಸ ಇವರೇ ಮೊದಲಾದ ಮಹಾರಾಕ್ಷಸರು ರಾಮನಿಂದ ಹೇಗೆ ಹತರಾದರು? ನೀನು ಏತಕ್ಕಾಗಿ ಅವನಿಂದ ವಿರೂಪಿತಳಾದೆ? ಈ ಎಲ್ಲ ವಿಷಯಗಳನ್ನು ಯಥಾವತ್ತಾಗಿ ಹೇಳು."

ರಾವಣನು ಹೀಗೆ ಹೇಳಲು ಕ್ರೋಧಾಭಿಭೂತಳಾಗಿದ್ದ ರಾಕ್ಷಸಿಯು ರಾಮನ ವಿಷಯವನ್ನು ಯಥಾವತ್ತಾಗಿಯೇ ಹೇಳತೊಡಗಿದಳು :

"ರಾವಣೇಶ್ವರ! ದಶರಥರಾಜನ ಹಿರಿಯ ಮಗನಾದ ರಾಮನು ಉದ್ದವಾದ ತೋಳುಗಳುಳ್ಳವನು. ಅಗಲವಾದ ಕಣ್ಣುಗಳುಳ್ಳವನು. ನಾರುಮಡಿ-ಕೃಷ್ಣಾಜಿನಗಳೇ ಅವನ ಉಡುಗೆಗಳು. ರೂಪದಲ್ಲವನು ಮನ್ಮಥಸದೃಶನು. ಇಂದ್ರನ ಧನುಸ್ಸಿಗೆ ಸಮಾನವಾದ ಸುವರ್ಣಮಯವಾದ ಧನುಸ್ಸನ್ನು ಸೆಳೆದು ಮಹಾವಿಷವುಳ್ಳ ಸರ್ಪಗಳಂತಿರುವ ಪ್ರದೀಪ್ತವಾದ ಬಾಣಗಳನ್ನು ಶತ್ರುಗಳ ಮೇಲೆ ಬಿಡುತ್ತಾನೆ. ಅವನು ರಣರಂಗದಲ್ಲಿ ಯುದ್ಧಮಾಡುತ್ತಿರುವಾಗ ಭೀಕರವಾದ ಬಾಣಗಳನ್ನು ಬತ್ತಳಿಕೆಯಿಂದ ತೆಗೆದುಕೊಳ್ಳುವುದನ್ನಾಗಲೀ, ಧನುಸ್ಸಿನಲ್ಲಿ ಅನುಸಂಧಾನಮಾಡಿ ಕರ್ಣಾಂತದವರೆಗೂ ಸೆಳೆಯುತ್ತಿದ್ದುದನ್ನಾಗಲೀ, ಅನಂತರ ಬಾಣಗಳನ್ನು ಬಿಡುತ್ತಿದ್ದುದನ್ನಾಗಲೀ–ನಾನು ಕಾಣುತ್ತಿರಲಿಲ್ಲ. ಇಂದ್ರನು ಕಲ್ಲುಮಳೆಗಳಿಂದ ಬೆಳೆಗಳನ್ನು ಧ್ವಂಸಮಾಡುವಂತೆ–ರಾಮನ ಅನವರತವಾದ ಬಾಣಗಳ ಮಳೆಯಿಂದ ರಾಕ್ಷಸಸೈನ್ಯವು ಸಾಯುತ್ತಿದ್ದುದನ್ನು ಮಾತ್ರವೇ ನಾನು ನೋಡುತ್ತಿದ್ದೆನು. ಪದಾತಿಯಾಗಿದ್ದ ರಾಮನೊಬ್ಬನೇ ಒಂದೂವರೆ ಮುಹೂರ್ತದಲ್ಲಿ ತೀಕ್ಷ್ಣವಾದ ಬಾಣಗಳಿಂದ ಭಯಂಕರಪರಾಕ್ರಮಿಗಳಾದ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಖರ-ದೂಷಣರನ್ನೂ ಸಂಹರಿಸಿದನು. ಋಷಿಗಳಿಗೆ ಕೊಟ್ಟಿದ್ದ ಅಭಯವೂ ಪೂರ್ಣವಾಯಿತು. ದಂಡಕಾರಣ್ಯಗಳೂ ರಾಕ್ಷಸರ ಬಾಧೆಯಿಂದ ಮುಕ್ತವಾಗಿ ಋಷಿಗಳಿಗೆ ಕ್ಷೇಮಕರಗಳಾದುವು. ಮಹಾತ್ಮ

---

ರಾವಣನಿಗೆ ವಿಷಯವು ತಿಳಿದಿತ್ತು. ಮಾರೀಚನ ಸಮುಪದೇಶದಂತೆ ಅವನು ವಿಮುಖನಾಗಿದ್ದನು. ಈಗ ರಾವಣನು ಯೋಚಿಸುತ್ತಿರುವುದೂ ಮಾರೀಚನ ಮಾತಿನಂತೆ ನಡೆಯಬೇಕೇ? ಶೂರ್ಪಣಖೆಯ ಮಾತಿನಂತೆ ನಡೆಯಬೇಕೇ? ಎಂಬುದನ್ನೇ. ಸ್ವಾರ್ಥಸಾಧನೆಗಾಗಿ ಹೇಳಿದ ಶೂರ್ಪಣಖೆಯ ರಾಜನೀತಿಯ ಉಪದೇಶವನ್ನು–'ನಾಸ್ತಿಕನು ಶಾಸ್ತ್ರವನ್ನುದ್ಧರಿಸಿದಂತೆ'–ಎಂದು ಹೇಳಬಹುದಾಗಿದೆ.

ಶಾದ ರಾಮನು ಸ್ತ್ರೀವಧೆಯನ್ನು ಮಾಡಲು ಹಿಂಜರಿದು ವಿರೂಪಗೊಳಿಸಿ ಹೇಗೋ ನನ್ನೊಬ್ಬಳನ್ನು ಮಾತ್ರ ಪ್ರಾಣಸಹಿತವಾಗಿ ಬಿಟ್ಟುಬಿಟ್ಟನು. ಲಕ್ಷ್ಮಣನೆಂಬ ಹೆಸರಿನ ಅವನ ತಮ್ಮನೂ ವೀರ್ಯವಂತನು. ಗುಣ-ಪರಾಕ್ರಮಗಳಲ್ಲಿ ರಾಮನಿಗೆ ಸದೃಶನು. ರಾಮನನ್ನು ಕಂಡರೆ ಅವನಿಗೆ ಭಕ್ತಿ ಮತ್ತು ಪ್ರೀತಿ. ಲಕ್ಷ್ಮಣನು ರಾಮನ ಭಕ್ತನಾಗಿ ಸದಾ ಅವನ ಸೇವೆಯಲ್ಲಿಯೇ ಇರತಕ್ಕವನು. ಅಣ್ಣನ ವಿಷಯದಲ್ಲಿ ಯಾರಾದರೂ ಅಪರಾಧವನ್ನೆಸಗಿದರೆ ಸಹಿಸತಕ್ಕವನಲ್ಲ. ಇತರರಿಂದ ಜಯಿಸಲು ಅಸಾಧ್ಯನಾದವನು. ಯುದ್ಧಗಳಲ್ಲಿ ಯಾವಾಗಲೂ ಜಯಗಳಿಸತಕ್ಕವನು. ಮಹಾಪರಾಕ್ರಮಿಯು. ಬುದ್ಧಿವಂತನು. ಬಲಿಷ್ಠನು. ರಾಮನಿಗೆ ಯಾವಾಗಲೂ ಬಲಭುಜದಂತೆ ಇರತಕ್ಕವನು. ರಾಮನಿಗೆ ಲಕ್ಷ್ಮಣನು ಪ್ರಾಣಗಳಿಗೆ ಸಮಾನನು. ಲಕ್ಷ್ಮಣನನ್ನು ಹೊರಗಡೆ ಸಂಚರಿಸುವ ರಾಮನ ಪ್ರಾಣವೆಂದೇ ಹೇಳಬಹುದು.

ಸೀತೆಯೆಂಬುವಳು ರಾಮನ ಧರ್ಮಪತ್ನಿಯು. ಅವಳು ವಿಶಾಲವಾದ ಕಣ್ಣುಗಳುಳ್ಳವಳು. ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳವಳು. ರಾಮನಿಗೆ ಬಹಳ ಪ್ರಿಯಳಾದವಳು. ಯಾವಾಗಲೂ ಗಂಡನಿಗೆ ಹಿತವನ್ನುಂಟುಮಾಡುವುದರಲ್ಲಿಯೇ ಆಸಕ್ತಳಾಗಿರತಕ್ಕವಳು. ಸುಂದರವಾದ ಕೇಶರಾಶಿಯುಳ್ಳವಳು. ಸುಂದರವಾದ ಮೂಗು ಮತ್ತು ತೊಡೆಗಳುಳ್ಳವಳು. ಸುಂದರವಾದ ರೂಪ-ಲಾವಣ್ಯವಿರತಕ್ಕವಳು. ಯಶಸ್ವಿನಿಯು. ಆ ವನದ ದೇವತೆಯೋಪಾದಿಯಲ್ಲಿದ್ದಾಳೆ. ಬೇರೊಬ್ಬ ಲಕ್ಷ್ಮಿಯಂತೆಯೇ ಪ್ರಕಾಶಿಸುತ್ತಾಳೆ. ಪುಟಕ್ಕೆ ಹಾಕಿದ ಚಿನ್ನದಂತೆ ಕಾಂತಿಯಿರತಕ್ಕವಳು. ಕೆಂಪಾದ ಮತ್ತು ಉಬ್ಬಿದ ಉಗುರುಗಳುಳ್ಳವಳು. ಶ್ರೇಷ್ಠವಾದ ಕಟಿಪ್ರದೇಶವುಳ್ಳವಳು. ತೆಳುವಾದ ಸೊಂಟವುಳ್ಳವಳು. ಅವಳು ವಿದೇಹರಾಜನ ಮಗಳು. ಇಂತಹ ಅನುಪಮವಾದ ರೂಪವಿರುವ ದೇವತಾಸ್ತ್ರೀಯನ್ನಾಗಲೀ, ಗಂಧರ್ವಸ್ತ್ರೀಯನ್ನಾಗಲೀ, ಯಕ್ಷಿಯನ್ನಾಗಲೀ, ಕಿನ್ನರಿಯನ್ನಾಗಲೀ ಇದುವರೆಗೂ ನಾನು ನೋಡಿಯೇ ಇಲ್ಲ. ಯಾರಿಗೆ ಸೀತೆಯು ಪತ್ನಿಯಾಗುವಳೋ ಮತ್ತು ಹೃಷ್ಟಳಾದ ಅವಳು ಯಾರನ್ನು ಆಲಿಂಗನೆಮಾಡಿಕೊಳ್ಳುವಳೋ–ಅಂತಹವನು ಎಲ್ಲ ಲೋಕಗಳಲ್ಲಿಯೂ ಇಂದ್ರನನ್ನೂ ಅತಿಶಯಿಸಿ ಜೀವಿಸಿರಬಲ್ಲನು.

ಸೀತೆಯು ಒಳ್ಳೆಯ ಶೀಲವಿರತಕ್ಕವಳು. ಶ್ಲಾಘ್ಯವಾದ ಸಕಲಶುಭಲಕ್ಷಣ ಸಂಪನ್ನವಾದ ಶರೀರವಿರತಕ್ಕವಳು. ಅಪ್ರತಿಮವಾದ ರೂಪವಿರತಕ್ಕವಳು. ನಿನಗೆ ಅನುರೂಪಳಾದ ಭಾರ್ಯೆಯಾಗಲು ಅರ್ಹಳಾಗಿರತಕ್ಕವಳು. ಅವಳಿಗೂ ನೀನು ಅನುರೂಪನಾದ ಪತಿಯೇ ಆಗುವೆ.



ಮಹಾಭುಜನೇ! ಅಗಲವಾದ ಕಟಿಪುರೋಭಾಗವುಳ್ಳ, ದಪ್ಪವಾಗಿಯೂ ಎತ್ತರವಾಗಿಯೂ ಇರುವ ಸ್ತನಗಳಿಂದ ಕೂಡಿರುವ, ಶ್ರೇಷ್ಠವಾದ ಮುಖಕಾಂತಿಯಿಂದ ಬೆಳಗುತ್ತಿದ್ದ ಆ ಚೆಲುವೆಯನ್ನು ನಿನಗೆ ಪತ್ನಿಯನ್ನಾಗಿ ಮಾಡಬೇಕೆಂಬ ಇಚ್ಛೆಯಿಂದಲೇ ಅವಳನ್ನು ಅಪಹರಿಸಿ ತರಲು ನಾನು ಪ್ರಯತ್ನಿಸಿದೆನು. ಅಷ್ಟರೊಳಗಾಗಿ ಕ್ರೂರನಾದ ಲಕ್ಷ್ಮಣನು ನನ್ನನ್ನು

ವಿರೂಪಗೊಳಿಸಿಬಿಟ್ಟನು. ಪೂರ್ಣಚಂದ್ರನಿಗೆ ಸದೃಶವಾದ ಮುಖವಿರುವ ಆ ವೈದೇಹಿಯನ್ನು ನೀನೇನಾದರೂ ಈಗ ನೋಡಿದ್ದೇ ಆದರೆ–ಮನ್ಮಥನ ಬಾಣಗಳಿಗೆ ಕೂಡಲೇ ಮಣಿಯುವೆ.

ಒಂದು ವೇಳೆ ನಿನಗೆ ಅವಳನ್ನು ಪತ್ನಿಯನ್ನಾಗಿ ಮಾಡಿಕೊಳ್ಳುವ ಅಭಿಪ್ರಾಯವಿರುವುದಾದರೆ ಅವಳನ್ನು ಗೆದ್ದು ತರಲು ಈ ಕ್ಷಣದಲ್ಲಿಯೇ ಬಲಗಾಲನ್ನು ಮುಂದಿಟ್ಟು ಹೊರಟುಬಿಡು. ಆಶ್ರಮವಾಸಿಯಾದ ಕ್ರೂರನಾದ ರಾಮನನ್ನು ಕೊಲ್ಲು. ಇದರಿಂದ ನಿನ್ನ ಸಲುವಾಗಿ ಪ್ರಾಣತೊರೆದಿರುವ ರಾಕ್ಷಸರಿಗೆ ಪರಲೋಕದಲ್ಲಾದರೂ ಸಂತೋಷವಾಗಲಿ. ಅನಂತರ ಮಹಾರಥನಾದ ಲಕ್ಷ್ಮಣನನ್ನೂ ನಿಶಿತವಾದ ಬಾಣಗಳಿಂದ ಕೊಂದು ಅವರಿಬ್ಬರ ಸಂಹಾರದಿಂದ ಅನಾಥೆಯಾಗುವ ಸೀತೆಯನ್ನು ಸುಖವಾಗಿ ಕರೆತಂದು ಯಥೇಚ್ಛವಾಗಿ ಉಪಭೋಗಿಸು. ರಾಕ್ಷಸೇಶ್ವರ ! ನನ್ನ ಈ ಮಾತು ನಿನಗೆ ರುಚಿಸಿದ್ದೇ ಆದರೆ ಯಾವ ವಿಧವಾದ ಅಳುಕೂ ಇಲ್ಲದೇ ಈಗಲೇ ನಾನು ಹೇಳಿದಂತೆ ಮಾಡು.

ಅಣ್ಣ ! ನಾನು ರಾಮನ ಶಕ್ತಿಯೆಷ್ಟೆಂಬುದನ್ನು ಹೇಳಿರುವೆನು. ನಿನ್ನ ಶಕ್ತಿಯೆಷ್ಟೆಂಬುದನ್ನು ಪರ್ಯಾಲೋಚಿಸಿ ಅವನನ್ನು ಯುದ್ಧದಲ್ಲಿ ಸಂಹರಿಸುವ ಶಕ್ತಿಯು ನಿನಗೆ ಇದ್ದುದೇ ಆದರೆ–ಅಕಳಂಕವಾದ ಶರೀರವುಳ್ಳ ಸೀತೆಯನ್ನು ಪತ್ನಿಯನ್ನಾಗಿ ಮಾಡಿಕೊಳ್ಳಲು ಬಲಾತ್ಕಾರದಿಂದಲಾದರೂ ಸೆಳೆದುಕೊಂಡುಬಾ.

ನೇರವಾಗಿ ಹೋಗುವ ಬಾಣಗಳಿಂದ ಜನಸ್ಥಾನದಲ್ಲಿರುವ ರಾಕ್ಷಸರೆಲ್ಲರನ್ನೂ ಖರ-ದೂಷಣರ ಸಹಿತವಾಗಿ ರಾಮನು ಸಂಹರಿಸಿದನೆಂಬ ಈ ಘೋರ ವಾರ್ತೆಯನ್ನು ಕೇಳಿದನಂತರ ಈ ವಿಷಯದಲ್ಲಿ ಮುಂದೆ ಮಾಡಬೇಕಾಗಿರುವ ಕರ್ತವ್ಯದ ವಿಷಯವಾಗಿ ಈಗಲೇ ನಿಶ್ಚಯಿಸುವುದು ನಿನಗೆ ಯೋಗ್ಯವಾಗಿದೆ. ”*

೩೪ನೆಯ ಸರ್ಗವು ಮುಗಿಯಿತು.

---

*ಶೂರ್ಪಣಖೆಯು ಇಲ್ಲಿ ರಾಮನ ಗುಣ-ಪರಾಕ್ರಮಗಳನ್ನು ಯಥಾವತ್ತಾಗಿಯೇ ಹೇಳಿ

## ರಾವಣನು ಸಮುದ್ರತೀರದಲ್ಲಿದ್ದ ಪ್ರದೇಶಗಳ ಸೌಂದರ್ಯವನ್ನು ವೀಕ್ಷಿಸುತ್ತಾ ಮಾರೀಚನ ಬಳಿಗೆ ಪುನಃ ಹೋದುದು

ತತಃ ಶೂರ್ಪಣಖಾವಾಕ್ಯಂ ತಚ್ಛ್ರುತ್ವಾ ರೋಮಹರ್ಷಣಮ್ ।
ಸಚಿವಾನಭ್ಯನುಜ್ಞಾಯ ಕಾರ್ಯಂ ಬುದ್ಧ್ವಾ ಜಗಾಮ ಸಃ ॥೧॥

ಬಳಿಕ ರಾವಣನು ರೋಮಾಂಚಕಾರಕವಾದ ಶೂರ್ಪಣಖೆಯ ಮಾತನ್ನು ಕೇಳಿ, ಮಂತ್ರಿಗಳಿಗೆ ಹೋಗಲು ಅನುಮತಿಯನ್ನಿತ್ತು ಮುಂದೆ ಮಾಡಬೇಕಾದ ಕಾರ್ಯವನ್ನು ವಿವೇಚಿಸುತ್ತಾ ಅಲ್ಲಿಂದ ಹೊರಟನು.[1]

ಸೀತಾಪಹರಣದ ಕಾರ್ಯವನ್ನು ಪರ್ಯಾಲೋಚಿಸಿ ದೋಷಗಳ-ಗುಣಗಳ ಬಲಾಬಲಗಳನ್ನೂ ವಿಮರ್ಶಿಸಿ, 'ಹೀಗೆ ಮಾಡುವುದೇ ಸರಿ'-ಎಂದು ನಿಶ್ಚಯಿಸಿ ಸ್ಥಿರಬುದ್ಧಿಯುಳ್ಳವನಾಗಿ ರಮ್ಯವಾಗಿದ್ದ ಅಶ್ವಶಾಲೆಯನ್ನು ಪ್ರವೇಶಿಸಿದನು.* ರಾಕ್ಷಸಾಧಿಪನಾದ ರಾವಣೇಶ್ವರನು ಯಾರಿಗೂ ತಿಳಿಯ

---

ರುವಳು. ಆದರೆ ಸೇಡನ್ನು ತೀರಿಸಿಕೊಳ್ಳಲು ಅವಳು ಸುಳ್ಳನ್ನೇ ಹೇಳಿರುವಳು. ರಾಮನನ್ನು ತಾನು ಕಾಮಿಸಿದ ವಿಷಯವನ್ನು ಅವಳು ಬಾಯಿಬಿಡುವುದಿಲ್ಲ. 'ಸೀತೆಯನ್ನು ನಿನಗಾಗಿ ತರಲು ಪ್ರಯತ್ನಿಸಿದೆ'-ಎಂಬ ದೊಡ್ಡ ಸುಳ್ಳನ್ನೂ ಹೇಳುತ್ತಾಳೆ. ರೊಚ್ಚಿಗೆದ್ದ ಸ್ತ್ರೀಯು ಏನನ್ನು ಮಾಡಲೂ ಹೇಸಲಾರಳೆಂಬುದಕ್ಕೆ ಇದೊಂದು ಜೀವಂತ ನಿದರ್ಶನ.

1 ಶೂರ್ಪಣಖಾ: 'ಶೂರ್ಪಃ' ಎಂದರೆ ಧಾನ್ಯಗಳನ್ನು ಹಸನುಮಾಡಲು ಬಳಸುವ ಮೊರ. ಆದರಂತೆ ಉಗುರುಗಳುಳ್ಳವಳು ಶೂರ್ಪಣಖಾ.

* ಸೀತೆಯ ಸೌಂದರ್ಯದ ವರ್ಣನೆಯನ್ನು ಪುನಃ ಶೂರ್ಪಣಖೆಯಿಂದ ಕೇಳಿದೊಡನೆಯೇ ಅವಳನ್ನು ಕರೆತರಬೇಕೆಂದೇ ರಾವಣನು ನಿಶ್ಚಯಿಸಿದನು. ಸೀತೆಯನ್ನು ಕರೆತರಲು ಎರಡು ಮಾರ್ಗಗಳಿವೆ. ಒಂದು ಮಾರ್ಗವನ್ನು ಅಕಂಪನನು ಸೂಚಿಸಿದ್ದಾನೆ. ತಸ್ಯಾಪಹರ ಭಾರ್ಯಾಂ ತ್ವಂ ತಂ ಪ್ರಮಥ್ಯ ಮಹಾವನೇ। ಅವನನ್ನು ವಂಚಿಸಿ ಅವನ ಪತ್ನಿಯನ್ನು ಅಪಹರಿಸಿಕೊಂಡು ಬಾ' ಎಂದು. ಶೂರ್ಪಣಖೆಯು 'ನಿನ್ನ ಬಲಾಬಲಗಳನ್ನು ಯೋಚಿಸಿ ಕಾರ್ಯಮಾಡು'-ಎಂದಿದ್ದಾಳೆ. ಯುದ್ಧಮಾಡಿ ರಾಮ-ಲಕ್ಷ್ಮಣರನ್ನು ಸಂಹರಿಸಿ ಸೀತೆಯನ್ನು ಕರೆತರಲೇ ? ರಾಮನನ್ನು ವಂಚಿಸಿ ಸೀತೆಯನ್ನು ಕದ್ದು ತರಲೇ ? ಈ ಎರಡು ಮಾರ್ಗಗಳಲ್ಲಿಯೂ ಇದ್ದ ಗುಣ-ದೋಷಗಳನ್ನೂ, ಬಲಾ

ದಂತೆ ಯಾನಶಾಲೆಗೆ ಹೋಗಿ ಸೂತನಿಗೆ ರಥವನ್ನು ಸಜ್ಜುಗೊಳಿಸುವಂತೆ ಹೇಳಿದನು.* ರಾವಣನು ಆಜ್ಞಾಪಿಸಿದೊಡನೆಯೇ ಚುರುಕಾದ ನಡಿಗೆಯುಳ್ಳ ಸಾರಥಿಯು ರಾಕ್ಷಸೇಶ್ವರನಿಗೆ ಸಮ್ಮತವಾದ ಉತ್ತಮೋತ್ತಮವಾದ ರಥವನ್ನು ಕ್ಷಣಮಾತ್ರದಲ್ಲಿ ಸಜ್ಜುಗೊಳಿಸಿದನು. ಚಿನ್ನದ ಆಭರಣಗಳಿಂದ ಸಮಲಂಕೃತವಾಗಿದ್ದ, ಪಿಶಾಚಿಗಳ ಮುಖಗಳನ್ನು ಹೊಂದಿದ್ದ ಹೇಸರಗತ್ತೆಗಳಿಂದ ಯುಕ್ತವಾಗಿದ್ದ, ಇಚ್ಛಿಸಿದಲ್ಲಿಗೆ ಹೋಗುವುದಾಗಿದ್ದ, ಸುವರ್ಣಮಯವಾಗಿದ್ದ, ರತ್ನಭೂಷಿತವಾಗಿದ್ದ ರಥದಲ್ಲಿ ಕುಳಿತು ರಾವಣನು ಪ್ರಯಾಣಹೊರಟನು.

ಕುಬೇರನ ತಮ್ಮನಾದ, ರಾಕ್ಷಸಾಧಿಪತಿಯಾದ, ಶ್ರೀಮಂತನಾದ ರಾವಣನು ಮೇಘದ ಶಬ್ದದಂತೆ ಶಬ್ದಮಾಡುತ್ತಿದ್ದ ರಥದಲ್ಲಿ ಕುಳಿತು ನದೀ-ನದಗಳಿಗೆ ಒಡೆಯನಾದ ಸಮುದ್ರನಿಗೆ ಅಭಿಮುಖವಾಗಿ ಪ್ರಯಾಣಮಾಡಿದನು. ಪ್ರಯಾಣಕಾಲದಲ್ಲಿ ರಥದಲ್ಲಿ ಚಮರೀಮೃಗದ ಬಿಳಿಯ ಕೂದಲುಗಳಿಂದ ಮಾಡಿದ್ದ ಚಾಮರಗಳೂ ಬೀಸಣಿಗೆಗಳೂ ಇದ್ದುವು. ಅವನ ತಲೆಯ ಮೇಲೆ ಶ್ವೇತಚ್ಛತ್ರವಿದ್ದಿತು. ಅವನು ನುಣುಪಾಗಿರುವ ವೈಡೂರ್ಯಮಣಿಯಂತೆ ನೀಲವರ್ಣದಿಂದ ಪ್ರಕಾಶಿಸುತ್ತಿದ್ದನು. ಪುಟಕ್ಕೆ ಹಾಕಿದ ಚಿನ್ನದಿಂದ ಮಾಡಿದ್ದ ಕುಂಡಲಗಳನ್ನು ಧರಿಸಿದ್ದನು. ಅವನಿಗೆ ಹತ್ತು ತಲೆಗಳಿದ್ದುವು, ಇಪ್ಪತ್ತು ಭುಜಗಳಿದ್ದುವು. ಸುಂದರವಾದ ವಸ್ತ್ರವನ್ನುಟ್ಟಿದ್ದನು. ರಾವಣನು

---

ಬಲಗಳನ್ನೂ ರಾವಣನು ಸಂಪೂರ್ಣವಾಗಿ ಯೋಚಿಸಿ ಒಂದು ನಿರ್ಧಾರಕ್ಕೆ ಬಂದನು. ಹಿಂದೆಯೂ ಅಕಂಪನನ ಸಲಹೆಯಂತೆ ಸೀತಾಪಹರಣವನ್ನು ನಿಶ್ಚಯಿಸಿ ಹೊರಟಾಗ ಮಾರೀಚನು ತಡೆದಿದ್ದನು. ಈಗ ರಾವಣನು ಯಾರು ತಡೆದರೂ ತನ್ನ ಕಾರ್ಯವನ್ನು ಪೂರೈಸಿಕೊಳ್ಳಬೇಕೆಂಬ ದೃಢನಿರ್ಧಾರಕ್ಕೆ ಬಂದನು. ಈ ಬಾರಿ ಅವನು ಕೃತಕೃತ್ಯನಾಗದೇ ಹಿಮ್ಮೆಟ್ಟುವ ವಿಷಯವೇ ಇರಲಿಲ್ಲ.

*ರಾವಣನು ಬೇರೆಯವರಿಗೆ ತಿಳಿಯದಂತೆ ಯಾನಶಾಲೆಗೆ ಏಕೆ ಹೋದನು ?–ಎಂಬುದಕ್ಕೆ ವ್ಯಾಖ್ಯಾನಕಾರರು ಹಲವಾರು ಕಾರಣಗಳನ್ನು ನಿರೂಪಿಸಿದ್ದಾರೆ: ೧) ಮಂಡೋದರಿಗೆ ತಿಳಿಯದಿರಲೆಂದು ೨) ಸಚಿವರಿಗಾಗಲೀ, ವಿಭೀಷಣ-ಕುಂಭಕರ್ಣರಿಗಾಗಲೀ ತಿಳಿಯದಿರಲೆಂದು ೩) ದುಷ್ಟಕರ್ಮದಲ್ಲಿ ತೊಡಗಿರುವುದರಿಂದ ತಿಳಿದವರು ತಡೆಯುವರೆಂಬ ಶಂಕೆಯಿಂದ ೪) ಪೌರುಷವನ್ನು ಬಿಟ್ಟು ಕಳ್ಳತನದಲ್ಲಿ ಕಾರ್ಯಮಾಡುವುದು ಲಜ್ಜಾವಹವೆಂದು–ರಾವಣನು ಯಾರಿಗೂ ಈ ವಿಷಯವನ್ನು ತಿಳಿಸದೆಯೇ ಹೊರಟನು.

ದೇವೇಂದ್ರನ ಶತ್ರುವು. ಋಷಿ-ಮುನಿಗಳ ಸಂಹಾರಕನು. ಆ ಸಮಯದಲ್ಲಿ ಅವನು ಹತ್ತು ಶಿಖರಗಳುಳ್ಳ ಪರ್ವತದಂತೆಯೇ ಕಾಣುತ್ತಿದ್ದನು. ಇಚ್ಛಿಸಿದಲ್ಲಿಗೆ ಹೋಗುವ ರಥದಲ್ಲಿ ಕುಳಿತು ರಾಕ್ಷಸೇಶ್ವರನು ಆಕಾಶದಲ್ಲಿ–ಬೆಳ್ಳಕ್ಕಿಗಳಿಂದ ಕೂಡಿದ ಮಿಂಚಿನ ಸಮೂಹವುಳ್ಳ ಮೇಘದೋಪಾದಿಯಲ್ಲಿ ಪ್ರಕಾಶಿಸುತ್ತಿದ್ದನು.*

ರಾವಣನು ಪ್ರಯಾಣಮಾಡುತ್ತಿದ್ದಾಗ ಮಾರ್ಗದಲ್ಲಿ ಪರ್ವತಗಳ ಸನಿಹದಲ್ಲಿರುವ ಸಮುದ್ರತೀರವನ್ನು ನೋಡಿದನು. ಅವನು ಹೋಗುತ್ತಿದ್ದ ಮಾರ್ಗವು ಫಲ-ಪುಷ್ಪಭರಿತವಾದ ಸಾವಿರಾರು ವೃಕ್ಷಗಳಿಂದ ವ್ಯಾಪ್ತವಾಗಿದ್ದಿತು. ಶೀತಲವಾಗಿಯೂ ಮಂಗಳಕರವಾಗಿಯೂ ಇದ್ದ ಸರೋವರಗಳು ಸುತ್ತಲೂ ಇದ್ದುವು. ಯಜ್ಞವೇದಿಕೆಗಳಿಂದ ಸಮಲಂಕೃತವಾಗಿದ್ದ ವಿಶಾಲವಾದ ಆಶ್ರಮಪ್ರದೇಶಗಳಿದ್ದುವು. ಅವೆಲ್ಲವೂ ಬಾಳೆಯಗಿಡಗಳಿಂದಲೂ ತೆಂಗಿನಮರಗಳಿಂದಲೂ ಸುಶೋಭಿತವಾಗಿದ್ದುವು. ಸುಪುಷ್ಪಿತವಾಗಿದ್ದ ಸಾಲ-ತಾಲ-ತಮಾಲವೃಕ್ಷಗಳಿಂದ ಕೂಡಿದ್ದ ಅರಣ್ಯಪ್ರದೇಶಗಳಿದ್ದುವು. ನಿಯತವಾದ ಆಹಾರವುಳ್ಳ ಮಹರ್ಷಿಗಳಿಂದ ಸಮಲಂಕೃತವಾದ ಆಶ್ರಮಭೂಮಿಗಳಿದ್ದುವು. ನಾಗ-ಗರುಡ-ಗಂಧರ್ವರಿಂದಲೂ, ಸಾವಿರಾರು ಕಿನ್ನರರಿಂದಲೂ, ಜಿತಕಾಮರಾದ ಸಿದ್ಧರಿಂದಲೂ, ಚಾರಣರಿಂದಲೂ ಸಂಸೇವ್ಯಮಾನವಾದ ಅರಣ್ಯಪ್ರದೇಶಗಳಿದ್ದುವು. ಬ್ರಹ್ಮನಖೋತ್ಪನ್ನರಾದ, ಅಯೋನಿಜರಾದ ವೈಖಾನಸರಿಂದಲೂ, ಮಾಷಗೋತ್ರಜರಾದ ಬ್ರಹ್ಮಕೇಶೋತ್ಪನ್ನರಾದ ವಾಲಖಿಲ್ಯರಿಂದಲೂ, ಸೂರ್ಯನ ಕಿರಣಗಳೇ ಆಹಾರವಾಗಿರುವ ಮರೀಚಿಪರಿಂದಲೂ ಸಮಲಂಕೃತವಾದ ಆಶ್ರಮಭೂಮಿಗಳಿದ್ದುವು. ದಿವ್ಯವಾದ ಆಭರಣಗಳಿಂದಲೂ, ಮಾಲೆಗಳಿಂದಲೂ ಸಮಲಂಕೃತೆಯರಾದ, ದಿವ್ಯರೂಪಿಗಳಾದ, ರತಿಕ್ರೀಡಾವಿಧಾನವನ್ನು ತಿಳಿದಿದ್ದ ಸಾವಿರಾರು ಅಪ್ಸರೆಯರಿಂದ

---

*ಸುವರ್ಣಾಭರಣಗಳಿಗೆ ವಿದ್ಯುನ್ಮಂಡಲದ ಉಪಮೆಯೆಂದೂ. ಛತ್ರಕ್ಕೆ ಬೆಳ್ಳಕ್ಕಿ (ಪಕ್ಷಿ)ಗಳ ಉಪಮೆಯೆಂದೂ, ರಾವಣನಿಗೆ ಮೇಘದ ಉಪಮೆಯೆಂದೂ ಒಬ್ಬ ವ್ಯಾಖ್ಯಾನಕಾರರು ಹೇಳಿರುತ್ತಾರೆ. ಮತ್ತೊಬ್ಬರು ಮಿಂಚಿನ ಸ್ಥಾನದಲ್ಲಿ ಆಭರಣಗಳೆಂದೂ, ಮೇಘಸ್ಥಾನದಲ್ಲಿ ರಾವಣನೆಂದೂ, ಬೆಳ್ಳಕ್ಕಿಗಳ ಸ್ಥಾನದಲ್ಲಿ ಅಲಂಕೃತವಾದ ರಥವೆಂದೂ ಹೇಳಿದ್ದಾರೆ.

ಪರಿಶೋಭಿತವಾದ ಕ್ರೀಡೋದ್ಯಾನಗಳಿದ್ದುವು. ಶ್ರೀಮತಿಯರಾದ ದೇವ ಪತ್ನಿಯರಿಂದ ಸೇವಿತವಾದ ಹೂದೋಟಗಳಿದ್ದುವು. ಅಮೃತಾಶಿಗಳಾದ ದೇವತೆಗಳಿಂದಲೂ, ದಾನವರಿಂದಲೂ ಸಂಚರಿಸಲ್ಪಡುವ ಅರಣ್ಯಮಾರ್ಗಗಳಿದ್ದುವು. ಹಂಸ-ಕ್ರೌಂಚ-ಸಾರಸಪಕ್ಷಿಗಳಿಂದ ಸಮಾವೃತವಾಗಿದ್ದ, ವೈಡೂರ್ಯಶಿಲೆಗಳನ್ನೇ ಸೋಪಾನವಾಗಿ ಹೊಂದಿದ್ದ, ರಮ್ಯವಾಗಿಯೂ ಇದ್ದ ಅನೇಕ ಸರೋವರಗಳಿದ್ದುವು. ಬಿಳುಪಾಗಿಯೂ ವಿಶಾಲವಾಗಿಯೂ ಇದ್ದ, ದಿವ್ಯವಾದ ಪುಷ್ಪಮಾಲಿಕೆಗಳಿಂದ ಸಮಲಂಕೃತವಾಗಿದ್ದ, ಮಂಗಳವಾದ್ಯಗಳಿಂದಲೂ-ಗಾಯನಗಳಿಂದಲೂ ಶಬ್ದಾಯಮಾನವಾಗಿದ್ದ ವಿಮಾನಗಳು ಸುತ್ತಲೂ ಸಂಚರಿಸುತ್ತಿದ್ದುವು. ತಪಸ್ಸಿನಿಂದ ಪುಣ್ಯಲೋಕಗಳನ್ನು ಜಯಿಸಿದ ಪುಣ್ಯಾತ್ಮರ ವಿಮಾನಗಳೂ ಅಲ್ಲಿ ಸಂಚರಿಸುತ್ತಿದ್ದುವು. ಗಂಧರ್ವಾಪ್ಸರೆಯರು ಗುಂಪು-ಗುಂಪಾಗಿ ಹೋಗುತ್ತಿದ್ದರು. ರಾವಣೇಶ್ವರನು ಆ ಎಲ್ಲ ಮನೋಹರವಾದ ದೃಶ್ಯಗಳನ್ನು ನೋಡುತ್ತಾ ಮುಂದೆ ಸಾಗಿದನು.

ರಾವಣನು ಹೋಗುತ್ತಿದ್ದ ಹಾದಿಯಲ್ಲಿ ಬುಡದಲ್ಲಿ ಅಂಟಿನ ರಸವಿರುವ ವೃಕ್ಷಗಳಿಂದಲೂ, ಸಾವಿರಾರು ಚಂದನವೃಕ್ಷಗಳಿಂದಲೂ ಕೂಡಿದ ಮೂಗಿಗೆ ತೃಪ್ತಿಯನ್ನುಂಟು ಮಾಡುವ ಅರಣ್ಯಗಳಿದ್ದುವು. ಅಗುರುವೇ ಮೊದಲಾದ ಮುಖ್ಯ-ಮುಖ್ಯವಾದ ಸುಗಂಧವೃಕ್ಷಗಳ ವನಗಳೂ, ಉಪವನಗಳೂ ಇದ್ದುವು. ಒಳ್ಳೆಯ ಜಾತಿಯ ಫಲಭರಿತವಾದ ಮತ್ತು ಸುಗಂಧಯುಕ್ತವಾದ ಅಂಕೋಲವೆಂಬ ವೃಕ್ಷಗಳ ಕಾಡುಗಳಿದ್ದುವು. ಪುಷ್ಪಭರಿತವಾಗಿದ್ದ ಹೊಂಗೇಮರಗಳಿಂದಲೂ, ಶುಂಠಿಯ ಪೊದೆಗಳಿಂದಲೂ ಕೂಡಿದ ಅರಣ್ಯಗಳಿದ್ದುವು. ಸಮುದ್ರತೀರದಲ್ಲಿ ಒಣಗಿದ ಮುತ್ತಿನ ರಾಶಿಗಳಿದ್ದುವು. ಶಂಖಗಳೂ, ಹವಳಗಳೂ ರಾಶಿ-ರಾಶಿಯಾಗಿ ಸಮುದ್ರದ ತೀರದಲ್ಲಿ ಬಿದ್ದಿದ್ದುವು. ಚಿನ್ನದ ಮತ್ತು ಬೆಳ್ಳಿಯ ಪರ್ವತಗಳಿದ್ದುವು. ಮನೋಜ್ಞವಾದ ಚಿಲುಮೆಗಳೂ ಪ್ರಸನ್ನವಾದ ಕೊಳಗಳೂ ಇದ್ದುವು. ರಾವಣನು ಹೋಗುತ್ತಿದ್ದ ಮಾರ್ಗದಲ್ಲಿ ಧನ-ಧಾನ್ಯಗಳಿಂದ ಸಮೃದ್ಧವಾಗಿದ್ದ, ಉತ್ತಮಸ್ತ್ರೀಯರಿಂದಲೂ ಅಸಂಖ್ಯಾತವಾದ ಗಜಾಶ್ವ-ರಥಗಳಿಂದಲೂ ಶೋಭಾಯಮಾನವಾಗಿದ್ದ ನಗರಗಳಿದ್ದುವು. ಅವೆಲ್ಲವನ್ನೂ ನೋಡುತ್ತಾ ರಾವಣನು ಪ್ರಯಾಣಮಾಡುತ್ತಿದ್ದನು. ಭೂಮಿಯು ಹಳ್ಳ-ತಿಟ್ಟುಗಳಿಲ್ಲದೆ ಸಮನೆಲವಾಗಿದ್ದಿತು. ಸುಂದರ

ವಾಗಿದ್ದಿತು. ಗಾಳಿಯು ಮಂದವಾಗಿ ಬೀಸುತ್ತಿದ್ದಿತು. ಸಮುದ್ರತೀರದಲ್ಲಿ ಸ್ವರ್ಗಕ್ಕೆ ಸಮಾನವಾಗಿದ್ದ ಅಂತಹ ಸುಂದರದೃಶ್ಯಗಳನ್ನು ನೋಡುತ್ತಾ ರಾವಣನು ಪ್ರಯಾಣಮಾಡುತ್ತಿದ್ದನು.

ಅಲ್ಲಿ ರಾವಣನು ಮೇಘಕ್ಕೆ ಸಮಾನವಾದ ಕಾಂತಿಯಿಂದ ಕೂಡಿದ್ದ ಋಷಿಗಳಿಂದ ಸುತ್ತುವರಿಯಲ್ಪಟ್ಟಿದ್ದ ಆಲದ ಮರವನ್ನು ನೋಡಿದನು. ಅದರ ರೆಂಬೆಗಳು ನೂರು ಯೋಜನಗಳವರೆಗೂ ಪ್ರಸರಿಸಿದ್ದುವು. ಹಿಂದೊಮ್ಮೆ ಮಹಾಬಲನಾದ ಗರುಡನು ಒಂದು ದೊಡ್ಡ ಆನೆಯನ್ನೂ, ಮಹಾಕಾಯ ವನ್ನು ಹೊಂದಿದ್ದ ಒಂದು ಆಮೆಯನ್ನೂ ತಿನ್ನುವ ಸಲುವಾಗಿ ಎತ್ತಿಕೊಂಡು ಬಂದು ಆ ಆಲದ ಮರದ ಕೊಂಬೆಯ ಮೇಲೆ ಕುಳಿತನು. ಆನೆ, ಆಮೆ ಮತ್ತು ಗರುಡರ ಭಾರದಿಂದ ಎಲೆಗಳಿಂದ ದಟ್ಟವಾಗಿದ್ದ ಆ ರೆಂಬೆಯು ಮುರಿಯತೊಡಗಿತು. ಅದೇ ರೆಂಬೆಯ ಕೆಳಭಾಗದಲ್ಲಿ ವೈಖಾನಸರೂ, ಪೂತಿಮಾಷಗೋತ್ರೋತ್ಪನ್ನರಾದ ವಾಲಖಿಲ್ಯರೂ, ಮರೀಚಿಪರೂ, ಅಯೋ ನಿಜರಾದ ಧೂಮ್ರರೂ, ಇನ್ನೂ ಅನೇಕಮಹರ್ಷಿಗಳೂ ತಪಸ್ಸನ್ನು ಮಾಡು ತ್ತಿದ್ದರು. ರೆಂಬೆಯು ಕೆಳಕ್ಕೆ ಬಿದ್ದುಬಿಟ್ಟಿದ್ದರೆ ಅವರಲ್ಲಿ ಯಾರೂ ಉಳಿಯು ತ್ತಿರಲಿಲ್ಲ. ಅವರ ಮೇಲಿನ ಅನುಕಂಪದಿಂದಾಗಿ ಗರುಡನು ನೂರು ಯೋಜನ ಗಳಷ್ಟು ಉದ್ದವಾಗಿದ್ದ ಆ ರೆಂಬೆಯನ್ನೇ ಎತ್ತಿಕೊಂಡು ಹೋಗುತ್ತಿದ್ದನು. ಹಾಗೆ ಹೋಗುತ್ತಿರುವಾಗಲೇ ಒಂದು ಪಂಜದಲ್ಲಿ ಹಿಡಿದುಕೊಂಡಿದ್ದ ಆನೆ-ಆಮೆಗಳನ್ನು ಭಕ್ಷಿಸಿದನು. ಅನಂತರ ಪನ್ನಗೋತ್ತಮನಾದ ಗರುಡನು ತಾನು ಎತ್ತಿಕೊಂಡು ಹೋಗುತ್ತಿದ್ದ ರೆಂಬೆಯಿಂದಲೇ ನಿಷಾದರ ಹಳ್ಳಿಯನ್ನು ಧ್ವಂಸಮಾಡಿ ರೆಂಬೆಯಲ್ಲಿದ್ದ ಋಷಿಗಳನ್ನು ಕೆಳಗಿಳಿಸಿ ಅತುಲವಾದ ಸಂತೋಷವನ್ನು ಹೊಂದಿದನು. ಅದರಿಂದ ಗರುಡನ ಪರಾಕ್ರಮವು ಇಮ್ಮಡಿ ಯಾಯಿತು. ಅನಂತರ ಬುದ್ಧಿವಂತನಾದ ಗರುಡನು ಅಮೃತವನ್ನು ತರಲು ನಿಶ್ಚಯಿಸಿ, ಮಹೇಂದ್ರನ ಅರಮನೆಯನ್ನು ಹೊಕ್ಕು ಕಬ್ಬಿಣದ ಹೊರ ಆವರಣವನ್ನು ಕಿತ್ತು ಗುಪ್ತವಾಗಿದ್ದ ರತ್ನಗೃಹವನ್ನು ಭೇದಿಸಿ ಅಲ್ಲಿದ್ದ ಅಮೃತವನ್ನು ಅಪಹರಿಸಿಕೊಂಡು ಬಂದನು.

ಅಂತಹ ಪೂರ್ವೇತಿಹಾಸವಿದ್ದ, ಗರುಡನು ರೆಂಬೆಯನ್ನು ಕಿತ್ತಾಗ ಉಂಟಾದ ಗುರುತಿನಿಂದ ಕೂಡಿದ್ದ, ಮಹರ್ಷಿಗಳ ಸಮೂಹದಿಂದ

ಸೇವಿಸಲ್ಪಡುತ್ತಿದ್ದ ಸುಭದ್ರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದ ಆ ವಟ ವೃಕ್ಷವನ್ನು ಕುಬೇರನ ತಮ್ಮನಾದ ರಾವಣನು ನೋಡಿದನು. ನದೀಪತಿ ಯಾದ ಸಮುದ್ರದ ಆಚೆಯ ತೀರಕ್ಕೆ ಹೋಗಿ ಅರಣ್ಯದ ಮಧ್ಯಭಾಗದಲ್ಲಿದ್ದ, ಏಕಾಂತದಲ್ಲಿದ್ದ, ಪುಣ್ಯಪ್ರದವಾಗಿಯೂ ರಮ್ಯವಾಗಿಯೂ ಇದ್ದ ಆಶ್ರಮ



ವನ್ನು ನೋಡಿದನು. ಅಲ್ಲಿ ಜಟೆಯನ್ನು ಧರಿಸಿ ಕೃಷ್ಣಾಜಿನವನ್ನು ಉಟ್ಟು ನಿಯತಾಹಾರನಾಗಿದ್ದ ಮಾರೀಚರಾಕ್ಷಸನನ್ನು ರಾವಣನು ಕಂಡನು. ತನ್ನ ಆಶ್ರಮಕ್ಕೆ ಆಗಮಿಸಿದ ರಾವಣನಿಗೆ ಮಾರೀಚನು ಬೇಕು-ಬೇಕಾದ ಅಮಾನುಷವಾದ ಭೋಜ್ಯವಸ್ತುಗಳಿಂದ ವಿಧಿವತ್ತಾಗಿ ಸತ್ಕಾರಮಾಡಿದನು.

ಮಾರೀಚನು ಸ್ವತಃ ನಿಂತು ರಾವಣನನ್ನು ಭೋಜನೋದಕಗಳಿಂದ ತೃಪ್ತಿ ಪಡಿಸಿ ಗಂಭೀರಾರ್ಥಯುಕ್ತವಾದ ಮಾತುಗಳಿಂದ ಪ್ರಶ್ನಿಸಿದನು :

" ಮಹಾರಾಜ ! ಕುಶಲಿಯಾಗಿರುವೆಯಾ ? ಲಂಕೆಯಲ್ಲಿ ಎಲ್ಲರೂ ಕುಶಲಿಗಳಾಗಿರುವರೇ ? ಯಾವ ಪ್ರಯೋಜನಕ್ಕಾಗಿ ನೀನು ಪುನಃ ಇಷ್ಟು ಬೇಗ ಇಲ್ಲಿಗೆ ಆಗಮಿಸಿದೆ ?"

ಮಾರೀಚನ ಪ್ರಶ್ನೆಗೆ ಮಹಾತೇಜಸ್ವಿಯಾದ ವಾಕ್ಯಕೋವಿದನಾದ ರಾವಣನು ಹೇಳತೊಡಗಿದನು.

ಇ೫ನೆಯ ಸರ್ಗವು ಮುಗಿಯಿತು.



ರಾವಣನು ರಾಮನು ಶೂರ್ಪಣಖೆಗೆ ಮಾಡಿದ ಅಪಮಾನವನ್ನು
ಮಾರೀಚನಿಗೆ ತಿಳಿಸಿ ಅವನ ಪತ್ನಿಯಾದ ಸೀತೆಯನ್ನು
ಅಪಹರಿಸಲು ಮಾರೀಚನ ಸಹಾಯವನ್ನು ಕೋರಿದುದು

ಮಾರೀಚ ಶ್ರೂಯತಾಂ ತಾತ ವಚನಂ ಮಮ ಭಾಷತಃ ।
ಆರ್ತೋಽಸ್ಮಿ ಮಮ ಚಾರ್ತಸ್ಯ ಭವಾನ್ಹಿ ಪರಮಾ ಗತಿಃ ॥೧॥

" ಮಾರೀಚ ! ನಾನು ಹೇಳುವ ಮಾತನ್ನು ಕೇಳು. ನಾನೀಗ ಆರ್ತ ನಾಗಿದ್ದೇನೆ. ಆರ್ತನಾಗಿರುವ ನನಗೆ ಈ ಸಮಯದಲ್ಲಿ ನೀನೇ ಪರಮ ಗತಿಯು.

ನನ್ನ ಆಜ್ಞೆಯಂತೆ ನನ್ನ ತಮ್ಮನಾದ ಖರ, ಮಹಾಬಾಹುವಾದ ದೂಷಣ, ನನ್ನ ತಂಗಿಯಾದ ಶೂರ್ಪಣಖೆ, ಮಹಾಪರಾಕ್ರಮಿಯಾದ ಮತ್ತು ಮಾಂಸಾಹಾರಿಯಾದ ತ್ರಿಶಿರಸ ಮತ್ತು ಯುದ್ಧಕುಶಲರಾದ ಇನ್ನೂ ಅನೇಕ ರಾಕ್ಷಸರು ಜನಸ್ಥಾನದಲ್ಲಿ ಧರ್ಮಚಾರಿಗಳಾದ ಮುನಿಗಳನ್ನು ಹಿಂಸಿಸುತ್ತಾ ಬಹಳ ಕಾಲದಿಂದಲೂ ವಾಸಮಾಡಿಕೊಂಡಿದ್ದರೆಂಬ ವಿಷಯವು ನಿನಗೂ ತಿಳಿದಿದೆ. ಖರನ ಚಿತ್ತಾನುವರ್ತಿಗಳಾದ, ಯುದ್ಧೋತ್ಸಾಹಿಗಳಾದ, ಭಯಂಕರ ವಾದ ಕರ್ಮಗಳನ್ನು ಮಾಡುವ, ಶೂರರಾದ, ಹದಿನಾಲ್ಕು ಸಾವಿರ ರಾಕ್ಷಸರು ಆ ಜನಸ್ಥಾನದಲ್ಲಿದ್ದರು. ಅವರೆಲ್ಲರೂ ವಿಶೇಷರೀತಿಯಲ್ಲಿ ಸನ್ನದ್ಧರಾಗಿ ರಾಮನೊಡನೆ ಯುದ್ಧದಲ್ಲಿ ತೊಡಗಿದರು. ಖರನೇ ಮುಂತಾದ ರಾಕ್ಷಸರು

ರಾಮನ ಮೇಲೆ ನಾನಾವಿಧವಾದ ಆಯುಧಗಳನ್ನು ಪ್ರಯೋಗಿಸಿದರು. ಅದರಿಂದ ಕುಪಿತನಾದ ರಾಮನು ರಣರಂಗದಲ್ಲಿ ಕಠಿಣವಾದ ಯಾವ ಮಾತನ್ನೂ ಆಡದೇ ಧನುಸ್ಸಿನಲ್ಲಿ ಬಾಣಗಳನ್ನು ಅನುಸಂಧಾನಮಾಡಿ ಪ್ರಯೋಗಿಸತೊಡಗಿದನು. ಉಗ್ರಪರಾಕ್ರಮಿಗಳಾಗಿದ್ದ ಹದಿನಾಲ್ಕು ಸಾವಿರ ರಾಕ್ಷಸಯೋಧರನ್ನೂ ಮನುಷ್ಯಮಾತ್ರದವನಾದ, ನೆಲದ ಮೇಲೆ ನಿಂತು ಯುದ್ಧಮಾಡುತ್ತಿದ್ದ ರಾಮನೊಬ್ಬನೇ ತೀಕ್ಷ್ಣವಾದ ಬಾಣಗಳಿಂದ ಸಂಹರಿಸಿಬಿಟ್ಟನು. ಇಷ್ಟುಮಾತ್ರವಲ್ಲ. ಖರ-ದೂಷಣ-ತ್ರಿಶಿರಸರೂ ಯುದ್ಧದಲ್ಲಿ ಮಡಿದರು. ಹೀಗೆ ದಂಡಕಾರಣ್ಯಗಳು ರಾಮನಿಂದ ಭಯರಹಿತವಾಗಿ ಮಾಡಲ್ಪಟ್ಟವು. ಕ್ರುದ್ಧನಾದ ತಂದೆಯಿಂದ ರಾಜ್ಯಭ್ರಷ್ಟನಾಗಿ ಮಾಡಲ್ಪಟ್ಟು, ಭಾರ್ಯಾಸಹಿತನಾಗಿ ಅರಣ್ಯಕ್ಕೆಬಂದಿರುವ ರಾಮನು ಕ್ಷೀಣಜೀವಿತನು. ಇನ್ನು ಹೆಚ್ಚುಕಾಲ ಬದುಕಿರಲಾರನು. ಆ ಕ್ಷತ್ರಿಯಕುಲಕಳಂಕನು ನಮ್ಮ ಅಪಾರವಾದ ರಾಕ್ಷಸಸೈನ್ಯವನ್ನು ಸಂಹರಿಸಿರುವನು.

ದುಃಶೀಲಃ ಕರ್ಕಶಸ್ತೀಕ್ಷ್ಣೋ ಮೂರ್ಖೋ

ಲುಬ್ಧೋಽಜಿತೇನ್ದ್ರಿಯಃ ।

ತ್ಯಕ್ತ್ವಾ ಧರ್ಮಮಧರ್ಮಾತ್ಮಾ ಭೂತಾನಾಮಹಿತೇ ರತಃ ॥೧೧॥

ರಾಮನು ದುಶ್ಶೀಲನು. ಕ್ರೂರಿಯು. ತೀಕ್ಷ್ಣಸ್ವಭಾವದವನು. ಮೂರ್ಖನು. ಜಿಪುಣನು. ಇಂದ್ರಿಯಗಳ ಮೇಲೆ ಹತೋಟಿಯಿಲ್ಲದವನು. ಧರ್ಮವನ್ನು ಬಿಟ್ಟವನು. ಅಧರ್ಮಿಷ್ಠನು. ಪ್ರಾಣಿಗಳಿಗೆ ಕೇಡನ್ನುಂಟುಮಾಡುವುದರಲ್ಲಿಯೇ ನಿರತನಾಗಿರತಕ್ಕವನು.*

ಪರಸ್ಪರವಾಗಿ ಯಾವ ವಿಧವಾದ ದ್ವೇಷವಿಲ್ಲದಿದ್ದರೂ ಅವನು

---

*ಒಬ್ಬ ವ್ಯಾಖ್ಯಾನಕಾರರು ಎಲ್ಲ ಪದಗಳಿಗೂ ವಿಪರೀತಾರ್ಥವನ್ನು ಮಾಡಿರುತ್ತಾರೆ. ಕ್ಷತ್ರಿಯಪಾಂಸನಃ = ಕ್ಷತ್ರಿಯಾನ್ ಪಾತಿ = ರಕ್ಷತಿ ಸ ಏವ ಅಂಸನಃ = ಅತಿಪ್ರಕಾಶವಾನ್ ಕ್ಷತ್ರಿಯರನ್ನು ರಕ್ಷಿಸುವುದರಿಂದಲೇ ಪ್ರಕಾಶವಂತನಾಗಿರತಕ್ಕವನು. ಅಶೀಲಃ–ಎಂಬ ಪಾಠವನ್ನಿಟ್ಟುಕೊಂಡು ಸಂಯುಗೇ ಶೀಲರಹಿತಃ ಯುದ್ಧಸಮಯದಲ್ಲಿ ಶೀಲವನ್ನು ಬಿಟ್ಟವನು. ಆದುದರಿಂದಲೇ ಅವನು ಆ ಸಮಯದಲ್ಲಿ ಕರ್ಕಶನೂ, ತೀಕ್ಷ್ಣನೂ ಆಗಿರುತ್ತಾನೆ. ತೀಕ್ಷ್ಣಃ-ಅಮೂರ್ಖಃ-ಅಲುಬ್ಧಃ-ಜಿತೇಂದ್ರಿಯಃ–ಎಂದು ಪದವಿಭಾಗಮಾಡಿ ಅಮೂರ್ಖಃ ವೇದಶಾಸ್ತ್ರಸಂಪನ್ನಃ–ವೇದಶಾಸ್ತ್ರಸಂಪನ್ನನಾದವನು. ಅಲುಬ್ಧಃ = ಲೋಭ

ಕೇವಲ ಬಲವನ್ನೇ ಆಶ್ರಯಿಸಿ ನನ್ನ ತಂಗಿಯ ಕಿವಿಗಳನ್ನೂ ಮತ್ತು ಮೂಗನ್ನೂ ಕತ್ತರಿಸಿ ವಿರೂಪಗೊಳಿಸಿರುವನು. ಇದಕ್ಕೆ ಪ್ರತಿಯಾಗಿ ನಾನು ದೇವಕನ್ಯೆಯೋಪಾದಿಯಲ್ಲಿರುವ ಅವನ ಭಾರ್ಯೆಯನ್ನು ಬಲಪೂರ್ವಕವಾಗಿ ಸೆಳೆದು ತರಲು ಇಚ್ಛಿಸಿದ್ದೇನೆ. ಇದಕ್ಕೆ ನೀನು ಸಹಾಯಕನಾಗು. ನೀನು ಸಹಾಯಕನಾಗಿ ನನ್ನ ಸಮೀಪದಲ್ಲೇ ಇದ್ದುದಾದರೆ ನನ್ನ ಅನುಜರಾದ ಕುಂಭಕರ್ಣಾದಿಗಳ ಸಹಾಯದಿಂದ ನಾನು ಎಲ್ಲ ದೇವತೆಗಳೂ ಒಟ್ಟಾಗಿ ಬಂದರೂ ಯುದ್ಧದಲ್ಲಿ ಅವರನ್ನು ಲೆಕ್ಕಿಸುವುದಿಲ್ಲ. ಆದುದರಿಂದ ಈ ಕಾರ್ಯಕ್ಕೆ ನೀನು ಸಹಾಯಕನಾಗು. ಸಹಾಯಮಾಡಲು ನೀನು ಸಮರ್ಥನೂ ಆಗಿರುವೆ. ವೀರ್ಯದಲ್ಲಿ, ಯುದ್ಧಮಾಡುವುದರಲ್ಲಿ ಮತ್ತು ದರ್ಪದಲ್ಲಿ ನಿನಗೆ ಸಮಾನರಾದವರು ಯಾರೂ ಇಲ್ಲ. ನೀನು ಉಪಾಯವನ್ನು ಬಲ್ಲವನು. ಮಹಾಶೂರನು. ಎಲ್ಲ ವಿಧವಾದ ಮಾಯೆಗಳಲ್ಲಿಯೂ ನೀನು ಪರಿಣತನಾಗಿರುವೆ. ಈ ಕಾರಣದಿಂದಲೇ ನಾನು ನಿನ್ನ ಸಹಾಯವನ್ನು ಅಪೇಕ್ಷಿಸಿ ಇಲ್ಲಿಗೆ ಬಂದಿರುವೆನು. ನನಗೆ ಸಹಾಯಮಾಡಲು ನೀನು ಏನು ಮಾಡಬೇಕೆಂಬುದನ್ನು ಹೇಳುವೆನು ; ಕೇಳು :

**ಸೌವರ್ಣಸ್ತ್ವಂ ಮೃಗೋ ಭೂತ್ವಾ ಚಿತ್ರೋ ರಜತಬಿನ್ದುಭಿಃ ।**
**ಆಶ್ರಮೇ ತಸ್ಯ ರಾಮಸ್ಯ ಸೀತಾಯಾಃ ಪ್ರಮುಖೇ ಚರ ॥೧೮॥**

ನೀನು ಚಿತ್ರಿತವಾದ ಬೆಳ್ಳಿಯ ಚುಕ್ಕೆಗಳಿಂದ ಕೂಡಿರುವ ಚಿನ್ನದ ಜಿಂಕೆಯಾಗಿ ರಾಮನ ಆಶ್ರಮದಲ್ಲಿ ಸೀತೆಯ ಮುಂದೆ ಸಂಚರಿಸಬೇಕು. ಸುಂದರವಾದ ಜಿಂಕೆಯ ರೂಪದಲ್ಲಿರುವ ನಿನ್ನನ್ನು ನೋಡಿದೊಡನೆಯೇ ಸೀತೆಯು ಮರುಳಾಗಿ ತನ್ನ ಗಂಡನಿಗೂ ಮತ್ತು ಲಕ್ಷ್ಮಣನಿಗೂ-"ಆ ಜಿಂಕೆ

---

ರಹಿತಃ-ಲೋಭರಹಿತನಾದವನು. ಜಿತೇಂದ್ರಿಯಃ = ಜಿತೇಂದ್ರಿಯನು ಎಂಬುದಾಗಿ ಅರ್ಥ ಮಾಡಿರುತ್ತಾರೆ. ಉತ್ತರಾರ್ಧದಲ್ಲಿಯೂ ಸಹ ತ್ಯಕ್ತಧರ್ಮಾ ಎಂಬುದಕ್ಕೆ ತ್ಯಕ್ತಃ = ತ್ಯಾಜಿತಃ ಧರ್ಮೋ ರಾಕ್ಷಸಕರ್ಮ ಯೇನ. ಅತ ಏವ ಅಧರ್ಮಾತ್ಮಾ = ರಾಕ್ಷಸಧರ್ಮಾ ಮನಸ್ಕಃ ರಾಕ್ಷಸಧರ್ಮವನ್ನು ಸಂಪೂರ್ಣವಾಗಿ ಹೋಗಲಾಡಿಸಿದವನು. ಅದುದರಿಂದಲೇ ಅಂತಹ ರಾಕ್ಷಸಧರ್ಮವಿಲ್ಲದೇ ಇರತಕ್ಕವನು. ಭೂತಾನಾಮಹಿತೇ ರತಃ-ಭೂತಾನಾಂ = ಅಸ್ಮದಾದೀನಾಂ = ನಮ್ಮಂತಹ ರಾಕ್ಷಸರ ಅಹಿತದಲ್ಲಿಯೇ ಸರ್ವದಾ ನಿರತನಾಗಿರತಕ್ಕವನು. ಕ್ಷೀಣಜೀವಿತಃ = ಪ್ರಜಾಪಾಲನರಹಿತಃ – ಪ್ರಜಾಪಾಲನರಹಿತನಾಗಿದ್ದಾನೆ.

ಯನ್ನು ತಂದು ಕೊಡಿ"–ಎಂದು ಹೇಳುವುದರಲ್ಲಿ ಸಂಶಯವೇ ಇಲ್ಲ. ಅವರಿಬ್ಬರೂ ಚಿನ್ನದ ಜಿಂಕೆಯನ್ನು ತರಲು ಆಶ್ರಮವನ್ನು ಬಿಟ್ಟು ಹೊರಟೊಡನೆಯೇ ರಾಮ-ಲಕ್ಷ್ಮಣರಿಂದ ಶೂನ್ಯವಾಗಿರುವ ಆಶ್ರಮವನ್ನು ಪ್ರವೇಶಿಸಿ–ರಾಹುವು ಚಂದ್ರನ ಪ್ರಭೆಯನ್ನು ಅಪಹರಿಸುವಂತೆ–ಸೀತೆಯನ್ನು ಯಾವ ವಿಧವಾದ ಅಡೆ-ತಡೆಗಳೂ ಇಲ್ಲದೇ ಬಹಳ ಸುಲಭವಾಗಿ ಅಪಹರಿಸುವೆನು. ಸೀತೆಯನ್ನು ಪಡೆದುಕೊಂಡು ಕೃತಾರ್ಥನಾಗಿ ಆನಂದಭರಿತನಾಗುವ ನಾನು ಸೀತೆಯನ್ನು ಕಳೆದುಕೊಂಡು ದುಃಖದಿಂದ ಕೃಶನಾಗುವ ರಾಮನನ್ನು ಬಹಳ ಸುಲಭವಾಗಿ ಗೆಲ್ಲುವ ನಂಬಿಕೆಯಿಂದ ಪ್ರಹರಿಸುತ್ತೇನೆ."

ರಾವಣನು ಹೇಳಿದ ರಾಮನ ಕಥೆಯನ್ನು ಕೇಳಿ ಮಹಾತ್ಮನಾದ ಮಾರೀಚನು ಬಹಳ ಭಯಗೊಂಡನು. ಅವನ ಮುಖವು ಬಾಡಿತು. ಒಣಗಿ ಹೋದ ತುಟಿಗಳನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ಆರ್ತನಾಗಿ ಹೆಣದಂತೆ ಎವೆಯಿಕ್ಕದಿರುವ ಕಣ್ಣುಗಳಿಂದ ರಾವಣನನ್ನೇ ನೋಡುತ್ತಿದ್ದನು.

ದಂಡಕಾರಣ್ಯದಲ್ಲಿರುವ ಶ್ರೀರಾಮನ ಪರಾಕ್ರಮವೆಷ್ಟೆಂಬುದನ್ನು ಸಂಪೂರ್ಣವಾಗಿ ತಿಳಿದುಕೊಂಡಿದ್ದ, ಕಳವಳಗೊಂಡ ಮನಸ್ಸಿನಿಂದ ಕೂಡಿದ್ದ ಮಾರೀಚನು ತನ್ನ ಹಿತಕ್ಕಾಗಿಯೂ ಮತ್ತು ರಾವಣನ ಹಿತಕ್ಕಾಗಿಯೂ ಉಚಿತವಾದ ಮಾತುಗಳನ್ನು ಹೇಳತೊಡಗಿದನು.

ಇಂನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೩೭ನೆಯ ಸರ್ಗ

## ಮಾರೀಚನು ರಾವಣನಿಗೆ ಶ್ರೀರಾಮನ ಗುಣಗಳನ್ನೂ ಮತ್ತು ಪ್ರಭಾವವನ್ನೂ ಹೇಳಿ ಸೀತಾಪಹರಣವನ್ನು ನಿರೋಧಿಸಿದುದು

ತಚ್ಛ್ರುತ್ವಾ ರಾಕ್ಷಸೇನ್ದ್ರಸ್ಯ ವಾಕ್ಯಂ ವಾಕ್ಯವಿಶಾರದಃ ।
ಪ್ರತ್ಯುವಾಚ ಮಹಾತೇಜಾ ಮಾರೀಚೋ ರಾಕ್ಷಸೇಶ್ವರಮ್ ॥೧॥

ರಾಕ್ಷಸೇಂದ್ರನಾದ ರಾವಣನ ಮಾತನ್ನು ಕೇಳಿ ಮಹಾಪ್ರಾಜ್ಞನಾದ, ಮಾತನಾಡುವುದರಲ್ಲಿ ನಿಪುಣನಾದ ಮಾರೀಚನು ಹೇಳಿದನು :

ಸುಲಭಾಃ ಪುರುಷಾ ರಾಜನ್ಸತತಂ ಪ್ರಿಯವಾದಿನಃ ।
ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥೨॥

"ಮಹಾರಾಜ! ಲೋಕದಲ್ಲಿ ಯಾವಾಗಲೂ ಪ್ರಿಯವಾದ ಮಾತುಗಳನ್ನು ಆಡತಕ್ಕವರು ಸುಲಭವಾಗಿ ಸಿಕ್ಕುತ್ತಾರೆ. ಆದರೆ ಅಪ್ರಿಯವಾಗಿದ್ದರೂ ಹಿತವಾದ ಮಾತನ್ನು ಹೇಳುವವನೂ ಇಲ್ಲ; ಕೇಳುವವನೂ ಇಲ್ಲ. *

ರಾವಣೇಶ್ವರ! ಸರಿಯಾದ ಗೂಢಚಾರರನ್ನು ನಿಯಮಿಸಿಕೊಳ್ಳದಿರುವ ಚಪಲಚಿತ್ತನಾದ ನೀನು ಮಹೇಂದ್ರ-ವರುಣರಿಗೆ ಸಮಾನನಾದ, ಮಹಾವೀರ್ಯವಂತನಾಗಿಯೂ ಸದ್ಗುಣಗಳಿಂದ ಶ್ರೇಷ್ಠನಾಗಿಯೂ ಇರುವ ರಾಮನ ವಿಷಯವನ್ನು ನಿಶ್ಚಯವಾಗಿಯೂ ತಿಳಿದುಕೊಂಡಿಲ್ಲ.[1]

ಅಪಿ ಸ್ವಸ್ತಿ ಭವೇತ್ತಾತ ಸರ್ವೇಷಾಮಪಿ ರಕ್ಷಸಾಮ್ ।
ಅಪಿ ರಾಮೋ ನ ಸಂಕ್ರುದ್ಧಃ ಕುರ್ಯಾಲ್ಲೋಕಮರಾಕ್ಷಸಮ್ ॥

ಅಪಿ ತೇ ಜೀವಿತಾನ್ತಾಯ ನೋತ್ಪನ್ನಾ ಜನಕಾತ್ಮಜಾ ।
ಅಪಿ ಸೀತಾನಿಮಿತ್ತಂ ಚ ನ ಭವೇದ್ವ್ಯಸನಂ ಮಮ ॥೫॥

ಅಪಿ ತ್ವಾಮೀಶ್ವರಂ ಪ್ರಾಪ್ಯ ಕಾಮವೃತ್ತಂ ನಿರಙ್ಕುಶಮ್ ।
ನ ವಿನಶ್ಯೇತ್ಪುರೀ ಲಙ್ಕಾ ತ್ವಯಾ ಸಹ ಸರಾಕ್ಷಸಾ ॥೬॥

---

*ಈ ಶ್ಲೋಕವು ವಿಶ್ವವ್ಯಾಪಿಯಾಗಿದೆ. ಇದರಲ್ಲಡಗಿರುವ ತತ್ತ್ವವೂ ಸರ್ವಕಾಲಕ್ಕೂ ಸಮನ್ವಯವಾಗುತ್ತದೆ. ಒಬ್ಬನಲ್ಲಿ ಎಷ್ಟೇ ದೋಷಗಳಿದ್ದರೂ ಎಲ್ಲವನ್ನೂ ಮುಚ್ಚಿ, ಅವನಲ್ಲಿರುವ ದೋಷಗಳನ್ನು ಹೊರಗೆಡಹದೇ ಆವನನ್ನು ವಿಶೇಷವಾಗಿ ಹೊಗಳುತ್ತಾ ಅ ಮನುಷ್ಯನಿಂದ ಸಾಧ್ಯವಾದಷ್ಟು ಪ್ರಯೋಜನವನ್ನು ಪಡೆದುಕೊಳ್ಳಲು ಮನುಷ್ಯನು ಸಾಮಾನ್ಯವಾಗಿ ಯಾವಾಗಲೂ ಪ್ರಯತ್ನಿಸುತ್ತಲೇ ಇರುತ್ತಾನೆ.

ಅವನು ತಪ್ಪೇ ಮಾಡಿದ್ದರೂ–'ತಾನು ತಪ್ಪುಮಾಡಿದ್ದೇನೆ. ಅಥವಾ ಮಾಡುತ್ತಿದ್ದೇನೆ'–ಎಂದು ಆವನಿಗೆ ತಿಳಿದಿದ್ದರೂ–ಅವನನ್ನು ಹೊಗಳಲು ಹೊರಟವನು 'ನೀನು ಮಾಡಿದ್ದೇ ಸರಿ. ನೀನು ಹಾಗೆ ಮಾಡದಿದ್ದರೆ ಏನೋ ಆಗಿಬಿಡುತ್ತಿತ್ತು'–ಮುಂತಾಗಿ ಹೇಳುತ್ತಾ ಆವನು ಮಾಡಿದ ಕೆಟ್ಟಕೆಲಸವನ್ನು ಒಳ್ಳೆಯ ಕೆಲಸವೆಂದೇ ಸಾಧಿಸುತ್ತಾನೆ. ಅವನಿಗೆ ಸಮಾಧಾನವನ್ನುಂಟುಮಾಡಿ ಸಾಧ್ಯವಾದಷ್ಟು ಪ್ರಯೋಜನವನ್ನು ಅವನಿಂದ ಪಡೆದುಕೊಳ್ಳುವುದೇ ಹೊಗಳುವವನ ಉದ್ದೇಶವಾಗಿರುತ್ತದೆ. ಇಂತಹವರೇ ಪ್ರಪಂಚದಲ್ಲಿ ಹಲವರಿರುತ್ತಾರೆ. ಆದರೆ ಮಾಡಿದ ತಪ್ಪನ್ನು ತಿದ್ದಲು ಹೊರಟವರು ಪ್ರಯೋಜನ

1 ಅಯುಕ್ತಚಾರಃ–ಸಿಷ್ಣಾತರಾದ ಗೂಢಚಾರರನ್ನು ಇಟ್ಟುಕೊಳ್ಳದೇ ಇರುವವನು.

ರಾವಣ ! ನಿನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡಿರುವ ನಾನು ಹಲವು ರೀತಿಗಳಲ್ಲಿ ಯೋಚಿಸುತ್ತಿದ್ದೇನೆ. ನನ್ನ ಹಿತವಚನದಿಂದ ನಿನ್ನ ಮನಸ್ಸಿನಲ್ಲಿ ಮೂಡಿರುವ ದುರಭಿಪ್ರಾಯವು ದೂರವಾಗಿ ಎಲ್ಲ ರಾಕ್ಷಸರಿಗೂ ಸನ್ಮಂಗಳವುಂಟಾದೀತೇ ? ಕೆಟ್ಟ ಕೆಲಸದಿಂದ ನೀನು ವಿರತನಾಗಿ ರಾಮನು ಕೋಪಗೊಳ್ಳದೇ ಲೋಕವನ್ನು ರಾಕ್ಷಸರಿಂದ ರಹಿತವನ್ನಾಗಿ ಮಾಡದೇ ಇರಬಹುದೇ ? ನಿನ್ನ ಜೀವಿತವನ್ನೇ ಕೊನೆಗಾಣಿಸಲು ಜನಕನ ಮಗಳಾದ ಸೀತೆಯು ಜನ್ಮ ತಾಳಿಲ್ಲ ತಾನೇ ? ಅವಳ ನಿಮಿತ್ತವಾಗಿ ನನಗಾದರೂ ಮಹತ್ತರವಾದ ವ್ಯಸನವು ಪ್ರಾಪ್ತವಾಗದೇ ಇರಬಹುದೇ ? ಕಾಮಚಾರಿಯೂ ನಿರಂಕುಶಪ್ರಭುವೂ ಆಗಿರುವ ನಿನ್ನನ್ನು ರಾಜನನ್ನಾಗಿ ಪಡೆದ ಲಂಕಾಪಟ್ಟಣವು ನಿನ್ನ ಮತ್ತು ರಾಕ್ಷಸರ ಸಮೇತವಾಗಿ ವಿನಾಶವನ್ನು ಹೊಂದುವುದಿಲ್ಲ ತಾನೇ ?

ತ್ವದ್ವಿಧಃ ಕಾಮವೃತ್ತೋ ಹಿ ದುಃಶೀಲಃ ಪಾಪಮಂತ್ರಿತಃ ।
ಆತ್ಮಾನಂ ಸ್ವಜನಂ ರಾಷ್ಟ್ರಂ ಸ ರಾಜಾ ಹಂತಿ ದುರ್ಮತಿಃ ॥೭॥

---

ವನ್ನು ಅಪೇಕ್ಷಿಸುವುದಿಲ್ಲ. ಅಪೇಕ್ಷಿಸುವಂತೆಯೂ ಇಲ್ಲ. ಅವನ ಎದುರಿನಲ್ಲಿ ನಿಂತು 'ನೀನು ಇಂತಹ ತಪ್ಪು ಮಾಡಿರುವೆ' ಎಂದು ಹೇಳಲೂ ಧೈರ್ಯಬೇಕು. ಎಷ್ಟೋ ಸಮಯಗಳಲ್ಲಿ ಇದ್ದುದನ್ನು ಇದ್ದಂತೆ ಹೇಳುವುದರಿಂದ ಅವನ ಕೋಪಕ್ಕೂ ಪಾತ್ರನಾಗಬೇಕಾಗುತ್ತದೆ. ಜನರಿಗೆ ಯಾವಾಗಲೂ ಹೊಗಳಿಕೆಯನ್ನೇ ಕೇಳುವ ಅಪೇಕ್ಷೆಯಿರುತ್ತದೆಯೇ ಹೊರತು, ತೆಗಳಿಕೆಯನ್ನು ಕೇಳಿ, ಅದರಲ್ಲಿಯೂ ಸತ್ಯಾಂಶವಿರುವುದಾದರೆ ತಿದ್ದಿಕೊಳ್ಳಬೇಕೆಂಬ ಅಪೇಕ್ಷೆಯಿರುವುದಿಲ್ಲ. ಆದುದರಿಂದಲೇ ಮಾರೀಚನು ಈ ಶ್ಲೋಕದಲ್ಲಿ ಇದನ್ನು ಸ್ಪಷ್ಟಪಡಿಸಿ ಹೇಳಿದ್ದಾನೆ. ಅಪ್ರಿಯವಾಗಿದ್ದರೂ ಹಿತವಾದುದನ್ನು ಹೇಳುವವರೂ ಇಲ್ಲ. ಕೇಳುವವರೂ ಇಲ್ಲ.

---

ಈ ಆಪಾದನೆಯನ್ನು ಶೂರ್ಪಣಖೆಯೂ ರಾವಣನ ಮೇಲೆ ಹೊರಿಸುತ್ತಾಳೆ. ಮಾರೀಚನೂ ಅದನ್ನೇ ಹೇಳುತ್ತಾನೆ. ಆದರೆ ಇಬ್ಬರ ದೃಷ್ಟಿಕೋನಗಳು ಮಾತ್ರ ಬೇರೆ. ಶೂರ್ಪಣಖೆಯು ರಾಕ್ಷಸರ ನಾಶವಾಗಿದೆಯೆಂಬುದನ್ನು ಗೂಢಚಾರರ ಮೂಲಕ ನೀನು ತಿಳಿದಿಲ್ಲವೆಂದು ಆಪಾದಿಸುತ್ತಾಳೆ. ರಾಮನ ಪರಾಕ್ರಮವೆಷ್ಟೆಂಬುದನ್ನು ಗೂಢಚಾರರ ಮೂಲಕವಾಗಿ ತಿಳಿದಿಲ್ಲವೆಂದು ಮಾರೀಚನು ಆಕ್ಷೇಪಿಸುತ್ತಾನೆ. ಶೂರ್ಪಣಖೆಯ ಉದ್ದೇಶ ರಾವಣನನ್ನು ದುಷ್ಕಾರ್ಯದಲ್ಲಿ ಪ್ರಚೋದಿಸುವುದು ; ಮಾರೀಚನ ಪ್ರಯತ್ನ ರಾವಣನನ್ನು ದುಷ್ಕಾರ್ಯದಿಂದ ಹಿಂದಿರುಗುವಂತೆ ಮಾಡುವುದು. ಇದಕ್ಕಾಗಿಯೇ ಮಾರೀಚನು ಬಹಳವಾಗಿ ಪ್ರಯತ್ನಿಸುತ್ತಾನೆ.

ಕಾಮವೃತ್ತನಾದ, ದುಃಶೀಲನಾದ, ಪಾಪಿಷ್ಠರೊಡನೆ ಸಮಾಲೋಚಿಸುವ, ದುರ್ಮತಿಯಾದ ನಿನ್ನಂತಹ ರಾಜನು–ತನ್ನನ್ನೂ, ತನ್ನ ಜನರನ್ನೂ, ತನ್ನ ದೇಶವನ್ನೂ ವಿನಾಶಕ್ಕೆ ಗುರಿಮಾಡುತ್ತಾನೆ.

ರಾವಣೇಶ್ವರ ! ನೀನು ಹೇಳಿದಂತೆ ರಾಮನು ತಂದೆಯಿಂದ ಪರಿತ್ಯಕ್ತನಾದವನಲ್ಲ. ಯಾವುದೇ ರೀತಿಯಿಂದಲೂ ಲೋಕಮರ್ಯಾದೆಯನ್ನು ಮೀರಿದವನೂ ಅಲ್ಲ. ನೀನು ಭಾವಿಸಿರುವಂತೆ ಅವನು ಲುಬ್ಧನೂ ಅಲ್ಲ ; ದುಃಶೀಲನೂ ಅಲ್ಲ ; ಕ್ಷತ್ರಿಯಕುಲಾಧಮನೂ ಅಲ್ಲ ; ಧರ್ಮದಿಂದಲೂ ಮತ್ತು ಸದ್ಗುಣಗಳಿಂದಲೂ ಹೀನನಾದವನೂ ಅಲ್ಲ. ಕೌಸಲ್ಯಾದೇವಿಗೆ ಆನಂದದಾಯಕನಾದ ಮತ್ತು ಸಕಲಪ್ರಾಣಿಗಳ ಹಿತದಲ್ಲಿಯೇ ಸರ್ವದಾ ನಿರತನಾಗಿರುವ ರಾಮನು ತೀಕ್ಷ್ಣಸ್ವಭಾವದವನೂ ಅಲ್ಲ. ಅವನ ವಿಷಯವನ್ನು ನಾನು ಚೆನ್ನಾಗಿ ಬಲ್ಲೆನು ; ಅದನ್ನೇ ನಿನಗೂ ಹೇಳುವೆನು ; ಕೇಳು.

ಸತ್ಯವಾದಿಯಾದ ತಂದೆಯು ಚಿಕ್ಕತಾಯಿಯಾದ ಕೈಕೇಯಿಯಿಂದ ವಂಚಿತನಾದನೆಂಬುದನ್ನು ಧರ್ಮಾತ್ಮನಾದ ರಾಮನು ತಿಳಿದು–'ತಂದೆಯ ಮಾತನ್ನು ನಡೆಸಿಕೊಡುತ್ತೇನೆ ; ಅವನನ್ನು ಮಿಥ್ಯಾಪ್ರತಿಜ್ಞನನ್ನಾಗಿ ಮಾಡುವುದಿಲ್ಲ'–ಎಂದು ನಿಶ್ಚಯಿಸಿ ಸ್ವೇಚ್ಛೆಯಿಂದಲೇ ಅರಣ್ಯಕ್ಕೆ ಹೊರಟು ಬಂದನು. ಕೈಕೇಯಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿಯೂ ತಂದೆಯನ್ನು ಸತ್ಯಪ್ರತಿಜ್ಞನನ್ನಾಗಿ ಮಾಡುವ ಸಲುವಾಗಿಯೂ ರಾಮನು ರಾಜ್ಯವನ್ನೂ ಭೋಗಗಳನ್ನೂ ಪರಿತ್ಯಜಿಸಿ ದಂಡಕಾರಣ್ಯಕ್ಕೆ ಆಗಮಿಸಿದನು. ನೀನು ಹೇಳಿದಂತೆ ರಾಮನು ಕ್ರೂರಿಯಲ್ಲ. ಮೂರ್ಖನೂ ಅಲ್ಲ. ಇಂದ್ರಿಯಗಳನ್ನು ಸ್ವೇಚ್ಛೆಯಿಂದ ಹರಿಯಬಿಟ್ಟವನೂ ಅಲ್ಲ. ಅವನ ವಿಷಯದಲ್ಲಿ ಸುಳ್ಳನ್ನಾಗಲೀ ಕೆಟ್ಟಮಾತನ್ನಾಗಲೀ ಆಡುವುದು ನಿನಗೆ ಯೋಗ್ಯವಲ್ಲ. ಅವನು ಧರ್ಮದ ಸಾಕಾರಮೂರ್ತಿಯು. ಸತ್ಪುರುಷನು. ಸತ್ಯಪರಾಕ್ರಮಿಯು. ಇಂದ್ರನು ಸರ್ವದೇವತೆಗಳಿಗೂ ರಾಜನಾಗಿರುವಂತೆ–ಅವನು ಎಲ್ಲ ಲೋಕಗಳಿಗೂ ರಾಜನಾಗಿದ್ದಾನೆ. ರಾಮನ ತೇಜೋಬಲಗಳಿಂದಲೇ ಅಭಿರಕ್ಷಿತಳಾದ ಅವನ ಭಾರ್ಯೆಯಾದ ವೈದೇಹಿಯನ್ನು–ಸೂರ್ಯನ ಪ್ರಭೆಯನ್ನು ಅಪಹರಿಸಲು ಇಚ್ಛಿಸುವಂತೆ–ಬಲಾತ್ಕಾರವಾಗಿ ಅಪಹರಿಸಲು ಹೇಗೆ ಇಚ್ಛಿಸುವೆ?

ಸೂರ್ಯನಿಂದ ಪ್ರಭೆಯನ್ನು ಪ್ರತ್ಯೇಕಿಸಿ ಅಪಹರಿಸುವುದು ಹೇಗೆ ಅಸಾಧ್ಯವೋ–ಹಾಗೆಯೇ ವೈದೇಹಿಯನ್ನು ರಾಮನಿಂದ ಪ್ರತ್ಯೇಕಿಸಿ ಅಪಹರಿಸುವುದೂ ಅಸಾಧ್ಯ. ರಾಮನು ಅಗ್ನಿಗೆ ಸಮಾನನು. ರಾಮನೆಂಬ ಅಗ್ನಿಗೆ ಜ್ವಾಲೆಗಳ ರೂಪದಲ್ಲಿ ಬಾಣಗಳಿವೆ. ಧನುಸ್ಸು ಮತ್ತು ಕತ್ತಿಗಳು ರಾಮಾಗ್ನಿಗೆ ಸೌದೆಯಂತಿವೆ. ಎದುರಿಸಲು ಅಸಾಧ್ಯವಾದ ಭುಗ್ಗನೆ ಹೊತ್ತಿಕೊಳ್ಳುವ ಅಂತಹ ರಾಮಾಗ್ನಿಯನ್ನು ಪ್ರವೇಶಿಸುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ. ರಾಮರೂಪನಾದ ಅಂತಕನಿಗೆ ಧನುಸ್ಸೆಂಬುದು ಅಗಲವಾಗಿ ತೆರೆದುಕೊಂಡಿರುವ ಪ್ರದೀಪ್ತವಾದ ಮುಖದ ರೂಪದಲ್ಲಿದೆ. ಬಾಣಗಳೇ ಜ್ವಾಲೆಗಳ ರೂಪದಲ್ಲಿವೆ. ಅವನು ಸ್ವಾಭಾವಿಕವಾಗಿಯೇ ಮಹಾಕೋಪಿಷ್ಠನು. ಧನುರ್ಬಾಣಗಳನ್ನು ಧರಿಸಿರತಕ್ಕವನು. ತೀಕ್ಷ್ಣಸ್ವಭಾವದವನು. ಶತ್ರುಗಳ ಸೈನ್ಯವನ್ನು ಧ್ವಂಸಮಾಡತಕ್ಕವನು. ರಾಜ್ಯವನ್ನೂ, ಸುಖವನ್ನೂ ಮತ್ತು ಬಹಳ ಇಷ್ಟವಾದ ಜೀವಿತವನ್ನೂ ಪರಿತ್ಯಜಿಸಿ ರಾಮನೆಂಬ ಅಂತಕನ ಬಳಿಗೆ ಹೋಗುವುದು ನಿನಗೆ ಉಚಿತವಲ್ಲ.

ಜನಕನ ಮಗಳಾದ ಸೀತೆಯು ಯಾರಿಗೆ ಸೇರಿರುವಳೋ ಆತನದು ಅಪ್ರಮೇಯವಾದ ತೇಜಸ್ಸು. ಶ್ರೀರಾಮನ ಧನುಸ್ಸಿನ ಆಶ್ರಯದಲ್ಲಿರುವ ಸೀತಾದೇವಿಯನ್ನು ಅಪಹರಿಸಲು ನೀನು ಖಂಡಿತವಾಗಿಯೂ ಸಮರ್ಥನಲ್ಲ. ಸಿಂಹದಂತೆ ವಕ್ಷಸ್ಥಳವಿರುವ ನರಶ್ರೇಷ್ಠನಾದ ಶ್ರೀರಾಮನ ಭಾರ್ಯೆಯಾದ, ತೇಜೋವಿಶಿಷ್ಟಳಾದ, ಸರ್ವಕಾಲದಲ್ಲಿಯೂ ಅವನನ್ನೇ ಅನುಸರಿಸಿರುವ ಸೀತೆಯು ರಾಮನಿಗೆ ತನ್ನ ಪ್ರಾಣಗಳಿಗಿಂತಲೂ ಹೆಚ್ಚು ಪ್ರಿಯಳು. ಓಜಸ್ವಿಯಾದ ಶ್ರೀರಾಮನಿಗೆ ಪರಮಪ್ರಿಯಳಾದ ಸುಂದರವಾದ ಕಟಿಯಿಂದ ಕೂಡಿರುವ, ಪ್ರದೀಪ್ತವಾದ ಅಗ್ನಿಯ ಜ್ವಾಲೆಯಂತಿರುವ ಸೀತೆಯನ್ನು ಅವಮಾನಗೊಳಿಸಲು ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ. ರಾಕ್ಷಸಾಧಿಪನೇ ! ವ್ಯರ್ಥವಾದ ಈ ಉದ್ಯೋಗವನ್ನು ಕೈಗೊಂಡು ನೀನು ಏನನ್ನು ಸಾಧಿಸಬೇಕೆಂದಿರುವೆ? ಯುದ್ಧದಲ್ಲಿ ನೀನೇನಾದರೂ ಅವನನ್ನು ನೋಡಿದೆಯಾದರೆ ನಿನ್ನ ಜೀವಿತವು ಅಲ್ಲಿಗೇ ಕೊನೆಗೊಳ್ಳುತ್ತದೆ. ಜೀವಿತ, ಸುಖ, ರಾಜ್ಯ–ಇವೆಲ್ಲವೂ ಸುಲಭವಾಗಿ ಸಿಕ್ಕತಕ್ಕುವುಗಳಲ್ಲ. ನಿನಗೆ ಲಭಿಸಿರುವ ರಾಜ್ಯಸುಖಾದಿಗಳನ್ನು ಇನ್ನೂ ಬಹಳ ಕಾಲ ಅನುಭವಿಸಬೇಕೆಂಬ ಆಶಯ

ವಿರುವುದಾದರೆ–ರಾಮನಿಗೆ ಅಪರಾಧವನ್ನೆಸಗಲು ಹೋಗಬೇಡ. ಧರ್ಮಿಷ್ಠ ರಾದ ವಿಭೀಷಣನೇ ಮೊದಲಾದ ಬಂಧುಗಳೊಡನೆಯೂ ಮಂತ್ರಿಗಳೊಡನೆಯೂ ಈ ವಿಷಯವಾಗಿ ಸಮಾಲೋಚಿಸು. ಸೀತಾಪಹರಣದಲ್ಲಿರುವ ದೋಷವೇನು ? ಗುಣವೇನು ? ಶತ್ರುವಿಗೂ ನಮಗೂ ಇರುವ ಬಲಾಬಲಗಳೇನು ? ನಮ್ಮ ಬಲವೆಷ್ಟಿದೆ ? ರಾಮನ ಬಲವೆಷ್ಟಿದೆ ? ಸೀತೆಯ ಅಪಹರಣದಿಂದ ನಮಗೇನಾದರೂ ವಿಶೇಷವಾದ ಹಿತವುಂಟೇ ?–ಈ ಎಲ್ಲ ವಿಷಯಗಳನ್ನೂ ಕೂಲಂಕಷವಾಗಿ ಸಮಾಲೋಚಿಸಿ ನಿನಗೆ ಯಾವುದರಿಂದ ಹಿತವಾಗುವುದೆಂಬುದನ್ನು ನಿಶ್ಚಯಿಸಿ ಕಾರ್ಯಮಾಡುವುದು ಉಚಿತವಾಗಿದೆ. ಕೋಸಲರಾಜಕುಮಾರನಾದ ಶ್ರೀರಾಮನೊಡನೆ ಯುದ್ಧಮಾಡುವುದು ನಿನಗೆ ಉಚಿತವಲ್ಲವೆಂದೇ ನನ್ನ ಅಭಿಮತವಾಗಿದೆ. ಹಿತಕರವೂ – ಯುಕ್ತವೂ ಆಗಿರುವ ಉತ್ತಮೋತ್ತಮವಾದ ಮಾತನ್ನು ಪುನಃ ಹೇಳುವೆನು ; ಕೇಳು."

ಇ೦ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೩೮ನೆಯ ಸರ್ಗ

### ರಾಮನಲ್ಲಿರುವ ಶಕ್ತಿಯ ವಿಷಯವಾಗಿ ಮಾರೀಚನು ತನ್ನ ಅನುಭವವನ್ನು ತಿಳಿಸುತ್ತಾ ರಾಮನ ವಿಷಯದಲ್ಲಿ ಅಪರಾಧವನ್ನೆಸಗದಿರುವಂತೆ ರಾವಣನಿಗೆ ಹೇಳಿದುದು

ಕದಾಚಿದಪ್ಯಹಂ ವೀರ್ಯಾತ್ಪರ್ಯಟನ್ಪೃಥಿವೀಮಿಮಾಮ್ ।
ಬಲಂ ನಾಗಸಹಸ್ರಸ್ಯ ಧಾರಯನ್ಪರ್ವತೋಪಮಃ ॥೧॥

ನೀಲಜೀಮೂತಸಂಕಾಶಸ್ತಪ್ತಕಾಞ್ಚನಕುಣ್ಡಲಃ ।
ಭಯಂ ಲೋಕಸ್ಯ ಜನಯನ್ಕಿರೀಟೀ ಪರಿಘಾಯುಧಃ ।
ವ್ಯಚರಂ ದಣ್ಡಕಾರಣ್ಯೇ ಋಷಿಮಾಂಸಾನಿ ಭಕ್ಷಯನ್ ॥೨॥

"ರಾವಣೇಶ್ವರ ! ಹಿಂದೆ ಒಂದು ಸಮಯದಲ್ಲಿ ಸಾವಿರ ಆನೆಗಳ ಬಲವನ್ನು ಹೊಂದಿದ್ದ, ಪರ್ವತೋಪಮನಾಗಿದ್ದ, ಕಾಲಮೇಘದಂತೆ ಕಪ್ಪಾಗಿದ್ದ ನಾನು–ಕಿವಿಗಳಲ್ಲಿ ಪುಟಕ್ಕೆ ಹಾಕಿದ ಚಿನ್ನದ ಕುಂಡಲಗಳನ್ನೂ, ತಲೆಯಲ್ಲಿ ಕಿರೀಟವನ್ನೂ ಧರಿಸಿ, ಪರಿಘಾಯುಧವನ್ನು ಹಿಡಿದು ವೀರ್ಯೋತ್ಸಾಹದಿಂದ ಎಲ್ಲೆಡೆಗಳಲ್ಲಿಯೂ ಸಂಚರಿಸುತ್ತಾ ಜನರನ್ನು ಭಯಪಡಿಸುತ್ತಾ, ದಂಡಕಾ

ರಣ್ಯದಲ್ಲಿದ್ದ ಋಷಿಗಳನ್ನು ಕೊಂದು ಅವರ ಮಾಂಸವನ್ನು ಭಕ್ಷಿಸುತ್ತಾ ಸಂಚರಿಸುತ್ತಿದ್ದೆನು.

ಆ ಸಮಯದಲ್ಲಿ ಮಹಾಮುನಿಯಾದ ಧರ್ಮಾತ್ಮರಾದ ವಿಶ್ವಾಮಿತ್ರರು ನನಗೆ ಭಯಪಟ್ಟು ನರೇಂದ್ರನಾದ ದಶರಥನ ಬಳಿಗೆ ತಾವೇ ಹೋಗಿ ಹೇಳಿದರು :

ಅಯ್ಯ ರಕ್ಷತು ಮಾಂ ರಾಮಃ ಪರ್ವಕಾಲೇ ಸಮಾಹಿತಃ ।
ಮಾರೀಚಾನ್ಮೇ ಭಯಂ ಘೋರಂ ಸಮುತ್ಪನ್ನಂ ನರೇಶ್ವರ ॥೪॥

“ ಮಹಾರಾಜ ! ಮಾರೀಚನೆಂಬ ರಾಕ್ಷಸನಿಂದ ನನಗೆ ಘೋರವಾದ ಭಯವುಂಟಾಗಿದೆ. ಆದುದರಿಂದ ಪರ್ವಕಾಲದಲ್ಲಿ ಈ ರಾಮನು ನನ್ನನ್ನು ಮಾರೀಚನಿಂದ ರಕ್ಷಿಸಲಿ. ”

ವಿಶ್ವಾಮಿತ್ರರು ಧರ್ಮಾತ್ಮನಾದ ದಶರಥನಿಗೆ ಹೀಗೆ ಹೇಳಲು ರಾಜನು ಮಹಾಭಾಗರಾದ ಮಹಾಮುನಿಗಳಾದ ವಿಶ್ವಾಮಿತ್ರರಿಗೆ ಹೇಳಿದನು :

“ ಮಹಾಮುನಿಗಳೇ ! ನಮ್ಮ ರಾಮನಿನ್ನೂ ಹನ್ನೆರಡು ವರ್ಷಗಳ ಬಾಲಕನು. ಅಸ್ತ್ರವಿದ್ಯೆಯನ್ನೂ ಪೂರ್ಣವಾಗಿ ಕಲಿತಿಲ್ಲ. ಆದುದರಿಂದ ಮಾರೀಚನ ಉಪಟಳವನ್ನು ತಪ್ಪಿಸಲು ಸೈನ್ಯದೊಡನೆ ನಾನೇ ಬರುತ್ತೇನೆ. ಚತುರಂಗಬಲಸಮೇತನಾಗಿ ನಾನೇ ಬಂದು ನಿಮ್ಮ ಅಪೇಕ್ಷೆಯಂತೆ ನಿಮ್ಮ ಶತ್ರುಗಳಾದ ರಾಕ್ಷಸರನ್ನು ಸಂಹರಿಸುತ್ತೇನೆ.”

ದಶರಥನು ವಿಶ್ವಾಮಿತ್ರರಿಗೆ ಹೀಗೆ ಹೇಳಲು ವಿಶ್ವಾಮಿತ್ರರು ಸ್ಪಷ್ಟವಾಗಿ ಹೇಳಿದರು :

“ ಮಹಾರಾಜ ! ದೇವ-ದಾನವರಿಗೆ ಯುದ್ಧ ನಡೆದಾಗ ನೀನು ದೇವತೆಗಳ ಸಹಾಯಕ್ಕಾಗಿ ಹೋಗಿದ್ದೆ. ನಿನ್ನ ಆ ಸಾಹಸವು ತ್ರಿಲೋಕಪ್ರಸಿದ್ಧವಾಗಿದೆ. ಆದರೆ ರಾಮನ ಹೊರತಾಗಿ ಬೇರೆ ಯಾರ ಬಲವೂ ಆ ರಾಕ್ಷಸನ ಬಲಕ್ಕೆ ಸಾಟಿಯಾಗುವುದಿಲ್ಲ. ಆದುದರಿಂದ ನಿನ್ನ ಈ ಮಹಾಸೈನ್ಯವು ಇಲ್ಲಿಯೇ ಇರಲಿ. ಮಹಾತೇಜಸ್ವಿಯಾಗಿರುವ ರಾಮನು ಬಾಲಕನೇ ಆಗಿದ್ದರೂ ಆ ರಾಕ್ಷಸನನ್ನು ನಿಗ್ರಹಿಸುವುದರಲ್ಲಿ ಸಮರ್ಥನಾಗಿದ್ದಾನೆ. ಆದುದರಿಂದ ನಾನು ಈ ರಾಮನೊಬ್ಬನನ್ನೇ ಕರೆದುಕೊಂಡು ಹೋಗುತ್ತೇನೆ. ನಿನಗೆ

ಮಂಗಳವಾಗಲಿ." ವಿಶ್ವಾಮಿತ್ರರು ಹೀಗೆ ಹೇಳಿ ದಶರಥನನ್ನು ಸಮಾಧಾನಗೊಳಿಸಿ ರಾಮನನ್ನು ಕರೆದುಕೊಂಡು ಹೆಚ್ಚು ಸಂತೋಷದಿಂದ ತಮ್ಮ ಆಶ್ರಮಕ್ಕೆ ತೆರಳಿದರು.

ದಂಡಕಾರಣ್ಯದಲ್ಲಿ ಯಜ್ಞಮಾಡುವ ಸಲುವಾಗಿ ದೀಕ್ಷೆಯನ್ನು ಕೈಗೊಂಡಿದ್ದ ವಿಶ್ವಾಮಿತ್ರರನ್ನು ಸಂರಕ್ಷಿಸಲು ಶ್ರೀರಾಮನು ಚಿತ್ರಿತವಾದ ಧನುಸ್ಸನ್ನು ಟೇಂಕರಿಸುತ್ತಾ ನಿಂತಿದ್ದನು. ಆ ಸಮಯದಲ್ಲಿ ರಾಮನಿಗೆ ಗಡ್ಡ-ಮೀಸೆಗಳೂ ಹುಟ್ಟಿರಲಿಲ್ಲ. ಇನ್ನೂ ಬಾಲಕನಾಗಿದ್ದ ಅವನು ಬಾಲಭಾವದ ಕಾಂತಿಯಿಂದ ಕಂಗೊಳಿಸುತ್ತಿದ್ದನು. ಶ್ಯಾಮಲವರ್ಣದವನಾಗಿದ್ದನು. ಮಂಗಳಕರವಾದ ಕಣ್ಣುಗಳಿಂದ ಕೂಡಿದ್ದನು. ಒಂದೇ ವಸ್ತ್ರವನ್ನುಟ್ಟಿದ್ದನು. ಧನುಸ್ಸನ್ನು ಹಿಡಿದಿದ್ದನು. ಶಿಖೆಯನ್ನು ಹೊಂದಿದ್ದನು. ತನ್ನ ತೇಜಸ್ಸಿನಿಂದಲೂ ಮತ್ತು ಧರಿಸಿದ್ದ ಸುವರ್ಣಮಾಲೆಯಿಂದಲೂ ದಂಡಕಾರಣ್ಯವನ್ನೇ ಬೆಳಗುತ್ತಿದ್ದನು. ಆಗ ತಾನೇ ಉದಯಿಸಿದ ಬಾಲಚಂದ್ರನಂತೆಯೇ ಪ್ರಕಾಶಿಸುತ್ತಿದ್ದನು. ಆ ಸಮಯದಲ್ಲಿ ಮೇಘಸದೃಶನಾಗಿದ್ದ, ಪುಟಕ್ಕೆ ಹಾಕಿದ ಚಿನ್ನದ ಕುಂಡಲಗಳನ್ನು ಧರಿಸಿದ್ದ, ಬಲಿಷ್ಠನಾಗಿದ್ದ, ಅನೇಕ ವರಗಳನ್ನು ಪಡೆದುಕೊಂಡಿದ್ದ ನಾನು ದರ್ಪದಿಂದಲೇ ಯಜ್ಞವನ್ನು ಹಾಳುಮಾಡುವ ಉದ್ದೇಶದಿಂದ ವಿಶ್ವಾಮಿತ್ರರ ಆಶ್ರಮಕ್ಕೆ ಹೋದೆನು. ಆಯುಧವನ್ನೆತ್ತಿಕೊಂಡು ಆಶ್ರಮಪ್ರದೇಶಕ್ಕೆ ಪ್ರವೇಶಿಸಿದ ಭಯಂಕರಾಕಾರನಾಗಿದ್ದ ನನ್ನನ್ನು ನೋಡಿ ರಾಮನು ಸ್ವಲ್ಪವೂ ಗಾಬರಿಗೊಳ್ಳದೇ ಧನುಸ್ಸಿಗೆ ಹೆದೆಯೇರಿಸಿದನು. ಮೋಹವಶದಿಂದ ನಾನು–' ಇವನಿನ್ನೂ ಬಾಲಕನು ; ನನ್ನನ್ನೇನು ಮಾಡಿಯಾನು ? '–ಎಂಬ ತಿರಸ್ಕಾರದಿಂದಲೇ ಯಜ್ಞವೇದಿಯ ಕಡೆಗೆ ಅವಸರದಿಂದ ನುಗ್ಗಿದೆನು. ಆ ಸಮಯದಲ್ಲಿ ರಾಮನು ಶತ್ರುಗಳನ್ನು ಕೊಲ್ಲುವಂತಹ ಒಂದು ನಿಶಿತವಾದ ಬಾಣವನ್ನು ನನ್ನ ಮೇಲೆ ಪ್ರಯೋಗಿಸಿದನು. ಅದರಿಂದ ಪ್ರಹೃತನಾದ ನಾನು ನೂರು ಯೋಜನಗಳಷ್ಟು ದೂರವಿದ್ದ ಸಮುದ್ರದಲ್ಲಿ ಬಿದ್ದೆನು. ಆಗ ರಾಮನು ನನ್ನನ್ನು ಸಂಹರಿಸಲಿಲ್ಲವಾದ್ದರಿಂದ ನಾನು ರಕ್ಷಿತನಾದೆನು. ರಾಮನ ಬಾಣದ ವೇಗದಿಂದಾಗಿ ನಾನು ದೂರಕ್ಕೆ ಎಸೆಯಲ್ಪಟ್ಟು ಸಮುದ್ರದಲ್ಲಿ ಪ್ರಜ್ಞಾಹೀನನಾಗಿ ಬಿದ್ದೆನು. ಹಾಗೆ ಬಿದ್ದ ನಾನು ಬಹಳ ಕಾಲಾನಂತರ ಸಂಜ್ಞೆಯನ್ನು ಪಡೆದು ಲಂಕಾಪಟ್ಟಣಕ್ಕೆ ಬಂದೆನು. ಹೀಗೆ

ನಾನು ರಾಮನಿಂದ ಮುಕ್ತನಾದೆನು. ಆದರೆ ನನ್ನ ಸಂಹಾಯಕ್ಕೆ ಬಂದಿದ್ದ ರಾಕ್ಷಸರೆಲ್ಲರೂ ಇನ್ನೂ ಅಸ್ತ್ರವಿದ್ಯೆಯನ್ನೇ ಪೂರ್ಣವಾಗಿ ತಿಳಿಯದಿದ್ದ, ಅನಾಯಾಸವಾಗಿ ಕಾರ್ಯಮಾಡುತ್ತಿದ್ದ ಬಾಲಕನಾದ ರಾಮನಿಂದ ಹತ ರಾದರು. ನನ್ನಿಂದ ನಿರೋಧಿಸಲ್ಪಟ್ಟರೂ ನೀನು ರಾಮನೊಡನೆ ದ್ವೇಷ ವನ್ನೇ ಕಟ್ಟಿಕೊಳ್ಳುವೆಯಾದರೆ ಮಹಾಘೋರವಾದ ಆಪತ್ತಿಗೆ ಒಳಗಾಗುವೆ. ವಿಲಾಸ-ಭೋಗಗಳ ವಿಧಾನಗಳನ್ನು ಚೆನ್ನಾಗಿ ತಿಳಿದಿರುವ, ರಾಕ್ಷಸರ ಸಮಾಜ ದಲ್ಲಿ ನಡೆಯುವ ಉತ್ಸವಾದಿಗಳಿಂದ ಆನಂದವನ್ನು ಅನುಭವಿಸುತ್ತಿರುವ ರಾಕ್ಷಸರಿಗೆ ಸಂತಾಪವನ್ನೂ ಅನರ್ಥವನ್ನೂ ಉಂಟುಮಾಡುವೆ. ಸೌಧ ಗಳಿಂದಲೂ, ದೇವತಾಮಂದಿರಗಳಿಂದಲೂ ನಿಬಿಡವಾಗಿರುವ-ನಾನಾರತ್ನ ಗಳಿಂದ ವಿಭೂಷಿತವಾಗಿರುವ ಲಂಕಾಪಟ್ಟಣವು ಸೀತಾದೇವಿಯ ನಿಮಿತ್ತ ದಿಂದಾಗಿ ಹಾಳಾಗುವುದನ್ನು ನೀನು ಕಾಣುವೆ.

ಅಕುರ್ವನ್ತೋಽಪಿ ಪಾಪಾನಿ ಶುಚಯಃ ಪಾಪಸಂಶ್ರಯಾತ್ ।
ಪರಪಾಪೈರ್ವಿನಶ್ಯನ್ತಿ ಮತ್ಸ್ಯಾ ನಾಗಹ್ರದೇ ಯಥಾ ॥೨೬॥

ಹಾವಿನಿಂದ ತುಂಬಿರುವ ಮಡುವಿನಲ್ಲಿರುವ ಮೀನುಗಳೂ ವಿನಾಶ ಹೊಂದುವಂತೆ-ಪಾಪಮಾಡದಿರುವ ಶುದ್ಧಾತ್ಮರೂ ಪಾಪಿಷ್ಠರ ಜೊತೆಯಲ್ಲಿರು ವುದರಿಂದ ವಿನಾಶಹೊಂದುತ್ತಾರೆ. *

ದಿವ್ಯವಾದ ಚಂದನದಿಂದ ಪೂಸಲ್ಪಟ್ಟ ಅಂಗವುಳ್ಳ, ದಿವ್ಯವಾದ ಆಭರಣ

---

*ಪಾಪಿಷ್ಠನಾದ ರಾವಣನೊಬ್ಬನ ಕಾರಣದಿಂದ ಅವನೊಡನಾಡಿಗಳು ಧರ್ಮಾತ್ಮರೇ ಆಗಿದ್ದರೂ ಪಾಪಿಷ್ಠನ ಸಹವಾಸದಿಂದಾಗಿ ಮತ್ತು ಅವನ ಪಾಪದ ಕಾರಣದಿಂದಾಗಿ ವಿನಾಶ ಹೊಂದುತ್ತಾರೆ-ಎಂಬುದು ಮಾರೀಚನ ಈ ಮಾತಿನ ಅಭಿಪ್ರಾಯವಾಗಿದೆ. ಇದಕ್ಕೆ ಕೊಟ್ಟಿರುವ ಉಪಮಾನವೂ ಸಹ ಹೃದಯಂಗಮವಾಗಿದೆ. ಒಂದು ಕೊಳದಲ್ಲಿ ನೂರಾರು ಸರ್ಪಗಳಿರುತ್ತವೆ. ಸರ್ಪಗಳನ್ನು ಕೊಂದು ತಿನ್ನುವ ಆಶಯದಿಂದ ಗರುಡಪಕ್ಷಿಗಳು ಸರ್ಪಗಳಿಂದ ನಿಬಿಡವಾದ ಕೊಳಕ್ಕೆ ಬರುತ್ತವೆ. ಹಾಗೆ ಬಂದ ಗರುಡಪಕ್ಷಿಗಳು ಸರ್ಪ ಗಳನ್ನು ಮಾತ್ರವೇ ತಿಂದು ತೃಪ್ತನಾಗುವುದಿಲ್ಲ. ಸರ್ಪಗಳ ಜೊತೆಯಲ್ಲಿ ಮೀನುಗಳನ್ನೂ ತಿಂದುಬಿಡುತ್ತವೆ. ಮೀನುಗಳು ಗರುಡಪಕ್ಷಿಗೆ ಶತ್ರುಗಳಲ್ಲದಿದ್ದರೂ ಗರುಡಪಕ್ಷಿಗೆ ಶತ್ರು ಗಳಾದ ಸರ್ಪಗಳೊಡನೆ ಸೇರಿಕೊಂಡಿರುವುದರಿಂದ ಅವೂ ವಿನಾಶಹೊಂದುತ್ತವೆ. ಹಾಗೆಯೇ ಪಾಪಾತ್ಮರ ಜೊತೆಯಲ್ಲಿರುವ ಪಾಪಮಾಡದವರಿಗೂ ವಿನಾಶವು ನಿಶ್ಚಿತ.

ಗಳಿಂದ ಅಲಂಕೃತರಾದ ರಾಕ್ಷಸರು ನಿನ್ನೊಬ್ಬನ ಪಾಪದ ಕಾರಣದಿಂದಾಗಿ ಹತರಾಗಿ ಭೂಮಿಯಲ್ಲಿ ಬೀಳುವುದನ್ನು ನೀನೇ ನೋಡಲಿರುವೆ. ಯುದ್ಧದಲ್ಲಿ ಅಳಿದುಳಿದ ರಾಕ್ಷಸರಲ್ಲಿ ಕೆಲವರು ತಮ್ಮ ಪತ್ನಿಯರನ್ನು ಕಳೆದುಕೊಂಡು ಮತ್ತೆ ಕೆಲವರು ಪತ್ನಿಯರೊಡನೆ ಹತ್ತು ದಿಕ್ಕುಗಳಲ್ಲಿಯೂ ಅನಾಥರಂತೆ ಓಡಿಹೋಗುವುದನ್ನು ನೀನು ಕಾಣುವೆ. ಲಂಕಾಪಟ್ಟಣದ ಭವನಗಳು ಬಾಣ ಗಳ ಸಮೂಹಗಳಿಂದ ವ್ಯಾಪ್ತವಾಗಿ ಅಗ್ನಿಯ ಜ್ವಾಲೆಗಳಿಂದ ಸಮಾವೃತ ವಾಗಿ ಭಸ್ಮವಾಗಿ ಹೋಗುವುದನ್ನು ನೀನು ನಿಸ್ಸಂದೇಹವಾಗಿ ಕಾಣುವೆ.

'ಪರದಾರಾಭಿಮರ್ಶಾತ್ತು ನಾನ್ಯತ್ಪಾಪತರಂ ಮಹತ್' ಪರ ಪತ್ನಿಯರ ಸ್ಪರ್ಶವೆಂಬ ಪಾಪಕ್ಕಿಂತಲೂ ಮಹತ್ತರವಾದ ಪಾಪವು ಬೇರೆ ಯಾವುದೂ ಇಲ್ಲ. ನಿನ್ನ ಅಂತಃಪುರದಲ್ಲಿ ಸಾವಿರಾರು ಪ್ರಮದೆಯರಿದ್ದಾರೆ. ಆದುದರಿಂದ ನೀನು ನಿನ್ನ ಪತ್ನಿಯರಲ್ಲಿಯೇ ನಿರತನಾಗಿರು. ಹೀಗಿದ್ದು ಕೊಂಡು ನಿನ್ನ ಕುಲವನ್ನೂ, ಅಭಿಮಾನವನ್ನೂ, ಐಶ್ವರ್ಯವನ್ನೂ, ರಾಜ್ಯ ವನ್ನೂ ಮತ್ತು ಎಲ್ಲಕ್ಕಿಂತಲೂ ಮಿಗಿಲಾದ ನಿನ್ನ ಪ್ರಾಣಗಳನ್ನೂ ರಕ್ಷಿಸಿಕೊ. ಸೌಮ್ಯರಾದ ಪತ್ನಿಯರೊಡನೆ ಮತ್ತು ಮಿತ್ರವರ್ಗದವರೊಡನೆ ನೀನು ಇನ್ನೂ ಬಹಳ ಕಾಲದವರೆಗೆ ಸುಖೋಪಭೋಗಗಳನ್ನು ಅನುಭವಿಸುವ ಇಚ್ಛೆ ಯುಳ್ಳವನಾಗಿದ್ದರೆ–ರಾಮನಿಗೆ ಅಪ್ರಿಯವಾಗುವಂತಹ ಕಾರ್ಯವನ್ನು ಮಾಡಲು ಹೋಗಬೇಡ.

ರಾವಣೇಶ್ವರ! ನಿನ್ನ ಆಪ್ತಮಿತ್ರನಾದ ನಾನು ಸೀತೆಯನ್ನು ಅಪಹರಿಸ ಬೇಡವೆಂದು ಬಾರಿ-ಬಾರಿಗೂ ತಡೆಯುತ್ತಿದ್ದರೂ ನೀನು ನನ್ನ ಮಾತನ್ನು ನಿರ್ಲಕ್ಷಿಸಿ ಅವಳನ್ನು ಬಲಾತ್ಕಾರಪೂರ್ವಕವಾಗಿ ಅಪಹರಿಸಿದ್ದೇ ಆದರೆ– ಕ್ಷೀಣಬಲನಾಗುವ ನೀನು ರಾಮನ ಬಾಣಗಳಿಂದ ಪ್ರಾಣಕಳೆದುಕೊಂಡು ಬಂಧುಗಳೊಡನೆ ಯಮಾಲಯಕ್ಕೆ ಹೋಗುವೆ."

ಇಲನೆಯ ಸರ್ಗವು ಮುಗಿಯಿತು.

## ಮಾರೀಚನು ಪುನಃ ರಾವಣನನ್ನು ಸಮಾಧಾನಗೊಳಿಸಲು ಯತ್ನಿಸಿದುದು

ಏವಮಸ್ಮಿ ತದಾ ಮುಕ್ತಃ ಕಥಂಚಿತ್ತೇನ ಸಂಯುಗೇ ।
ಇದಾನೀಮಪಿ ಯದ್ವೃತ್ತಂ ತಚ್ಛೃಣುಷ್ವ ನಿರುತ್ತರಮ್ ॥೧॥

"ರಾಕ್ಷಸೇಶ್ವರ! ಹಿಂದೆ ಬಾಲರಾಮನು ನನ್ನನ್ನು ಬಾಣಗಳ ಮೂಲಕ ಸಮುದ್ರಕ್ಕೆಸೆದನಾದ್ದರಿಂದ ಹೇಗೋ ನಾನು ಆ ಸಮಯದಲ್ಲಿ ಬದುಕಿಕೊಂಡೆನು. ಇತ್ತೀಚಿಗೆ ನಡೆದ ಒಂದು ವೃತ್ತಾಂತವನ್ನು ಹೇಳುವೆನು; ಮಧ್ಯೆ ಮಾತನಾಡದೇ ಕೇಳು:

ರಾಮನು ಒಂದೇ ಬಾಣದಿಂದ ನನ್ನನ್ನು ಸಮುದ್ರದಲ್ಲಿ ಎಸೆದುದಕ್ಕಾಗಿ ನಾನು ಧೈರ್ಯಗೆಡಲಿಲ್ಲ. ಇತ್ತೀಚಿಗೆ ಮೃಗರೂಪವನ್ನು ಧರಿಸಿದ್ದ ಇಬ್ಬರು ರಾಕ್ಷಸರೊಡನೆ ನಾನೂ ಅದೇ ರೂಪವನ್ನು ಧರಿಸಿ ದಂಡಕಾರಣ್ಯಕ್ಕೆ ಹೋಗಿದ್ದೆನು. ಆಗ ನಾನು ಪ್ರದೀಪ್ತವಾದ ನಾಲಿಗೆಯುಳ್ಳವನಾಗಿದ್ದೆನು. ಮಹಾಕಾಯನಾಗಿದ್ದೆನು. ನನಗೆ ತೀಕ್ಷ್ಣವಾದ ಕೋರೆದಾಡೆಗಳಿದ್ದುವು. ಮಹಾಬಲಿಷ್ಠನಾಗಿದ್ದೆನು. ನಾನೊಂದು ದೊಡ್ಡದಾದ ಮೃಗರೂಪನಾಗಿ ಸಿಕ್ಕಿದ ಪ್ರಾಣಿಗಳ ಮಾಂಸವನ್ನು ಭಕ್ಷಿಸುತ್ತಾ ದಂಡಕಾರಣ್ಯದಲ್ಲಿ ಸಂಚರಿಸುತ್ತಿದ್ದೆನು. ಅತ್ಯಂತಘೋರಾಕಾರನಾಗಿದ್ದ ನಾನು ಅಗ್ನಿಹೋತ್ರಗಳು ನಡೆಯುತ್ತಿದ್ದ ಸ್ಥಳಗಳಲ್ಲಿಯೂ, ತೀರ್ಥಕ್ಷೇತ್ರಗಳಲ್ಲಿಯೂ, ಅರಳೀಮರಗಳ ಸಮೀಪದಲ್ಲಿಯೂ ಇರುತ್ತಿದ್ದ ತಪಸ್ವಿಗಳನ್ನು ಭಯಪಡಿಸುತ್ತಾ ಸ್ವೇಚ್ಛೆಯಿಂದ ತಿರುಗಾಡುತ್ತಿದ್ದೆನು. ಧರ್ಮಿಷ್ಠರಾದ ಋಷಿಗಳನ್ನು ಸಂಹರಿಸುತ್ತಾ, ಅವರ ರಕ್ತವನ್ನು ಕುಡಿದು ಮಾಂಸವನ್ನು ತಿನ್ನುತ್ತಾ, ಅರಣ್ಯದಲ್ಲಿದ್ದ ಇತರ ಪ್ರಾಣಿಗಳನ್ನೂ ಭಯಪಡಿಸುತ್ತಾ, ರಕ್ತಪಾನದಿಂದ ಮತ್ತನಾಗಿ ಯಾವ ವಿಧವಾದ ಭಯವೂ ಇಲ್ಲದೇ ದಂಡಕಾರಣ್ಯದಲ್ಲೇ ಸುತ್ತಾಡುತ್ತಿದ್ದೆನು. ಧರ್ಮದೂಷಕನಾಗಿದ್ದ ನಾನು ದಂಡಕಾರಣ್ಯದಲ್ಲಿ ಹೀಗೆ ತಿರುಗಾಡುತ್ತಿದ್ದಾಗ ಧರ್ಮಚಾರಿಯಾದ, ತಾಪಸವೇಷವನ್ನು ಧರಿಸಿದ್ದ ರಾಮನನ್ನೂ, ಸೀತಾದೇವಿಯನ್ನೂ, ಮಹಾರಥನಾದ ಲಕ್ಷ್ಮಣನನ್ನೂ ಸಂಧಿಸಿದೆನು.

ತಾಪಸನಾಗಿದ್ದ, ನಿಯತವಾದ ಆಹಾರವುಳ್ಳವನಾಗಿದ್ದ, ಸರ್ವಪ್ರಾಣಿಗಳ ಹಿತದಲ್ಲಿಯೇ ನಿರತನಾಗಿದ್ದ, ಅರಣ್ಯಕ್ಕೆ ಆಗಮಿಸಿದ್ದ ರಾಮನನ್ನು ಮಹಾಬಲಿಷ್ಠನೆಂದು ತಿಳಿದಿದ್ದರೂ-ತಾಪಸವೇಷವನ್ನು ಧರಿಸಿದ್ದುದರಿಂದ ಅನಾದರಣೆ ಮಾಡಿದೆನು. ಹಿಂದಿನ ವೈರವನ್ನು ಸ್ಮರಿಸಿಕೊಂಡು ಪ್ರತೀಕಾರ ಮಾಡಲು ಈಗ ಸಕಾಲವಾಗಿರುವುದೆಂದು ಭಾವಿಸಿ ತೀಕ್ಷ್ಣವಾದ ಕೊಂಬುಗಳಿಂದ ಕೂಡಿದ್ದ ಮೃಗದ ರೂಪವನ್ನು ಧರಿಸಿ ಕ್ರುದ್ಧನಾಗಿ ಹೆಚ್ಚು ವಿಚಾರ ಮಾಡಲು ಹೋಗದೇ ಹಿಂದಿನ ಪ್ರಹಾರವನ್ನೂ ನೆನೆಯುತ್ತಾ ಅವನನ್ನು ಪ್ರಹರಿಸುವ ಆಶಯದಿಂದ ಮುನ್ನುಗ್ಗಿದೆನು. ಆ ಸಮಯದಲ್ಲಿ ರಾಮನು ತನ್ನ ಮೇಲೆ ಬೀಳುತ್ತಿದ್ದ ನನ್ನನ್ನು ತಡೆಯಲು ಧನುಸ್ಸನ್ನು ದೀರ್ಘವಾಗಿ ಸೆಳೆದು ಗರುಡ-ವಾಯುಗಳ ವೇಗದಿಂದ ಕೂಡಿದ್ದ ಮೂರು ಬಾಣಗಳನ್ನು ನನ್ನ ಮೇಲೆ ಪ್ರಯೋಗಿಸಿದನು. ವಜ್ರಾಯುಧಸದೃಶವಾಗಿದ್ದ, ಅತ್ಯಂತ ಘೋರವಾಗಿದ್ದ, ರಕ್ತಪಾಯಿಗಳಾದ, ಬಗ್ಗಿದ ಗಿಣ್ಣುಗಳಿದ್ದ ಆ ಮೂರು ಬಾಣಗಳೂ ರಭಸದಿಂದ ನನ್ನ ಕಡೆಗೆ ಬರುತ್ತಿದ್ದುವು. ಕಪಟವೇಷವನ್ನು ಧರಿಸಿದ್ದ ನಾನು ರಾಮನ ಪರಾಕ್ರಮವೆಷ್ಟೆಂಬುದನ್ನು ತಿಳಿದಿದ್ದೆನು. ಅವನು ಶತ್ರುಭಯಂಕರನೆಂಬುದನ್ನು ಪ್ರತ್ಯಕ್ಷವಾಗಿಯೂ ನೋಡಿದ್ದೆನು. ಅವನ ಬಾಣಗಳಿಂದ ತಪ್ಪಿಸಿಕೊಂಡು ಓಡಿದೆನಾದಕಾರಣ ಎರಡನೆಯ ಬಾರಿಯೂ ನಾನು ಮುಕ್ತನಾದೆನು. ಆದರೆ ನನ್ನ ಜೊತೆಯಲ್ಲಿ ಮೃಗರೂಪಿಗಳಾಗಿ ನಿಂತಿದ್ದ ಇಬ್ಬರು ರಾಕ್ಷಸರೂ ಆ ಬಾಣಗಳಿಂದ ಪ್ರಹೃತರಾಗಿ ಅಸು ನೀಗಿದರು.*

ರಾಮನ ಬಾಣದಿಂದ ತಪ್ಪಿಸಿಕೊಂಡ ನಾನು ಹೇಗೋ ಜೀವವನ್ನುಳಿಸಿ

---

*ಶ್ರೀರಾಮನ ಸಹವಾಸದಿಂದಾಗಿ ಆವನ ಬಾಣಗಳೂ ಧಾರ್ಮಿಕವಾದ ಗುಣಗಳನ್ನು ಹೊಂದಿದ್ದುವೆಂದು ವ್ಯಾಖ್ಯಾನಕಾರರು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಯಾವುದೇ ಬಾಣವೂ ಓಡಿಹೋಗುತ್ತಿರುವ ಜಿಂಕೆಯನ್ನು ಅಟ್ಟಿಸಿಕೊಂಡು ಹೋಗದಾದರೂ ರಾಮನು ಬಿಟ್ಟ ಬಾಣವು ಕೊಲ್ಲದೇ ಇದ್ದುದಕ್ಕೆ ಅವನ ಬಾಣವೂ ಪರಮಧರ್ಮವನ್ನು ತಿಳಿದಿತ್ತೆಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಆ ಸಮಯದಲ್ಲಿ ಶ್ರೀರಾಮನು ತನ್ನ ಮುಂದಿದ್ದ ಮೂರು ಮೃಗಗಳ ಮೇಲೆ ಮೂರು ಬಾಣಗಳನ್ನು ಏಕಕಾಲದಲ್ಲಿ ಪ್ರಯೋಗಿಸಿದನು. ಅವು ಧನುಸ್ಸಿನಿಂದ ಹೊರಟು ವೇಗವಾಗಿ ಮೃಗಗಳ ಕಡೆಗೆ ಧಾವಿಸಿದುವು. ಆ ಸಂದರ್ಭದಲ್ಲಿ ಮಾರೀಚನು ರಾಮನ ಬಾಣಗಳ ತೀಕ್ಷ್ಣತೆಯನ್ನೂ ಕಾರ್ಯಸಾಧನೆ

ಕೊಂಡು ಇಲ್ಲಿಗೆ ಬಂದೆನು. ಇಲ್ಲಿ ನಾನು ಯೋಗನಿರತನಾಗಿ, ಏಕಾಗ್ರ ಚಿತ್ತನಾಗಿ ತಪಸ್ಸನ್ನು ಮಾಡುತ್ತಿದ್ದೇನೆ. ಆದರೆ ಇಲ್ಲಿಯೂ ನನಗೆ ರಾಮನ ಭಯವು ದೂರವಾಗಿಲ್ಲ.

ವೃಕ್ಷೇ ವೃಕ್ಷೇ ಚ ಪಶ್ಯಾಮಿ ಚೀರಕೃಷ್ಣಾಜಿನಾಮ್ಬರಮ್ ।
ಗೃಹೀತಧನುಷಂ ರಾಮಂ ಪಾಶಹಸ್ತಮಿವಾನ್ತಕಮ್ ॥೧೪॥

ಇಲ್ಲಿರುವ ಪ್ರತಿಯೊಂದು ಮರದಲ್ಲಿಯೂ ನಾರುಮಡಿಯನ್ನೂ ಕೃಷ್ಣಾಜಿನವನ್ನೂ ಧರಿಸಿರುವ ರಾಮನನ್ನೇ ಕಾಣುತ್ತಿದ್ದೇನೆ. ಕೈಯಲ್ಲಿ ಪಾಶವನ್ನು ಹಿಡಿದಿರುವ ಯಮಧರ್ಮನಂತೆ ಧನುಸ್ಸನ್ನು ಹಿಡಿದಿರುವ ರಾಘವನನ್ನು ಕಾಣುತ್ತಿದ್ದೇನೆ.

ಅಪಿ ರಾಮಸಹಸ್ರಾಣಿ ಭೀತಃ ಪಶ್ಯಾಮಿ ರಾವಣ ।
ರಾಮಭೂತಮಿದಂ ಸರ್ವಮರಣ್ಯಂ ಪ್ರತಿಭಾತಿ ಮೇ ॥೧೫॥

ರಾವಣ ! ರಾಮನ ವಿಷಯದಲ್ಲಿ ಹೆಚ್ಚು ಭಯಗೊಂಡಿರುವ ನಾನು ಸಾವಿರಾರು ರಾಮರನ್ನು ಈ ಅರಣ್ಯದಲ್ಲಿ ಕಾಣುತ್ತಿದ್ದೇನೆ. ಈ ಅರಣ್ಯವೇ ರಾಮಮಯವಾಗಿರುವುದೋ ಎಂಬಂತೆ ನನಗೆ ಭಾಸವಾಗುತ್ತಿದೆ.

ರಾಮಮೇವ ಹಿ ಪಶ್ಯಾಮಿ ರಹಿತೇ ರಾಕ್ಷಸೇಶ್ವರ ।
ದೃಷ್ಟ್ವಾ ಸ್ವಪ್ನಗತಂ ರಾಮಮುದ್ಭ್ರಮಾಮಿ ವಿಚೇತಸಃ ॥೧೬॥

ಏಕಾಂತದಲ್ಲಿ ಕುಳಿತಿದ್ದರೂ ಅಲ್ಲಿಯೂ ನಾನು ರಾಮನನ್ನೇ ಕಾಣುತ್ತೇನೆ. ಸ್ವಪ್ನದಲ್ಲಿ ಕೂಡ ಧನುಷ್ಪಾಣಿಯಾದ ರಾಮನನ್ನೇ ಕಂಡು ಭಯಪಟ್ಟು ಮೂರ್ಛಿತನಾಗುತ್ತೇನೆ.

ರಕಾರಾದೀನಿ ನಾಮಾನಿ ರಾಮತ್ರಸ್ತಸ್ಯ ರಾವಣ ।
ರತ್ನಾನಿ ಚ ರಥಾಶ್ಚೈವ ತ್ರಾಸಂ ಸಂಜನಯನ್ತಿ ಮೇ ॥೧೭॥

---

ಯನ್ನೂ ತಿಳಿದಿದ್ದನಾದುದರಿಂದ ಪಲಾಯನಮಾಡಿದನು. ಮಾರೀಚನ ಕಡೆಗೆ ಹೋಗುತ್ತಿದ್ದ ಬಾಣವು ಪಲಾಯನಮಾಡುತ್ತಿರುವವನನ್ನು ಕೊಲ್ಲಕೂಡದೆಂಬ ಧರ್ಮವನ್ನು ಅನುಸರಿಸಿ ಅವನನ್ನು ಕೊಲ್ಲದೆಯೇ ಬಿಟ್ಟುಬಿಟ್ಟಿತು. ಉಳಿದೆರಡು ಬಾಣಗಳು ಸ್ತಬ್ಧರಾಗಿ ನಿಂತಿದ್ದ ಮೃಗರೂಪಿಗಳಾದ ಉಳಿದೀರ್ವರು ರಾಕ್ಷಸರನ್ನು ಸಂಹರಿಸಿದುವು.

ರಾಮನ ವಿಷಯದಲ್ಲಿ ಅತ್ಯಂತ ಭಯಗೊಂಡಿರುವ ನನಗೆ 'ರಾಮ'-ಎಂಬ ಹೆಸರಿನ ಮೊದಲನೆಯ ಅಕ್ಷರವಾದ ರೇಫದಿಂದ ('ರ'ಕಾರದಿಂದ) ಮೊದಲಾಗುವ ರತ್ನ-ರಥ-ಇವೇ ಮುಂತಾದ ಪದಗಳೂ ಭಯವನ್ನುಂಟು ಮಾಡುತ್ತವೆ.

ರಾವಣ! ರಾಮನ ಪ್ರಭಾವವೆಷ್ಟೆಂಬುದನ್ನು ನಾನು ಸಂಪೂರ್ಣವಾಗಿ ಬಲ್ಲೆನು. ಅವನೊಡನೆ ಯುದ್ಧಮಾಡುವುದು ನಿನಗೆ ಯೋಗ್ಯವಲ್ಲ. ರಘುನಂದನನು ಯುದ್ಧದಲ್ಲಿ ಬಲಿಯನ್ನಾಗಲೀ ನಮುಚಿಯನ್ನಾಗಲೀ ಸಂಹರಿಸುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಅಂತಹ ರಾಮನೊಡನೆ ಯುದ್ಧಮಾಡುವುದು ತರವಲ್ಲ. ಖರ-ದೂಷಣರ ವಧೆಗೆ ಪ್ರತೀಕಾರಮಾಡುವ ಇಚ್ಛೆಯಿದ್ದರೆ ನೇರವಾಗಿ ಅವನೊಡನೆ ಯುದ್ಧಕ್ಕೆ ಹೋಗು. ಅಥವಾ ಶಾಂತಿಯನ್ನಾದರೂ ತಂದುಕೊ. ಕಳ್ಳತನವನ್ನು ಮಾತ್ರ ಮಾಡಬೇಡ. ಈ ಎರಡು ಮಾರ್ಗಗಳನ್ನು ಬಿಟ್ಟು ಸೀತಾಪಹರಣವೆಂಬ ದುಷ್ಕೃತ್ಯಕ್ಕೆ ಮನಸ್ಸನ್ನು ಹರಿಸಬೇಡ. ನಾನು ಬದುಕಿರುವುದನ್ನು ನೋಡಲು ನಿನಗೆ ಇಷ್ಟವಿದ್ದರೆ ರಾಮನ ಸುದ್ದಿಯನ್ನೇ ಬಿಟ್ಟುಬಿಡು.

ಬಹವಃ ಸಾಧವೋ ಲೋಕೇ ಯುಕ್ತಾ ಧರ್ಮಮನುಷ್ಠಿತಾಃ ।
ಪರೇಷಾಮಪರಾಧೇನ ವಿನಷ್ಟಾಃ ಸಪರಿಚ್ಛದಾಃ ॥೨೦॥

ಈ ಲೋಕದಲ್ಲಿ ಧರ್ಮಾನುಷ್ಠಾನಪರರಾದ ಅನೇಕಸಾಧುಗಳು ಇತರರು ಮಾಡಿದ ಅಪರಾಧದಿಂದಾಗಿ ಬಂಧು-ಮಿತ್ರರ ಸಹಿತವಾಗಿ ವಿನಾಶ ಹೊಂದಿರುವರು. ಅದೇ ರೀತಿಯಲ್ಲಿ ತಪಸ್ಸಿನಲ್ಲಿ ನಿರತನಾಗಿರುವ ನಾನು ನೀನು ಮಾಡುವ ಅಪರಾಧದಿಂದಾಗಿ ವಿನಾಶಹೊಂದುವುದೂ ನಿಶ್ಚಯ. ನಿನಗೆ ತೋರಿದಂತೆ ನೀನು ಆಚರಿಸಬಹುದು. ಆದರೆ ನಾನು ಮಾತ್ರ ನಿನಗೆ ಸಹಾಯಕನಾಗಿ ಬರುವುದಿಲ್ಲ. ರಾಮನು ಮಹಾತೇಜಸ್ವಿಯು; ಮಹಾಸತ್ತ್ವಶಾಲಿಯು ಮತ್ತು ಮಹಾಬಲಿಷ್ಠನು. ಅಂತಹವನು ನಿನ್ನ ದುರ್ವರ್ತನೆಯಿಂದಾಗಿ ರಾಕ್ಷಸಲೋಕವನ್ನೇ ಸಂಪೂರ್ಣವಾಗಿ ಕೊನೆಗಾಣಿಸಿ ಬಿಡಬಹುದು.

ವಿರೂಪಳಾಗಿದ್ದ ಶೂರ್ಪಣಖೆಯನ್ನು ಸಮಾಧಾನಗೊಳಿಸುವ ಸಲುವಾಗಿ ಜನಸ್ಥಾನದಲ್ಲಿದ್ದ ಖರನು ಪಂಚವಟಿಯಲ್ಲಿದ್ದ ರಾಮನ ಮೇಲೆ

ಯುದ್ಧಕ್ಕೆ ಹೋದನು. ಕಾರ್ಯಗಳನ್ನು ಸ್ವಲ್ಪವೂ ಆಯಾಸವಿಲ್ಲದೇ ಮಾಡುವ ರಾಮನು ಯುದ್ಧದಲ್ಲಿ ಖರನನ್ನು ಸಂಹರಿಸಿದನು. ಇದರಲ್ಲಿ ರಾಮನು ಯಾವ ಧರ್ಮವನ್ನು ಮೀರಿ ನಡೆದನೆಂಬುದನ್ನು ಯಥಾವತ್ತಾಗಿ ಹೇಳು, ರಾವಣ !

ಬಂಧುಗಳ ಹಿತವನ್ನೇ ಬಯಸುವ ನಾನು ಹೇಳಿರುವ ಈ ಮಾತುಗಳನ್ನು ನೀನು ಅಂಗೀಕರಿಸದಿದ್ದರೆ ಯುದ್ಧದಲ್ಲಿ ರಾಮನು ಬಿಡುವ ನೇರವಾಗಿ ಹೋಗುವ ಬಾಣಗಳ ಏಟಿಗೆ ಸಿಕ್ಕಿ ಬಂಧುಗಳೊಡನೆ ಪ್ರಾಣ ತೊರೆಯುವೆ."

೩೯ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೪೦ನೆಯ ಸರ್ಗ

## ರಾವಣನು ಮಾರೀಚನ ಮಾತನ್ನು ತಿರಸ್ಕರಿಸಿ ಸೀತಾಪಹರಣದಲ್ಲಿ ಸಹಾಯಕನಾಗುವಂತೆ ಆಜ್ಞೆಮಾಡಿದುದು

ಮಾರೀಚೇನ ತು ತದ್ವಾಕ್ಯಂ ಕ್ಷಮಂ ಯುಕ್ತಂ ನಿಶಾಚರಃ ।
ಉಕ್ತೋ ನ ಪ್ರತಿಜಗ್ರಾಹ ಮರ್ತುಕಾಮ ಇವೌಷಧಮ್ ॥೧॥

ಸಾಯಲು ಬಯಸಿರುವ ರೋಗಿಯು ಔಷಧವನ್ನು ತೆಗೆದುಕೊಳ್ಳುವುದಿಲ್ಲ. ಹಾಗೆಯೇ ಯೋಗ್ಯವೂ ಹಿತಕರವೂ ಆಗಿದ್ದ ಮಾರೀಚನ ಮಾತುಗಳನ್ನು ರಾವಣನು ಪುರಸ್ಕರಿಸಲಿಲ್ಲ.

ಕಾಲಚೋದಿತನಾದ, ರಾಕ್ಷಸೇಶ್ವರನಾದ ರಾವಣನು ಪಥ್ಯವೂ ಹಿತಕರವೂ ಆಗಿದ್ದ ಮಾತುಗಳನ್ನಾಡಿದ ಮಾರೀಚನಿಗೆ ಅಯುಕ್ತವೂ ಕಠಿಣವೂ ಆಗಿದ್ದ ಈ ಮಾತುಗಳನ್ನು ಹೇಳಿದನು :

"ಮಾರೀಚ ! ಸಮಯಕ್ಕೆ ಯೋಗ್ಯವಲ್ಲದ ಮಾತುಗಳನ್ನೇ ನನ್ನೊಡನೆ ನೀನು ಹೇಳುತ್ತಿರುವೆ. ಬಂಜರುಭೂಮಿಯಲ್ಲಿ ಬಿತ್ತಿದ ಬೀಜದಂತೆ–ನಿನ್ನ ಮಾತುಗಳು ನನ್ನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಾರವು. ನಿನ್ನ ಈ ಮಾತುಗಳಿಂದ ಪಾಪಚಾರಿಯೂ, ಮೂರ್ಖನೂ, ಅದರಲ್ಲಿಯೂ ವಿಶೇಷವಾಗಿ ಮನುಷ್ಯನೂ ಆಗಿರುವ ರಾಮನೊಡನೆ

ಯುದ್ಧ ಮಾಡಲು ಅಥವಾ ಅವನ ಪತ್ನಿಯನ್ನು ಅಪಹರಿಸಲು ಸಂಕಲ್ಪಿ ಸಿರುವ ನನ್ನನ್ನು ನೀನು ಆ ಕಾರ್ಯದಿಂದ ವಿಮುಖನನ್ನಾಗಿ ಮಾಡಲಾರೆ.

ಆತನು ಸ್ತ್ರೀಸ್ವಭಾವಾನುಗುಣವಾಗಿ ಹೇಳಿದ ಹೆಂಗಸೊಬ್ಬಳ ಮಾತನ್ನು ಕೇಳಿದೊಡನೆಯೇ ಸ್ನೇಹಿತರನ್ನೂ, ರಾಜ್ಯವನ್ನೂ, ತಂದೆ-ತಾಯಿಗಳನ್ನೂ ತ್ಯಜಿಸಿ ಅರಣ್ಯಕ್ಕೆ ಹೊರಟುಬಂದನು. ಅಂತಹವನು ಮೂರ್ಖನಲ್ಲದೇ ಮತ್ತೇನು? ಯುದ್ಧದಲ್ಲಿ ಖರನನ್ನು ಸಂಹರಿಸಿದ ಆ ಮೂರ್ಖನಿಗೆ ಪ್ರತೀ ಕಾರವನ್ನು ಮಾಡಲೇಬೇಕು. ನಿನ್ನ ಸಮ್ಮುಖದಲ್ಲಿಯೇ ಅವನಿಗೆ ಪ್ರಾಣಗಳ ಗಿಂತಲೂ ಪ್ರಿಯಳಾಗಿರುವ ಸೀತೆಯನ್ನು ಅಪಹರಿಸಲೇಬೇಕು. ಇದೇ ಅವ ನಿಗೆ ಸರಿಯಾದ ಪ್ರತೀಕಾರವಾಗುವುದು. ಹೀಗೆಯೇ ಮಾಡಬೇಕೆಂಬ ನಿಶ್ಚಿತ ವಾದ ಬುದ್ಧಿಯು ನನ್ನ ಹೃದಯದಲ್ಲಿ ನೆಲೆಸಿಬಿಟ್ಟಿದೆ. ಇದನ್ನು ವ್ಯತ್ಯಸ್ತ ಗೊಳಿಸಲು ಇಂದ್ರಸಹಿತರಾದ ಸುರಾಸುರರಿಂದಲೂ ಸಾಧ್ಯವಾಗುವುದಿಲ್ಲ. ಈ ಕಾರ್ಯವನ್ನು ಮಾಡಬೇಕೇ, ಬಿಡಬೇಕೇ? – ಎಂದು ನಿಶ್ಚಯಿಸುವಾಗ ಇದರಲ್ಲಿರುವ ಗುಣ-ದೋಷಗಳನ್ನೂ ಅಪಾಯ-ಉಪಾಯಗಳನ್ನೂ ಹೇಳು ವಂತೆ ನಾನೇನಾದರೂ ನಿನ್ನನ್ನು ಕೇಳಿದ್ದರೆ ನೀನು ಇವೆಲ್ಲವನ್ನೂ ಹೇಳು ವುದು ಯುಕ್ತವಾಗಿದ್ದಿತು. ನಾನು ಸೀತಾಪಹರಣವನ್ನು ನಿಶ್ಚಯಿಸಿಯೇ ನಿನ್ನ ಬಳಿಗೆ ಬಂದು ನಿನ್ನ ಸಹಾಯವನ್ನು ಮಾತ್ರವೇ ಕೋರುತ್ತಿದ್ದೇನೆ.

ಸಂಪೃಷ್ಟೇನ ತು ವಕ್ತವ್ಯಂ ಸಚಿವೇನ ವಿಪಶ್ಚಿತಾ ।
ಉದ್ಯತಾಞ್ಜಲಿನಾ ರಾಜ್ಞೋ ಯ ಇಚ್ಛೇದ್ಭೂತಿಮಾತ್ಮನಃ ॥೯॥

ತನಗೆ ಒಳ್ಳೆಯದನ್ನು ಬಯಸುವ ಬುದ್ಧಿವಂತನಾದ ಮಂತ್ರಿಯು ರಾಜನು ಪ್ರಶ್ನಿಸಿದಾಗ ಕೈಮುಗಿದುಕೊಂಡು ಯಥೋಚಿತವಾದ ಉತ್ತರ ವನ್ನು ಕೊಡಬೇಕು.

ವಾಕ್ಯಮಪ್ರತಿಕೂಲಂ ತು ಮೃದುಪೂರ್ವಂ ಶುಭಂ ಹಿತಮ್ ।
ಉಪಚಾರೇಣ ವಕ್ತವ್ಯೋ ಯುಕ್ತಂ ಚ ವಸುಧಾಧಿಪಃ ॥೧೦॥

ರಾಜನೊಡನೆ ಮಾತನಾಡುವಾಗ ಅವನ ಅಭಿಪ್ರಾಯಕ್ಕೆ ಪ್ರತಿಕೂಲ ವಾದ ಮಾತನ್ನಾಡಬಾರದು. ಮೃದುವಾಗಿ ಮಾತನಾಡಬೇಕು. ಶುಭ ಕರವೂ, ಹಿತವೂ, ಯುಕ್ತವೂ ಆದ ಮಾತುಗಳನ್ನೇ ಆದರಪೂರ್ವಕವಾಗಿ ಹೇಳಬೇಕು.

ಸಾವಮರ್ದಂ ತು ಯದ್ವಾಕ್ಯಂ ಮಾರೀಚ ಹಿತಮುಚ್ಯತೇ ।
ನಾಭಿನನ್ದತಿ ತದ್ರಾಜಾ ಮಾನಾರ್ಹೋ ಮಾನವರ್ಜಿತಮ್ ॥೧೧॥

ರಾಜನಿಗೆ ಹಿತವಾಗುವ ಮಾತನ್ನೇ ಆದರೂ ತಿರಸ್ಕಾರಪೂರ್ವಕವಾಗಿ ಮರ್ಯಾದೆಗೆಟ್ಟು ಹೇಳಿದರೆ ಅಂತಹ ಮಾತುಗಳನ್ನು ಮಾನಿಷ್ಠನಾದ ರಾಜನು ಪುರಸ್ಕರಿಸುವುದಿಲ್ಲ.

ಪಞ್ಚ ರೂಪಾಣಿ ರಾಜಾನೋ ಧಾರಯನ್ತ್ಯಮಿತೌಜಸಃ ।
ಅಗ್ನೇರಿನ್ದ್ರಸ್ಯ ಸೋಮಸ್ಯ ಯಮಸ್ಯ ವರುಣಸ್ಯ ಚ ॥೧೨॥

ಅಮಿತತೇಜಸ್ವಿಗಳಾದ ರಾಜರು ಅಗ್ನಿ-ಇಂದ್ರ-ಸೋಮ-ಯಮ-ವರುಣ-ಈ ಐವರ ರೂಪಗಳನ್ನು ಧರಿಸಿರುತ್ತಾರೆ.

ಔಷ್ಣ್ಯಂ ತಥಾ ವಿಕ್ರಮಂ ಚ ಸೌಮ್ಯಂ ದಣ್ಡಂ ಪ್ರಸನ್ನತಾಮ್ ।
ಧಾರಯನ್ತಿ ಮಹಾತ್ಮಾನೋ ರಾಜಾನಃ ಕ್ಷಣದಾಚರ ॥೧೩॥

ನಿಶಾಚರನೇ ! ಮಾರೀಚ ! ಈ ಕಾರಣದಿಂದಲೇ ಮಹಾತ್ಮರಾದ ರಾಜರು ಅಗ್ನಿಯ ಗುಣವಾದ ತೀಕ್ಷ್ಣತೆ ; ಇಂದ್ರನ ಗುಣವಾದ ಪರಾಕ್ರಮ ; ಚಂದ್ರನ ಗುಣವಾದ ಸೌಮ್ಯತೆ ; ಯಮನ ಗುಣವಾದ ದಂಡನೆ ಮತ್ತು ವರುಣನ ಗುಣವಾದ ಪ್ರಸನ್ನತೆ-ಇವುಗಳನ್ನು ಹೊಂದಿರುತ್ತಾರೆ.

ಆದುದರಿಂದ ಯಾವುದೇ ಪರಿಸ್ಥಿತಿಯಲ್ಲಿದ್ದರೂ ರಾಜರು ಪೂಜ್ಯರೂ ಮಾನ್ಯರೂ ಆಗಿರುತ್ತಾರೆ. ನೀನಾದರೋ ರಾಜಧರ್ಮವನ್ನು ತಿಳಿಯದೇ ಅಜ್ಞಾನವಶನಾಗಿ-ನಿನ್ನಲ್ಲಿಗೆ ಆಗಮಿಸಿರುವ ನನ್ನ ವಿಷಯವಾಗಿ-ದುಷ್ಟಭಾವದಿಂದ ಕಠಿಣವಾದ ಮಾತುಗಳನ್ನು ಆಡುತ್ತಿರುವೆ. ನಾನು ಮಾಡಲು ನಿಶ್ಚಯಿಸಿರುವ ಕಾರ್ಯದಲ್ಲಿ ಗುಣವಿದೆಯೋ-ದೋಷವಿದೆಯೋ ? ಎಂಬುದನ್ನು ಪ್ರಶ್ನಿಸಲು ನಿನ್ನ ಬಳಿಗೆ ನಾನು ಬಂದಿಲ್ಲ. ನನ್ನ ಕ್ಷೇಮದ ವಿಷಯವಾಗಿಯೂ ನಿನ್ನಿಂದ ಸಲಹೆಯನ್ನು ಪಡೆಯಲು ಬಂದಿಲ್ಲ. ಈ ಸಮಯದಲ್ಲಿ ನಾನು ನಿನಗೆ ಹೇಳುತ್ತಿರುವುದು ಇಷ್ಟು ಮಾತ್ರ. ಸೀತಾಪಹರಣವೆಂಬ ಮಹಾಕಾರ್ಯದಲ್ಲಿ ನೀನು ನನಗೆ ಸಹಾಯಮಾಡಬೇಕು. ಇದಕ್ಕೆ ನೀನು ಸಮರ್ಥನಾಗಿರುವೆ. ನನಗೆ ಸಹಾಯರೂಪವಾಗಿ, ನನ್ನ ಆಜ್ಞೆಯಂತೆ ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಹೇಳುವೆನು ; ಕೇಳು :

ಸೌವರ್ಣಸ್ತ್ವಂ ಮೃಗೋ ಭೂತ್ವಾ ಚಿತ್ರೋ ರಜತಬಿನ್ದುಭಿಃ ।
ಆಶ್ರಮೇ ತಸ್ಯ ರಾಮಸ್ಯ ಸೀತಾಯಾಃ ಪ್ರಮುಖೇ ಚರ ॥೧೭॥

ಬೆಳ್ಳಿಯ ಚುಕ್ಕೆಗಳಿಂದ ತುಂಬ ವಿಚಿತ್ರವಾಗಿ ಕಾಣುವ ಚಿನ್ನದ ಜಿಂಕೆಯ ಆಕಾರವನ್ನು ಹೊಂದಿ ರಾಮನ ಆಶ್ರಮದಲ್ಲಿ ಸೀತೆಯ ಮುಂಭಾಗದಲ್ಲಿ ಅಡ್ಡಾಡು.

ಸೀತೆಯಲ್ಲಿ ಚಿನ್ನದ ಜಿಂಕೆಗಾಗಿ ಆಸೆಯನ್ನು ಹುಟ್ಟಿಸಿ ನೀನು ಇಷ್ಟಬಂದ ಕಡೆಗೆ ಹೋಗಬಹುದು. ಸುವರ್ಣಮಯವಾದ ಮಾಯಾ ಮೃಗದ ರೂಪವನ್ನು ಧರಿಸಿರುವ ನಿನ್ನನ್ನು ನೋಡಿ ಆಶ್ಚರ್ಯಗೊಳ್ಳುವ ಸೀತೆಯು ಆ ಮೃಗವನ್ನು ತನಗೆ ಬೇಗ ತಂದುಕೊಡಬೇಕೆಂದು ರಾಮನಿಗೆ ಹೇಳುತ್ತಾಳೆ. ರಾಮನು ನಿನ್ನನ್ನಟ್ಟಿಸಿಕೊಂಡು ಆಶ್ರಮದಿಂದ ಹೊರಬಂದ ಮೇಲೆ ನೀನು ಅವನನ್ನು ಬಹಳ ದೂರದವರೆಗೆ ಕರೆದೊಯ್ದು ಅನಂತರ ರಾಮನ ಧ್ವನಿಯನ್ನು ಅನುಕರಿಸಿ–' ಹಾ ಸೀತೇ ! ಹಾ ಲಕ್ಷ್ಮಣ ! '–ಎಂದು ಕೂಗಬೇಕು. ಈ ಕೂಗನ್ನು ಕೇಳಿ ಭಯಗೊಳ್ಳುವ ಲಕ್ಷ್ಮಣನು ಅಣ್ಣನ ಮೇಲಿನ ಪ್ರೀತಿಯಿಂದಲೂ –ಸೀತೆಯ ಪ್ರೇರಣೆಯಿಂದಲೂ ರಾಮನ ಮಾರ್ಗವನ್ನೇ ಅನುಸರಿಸಿ ಹೋಗುತ್ತಾನೆ.

ಹೀಗೆ ರಾಮ-ಲಕ್ಷ್ಮಣರಿಬ್ಬರೂ ಆಶ್ರಮದಿಂದ ಹೊರಟುಹೋದ ನಂತರ–ಇಂದ್ರನು ಶಚೀದೇವಿಯನ್ನು ಕರೆದೊಯ್ದಂತೆ–ನಾನು ವೈದೇಹಿಯನ್ನು ಸುಖವಾಗಿ ಕರೆದೊಯ್ಯುತ್ತೇನೆ. ನನಗೆ ಸಹಾಯರೂಪವಾದ ಈ ಕಾರ್ಯವನ್ನು ನಾನು ಹೇಳಿದ ರೀತಿಯಲ್ಲಿ ಮಾಡಿಕೊಟ್ಟು ಇಚ್ಛೆಯಿದ್ದೆಡೆಗೆ ನೀನು ಹೋಗಬಹುದು. ಈ ಕಾರ್ಯವನ್ನು ನೀನು ನಾನು ಹೇಳಿದಂತೆ ಮಾಡಿಕೊಟ್ಟೆಯಾದರೆ–ಅರ್ಧರಾಜ್ಯವನ್ನೇ ನಿನಗೆ ಪಾರಿತೋಷಕವಾಗಿ ಕೊಡುತ್ತೇನೆ. ಈ ಕಾರ್ಯದ ಸಿದ್ಧಿಗಾಗಿ ಮಂಗಳಕರವಾದ ಮಾರ್ಗವನ್ನು ಅನುಸರಿಸಿ ಹೋಗು. ನಾನು ರಥದಲ್ಲಿ ಕುಳಿತು ನಿನ್ನನ್ನು ಅನುಸರಿಸಿ ದಂಡಕಾರಣ್ಯಕ್ಕೆ ಬರುತ್ತೇನೆ. ಹೀಗೆ ರಾಮನನ್ನು ವಂಚಿಸಿ ಯುದ್ಧವಿಲ್ಲದೆಯೇ ಸೀತೆಯನ್ನೂ ಪಡೆದುಕೊಂಡು ಕೃತಕೃತ್ಯನಾಗಿ ನಿನ್ನೊಡನೆಯೇ ಲಂಕೆಗೆ ಪ್ರಯಾಣಮಾಡುತ್ತೇನೆ. ಒಂದು ವೇಳೆ ನೀನು ಈ ಕಾರ್ಯವನ್ನು

ಮಾಡದಿದ್ದರೆ ಈಗಲೇ ನಿನ್ನನ್ನು ಸಂಹರಿಸುತ್ತೇನೆ. ಈ ಕಾರ್ಯವು ಅವಶ್ಯವಾಗಿ ಆಗಲೇಬೇಕಾಗಿದೆ. ಬಲಾತ್ಕಾರದಿಂದಾದರೂ ನೀನು ಈ ಕಾರ್ಯವನ್ನು ಮಾಡಿಯೇ ತೀರಬೇಕಾಗಿದೆ.

ರಾಜ್ಞೋ ವಿಪ್ರತಿಕೂಲಸ್ಥೋ ನ ಜಾತು ಸುಖಮೇಧತೇ ॥೨೬॥

ರಾಜನಿಗೆ ಪ್ರತಿಕೂಲನಾಗಿ ಇರುವವನು ಎಂದಿಗೂ ಸುಖವನ್ನೂ-ಏಳಿಗೆಯನ್ನೂ ಹೊಂದುವುದಿಲ್ಲ.

ಹೀಗೆ ನನ್ನ ಮಾತಿನಂತೆ ನೀನು ರಾಮನ ಬಳಿಗೆ ಹೋಗುವುದಾದರೆ ನಿನಗೆ ಮರಣವು ಸಂಭವಿಸಬಹುದು, ಅಥವಾ ಸಂಭವಿಸದೆಯೂ ಇರಬಹುದು. ಆದರೆ ನನ್ನ ಮಾತನ್ನು ಕೇಳದೇ ನನ್ನೊಡನೆ ವಿರೋಧವನ್ನು ಕಟ್ಟಿಕೊಂಡರೆ-ನಿನ್ನ ಮರಣವು ಈಗಲೇ ಸನ್ನಿಹಿತವಾಗುವುದಂತೂ ನಿಶ್ಚಯ. ಈ ನನ್ನ ಮಾತನ್ನು ಯಥಾವತ್ತಾಗಿ ಗ್ರಹಿಸು. ಈ ಸಮಯದಲ್ಲಿ ನಿನಗೆ ಯಾವುದು ಹಿತವಾಗಿ ಕಾಣುವುದೋ ಅದರಂತೆ ನಡೆದುಕೊ."

ಳಂನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ಳ೧ನೆಯ ಸರ್ಗ

## ಮಾರೀಚನು ಸರ್ವವಿನಾಶವಾಗುವುದೆಂದು ರಾವಣನಿಗೆ ಹೇಳಿ ಪುನಃ ಸಮಾಧಾನಗೊಳಿಸಲು ಪ್ರಯತ್ನಿಸಿದುದು

ಆಜ್ಞಪ್ತೋ ರಾವಣೇನೇತ್ಥಂ ಪ್ರತಿಕೂಲಂ ಚ ರಾಜವತ್ ।
ಅಬ್ರವೀತ್ಪರುಷಂ ವಾಕ್ಯಂ ನಿಃಶಙ್ಕೋ ರಾಕ್ಷಸಾಧಿಪಮ್ ॥೧॥

ರಾವಣನು ರಾಜನಂತೆ ತನ್ನ ಅಭಿಪ್ರಾಯಕ್ಕೆ ಪ್ರತಿಕೂಲವಾದ ಆಜ್ಞೆಯನ್ನು ಮಾಡಲು ಮಾರೀಚನು ಸ್ವಲ್ಪವಾದರೂ ಅಂಜಿಕೆಯೇ ಇಲ್ಲದೇ ಕಠೋರವಾಗಿ ಹೇಳಿದನು :

" ರಾವಣೇಶ್ವರ ! ಪುತ್ರ-ರಾಜ್ಯ-ಮಂತ್ರಿಗಳೊಡನೆ ಸುಖವಾಗಿರುವ ನಿನಗೆ ಯಾವ ಪಾಪಿಷ್ಠನು ಸರ್ವವಿನಾಶಕವಾದ ಈ ಕಾರ್ಯಮಾಡಲು ಉಪದೇಶಿಸಿದನು ? ಯಾವ ಕಡುಪಾಪಿಯು ನೀನು ಸುಖವಾಗಿರುವುದನ್ನು

ನೋಡಿ ಸಹಿಸದೇ ನಿನಗೆ ಈ ಮೃತ್ಯುಮಾರ್ಗವನ್ನು ಉಪಾಯದಿಂದ ಪ್ರವೇಶಿಸುವ ವಿಧಾನವನ್ನು ಉಪದೇಶಿಸಿದ್ದಾನೆ ?

ಬಲಿಷ್ಠನಾದವನಿಂದ ನೀನು ಆಕ್ರಮಿಸಲ್ಪಟ್ಟು ವಿನಾಶಹೊಂದುವುದನ್ನು ದುರ್ಬಲರಾದ ನಿನ್ನ ಶತ್ರುಗಳು ಬಯಸಿದ್ದಾರೆಂಬುದು ಇದರಿಂದಲೇ ಸ್ಪಷ್ಟವಾಗುತ್ತದೆ. ಅಹಿತಕರವಾದ ಬುದ್ಧಿಯುಳ್ಳ ಯಾವ ಕ್ಷುದ್ರನು ನಿನಗಿದನ್ನು ಉಪದೇಶಿಸಿದನು ? ನೀನು ಮಾಡುವ ಕುತ್ಸಿತವಾದ ಕಾರ್ಯದಿಂದಲೇ ನೀನು ವಿನಾಶಹೊಂದುವುದನ್ನು ನೋಡಲು ಯಾವನು ಬಯಸಿದ್ದಾನೆ ? ಲೋಕವಿರುದ್ಧವಾದ ಮತ್ತು ಶಾಸ್ತ್ರವಿರುದ್ಧವಾದ ಮಾರ್ಗವನ್ನು ಹಿಡಿದಿರುವ ನಿನ್ನನ್ನು ಯಾರು ಸದುಪದೇಶದಿಂದ ತಡೆಹಿಡಿಯುವುದಿಲ್ಲವೋ – ಅಂತಹ ಮಂತ್ರಿಗಳೂ ವಧಾರ್ಹರೇ ಸರಿ. ಆದರೆ ಅಂತಹ ವಧಾರ್ಹರಾದವರ ವಧೆಯಾಗುತ್ತಿಲ್ಲ. ಕಾಮವೃತ್ತನಾದ, ಕುತ್ಸಿತವಾದ ಮಾರ್ಗವನ್ನು ಹಿಡಿದು ಹೋಗುತ್ತಿರುವ ರಾಜನನ್ನು ಸತ್ಪುರುಷರು ಸರ್ವಪ್ರಕಾರಗಳಿಂದಲೂ ತಡೆಹಿಡಿಯಲೇಬೇಕು. ಹಾಗೆ ತಡೆಹಿಡಿಯಬೇಕಾಗಿದ್ದ ನಿನ್ನನ್ನು ಸತ್ಪುರುಷರಾಗಲೀ ಮಂತ್ರಿಗಳಾಗಲೀ ತಡೆಹಿಡಿಯುತ್ತಿಲ್ಲ. ಜಯಶಾಲಿಗಳಲ್ಲಿ ಶ್ರೇಷ್ಠನಾದವನೇ ! ಮಂತ್ರಿಗಳು ಧರ್ಮ-ಅರ್ಥ-ಕಾಮ-ಯಶಸ್ಸುಗಳನ್ನು ರಾಜನ ಅನುಗ್ರಹದಿಂದಲೇ ಪಡೆದುಕೊಳ್ಳುತ್ತಾರೆ. ರಾಜನ ಅನುಗ್ರಹವಿಲ್ಲದಿದ್ದರೆ ಎಲ್ಲವೂ ವ್ಯರ್ಥವೇ ಆಗುತ್ತವೆ. ರಾಜನ ದೋಷದಿಂದ ಪ್ರಜೆಗಳಿಗೂ ಕಷ್ಟವುಂಟಾಗುತ್ತದೆ.

ರಾಜಮೂಲೋ ಹಿ ಧರ್ಮಶ್ಚ ಯಶಶ್ಚ ಜಯತಾಂ ವರ ।
ತಸ್ಮಾತ್ಸರ್ವಾಸ್ವವಸ್ಥಾಸು ರಕ್ಷಿತವ್ಯಾ ನರಾಧಿಪಾಃ ॥೧೦॥

ಧರ್ಮ ಮತ್ತು ಯಶಸ್ಸುಗಳು ರಾಜನನ್ನೇ ಆಶ್ರಯಿಸಿರತಕ್ಕುವುಗಳು. ಆದುದರಿಂದ ಎಲ್ಲ ಅವಸ್ಥೆಗಳಲ್ಲಿಯೂ ಎಲ್ಲ ಸಂದರ್ಭಗಳಲ್ಲಿಯೂ ರಾಜನನ್ನು ಅಧರ್ಮಾಚರಣೆಯಿಂದ ರಕ್ಷಿಸಬೇಕು.

ರಾಜ್ಯಂ ಪಾಲಯಿತುಂ ಶಕ್ಯಂ ನ ತೀಕ್ಷ್ಣೇನ ನಿಶಾಚರ ।
ನ ಚಾಪಿ ಪ್ರತಿಕೂಲೇನ ನಾವಿನೀತೇನ ರಾಕ್ಷಸ ॥೧೧॥

ನಿಶಾಚರನೇ ! ಕ್ರೂರಿಯಿಂದ ರಾಜ್ಯವನ್ನು ಪರಿಪಾಲಿಸಲು ಸಾಧ್ಯ

ವಾಗುವುದಿಲ್ಲ. ಧರ್ಮಕ್ಕೆ ಪ್ರತಿಕೂಲನಾಗಿರುವವನಿಂದಲೂ ಉದ್ಧತನಿಂದಲೂ ರಾಜ್ಯವನ್ನಾಳಲು ಸಾಧ್ಯವಾಗುವುದಿಲ್ಲ.

ಯೇ ತೀಕ್ಷ್ಣಮನ್ತ್ರಾಃ ಸಚಿವಾ ಭಜ್ಯನ್ತೇ ಸಹ ತೇನ ವೈ ।
ವಿಷಮೇ ತುರಗಾಃ ಶೀಘ್ರಾ ಮನ್ದಸಾರಥಯೋ ಯಥಾ ॥೧೩॥

ಕ್ರೂರವಾದ ಉಪಾಯವನ್ನು ರಾಜನಿಗೆ ಉಪದೇಶಿಸುವ ಮಂತ್ರಿಗಳು ಹಳ್ಳ-ತಿಟ್ಟುಗಳಿರುವ ಪ್ರದೇಶದಲ್ಲಿ ನೈಪುಣ್ಯವಿಲ್ಲದ ಸಾರಥಿಗಳೊಡನೆ ವೇಗವಾಗಿ ಓಡುವ ಕುದುರೆಗಳೂ ವಿನಾಶಹೊಂದುವಂತೆ–ರಾಜನೊಡನೆ ವಿನಾಶ ಹೊಂದುತ್ತಾರೆ. *

ಬಹವಃ ಸಾಧವೋ ಲೋಕೇ ಯುಕ್ತಾ ಧರ್ಮಮನುಷ್ಠಿತಾಃ ।
ಪರೇಷಾಮಪರಾಧೇನ ವಿನಷ್ಟಾಃ ಸಪರಿಚ್ಛದಾಃ ॥೧೪॥

ಈ ಹಿಂದೆಯೂ ಲೋಕದಲ್ಲಿ ಯೋಗಯುಕ್ತರಾದ ಮತ್ತು ಧರ್ಮಾನುಷ್ಠಾನಪರರಾದ ಅನೇಕ ಸತ್ಪುರುಷರು–ಇತರರು ಮಾಡಿದ ಅಪರಾಧದ ಕಾರಣದಿಂದಾಗಿ–ಪರಿವಾರಸಮೇತರಾಗಿ ವಿನಾಶಹೊಂದಿರುವರು.

ಸ್ವಾಮಿನಾ ಪ್ರತಿಕೂಲೇನ ಪ್ರಜಾಸ್ತೀಕ್ಷ್ಣೇನ ರಾವಣ ।
ರಕ್ಷ್ಯಮಾಣಾ ನ ವರ್ಧನ್ತೇ ಮೇಷಾ ಗೋಮಾಯುನಾ ಯಥಾ ॥

ಗುಳ್ಳೇನರಿಯಿಂದ ರಕ್ಷಿಸಲ್ಪಡುವ ಕುರಿಗಳು ವೃದ್ಧಿಯನ್ನು ಹೊಂದುವುದಿಲ್ಲ. ಹಾಗೆಯೇ ಧರ್ಮಕ್ಕೆ ಪ್ರತಿಕೂಲವಾದ ಆಚರಣೆಯಿರುವ ಕ್ರೂರಿಯಾದ ರಾಜನ ಆಡಳಿತದಲ್ಲಿ ಪ್ರಜೆಗಳು ಅಭಿವೃದ್ಧಿಯನ್ನು ಹೊಂದುವುದಿಲ್ಲ.

---

*ಮಂತ್ರಿಗಳು ರಥದ ಸಾರಥಿಯಿದ್ದಂತೆ. ಕ್ಲಿಷ್ಟವಾದ ಸಂದರ್ಭಗಳಲ್ಲಿ ಮಂತ್ರಿಗಳು ರಾಜನಿಗೆ ಯುಕ್ತವಾದ ಸಲಹೆಗಳನ್ನು ನೀಡಿ ಅವನನ್ನು ಅಪಾಯದಿಂದ ಪಾರುಮಾಡಬೇಕು. ಹಳ್ಳ-ತಿಟ್ಟುಗಳಿರುವ ಜಾಗಗಳಲ್ಲಿ ಸಾರಥಿಯಾದವನು ನೈಪುಣ್ಯದಿಂದ ಕುದುರೆಗಳನ್ನು ನಡೆಸಬೇಕು. ಮೂರ್ಖತನದಿಂದ ಕುದುರೆಗಳನ್ನು ಸ್ವೇಚ್ಛೆಯಾಗಿ ಬಿಟ್ಟುಬಿಟ್ಟರೆ ತಾನೂ ಸಾಯುತ್ತಾನೆ; ಕುದುರೆಗಳೂ ಸಾಯುತ್ತವೆ. ಅದೇ ರೀತಿಯಲ್ಲಿ ಮಂತ್ರಿಯಾದವನು ಸಮಯಗಳಲ್ಲಿ ರಾಜನಿಗೆ ಸರಿಯಾದ ಸಲಹೆಯನ್ನು ನೀಡದಿದ್ದರೆ ರಥರೂಪವಾದ ಆಡಳಿತವು ಕುಸಿದು ಬಿದ್ದು ರಾಜನ ಜೊತೆಯಲ್ಲಿಯೇ ಮಂತ್ರಿಯೂ ವಿನಾಶಹೊಂದುತ್ತಾನೆ.

ದುಷ್ಟಬುದ್ಧಿಯುವನಾದ, ಜಿತೇಂದ್ರಿಯನಲ್ಲದ, ಕ್ರೂರಿಯಾದ ನೀನು ರಾಕ್ಷಸರಿಗೆ ರಾಜನಾಗಿರುವುದರಿಂದ ರಾಕ್ಷಸರೆಲ್ಲರೂ ಅವಶ್ಯವಾಗಿ ವಿನಾಶ ಹೊಂದುತ್ತಾರೆ. ಈ ಘೋರಕೃತ್ಯಕ್ಕೆ ನನ್ನ ಸಂಬಂಧವುಂಟಾಗಿರುವುದು ಕೇವಲ ಕಾಕತಾಳೀಯ.[1] ಇದಕ್ಕಾಗಿ ನಾನು ಶೋಕಿಸುವುದಿಲ್ಲ. ನೀನು ಸೈನ್ಯ ಸಮೇತನಾಗಿ ವಿನಾಶಹೊಂದುವೆ. ಆದುದರಿಂದ ನಿನಗಾಗಿ ನಾನು ಶೋಕಿಸ ಬೇಕಾಗಿದೆ.

ಮಾಂ ನಿಹತ್ಯ ತು ರಾಮಶ್ಚ ನ ಚಿರಾತ್ತ್ವಾಂ ವಧಿಷ್ಯತಿ ।
ಅನೇನ ಕೃತಕೃತ್ಯೋಽಸ್ಮಿ ಮ್ರಿಯೇ ಯಧ್ಯರಿಣಾ ಹತಃ ॥೧೭॥

ರಾವಣೇಶ್ವರ! ನನ್ನನ್ನು ಸಂಹರಿಸಿದ ಬಳಿಕ ರಾಮನು ನಿನ್ನನ್ನೂ ಬಹಳ ಬೇಗ ಸಂಹರಿಸುತ್ತಾನೆ. ಶತ್ರುವಿನಿಂದ ಹತನಾಗಿ ನಾನು ಸಾಯುತ್ತೇನೆ. ಇದರಿಂದ ನಾನು ಕೃತಕೃತ್ಯನೂ ಆಗುತ್ತೇನೆ. *

ದರ್ಶನಾದೇವ ರಾಮಸ್ಯ ಹತಂ ಮಾಮವಧಾರಯ ।
ಆತ್ಮಾನಂ ಚ ಹತಂ ವಿದ್ಧಿ ಹೃತ್ವಾ ಸೀತಾಂ ಸಬಾನ್ಧವಮ್ ॥೧೮॥

ರಾಮನನ್ನು ನೋಡಿದ ಮಾತ್ರದಿಂದಲೇ ನಾನು ಸತ್ತುಹೋದೆನೆಂದು ನೀನು ತಿಳಿ. ಅಂತೆಯೇ ಸೀತೆಯನ್ನು ಅಪಹರಿಸಿದೊಡನೆಯೇ ಬಂಧು-ಬಾಂಧವರೊಡನೆ ನೀನೂ ಹತನಾಗುವೆಯೆಂಬುದನ್ನೂ ಈಗಲೇ ತಿಳಿದುಕೋ.

---

[1] ಕಾಕತಾಲೀಯನ್ಯಾಯ: ಕಾಕಾಗಮನಮಿವ ತಾಲಪತನಮಿವ ಕಾಕತಾಲವತ್ । ಕಾಕತಾಲಮಿವ ಕಾಕತಾಲೀಯಮ್. ಆಕಸ್ಮಿಕವಾದ ಇಷ್ಟಪ್ರಾಪ್ತಿ-ಅನಿಷ್ಟಪ್ರಾಪ್ತಿಗಳ ವಿಷಯದಲ್ಲಿ ಈ ನ್ಯಾಯವು ಹೊರಟಿರುವುದು. ಕಾಗೆಯು ತಾಳೇಮರದ ಮೇಲೆ ಆಕಸ್ಮಿಕವಾಗಿ ಕುಳಿತುಕೊಳ್ಳುತ್ತದೆ ಅದೇ ಸಮಯಕ್ಕೆ ತಾಳೆಯ ಹಣ್ಣು ಕೆಳಕ್ಕೆ ಬೀಳುತ್ತದೆ. ಆ ಹಣ್ಣು ಮರದ ಕೆಳಗೆ ಹೋಗುತ್ತಿರುವ ಮನುಷ್ಯನಿಗೆ ಸಿಕ್ಕುತ್ತದೆ. ಹೀಗೆ ಮನುಷ್ಯನು ನಿರೀಕ್ಷಿಸದೇ ಇರುವಾಗ ಆಕಸ್ಮಿಕವಾಗಿ ಅವನ ಇಷ್ಟಸಿದ್ಧಿಯುಂಟಾಗುವುದು ಅಥವಾ ತೊಂದರೆಯೂ ಉಂಟಾಗುವುದು – ಎಂಬ ವಿಷಯದಲ್ಲಿ ಈ ನ್ಯಾಯಕ್ಕೆ ಪ್ರವೃತ್ತಿ. ಈ ರೀತಿ ಇಷ್ಟಸಿದ್ಧಿಯು ಅಥವಾ ಕಷ್ಟಪ್ರಾಪ್ತಿಯು ಕಾಕತಾಳೀಯ.

*ನಾನು ನಿನ್ನ ಪ್ರೇರಣೆಯಂತೆ ಮಾಡಲಿರುವ ಈ ಕಾರ್ಯದ ಮೂಲಕವಾಗಿ ನೀನು ಸೀತೆಯನ್ನು ಅಪಹರಿಸುವೆ. ಅದೇ ಕಾರಣಕ್ಕಾಗಿಯೇ ಅವನು ನಿನ್ನನ್ನು ಸಂಹರಿಸುವನು. ನೀನು ಲೋಕಕ್ಕೆಲ್ಲಾ ಉಪಟಳವನ್ನು ಕೊಡುವವನೇ ಆಗಿದ್ದರೂ ಕಾರಣವಿಲ್ಲದೇ ರಾಮನು ನಿನ್ನನ್ನು ಸಂಹರಿಸುವುದಿಲ್ಲ. ನಿನ್ನನ್ನು ಸಂಹರಿಸಲು ಇದೊಂದು

ಆನಯಿಷ್ಯಸಿ ಚೇತ್ಸೀತಾಮಾಶ್ರಮಾತ್ಸಹಿತೋ ಮಯಾ ।
ನೈವ ತ್ವಮಸಿ ನಾಹಂ ಚ ನೈವ ಲಙ್ಕಾ ನ ರಾಕ್ಷಸಾಃ ॥೧೯॥

ನನ್ನೊಡನೆ ಕೂಡಿಕೊಂಡು ಆಶ್ರಮದಿಂದ ಸೀತೆಯನ್ನು ಅಪಹರಿಸಿ ತಂದುದೇ ಆದರೆ–ನೀನೂ ಉಳಿಯಲಾರೆ; ನಾನೂ ಉಳಿಯಲಾರೆನು; ಲಂಕೆಯೂ ಉಳಿಯಲಾರದು; ರಾಕ್ಷಸರೂ ಉಳಿಯಲಾರರು.

ನಿಶಾಚರನೇ! ಹಿತೈಷಿಯಾದ ನಾನು ನಿನ್ನನ್ನು ಇಂತಹ ಸರ್ವವಿನಾಶಕವಾದ ಕಾರ್ಯಕ್ಕೆ ತೊಡಗಬೇಡವೆಂದು ತಡೆಯುತ್ತಿದ್ದೇನೆ. ಆದರೆ ಈ ನನ್ನ ಹಿತಕರವಾದ ಮಾತುಗಳನ್ನು ನೀನು ಸಹಿಸುತ್ತಿಲ್ಲ.

ಪರೇತಕಲ್ಪಾ ಹಿ ಗತಾಯುಷೋ ನರಾ
ಹಿತಂ ನ ಗೃಹ್ಣನ್ತಿ ಸುಹೃದ್ಭಿರೀರಿತಮ್ ॥೨೦॥

ಆಯುಷ್ಯವು ಮುಗಿದು ಮರಣವು ಸನ್ನಿಹಿತವಾದಾಗ ಮನುಷ್ಯರು ಸಾಮಾನ್ಯವಾಗಿ ಸ್ನೇಹಿತರು ಹೇಳುವ ಹಿತವಚನಗಳನ್ನು ಅಂಗೀಕರಿಸುವುದಿಲ್ಲ."

ಳ೧ನೆಯ ಸರ್ಗವು ಮುಗಿಯಿತು.

---

ಕಾರಣವು ಆವನಿಗೆ ಸಿಕ್ಕಿದಂತಾಗುವುದು. ನನ್ನ ಮೂಲಕವಾಗಿ ಲೋಕಕಂಟಕನಾದ ನಿನ್ನ ವಧೆಯಾಗುವುದರಿಂದ ನಾನು ಕೃತಾರ್ಥನಾಗುತ್ತೇನೆ. ಮೇಲಾಗಿ ನಿನ್ನ ಕೈಯಲ್ಲಿ ಸಾಯುವುದಕ್ಕಿಂತಲೂ ಶತ್ರುವಿನಿಂದಲೇ ಪ್ರಹೃತನಾಗಿ ಸಾಯುತ್ತೇನೆ. ನೃಸಿಂಹಪುರಾಣದಲ್ಲಿ ಇವೇ ಪ್ರಕರಣದಲ್ಲಿ ಮಾರೀಚನು ಹೀಗೆ ಹೇಳುತ್ತಾನೆ: ರಾಮಾದಪಿ ಹಿ ಮರ್ತವ್ಯಂ ಮರ್ತವ್ಯಂ ರಾವಣಾದಪಿ । ಉಭಯೋರಪಿ ಮರ್ತವ್ಯಂ ವರಂ ರಾಮಾನ್ನ ರಾವಣಾತ್ ॥ ರಾಮನಿಂದಲಾದರೂ ಸಾಯಬೇಕು; ರಾವಣನಿಂದಲಾದರೂ ಸಾಯಬೇಕು. ಇಬ್ಬರಿಂದಲೂ ಸಾಯಲೇಬೇಕಾಗಿರುವಾಗ ರಾಮನಿಂದ ಸಾಯುವುದೇ ಲೇಸು.

## ಮಾರೀಚನು ಚಿನ್ನದ ಜಿಂಕೆಯ ರೂಪವನ್ನು ಧರಿಸಿ ಶ್ರೀರಾಮನ ಆಶ್ರಮದ ಬಳಿಗೆ ಹೋದುದು : ಸೀತೆಯು ಅದನ್ನು ನೋಡಿದುದು

ಏವಮುಕ್ತ್ವಾ ತು ಪರುಷಂ ಮಾರೀಚೋ ರಾವಣಂ ತತಃ ।
ಗಚ್ಛಾವೇತ್ಯಬ್ರವೀದ್ದೀನೋ ಭಯಾದ್ರಾತ್ರಿಂಚರಪ್ರಭೋಃ ॥೧॥

ದೀನನಾಗಿದ್ದ ಮಾರೀಚನು ರಾವಣನಿಗೆ ಇಂತಹ ಕಠಿಣವಾದ ಮಾತುಗಳನ್ನು ಹೇಳಿ, ರಾಕ್ಷಸೇಶ್ವರನ ಭಯದಿಂದಾಗಿ – ' ಗಚ್ಛಾವ – ನಾವಿನ್ನು ಹೊರಡೋಣ '–ಎಂದು ಹೇಳಿದನು :

" ಧನುರ್ಬಾಣಗಳನ್ನು ಹಿಡಿದಿರುವ ಆ ರಾಮನು ಪುನಃ ನನ್ನನ್ನೇನಾದರೂ ನೋಡಿದರೆ, ಶಸ್ತ್ರವನ್ನೆತ್ತಿಕೊಂಡು ನನ್ನನ್ನಟ್ಟಿಸಿಕೊಂಡು ಬಂದು ಸಂಹರಿಸುವುದಂತೂ ನಿಶ್ಚಯ. ನನ್ನ ಜೀವಿತವು ನಷ್ಟವಾಗಿ ಹೋಗುವುದು. ರಾಮನನ್ನು ಯುದ್ಧದಲ್ಲಿ ಎದುರಿಸಿ ನಿಂತವನು ಜೀವಸಹಿತವಾಗಿ ಯುದ್ಧದಿಂದ ಹಿಂದಿರುಗುವುದಿಲ್ಲ. ರಾಮಬಾಣಗಳಿಂದ ಪ್ರಹೃತನಾಗುವ ನಿನ್ನ ಈ ಸ್ವರೂಪವು ಯಮದಂಡದಿಂದ ಪ್ರಹೃತನಾದವನೊಬ್ಬನ ಪ್ರತಿರೂಪವೇ ಆಗುತ್ತದೆ. ಆದರೆ ನಿನ್ನಂತಹ ದುರಾತ್ಮನ ವಿಷಯದಲ್ಲಿ ನಾನೇನು ಮಾಡಲು ತಾನೇ ಸಾಧ್ಯವಿದೆ ? ಇದೋ ನಾನು ನಿನ್ನ ಕಾರ್ಯಾರ್ಥವಾಗಿ ಹೋಗುತ್ತೇನೆ. ನಿನಗೆ ಮಂಗಳವಾಗಲಿ."

ಮಾರೀಚನು ಹೇಳಿದ ಆ ಮಾತಿನಿಂದ ರಾವಣನಿಗೆ ಮಹಾನಂದವಾಯಿತು. ಅವನನ್ನು ಗಾಢವಾಗಿ ಆಲಿಂಗಿಸಿಕೊಂಡು ಹೇಳಿದನು :

" ನನ್ನ ಅಭಿಪ್ರಾಯಕ್ಕೆ ಅನುಕೂಲವಾಗಿ ವರ್ತಿಸುವ ನಿನ್ನ ಶೌರ್ಯಯುಕ್ತವಾದ ಮಾತು ನಿನಗೆ ಅನುರೂಪವಾಗಿಯೇ ಇದೆ. ಈಗ ನೀನು ನಿಜವಾದ ಮಾರೀಚನೇ ಆಗಿರುವೆ. ಈ ಹಿಂದೆ ನೀನು ಬೇರೊಬ್ಬ ರಾಕ್ಷಸನಾಗಿದ್ದೆ. ಮಾರೀಚ ! ಪಿಶಾಚಗಳ ಮುಖವಿರುವ ಕತ್ತೆಗಳಿಂದ ಯುಕ್ತವಾಗಿರುವ, ರತ್ನವಿಭೂಷಿತವಾದ ರಥವನ್ನು ಶೀಘ್ರವಾಗಿ ಹತ್ತಿ ನನ್ನೊಡನೆ ಕುಳಿತುಕೋ. ಚಿನ್ನದ ಜಿಂಕೆಯ ರೂಪವನ್ನು ತಾಳಿ ಸೀತೆಯನ್ನು ಮರುಳುಗೊಳಿಸಿ ಯಥೇಷ್ಟವಾಗಿ ನೀನು ಹೊರಟುಹೋಗು.

ಆಶ್ರಮವು ರಾಮ-ಲಕ್ಷ್ಮಣರಿಂದ ಶೂನ್ಯವಾದೊಡನೆಯೇ ಮಿಥಿಲೇಶಕುವರಿ ಯಾದ ವೈದೇಹಿಯನ್ನು ಬಲಾತ್ಕಾರಪೂರ್ವಕವಾಗಿ ಸೆಳೆದು ತರುತ್ತೇನೆ."

ತಾಟಕೆಯ ಮಗನಾದ ಮಾರೀಚನು ಹಾಗೆಯೇ ಆಗಲೆಂದು ಹೇಳಿದನು. ರಾವಣ-ಮಾರೀಚರಿಬ್ಬರೂ ವಿಮಾನದಂತೆಯೇ ಇದ್ದ ರಥದಲ್ಲಿ ಕುಳಿತು ಮಾರೀಚನ ಆಶ್ರಮಮಂಡಲದಿಂದ ಶೀಘ್ರವಾಗಿ ಹೊರಟರು. ಹಾಗೆ ರಥದಲ್ಲಿ ಕುಳಿತು ಪ್ರಯಾಣಮಾಡುತ್ತಿದ್ದಾಗ ಮಾರ್ಗದಲ್ಲಿ ಅನೇಕ ಪಟ್ಟಣಗಳನ್ನೂ, ವನಗಳನ್ನೂ, ನದಿಗಳನ್ನೂ, ರಾಷ್ಟ್ರಗಳನ್ನೂ, ನಗರಗಳನ್ನೂ ನೋಡುತ್ತಾ ಪ್ರಯಾಣಮಾಡಿದರು. ದಂಡಕಾರಣ್ಯವನ್ನು ಸೇರಿದ ನಂತರ ರಾಕ್ಷಸಾಧಿಪತಿಯಾದ ರಾವಣನು ಮಾರೀಚನೊಡನೆ ರಾಮನ ಆಶ್ರಮ ಪ್ರದೇಶವನ್ನು ನೋಡಿದನು. ಬಳಿಕ ಸುವರ್ಣಭೂಷಿತವಾಗಿದ್ದ ರಥದಿಂದಿಳಿದು ಮಾರೀಚನ ಕೈಹಿಡಿದು ಹೇಳಿದನು :

"ಮಿತ್ರನೇ ! ಬಾಳೆಯ ಗಿಡಗಳಿಂದ ಸುತ್ತುವರಿಯಲ್ಪಟ್ಟಿರುವ ರಾಮಾಶ್ರಮವು ಇಗೋ ಅಲ್ಲಿ ಕಾಣುತ್ತಿದೆ. ನಾವು ಯಾವ ಕಾರ್ಯದ ಸಾಧನೆಗಾಗಿ ಇಲ್ಲಿಗೆ ಬಂದಿರುವೆವೋ – ಅದರ ಅಂಗವಾಗಿ ನೀನು ಮಾಡಬೇಕಾಗಿರುವ ಕಾರ್ಯವನ್ನು ಶೀಘ್ರವಾಗಿ ಮಾಡು."

ರಾವಣನ ಮಾತನ್ನು ಕೇಳಿ ಮಾರೀಚರಾಕ್ಷಸನು ಜಿಂಕೆಯ ರೂಪವನ್ನು ತಾಳಿ ಆಶ್ರಮದ ಬಾಗಿಲ ಬಳಿ ಸಂಚರಿಸತೊಡಗಿದನು. ಅವನು ಮಹಾದ್ಭುತವಾಗಿ ಕಾಣುತ್ತಿದ್ದ ಜಿಂಕೆಯ ರೂಪವನ್ನು ಧರಿಸಿದ್ದನು. ಮಾಯಾಮೃಗದ ಕೊಂಬಿನ ತುದಿಯು ಇಂದ್ರನೀಲಮಣಿಮಯವಾಗಿದ್ದಿತು. ಮುಖದಲ್ಲಿ ಸ್ವಲ್ಪ ಭಾಗ ಬಿಳುಪಾಗಿಯೂ ಸ್ವಲ್ಪ ಭಾಗ ಕಪ್ಪಾಗಿಯೂ ಇದ್ದಿತು. ಆದುದರಿಂದಲೇ ಮುಖದ ಒಂದು ಭಾಗವು ಕೆಂದಾವರೆಯಂತೆಯೂ ಮತ್ತೊಂದು ಭಾಗವು ಕನ್ನೈದಿಲೆಯಂತೆಯೂ ಪ್ರಕಾಶಿಸುತ್ತಿದ್ದಿತು. ಕಿವಿಗಳೂ ಕನ್ನೈದಿಲೆಗೆ ಸಮಾನವಾಗಿದ್ದುವು. ಅದು ಕತ್ತನ್ನು ಸ್ವಲ್ಪ ಎತ್ತಿಕೊಂಡಿದ್ದಿತು. ಅದರ ತುಟಿಗಳು ಇಂದ್ರನೀಲಮಣಿಯದಾಗಿದ್ದಿತು. ಹೊಟ್ಟೆಯು ಕಮಲದಂತೆ, ಚಂದ್ರನಂತೆ ಮತ್ತು ವಜ್ರದಂತೆ ಪ್ರಕಾಶಮಾನವಾಗಿದ್ದಿತು. ಹಿಪ್ಪೆಯ ಹೂವಿನಂತೆ ಪಕ್ಕೆಗಳಿದ್ದುವು. ಆ ಜಿಂಕೆಯು ಕಮಲದ ಕುಸುರಿನ ಕಾಂತಿಯಂತೆ ಕಾಂತಿಯುಳ್ಳದ್ದಾಗಿದ್ದಿತು. ಅದರ

ಗೊರಸುಗಳು ವೈಡೂರ್ಯಮಣಿಗೆ ಸದೃಶವಾಗಿದ್ದುವು. ಸೊಂಟವು ತೆಳ್ಳಗಿದ್ದಿತು. ಸಂಧಿಬಂಧಗಳು ಹೊಂದಿಕೆಯಾಗಿ ಸೇರಿಕೊಂಡಿದ್ದುವು. ಕಾಮನ ಬಿಲ್ಲಿನ ಬಣ್ಣದಂತಿದ್ದ ಬಾಲವು ನಿಮಿರಿ ನಿಂತು ಪ್ರಕಾಶಮಾನವಾಗಿ ಕಾಣುತ್ತಿದ್ದಿತು. ಜಿಂಕೆಯು ಆಕರ್ಷಕವಾದ ಬಣ್ಣದಿಂದ ಕೂಡಿದ್ದು ಅತಿಮನೋಹರವಾಗಿದ್ದಿತು. ನಾನಾವಿಧವಾದ ರತ್ನಗಳಿಂದ ಸಮಲಂಕೃತವಾಗಿದ್ದಿತು. ಹೀಗೆ ಮಾರೀಚರಾಕ್ಷಸನು ಕ್ಷಣಮಾತ್ರದಲ್ಲಿ ಪರಮಶೋಭಾಯಮಾನವಾದ ಜಿಂಕೆಯಾದನು.

ವೈದೇಹಿಯ ಮನಸ್ಸಿನಲ್ಲಿ ಆಸೆಯನ್ನು ಹುಟ್ಟಿಸುವ ಸಲುವಾಗಿ ಆ ರಾಕ್ಷಸನು ಅತ್ಯಂತ ದರ್ಶನೀಯವಾದ ಮತ್ತು ಮನೋಹರವಾದ ರೂಪವನ್ನು ಧರಿಸಿ ಗೈರಿಕಾದಿ ಧಾತುಗಳಿಂದ ಚಿತ್ರಿತವಾಗಿದ್ದ, ರಮ್ಯವಾಗಿದ್ದ ರಾಮನ ಆಶ್ರಮಪ್ರದೇಶವನ್ನು ತನ್ನ ಕಾಂತಿಯಿಂದ ಮತ್ತಷ್ಟು ಉಜ್ವಲಗೊಳಿಸುತ್ತಾ ಆಶ್ರಮದ ಸುತ್ತಲೂ ಇದ್ದ ಗರಿಕೆಯ ಹುಲ್ಲನ್ನು ತಿನ್ನುತ್ತಾ ಸಂಚರಿಸುತ್ತಿದ್ದನು. ಬೆಳ್ಳಿಯ ನೂರಾರು ಚುಕ್ಕೆಗಳಿಂದ ಚಿತ್ರಿತವಾಗಿದ್ದ, ನೋಡಲು ಪ್ರಿಯವಾಗಿ ಕಾಣುತ್ತಿದ್ದ ಆ ಮಾಯಾಜಿಂಕೆಯು ಮರಗಳ ಚಿಗುರುಗಳನ್ನು ತಿನ್ನುತ್ತಾ ರಾಮನ ಆಶ್ರಮದ ಸುತ್ತಲೂ ಓಡಾಡುತ್ತಿದ್ದಿತು. ಪ್ರಕಾಶಮಾನವಾದ ಮತ್ತು ಚಿತ್ರಿತವಾದ ಪೃಷ್ಠಭಾಗದಿಂದ ಕೂಡಿದ್ದ ಆ ಮಾಯಾಮೃಗವು ಬಾಳೆಯ ಗಿಡಗಳ ನಡುವೆ ಲತಾಗೃಹದ ರೂಪದಲ್ಲಿದ್ದ ಪೊದರಿಗೆ ಹೋಗುತ್ತಲೂ, ಅಲ್ಲಿಂದ ಅತ್ತಲಿತ್ತ ನೆಗೆದಾಡಿಕೊಂಡು ಕಣಿಗಲೆ ಗಿಡಗಳ ಬಳಿಗೆ ಹೋಗುತ್ತಲೂ, ಕೆಲಸಮಯದಲ್ಲಿ ಮೆಲ್ಲ-ಮೆಲ್ಲನೆ ಹೆಜ್ಜೆಯಿಡುತ್ತಾ ಸೀತೆಯನ್ನು ಸಂದರ್ಶಿಸುತ್ತಲೂ ರಾಮನ ಆಶ್ರಮದ ಬಳಿಯಲ್ಲಿ ಯಥಾಸುಖವಾಗಿ ವಿಹರಿಸುತ್ತಿದ್ದಿತು. ಆ ಮಾಯಾಮೃಗವು ಒಮ್ಮೆ ಎಲ್ಲಿಗೋ ಹೋಗುತ್ತಿದ್ದಿತು. ಪುನಃ ಹಿಂದಕ್ಕೆ ಬರುತ್ತಿದ್ದಿತು. ಮುಹೂರ್ತಕಾಲ ಓಡಿಯೋಡಿಹೋಗುತ್ತಿದ್ದಿತು. ಪುನಃ ಅದೇ ವೇಗದಿಂದಲೇ ಹಿಂದಕ್ಕೂ ಬರುತ್ತಿದ್ದಿತು. ಕೆಲವು ಸಮಯಗಳಲ್ಲಿ ಆಶ್ರಮದ ಸಮೀಪದಲ್ಲಿ ನೆಲದ ಮೇಲೆ ನೆಗೆದಾಡುತ್ತಿದ್ದಿತು. ಮತ್ತೊಂದು ಕ್ಷಣದಲ್ಲಿ ಸುಮ್ಮನೇ ಕುಳಿತಿರುತ್ತಿದ್ದಿತು. ಒಮ್ಮೆ ಆಶ್ರಮದ ಬಾಗಿಲ ಬಳಿಗೇ ಬಂದುಬಿಡುತ್ತಿದ್ದಿತು. ಮತ್ತೊಂದು ಕ್ಷಣದಲ್ಲಿ ಜಿಂಕೆಗಳ ಗುಂಪಿನ ಹಿಂದೆ ಹೋಗಿಬಿಡುತ್ತಿದ್ದಿತು. ಮೃಗದ ಆಕಾರವನ್ನು ಹೊಂದಿದ್ದ

ಆ ರಾಕ್ಷಸನು ಜಿಂಕೆಗಳ ಗುಂಪನ್ನೇ ಅನುಸರಿಸಿ ಸೀತೆಯನ್ನು ನೋಡಬೇಕೆಂಬ ಇಚ್ಛೆಯಿಂದ ಪುನಃ ಆಶ್ರಮದ ಬಳಿಗೆ ಹಿಂದಿರುಗಿ ಬರುತ್ತಿದ್ದನು.

ಆ ಮಾಯಾಮೃಗವು ಆಶ್ರಮದ ಸಮೀಪದಲ್ಲಿ ಒಮ್ಮೊಮ್ಮೆ ಜಾರಿ ಬಿದ್ದು ಪುನಃ ಮೈಕೊಡವಿಕೊಂಡು ಮೇಲೆದ್ದು ಚಿತ್ರ-ವಿಚಿತ್ರವಾದ ಮಂಡಲ ಕ್ರಮದಲ್ಲಿ ಸುತ್ತಾಡುತ್ತಿದ್ದಿತು. ಅದೇ ವನದಲ್ಲಿ ಸಂಚರಿಸುತ್ತಿದ್ದ ಇತರ ಜಿಂಕೆಗಳು ನಯನಮನೋಹರವಾಗಿದ್ದ ಆ ಮಾಯಾಮೃಗದ ಬಳಿಗೆ ಬಂದು ಸ್ವಭಾವಾನುಗುಣವಾಗಿ ಅದನ್ನು ಮೂಸಿ ನೋಡಿ ಮರುಕ್ಷಣದಲ್ಲಿಯೇ ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದುವು. *

ಯಾವಾಗಲೂ ಮೃಗಗಳ ವಧೆಯಲ್ಲಿಯೇ ನಿರತನಾಗಿರುತ್ತಿದ್ದ ಆ ರಾಕ್ಷಸನು ತನ್ನ ಸ್ವರೂಪವನ್ನು ಮರೆಸಿಕೊಂಡಿರಬೇಕೆಂಬ ಆಶಯದಿಂದ ಆ ವನ್ಯಮೃಗಗಳನ್ನು ಒಮ್ಮೆ ಮುಟ್ಟುತ್ತಿದ್ದನೇ ಹೊರತು ತಿನ್ನುತ್ತಿರಲಿಲ್ಲ.

ಅದೇ ಸಮಯದಲ್ಲಿ ಶುಭದರ್ಶನಳಾದ ವೈದೇಹಿಯು ಹೂವುಗಳನ್ನು ಬಿಡಿಸುವುದರಲ್ಲಿ ನೆಟ್ಟಮನಸ್ಸುಳ್ಳವಳಾಗಿ ಹೂಗಳಿಂದ ತುಂಬಿದ ಗಿಡ-ಮರ-ಬಳ್ಳಿಗಳ ಬಳಿಗೆ ಹೋದಳು. ಮಾದಕವಾದ ದೃಷ್ಟಿಯುಳ್ಳವಳಾಗಿದ್ದ ಮತ್ತು ಸುಂದರವಾದ ಮುಖಾರವಿಂದದಿಂದ ಕಂಗೊಳಿಸುತ್ತಿದ್ದ ಅವಳು ಕಣಿಗಲೆ ಹೂಗಳನ್ನೂ, ಅಶೋಕಪುಷ್ಪಗಳನ್ನೂ, ಆಮ್ರಕುಸುಮಗಳನ್ನೂ ಬಿಡಿಸಿಕೊಳ್ಳುತ್ತಾ ಗಿಡಗಳ ಮಧ್ಯದಲ್ಲಿ ತಿರುಗಾಡುತ್ತಿದ್ದಳು. ಅರಣ್ಯವಾಸಕ್ಕೆ ಅನರ್ಹಳಾದ ನಾರೀಮಣಿಯಾದ ಸೀತೆಯು ಹೂಗಳನ್ನು ಬಿಡಿಸಿಕೊಳ್ಳುತ್ತಾ ಗಿಡದಿಂದ ಗಿಡಕ್ಕೆ ತಿರುಗಾಡುತ್ತಿದ್ದಾಗ ಮುತ್ತಿನ ಮಣಿಗಳಿಂದ ಚಿತ್ರಿತವಾಗಿ ಕಾಣುತ್ತಿದ್ದ ರತ್ನಮಯವಾದ ಆ ಜಿಂಕೆಯನ್ನು ಕಂಡಳು. ಸುಂದರವಾದ ಹಲ್ಲುಗಳಿಂದಲೂ ಮತ್ತು ತುಟಿಗಳಿಂದಲೂ ಕೂಡಿದ್ದ ವೈದೇಹಿಯು ಬೆಳ್ಳಿಯಂತೆ ಬಿಳುಪಾದ ಮತ್ತು ಗೈರಿಕಾದಿ ಧಾತುಗಳಂತೆ ನಾನಾವರ್ಣಗಳ ಕೂದಲುಗಳಿಂದ ಶೋಭಿಸುತ್ತಿದ್ದ ಆ ಚಿನ್ನದ ಜಿಂಕೆಯನ್ನು

*ತೋರಿಕೆಗೆ ಅದು ಅವುಗಳಿಗೆ ಮೃಗವಾಗಿ ಕಂಡರೂ ವಾಸನೆಯಿಂದ ಮೃಗವಲ್ಲವೆಂದು ಗ್ರಹಿಸಿ ಅಲ್ಲಿ ನಿಲ್ಲುವುದು ಅಪಾಯಕರವೆಂದು ಭಾವಿಸಿ ಓಡಿಹೋಗುತ್ತಿದ್ದುವು. ಸಾಮಾನ್ಯವಾಗಿ ಪ್ರಾಣಿಗಳು ವಾಸನೆಯಿಂದಲೇ ತಮಗೆ ಹಿತವಾದ ಮತ್ತು ಅಹಿತವಾದ ವಸ್ತುಗಳನ್ನು ಪತ್ತೆಮಾಡುತ್ತವೆ.

ಅಚ್ಚರಿಯಿಂದ ಕಣ್ಣುಗಳನ್ನರಳಿಸಿಕೊಂಡು ಪ್ರೀತಿಪೂರ್ವಕವಾಗಿ ನೋಡಿದಳು. ಮಾಯಾಮಯವಾಗಿದ್ದ ಆ ಜಿಂಕೆಯೂ ರಾಮನ ಮಡದಿಯಾದ ಸೀತೆಯನ್ನು ಚಂಚಲವಾದ ಕಣ್ಣುಗಳಿಂದ ವೀಕ್ಷಿಸುತ್ತಾ ತನ್ನ ಕಾಂತಿಯಿಂದ ಆ ವನವನ್ನೇ ಪ್ರಕಾಶಗೊಳಿಸುವುದೋ ಎಂಬಂತೆ ಓಡಾಡುತ್ತಿದ್ದಿತು. ಹಿಂದೆ ಯಾವಾಗಲೂ ಕಾಣದಿದ್ದ, ನಾನಾವಿಧವಾದ ರತ್ನಗಳಿಂದಲೇ ನಿರ್ಮಿತವಾಗಿದ್ದ ಆ ಮಾಯಾಮೃಗವನ್ನು ನೋಡಿ ಸೀತೆಯು ಅತ್ಯಂತವಿಸ್ಮಿತಳಾದಳು.

೪೨ನೆಯ ಸರ್ಗವು ಮುಗಿಯಿತು.



ಜಿಂಕೆಯ ವಿಷಯದಲ್ಲಿ ಲಕ್ಷ್ಮಣನ ಸಂದೇಹ : ಜಿಂಕೆಯನ್ನು ಜೀವಸಹಿತವಾಗಿ ಅಥವಾ ಕೊಂದಾದರೂ ತರಲು ರಾಮನಿಗೆ ಸೀತೆಯ ಒತ್ತಾಯ : ಶ್ರೀರಾಮನು ಸೀತೆಯ ರಕ್ಷಣಾಭಾರವನ್ನು ಲಕ್ಷ್ಮಣನಿಗೊಪ್ಪಿಸಿ ಮಾಯಾಮೃಗವನ್ನು ಹಿಂಬಾಲಿಸಿದುದು

ಸಾ ತಂ ಸಂಪ್ರೇಕ್ಷ್ಯ ಸುಶ್ರೋಣೀ ಕುಸುಮಾನ್ಯಪಚಿನ್ವತೀ ।
ಹೈಮರಾಜತವರ್ಣಾಭ್ಯಾಂ ಪಾರ್ಶ್ವಾಭ್ಯಾಮುಪಶೋಭಿತಮ್ ॥೧॥

ಪ್ರಹೃಷ್ಟಾ ಚಾನವದ್ಯಾಙ್ಗೀ ಮೃಷ್ಟಹಾಟಕವರ್ಣಿನೀ ।
ಭರ್ತಾರಮಭಿಚಕ್ರನ್ದ ಲಕ್ಷ್ಮಣಂ ಚಾಪಿ ಸಾಯುಧಮ್ ॥೨॥

ಸುಂದರವಾದ ಕಟಿಪ್ರದೇಶವುಳ್ಳವಳೂ, ಕಳಂಕರಹಿತವಾದ ಅವಯವಗಳುಳ್ಳವಳೂ, ಪುಟಕ್ಕೆ ಹಾಕಿದ ಚಿನ್ನದಂತೆ ಶರೀರಕಾಂತಿಯುಳ್ಳವಳೂ ಆಗಿದ್ದ ಸೀತಾದೇವಿಯು ಹೂಗಳನ್ನು ಬಿಡಿಸುತ್ತಿರುವಾಗ ಚಿನ್ನ ಮತ್ತು ಬೆಳ್ಳಿಯ ಪಕ್ಕೆಗಳಿಂದ ಕೂಡಿ ಶೋಭಾಯಮಾನವಾಗಿದ್ದ ಮಾಯಾಮೃಗವನ್ನು ನೋಡಿ ಆನಂದಭರಿತಳಾಗಿ ಪತಿಯನ್ನೂ ಮತ್ತು ಆಯುಧಪಾಣಿಯಾಗಿದ್ದ ಮೈದುನನನ್ನೂ ಕೂಗಿಕೊಂಡಳು.

ಆಗಚ್ಛಾಗಚ್ಛ ಶೀಘ್ರಂ ವೈ ಆರ್ಯಪುತ್ರ ಸಹಾನುಜ ॥೩॥

"ಆರ್ಯಪುತ್ರ ! ಬೇಗ ಬಾ. ಲಕ್ಷ್ಮಣನೊಡನೆ ಓಡೋಡಿ ಬಾ"—

ಎಂದು ಕ್ಷಣ-ಕ್ಷಣಕ್ಕೂ ಕೂಗುತ್ತಾ ಮಾಯಾಮೃಗವನ್ನು ದಿಟ್ಟಿಸಿ ನೋಡು ತ್ತಿದ್ದಳು.

ಸೀತೆಯಿಂದ ಕರೆಯಲ್ಪಟ್ಟ ನರಶ್ರೇಷ್ಠರಾದ ರಾಮ-ಲಕ್ಷ್ಮಣರು ಒಡನೆಯೇ ಆಶ್ರಮದಿಂದ ಹೊರಬಂದು ಸುತ್ತಲೂ ನೋಡುತ್ತಿರುವಾಗ ಹತ್ತಿರದಲ್ಲಿದ್ದ ಆ ಚಿನ್ನದ ಜಿಂಕೆಯನ್ನು ನೋಡಿದರು. ನೋಡಿದೊಡನೆಯೇ ಸಂಶಯಗೊಂಡ ಲಕ್ಷ್ಮಣನು ರಾಮನಿಗೆ ಹೇಳಿದನು :

"ರಾಮಭದ್ರ ! ಆ ಮಾರೀಚರಾಕ್ಷಸನೇ ಈ ಮೃಗರೂಪವನ್ನು ಧರಿಸಿ ಬಂದಿರುವನೆಂದು ನನಗೆ ತೋರುತ್ತಿದೆ. ಮನಬಂದಂತೆ ನಾನಾರೂಪ ಗಳನ್ನು ಧರಿಸುವ ಆ ಪಾಪಿಷ್ಠನು ಕಪಟವೇಷಗಳನ್ನು ಧರಿಸಿ ಅರಣ್ಯಕ್ಕೆ ಬೇಟೆಯಾಡಲು ಸಂತೋಷದಿಂದ ಬರುವ ಅನೇಕರಾಜರನ್ನು ಸಂಹರಿಸಿದ್ದಾನೆ. ಆಕಾಶದಲ್ಲಿ ಅತ್ಯಂತಪ್ರಕಾಶಮಾನವಾಗಿ ಕಾಣುವ, ಕ್ಷಣಭಂಗುರ ವಾದ, ಗಂಧರ್ವನಗರಿಗೆ ಸದೃಶವಾಗಿರುವ ಈ ರೂಪವು ಮಾಯಾವಿದ್ಯೆಯನ್ನು ಚೆನ್ನಾಗಿ ತಿಳಿದಿರುವ ಮಾರೀಚನದೇ ಆಗಿದೆ. ರಾಘವ ! ಅನರ್ಘ ವಾದ ರತ್ನಗಳಿಂದಲೇ ಚಿತ್ರಿತವಾಗಿರುವ ಈ ವಿಧವಾದ ಮೃಗವು ಜಗತ್ತಿನಲ್ಲಿಯೇ ಇಲ್ಲ. ಆದುದರಿಂದ ಇದು ಮಾಯಾಮೃಗವೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ."

ಮಾಯಾಮೃಗದ ಚರ್ಮ ಮತ್ತು ಮೈಬಣ್ಣಗಳಿಗೆ ಮರುಳಾದ ಸೀತೆಯು–ಲಕ್ಷ್ಮಣನ ಮಾತನ್ನು ಮಧ್ಯೆಯೇ ತಡೆಯುತ್ತಾ ಮಂದಹಾಸ ಪೂರ್ವಕವಾಗಿ ಅತ್ಯಂತಸಂತೋಷದಿಂದ ರಾಮನಿಗೆ ಹೇಳಿದಳು :

"ಆರ್ಯಪುತ್ರ ! ಈ ಜಿಂಕೆಯು ಬಹಳ ಸುಂದರವಾಗಿದೆ. ಇದು ನನ್ನ ಮನಸ್ಸನ್ನು ಬಹಳವಾಗಿ ಸೆಳೆದುಬಿಟ್ಟಿದೆ. ಈಗಲೇ ಇದನ್ನು ಹಿಡಿದು ತಾ. ನಮಗೆ ಆಟವಾಡಿಕೊಂಡಿರಲು ಉಪಯೋಗವಾಗುತ್ತದೆ.

ನಮ್ಮ ಈ ಆಶ್ರಮಪ್ರದೇಶದಲ್ಲಿ ಸುಂದರವಾಗಿ ಕಾಣುವ ಅನೇಕ ಪ್ರಾಣಿಗಳು ಗುಂಪು-ಗುಂಪಾಗಿ ಸಂಚರಿಸುತ್ತಲೇ ಇರುತ್ತವೆ. ಶ್ರೇಷ್ಠವಾದ ಮತ್ತು ಮನೋಹರವಾದ ರೂಪವುಳ್ಳ ಬಿಳಿಯಬಾಲದ ಚಮರಮೃಗಗಳೂ,

ಕಪ್ಪು ಬಾಲದ ಸೃಮರಮೃಗಗಳೂ, ಕರಡಿಗಳೂ, ಜಿಂಕೆಗಳೂ, ಕಪಿಗಳೂ, ಕಿನ್ನರಮೃಗಗಳೂ * ಓಡಾಡುತ್ತಲೇ ಇರುತ್ತವೆ. ಆದರೆ ತೇಜಸ್ಸು-ಕ್ಷಮೆ-ಪ್ರಕಾಶ ಇವುಗಳಿಂದ ಕೂಡಿರುವ ಶ್ರೇಷ್ಠವಾದ ಈ ಜಿಂಕೆಯಂತಹ ಜಿಂಕೆಯನ್ನು ನಾವು ಈ ಹಿಂದೆ ಯಾವಾಗಲೂ ಕಂಡಿರಲೇ ಇಲ್ಲ. ಹಲವಾರು ಬಣ್ಣಗಳಿಂದ ಚಿತ್ರಿತವಾಗಿ ಕಂಗೊಳಿಸುತ್ತಿರುವ ಅಂಗಗಳುಳ್ಳ, ರತ್ನದ ಬಿಂದುಗಳಿಂದಲೇ ಸಮಲಂಕೃತವಾಗಿ ಚಂದ್ರನಂತೆಯೇ ಬೆಳಗುತ್ತಿರುವ ಈ ಜಿಂಕೆಯು ತನ್ನ ಕಾಂತಿಯಿಂದ ಅರಣ್ಯವನ್ನೇ ಬೆಳಗುತ್ತಾ ನಿರಂತರವಾಗಿ ಪ್ರಕಾಶಿಸುತ್ತಿದೆ. ಆಹ! ಎಂತಹ ರೂಪು! ಎಂತಹ ಸೌಂದರ್ಯ! ಎಂತಹ ಶೋಭಾಯಮಾನವಾದ ಸ್ವರಸಂಪತ್ತು! ವಿಚಿತ್ರವಾದ ಅಂಗಾಂಗಗಳಿಂದ ಕೂಡಿರುವ ಪರಮಾದ್ಭುತವಾದ ಈ ಜಿಂಕೆಯು ನನ್ನ ಮನಸ್ಸನ್ನೇ ಸೂರೆಗೊಳ್ಳುವುದೋ ಎಂಬಂತಿದೆ.

ರಾಘವ! ಈ ಜಿಂಕೆಯು ಜೀವಂತವಾಗಿಯೇ ನಿನ್ನ ವಶವಾಗುವ ಪಕ್ಷದಲ್ಲಿ ಇದು ಪರಮಾದ್ಭುತವೇ ಆಗುತ್ತದೆ. ಹಾಗೂ ಎಲ್ಲರಲ್ಲಿಯೂ ವಿಸ್ಮಯವನ್ನೂ ಉಂಟುಮಾಡುತ್ತದೆ. ನಾವೆಲ್ಲರೂ ವನವಾಸವನ್ನು ಮುಗಿಸಿ ನಮ್ಮ ರಾಜಧಾನಿಗೆ ಹೋದನಂತರ ಈ ಚಿನ್ನದ ಜಿಂಕೆಯು ನಮ್ಮ ಅಂತಃಪುರಕ್ಕೇ ಅಲಂಕಾರಪ್ರಾಯವಾಗಿರುತ್ತದೆ. ಆರ್ಯಪುತ್ರನಾದ ನಿನಗೂ, ಭರತನಿಗೂ, ಅತ್ತೆಯರಾದ ಕೌಸಲ್ಯಾ-ಕೈಕೇಯೀ-ಸುಮಿತ್ರೆಯರಿಗೂ ದಿವ್ಯವಾದ ಈ ಜಿಂಕೆಯ ಸುಂದರರೂಪವು ವಿಸ್ಮಯವನ್ನುಂಟುಮಾಡುತ್ತದೆ. ಒಂದು ವೇಳೆ ಜೀವಸಹಿತವಾಗಿ ಈ ಜಿಂಕೆಯು ನಿನಗೆ ಸಿಕ್ಕದೇ ಹೋದರೂ ಇದರ ಚರ್ಮವೇ ನನಗೆ ಅತ್ಯಂತಪ್ರಿಯವಾಗುತ್ತದೆ. ಎಳೆಯದಾದ ಗರಿಕೆಯ ಹುಲ್ಲಿನ ಆಸನದಲ್ಲಿ ಕುಳಿತುಕೊಳ್ಳುತ್ತಿರುವ ನಾನು ಸತ್ತುಹೋದ ಈ ಜಿಂಕೆಯ ಸುವರ್ಣಮಯವಾದ ಚರ್ಮವನ್ನು ಹಾಸಿ ಅದರ ಮೇಲೆ ನಿನ್ನ ಬಳಿಯಲ್ಲಿ ಕುಳಿತುಕೊಳ್ಳಲು ಬಯಸಿದ್ದೇನೆ.

ಕಾಮವೃತ್ತಮಿದಂ ರೌದ್ರಂ ಸ್ತ್ರೀಣಾಮಸದೃಶಂ ಮತಮ್ ।
ವಪುಷಾ ತ್ವಸ್ಯ ಸತ್ತ್ವಸ್ಯ ವಿಸ್ಮಯೋ ಜನಿತೋ ಮಮ ॥೨೧॥

---

* ಕಿನ್ನರಃ–ಮನುಷ್ಯನ ಮುಖ ಮತ್ತು ಕುದುರೆಯ ಮೈಯುಳ್ಳ ಅಥವಾ ಕುದುರೆಯ ಮುಖ ಮತ್ತು ಮನುಷ್ಯನ ಮೈಯುಳ್ಳ ಒಂದು ವಿಚಿತ್ರಪ್ರಾಣಿ.

ಈ ನನ್ನ ಕಾಮನೆಯು ಭಯಂಕರವಾದುದೇ ಸರಿ. ಇಂತಹ ಕಾಮನೆಯು ಸಾಧ್ವಿಯರಿಗೆ ಉಚಿತವೂ ಅಲ್ಲ. ಆದರೂ ಈ ಪ್ರಾಣಿಯ ಶರೀರದ ಕಾಂತಿಯಿಂದ ನನಗೆ ಅತಿಯಾದ ವಿಸ್ಮಯವುಂಟಾಗಿದೆ. ಅದಕ್ಕಾಗಿ ಮನಸ್ಸು ಹೀಗೆ ಬಯಸುತ್ತಿದೆ."

ಸುವರ್ಣಮಯವಾದ ಕೂದಲುಗಳಿಂದಲೂ, ಇಂದ್ರನೀಲಮಣಿಗೆ ಸಮಾನವಾದ ಕೊಂಬುಗಳಿಂದಲೂ, ಬಾಲಸೂರ್ಯನ ಬಣ್ಣದಿಂದಲೂ, ನಕ್ಷತ್ರಗಳ ಸಾಲುಗಳಂತಿರುವ ಬಿಳಿಯ ಚುಕ್ಕೆಗಳ ಹೊಳಪಿನಿಂದಲೂ ಕೂಡಿದ್ದ ಆ ಜಿಂಕೆಯನ್ನು ನೋಡಿ ರಾಮನಿಗೂ ವಿಸ್ಮಯವುಂಟಾಯಿತು.

ಶ್ರೀರಾಮನು ಸೀತೆಯ ಮಾತನ್ನು ಕೇಳಿದನು. ಅದ್ಭುತವಾಗಿದ್ದ ಆ ಮೃಗವನ್ನು ತಾನೂ ನೋಡಿದನು. ಸೀತೆಯಿಂದಲೂ ಪ್ರಚೋದಿತನಾಗಿ ಜಿಂಕೆಯ ರೂಪದಿಂದ ಆಕರ್ಷಿತನೂ ಆದನು. ಅವನಿಗೂ ಅದನ್ನು ಹಿಡಿದು ತರಬೇಕೆಂಬ ಆಸೆಯುಂಟಾಯಿತು. ಪರಮಹೃಷ್ಟನಾಗಿ ತಮ್ಮನಾದ ಲಕ್ಷ್ಮಣನಿಗೆ ಹೇಳಿದನು :

"ಅಚ್ಚರಿಯ ಮೃಗವನ್ನು ಕಂಡು ಸಂತೋಷದಿಂದ ಹೊರಹೊಮ್ಮುತ್ತಿರುವ ವೈದೇಹಿಯ ಆಸೆಯನ್ನಾದರೂ ನೋಡು; ಲಕ್ಷ್ಮಣ! ಅತ್ಯಂತ ಶ್ರೇಷ್ಠವಾದ ರೂಪವಿರುವ ಇಂತಹ ಮತ್ತೊಂದು ಜಿಂಕೆಯು ಈಗ ಎಲ್ಲಿಯೂ ಇರಲಾರದು. ಇಂದ್ರನ ನಂದನವನದಲ್ಲಾಗಲೀ ಕುಬೇರನ ಚೈತ್ರರಥೋದ್ಯಾನದಲ್ಲಾಗಲೀ ಇದಕ್ಕೆ ಸಮಾನವಾದ ಜಿಂಕೆಯಿರಲು ಸಾಧ್ಯವಿಲ್ಲ. ಹೀಗಿರುವಾಗ ಪೃಥ್ವಿಯಲ್ಲಿ ಇದಕ್ಕೆ ಸಮಾನವಾದ ಜಿಂಕೆಯು ಹೇಗಿದ್ದೀತು? ಸುಳಿಗಳಲ್ಲಿರುವ ಕೂದಲುಗಳೂ, ಉಳಿದ ಕಡೆಗಳಲ್ಲಿರುವ ಕೂದಲುಗಳ ಸಾಲುಗಳೂ, ಚಿತ್ರಿತವಾದ ಸುವರ್ಣದ ಚುಕ್ಕೆಗಳೂ ಈ ಮೃಗವನ್ನಾಶ್ರಯಿಸಿ ಶೋಭಾಯಮಾನವಾಗಿ ಕಾಣುತ್ತಿವೆ. ಇದು ಆಕಳಿಸುವಾಗ ಬಾಯಿಂದ ಹೊರಬರುವ–ಮೇಘಮಂಡಲದಿಂದ ಹೊರಟ ಮಿಂಚಿನೋಪಾದಿಯಲ್ಲಿ ಕಾಣುವ–ಪ್ರದೀಪ್ತವಾದ, ಅಗ್ನಿಜ್ವಾಲೆಗೆ ಸಮಾನವಾದ ನಾಲಿಗೆಯನ್ನಾದರೂ ನೋಡು, ಲಕ್ಷ್ಮಣ! ಎಷ್ಟು ಸುಂದರವಾಗಿದೆ. ಇದರ ಮುಖಸಂಪುಟವು ಇಂದ್ರನೀಲಮಣಿಯಿಂದ ಮಾಡಿದ ಪಾನಪಾತ್ರೆಯಂತೆಯೇ ಕಾಣುತ್ತಿದೆ. ಹೊಟ್ಟೆಯು ಶಂಖ ಮತ್ತು ಮುತ್ತುಗಳಂತೆ ಬಿಳುಪಾಗಿದೆ.

ಬಣ್ಣಿಸಿ ನಿರೂಪಿಸಲು ಅಶಕ್ಯವಾದ ಸೌಂದರ್ಯವುಳ್ಳ ಈ ಸುವರ್ಣಮೃಗವು ಯಾರ ಮನಸ್ಸನ್ನು ತಾನೇ ಆಕರ್ಷಿಸುವುದಿಲ್ಲ? ಸುವರ್ಣಮಯವೂ, ರತ್ನಮಯವೂ ಆಗಿರುವ ಈ ಜಿಂಕೆಯನ್ನು ನೋಡಿ ಯಾರ ಮನಸ್ಸು ತಾನೇ ವಿಸ್ಮಯಗೊಳ್ಳುವುದಿಲ್ಲ? ಹೀಗಿರುವಾಗ ಬಾಲೆಯಾದ ಮೈಥಿಲಿಯು ವಿಸ್ಮಯಗೊಂಡಿರುವುದರಲ್ಲಿ ಸಂಶಯವೇನಿದೆ? ಬಿಲ್ಗಾರರಾದ ರಾಜರು ಬೇಟೆಯಾಡುವಾಗ ಅರಣ್ಯದ ಮಧ್ಯದಲ್ಲಿರುವ ಮೃಗಗಳನ್ನು ವಿಹಾರಕ್ಕಾಗಿ ಅಥವಾ ಮಾಂಸಕ್ಕಾಗಿ ಕೊಲ್ಲುತ್ತಾರೆ. ವಿಧ-ವಿಧವಾದ ಧಾತುಗಳೂ* ಮಣಿ-ರತ್ನ-ಸುವರ್ಣಗಳೂ ಅರಣ್ಯದಲ್ಲಿ ಹೇರಳವಾಗಿರುತ್ತವೆ. ಮಹಾರಣ್ಯಗಳಲ್ಲಿ ರಾಜರು ಇಂತಹ ಐಶ್ವರ್ಯವನ್ನು ಪ್ರಯತ್ನಪೂರ್ವಕವಾಗಿ ಹುಡುಕುತ್ತಲೇ ಇರುತ್ತಾರೆ.

**ತತ್ಸಾರಮಖಿಲಂ ನೄಣಾಂ ಧನಂ ನಿಚಯವರ್ಧನಮ್ ।**
**ಮನಸಾ ಚಿನ್ತಿತಂ ಸರ್ವಂ ಯಥಾ ಶುಕ್ರಸ್ಯ ಲಕ್ಷ್ಮಣ ॥೩೨॥**[1]

ಮನಸ್ಸಿನಲ್ಲಿ ಚಿಂತಿಸಿದ ಮಾತ್ರದಿಂದಲೇ ಕುಬೇರನ ಸಕಲೈಶ್ವರ್ಯವೂ ಶುಕ್ರನಿಗೆ ಸೇರಿದಂತೆ-ಧಾತುಗಳ ಸಾರವೆಲ್ಲವೂ ರಾಜರ ಧನವಾಗಿ ಅವರ ಕೋಶವನ್ನು ವರ್ಧಿಸುತ್ತದೆ.

---

*ಧಾತುಗಳು ಏಳು: ಸ್ವರ್ಣಂ ರೂಪ್ಯಂ ಚ ತಾಮ್ರಂ ಚ ರಂಗಂ ಯಶೋದಮೇವ ಚ । ಸೀಸಂ ಲೋಹಂ ಚ ಸಪ್ತೈತೇ ಧಾತವೋ ಗಿರಿಸಮ್ಭವಾಃ-ಚಿನ್ನ, ಬೆಳ್ಳಿ, ತಾಮ್ರ, ರಂಗ, ಯಶೋದ, ಸೀಸ, ಲೋಹ-ಈ ಏಳೂ ಪರ್ವತಗಳಲ್ಲಿ ಹುಟ್ಟುಗಿರುವ ಏಳು ಧಾತುಗಳು.

1 ಮನಸಾ ಚಿನ್ತಿತಂ ಸರ್ವಂ ಯಥಾ ಶುಕ್ರಸ್ಯ ಲಕ್ಷ್ಮಣ। ಎಂಬುದಕ್ಕೆ ವ್ಯಾಖ್ಯಾನಕಾರರು ನಾನಾವಿಧವಾಗಿ ವ್ಯಾಖ್ಯಾನಮಾಡಿರುತ್ತಾರೆ. ಶುಕ್ರಂ=ಬ್ರಹ್ಮ, ಸಪರ್ಯಗಾಚ್ಛುಕ್ರಮಕಾಯಮವ್ರಣಮ್ -ಎಂಬ ಶ್ರುತಿವಾಕ್ಯದಂತೆ ಶುಕ್ರಶಬ್ದಕ್ಕೆ ಬ್ರಹ್ಮ ಎಂದು ಹೆಸರು. ಶುಕ್ರಸ್ಯ=ಬ್ರಹ್ಮಲೋಕಂ ಪ್ರಾಪ್ತಸ್ಯ ತದ್ರೂಪಮಾಪನ್ನಸ್ಯ ಮನಸಾ ಚಿನ್ತಿತಂ ಸರ್ವಂ=ಸಂಕಲ್ಪಮಾತ್ರಸಿದ್ಧಂ ಸರ್ವಂ ಭೋಗ್ಯವಸ್ತು. ಬ್ರಹ್ಮಲೋಕಕ್ಕೆ ಹೋದವನಿಗೆ ಬ್ರಹ್ಮರೂಪವನ್ನು ಪಡೆದವನಿಗೆ ಮನಸ್ಸಿನಲ್ಲಿ ಚಿಂತಿಸಿದ ಸಕಲ ಭೋಗವಸ್ತುಗಳೂ ಒಡನೆಯೇ ಸಿದ್ಧವಾಗುತ್ತವೆ. ಮತ್ತೊಬ್ಬರು ಶುಕ್ರ ಎಂದರೆ ಶುಕ್ರಾಚಾರ್ಯರು ಎಂದೇ ಅರ್ಥಮಾಡಿ ಅವರ ಮನಸ್ಸಂಕಲ್ಪದಂತೆ ಧನವು ಕೋಶಾಗಾರಕ್ಕೆ ತುಂಬಿಕೊಳ್ಳುತ್ತದೆ. ಶುಕ್ರಸ್ಯ ಮನಸಾ ಚಿನ್ತಿತಂ ಸಂಕಲ್ಪಿತಂ ವಸ್ತುಜಾತಂ ತಥೈವಾವಿರ್ಭೂಯ ನಿಚಯವರ್ಧನಂ ಯಥಾ ತದ್ವತ್ ॥ ಮಹಾಭಾರತದ ಉದ್ಯೋಗ

**ಅರ್ಥೀ ಯೇನಾರ್ಥಕೃತ್ಯೇನ ಸಂವ್ರಜತ್ಯವಿಚಾರಯನ್ ।**
**ತಮರ್ಥಮರ್ಥಶಾಸ್ತ್ರಜ್ಞಾಃ ಪ್ರಾಹುರರ್ಥ್ಯಾಶ್ಚ ಲಕ್ಷ್ಮಣ ॥೩೩॥**

ಯಾವುದಾದರೊಂದು ವಸ್ತುವನ್ನು ಅಪೇಕ್ಷಿಸಿ ಅದರಲ್ಲಿರುವ ಸಾಧಕ-ಬಾಧಕಗಳನ್ನು ವಿಚಾರಮಾಡದೇ ಅದನ್ನು ಪಡೆಯಲು ಯತ್ನಿಸುವವನೇ ಅರ್ಥೀ. ಅರ್ಥೀ ಎಂಬ ಶಬ್ದಕ್ಕೆ ಅರ್ಥಶಾಸ್ತ್ರಜ್ಞರಾದ ಪಂಡಿತರು ಇದೇ ಅರ್ಥವನ್ನು ಹೇಳುತ್ತಾರೆ.* ಸುಂದರವಾದ ನಡುವುಳ್ಳ ವೈದೇಹಿಯು ಅತ್ಯುತ್ತಮವಾದ, ರತ್ನಪ್ರಾಯವಾದ, ಸುವರ್ಣಮಯವಾದ ಈ ಮೃಗದ ಚರ್ಮದ ಮೇಲೆ ನನ್ನೊಡನೆ ಕುಳಿತುಕೊಳ್ಳುವಳು. ಸುಖಸ್ಪರ್ಶಗಳೆಂದು ಪ್ರಸಿದ್ಧವಾಗಿರುವ ಕದಲೀ, ಪ್ರಿಯಕೀ, ಪ್ರವೇಣೀ, ಅವಿಕೀ–ಈ ಮೃಗಗಳ

---

ಪರ್ವ ಮತ್ತು ಶಾಂತಿಪರ್ವಗಳಲ್ಲಿ ಶುಕ್ರಶಬ್ದದ ವಿವರಣೆಯು ಹೀಗಿದೆ: ಉದ್ಯೋಗ ಪರ್ವದಲ್ಲಿ–ಮನುಷ್ಯೇಭ್ಯಃ ಸಮಾದತ್ತೇ ಶುಕ್ರಶ್ಚಿತ್ತಾರ್ಜಿತಂ ಧನಮ್ । ಶುಕ್ರನು ಚಿತ್ತದಿಂದ ಎಂದರೆ ಯೋಗದಿಂದ ಆರ್ಜಿಸಿದ ಧನವನ್ನು ತೆಗೆದುಕೊಳ್ಳುತ್ತಾನೆ ಮತ್ತು ಅದನ್ನೇ ಮನುಷ್ಯರಿಗೆ ಅವರ ದಶಾಕಾಲದಲ್ಲಿ ಕೊಡುತ್ತಾನೆ. ಈ ಅರ್ಥವೇ ಸಮೀಚೀನವಾಗಿ ಕಾಣುತ್ತದೆ. ಮನಸ್ಸಿನ ಮೂಲಕ ಶುಕ್ರನು ಹೇಗೆ ಸಂಪಾದಿಸಿದ ನೆಂಬುದಕ್ಕೆ ಶಾಂತಿಪರ್ವದಲ್ಲಿ ಉತ್ತರವಿದೆ. ಶುಕ್ರನು ಯೋಗಸಿದ್ಧಿಯಿಂದ ಕುಬೇರನ ಧನವನ್ನು ಅಪಹರಿಸಿದ ಕಥೆಯು ಮಹಾಭಾರತದ ಶಾಂತಿಪರ್ವದಲ್ಲಿ ಬರುತ್ತದೆ. ತಸ್ಯಾತ್ಮಾನಮಥಾವಿಶ್ಯ ಯೋಗಸಿದ್ಧೋ ಮಹಾಮುನಿಃ । ರುದ್ಧ್ವಾ ಧನಪತಿಂ ದೇವಂ ಯೋಗೇನ ಹೃತವಾನ್ವಸು ॥ – ಯೋಗಸಿದ್ಧನಾದ ಮಹಾಮುನಿಯಾದ ಶುಕ್ರನು ಯೋಗದ ಮೂಲಕವಾಗಿ ಕುಬೇರನ ಶರೀರವನ್ನು ಪ್ರವೇಶಿಸಿ ಅಲ್ಲಿಯೇ ಧನಪತಿಯಾದ ಕುಬೇರನನ್ನು ಪ್ರತಿಬಂಧಿಸಿ ಅವನ ಎಲ್ಲ ಐಶ್ವರ್ಯವನ್ನೂ ಅಪಹರಿಸಿದನು. ಆದುದ ರಿಂದ ಶುಕ್ರಶಬ್ದಕ್ಕೆ ಬ್ರಹ್ಮ ಎಂಬ ಅರ್ಥವು ಸರಿಹೊಂದುವುದಿಲ್ಲ. ಶಾಂತಿಪರ್ವದಲ್ಲಿ ಹೇಳಿರುವಂತೆ ಶುಕ್ರನು ಕುಬೇರನಲ್ಲಿ ಪ್ರವೇಶಿಸಿ ಅವನ ಮನಸ್ಸನ್ನು ನಿರೋಧಿಸಿ ಬೇಕಾದಷ್ಟು ಐಶ್ವರ್ಯವನ್ನು ಪಡೆದಂತೆ–ಎಂಬ ಅರ್ಥವೇ ಸಾಧು.

* ಅರ್ಥೀ ಎಂದರೇನು ? ಅರ್ಥವನ್ನು ಅಪೇಕ್ಷಿಸುವವನು ಅರ್ಥೀ. ಯಾವುದು ತನ್ನಲ್ಲಿಲ್ಲವೋ ಅದನ್ನು ಪಡೆಯಬೇಕೆಂದು ಇಚ್ಛಿಸುವವನು ಅರ್ಥೀ. 'ಅಸನ್ನಿಹಿತಾ ರ್ಥಾಪೇಕ್ಷೀ' ಆದರೆ ಅಪೇಕ್ಷಿಸುವುದು ಮಾತ್ರವಲ್ಲ ; ಅದರ ಸಾಧಕ-ಬಾಧಕಗಳೇನೆಂಬು ದನ್ನು ವಿಚಾರಮಾಡದೇ ಪಡೆದುಕೊಳ್ಳಲು ಪ್ರಯತ್ನಿಸುವವನೂ ಅರ್ಥೀ–ಎಂಬ ವಿಶೇ ಷಾರ್ಥವನ್ನು ರಾಮನಿಲ್ಲಿ ಹೇಳಿದ್ದಾನೆ. ಸಾಧಕ-ಬಾಧಕಗಳನ್ನು ವಿಚಾರಿಸುತ್ತಾ ಕುಳಿತರೆ ಅವನು ಅರ್ಥಿಯೇ ಆಗುವುದಿಲ್ಲ. ಯಾವುದನ್ನೇ ಅಪೇಕ್ಷಿಸಿದರೂ ಸಾಧಕ-ಬಾಧಕಗಳು ಇದ್ದೇ ಇರುತ್ತವೆ. ಸಾಧಕ-ಬಾಧಕಗಳನ್ನೂ, ಪುಣ್ಯಾಪುಣ್ಯಗಳನ್ನೂ ಪ್ರತಿಯೊಂದಕ್ಕೂ

ಚರ್ಮದ ಸ್ಪರ್ಶಸುಖವು ಈ ಜಿಂಕೆಯ ಚರ್ಮದ ಸ್ಪರ್ಶಸುಖಕ್ಕೆ ಸಮಾನ ವಾಗಲಾರದೆಂದು ನಾನು ಭಾವಿಸುತ್ತೇನೆ.*

ಏಷ ಚೈವ ಮೃಗಃ ಶ್ರೀಮಾನ್ಯಶ್ಚ ದಿವ್ಯೋ ನಭಶ್ಚರಃ ।
ಉಭಾವೇತೌ ಮೃಗೌ ದಿವ್ಯೌ ತಾರಾಮೃಗಮಹೀಮೃಗೌ ॥೩೭॥

ನಮಗೆ ತಿಳಿದಿರುವಂತೆ ದಿವ್ಯವಾದ ಎರಡು ಮೃಗಗಳಿವೆ. ಅದರಲ್ಲಿ ಒಂದು ನಕ್ಷತ್ರದ ಮೃಗ.* ಮತ್ತೊಂದು ಭೂಮಿಯ ಮೃಗ. ಆ ಮಹೀ ಮೃಗವೇ ಕಾಂತಿಯುಕ್ತವಾದ ಈ ಚಿನ್ನದ ಜಿಂಕೆ. ಮತ್ತೊಂದು ಆಕಾಶದಲ್ಲಿ ಸಂಚರಿಸುವ ಚಂದ್ರನಲ್ಲಿರುವ ಜಿಂಕೆ.

ಯದಿ ವಾಯಂ ತಥಾಯನ್ಮಾಂ ಭವೇದ್ವದಸಿ ಲಕ್ಷ್ಮಣ ।
ಮಾಯೈಷಾ ರಾಕ್ಷಸಸ್ಯೇತಿ ಕರ್ತವ್ಯೋಽಸ್ಯ ವಧೋ ಮಯಾ ॥೩೮॥

ವಿಚಾರಿಸುತ್ತಾ ಹೋದರೆ ಅವನು ನಿರಪೇಕ್ಷನಾಗಬೇಕಾಗುತ್ತದೆ. ಐಶ್ವರ್ಯವಾಗಲೀ, ಅಪರೂಪವಾದ ವಸ್ತುಗಳಾಗಲೀ – ಬೇಕೇಬೇಕೆನ್ನುವ ಸಂದರ್ಭಗಳು ಬಂದಾಗಲೇ ಮಾನವನು ಸಾಮಾನ್ಯವಾಗಿ ಶ್ರೀರಾಮನು ಹೇಳಿರುವಂತೆ 'ಸಂಪ್ರಜತ್ಯವಿಚಾರಯನ್' ಯಾವುದೊಂದನ್ನೂ ವಿಚಾರಮಾಡದೇ ಹೊರಟುಬಿಡುತ್ತಾನೆ. ಆದುದರಿಂದ ಅರ್ಥೀ ಎಂಬ ಶಬ್ದಕ್ಕೆ ತನ್ನಲ್ಲಿ ಇಲ್ಲದೇ ಇರುವ ಪದಾರ್ಥವನ್ನು ಇಚ್ಛಿಸುವುದು ಮಾತ್ರವಲ್ಲ; ಅದನ್ನು ತನ್ನದನ್ನಾಗಿ ಮಾಡಿಕೊಳ್ಳಲು ಸಾಧಕ-ಬಾಧಕಗಳನ್ನು ವಿಚಾರಿಸದೆಯೇ ಪ್ರಯತ್ನಿಸುವುದೂ ಆಗಿದೆ. ಪ್ರಸಕ್ತಸಂದರ್ಭದಲ್ಲಿ ಸೀತೆಯು ಚಿನ್ನದ ಜಿಂಕೆಯನ್ನು

* ಕದಲ್ಯೇನ ಕಾದಲೀ – ಕದಲೀ ಎಂಬುದು ಒಂದು ಮೃಗವಿಶೇಷ. ಬಾಳೆಯ ಗಿಡದ ಪಟ್ಟೆಯಂತೆ ಅದರ ಮೈ ನಯವಾಗಿರುತ್ತದೆ. ಆದುದರಿಂದಲೇ ಆ ಪ್ರಾಣಿಗೂ ಕಾದಲೀ ಎಂಬ ಹೆಸರು. ಆಸನಕ್ಕೆ ಉಪಯೋಗಿಸಲು ಯೋಗ್ಯವಾದ ಕಪ್ಪುಚುಕ್ಕೆಯ ಚರ್ಮವುಳ್ಳ ಜಿಂಕೆ. ಕದಲೀ ಹರಿಣಾನ್ತರೇ । ರಮ್ಭಾಯಾಂ ವೈಜಯನ್ತ್ಯಾಂ ಚ–[ ಹೇಮಕೋಶಃ ] ವೈಜಯಂತೀಕೋಶದಲ್ಲಿ ಅದರ ಲಕ್ಷಣವನ್ನೂ ಹೇಳಿದ್ದಾರೆ: ಕದಲೀ ತು ಬಿಲೇ ಶೇತೇ ಮೃದುಸೂಕ್ಷ್ಮೋಚ್ಚಕರ್ಬುರೈಃ । ನೀಲಾಗ್ರೈರ್ಲೋಮಭಿರ್ಯುಕ್ತಾ ಸಾ ವಿಂಶತ್ಯಙ್ಗುಲಾಯತಾ । ಇದು ಬಿಲದಲ್ಲಿ (ಗುಹೆಯಲ್ಲಿ) ಮಲಗುತ್ತದೆ. ಇದೊಂದು ಮೃಗವಿಶೇಷ. ಚಿತ್ರವರ್ಣದ್ದಾಗಿದೆ. ಇದರ ಕೂದಲುಗಳು ತುದಿ

* ತಾರಾಮೃಗಃ = ಮೃಗಶಿರಾನಕ್ಷತ್ರ. ಇದು ಚಂದ್ರದೇವತಾಕವಾದುದು. ಈ ನಕ್ಷತ್ರಕ್ಕೂ ಚಂದ್ರ ಎಂಬ ಹೆಸರೂ ಇದೆ. ಚಂದ್ರನಲ್ಲಿ ಕಾಣುವ ಮೃಗಲಾಂಛನವೇ ಮೃಗಶಿರಾನಕ್ಷತ್ರನೆಂದೂ ಹೇಳುತ್ತಾರೆ.

ಲಕ್ಷ್ಮಣ! ಒಂದು ವೇಳೆ ನೀನು ಹೇಳಿದಂತೆ ಇದು ಮಾರೀಚ ರಾಕ್ಷಸನ ಮಾಯೆಯೇ ಆಗಿರಬಹುದು. ಆಗಲೂ ಜಿಂಕೆಯ ರೂಪದಲ್ಲಿರುವ ರಾಕ್ಷಸನನ್ನು ಸಂಹರಿಸುವುದೂ ನನ್ನ ಕರ್ತವ್ಯವೇ ಆಗಿದೆ.

ದುಷ್ಟವಾದ ಮನಸ್ಸುಳ್ಳ, ಕ್ರೂರನಾದ ಮಾರೀಚನು ದಂಡಕಾರಣ್ಯಗಳಲ್ಲಿ ಸಂಚರಿಸುತ್ತಾ ಅನೇಕಮುನಿಶ್ರೇಷ್ಠರನ್ನು ಹಿಂಸಿಸಿದ್ದಾನೆ. ಬೇಟೆಯಾಡಲು ಬಂದಾಗ ಮಹಾಧನುಷ್ಮಂತರಾದ ರಾಜರನ್ನೂ ಬಹಳ ದೂರಕ್ಕೆ ಒಯ್ದು ಅನಂತರ ನಿಜರೂಪವನ್ನುತಾಳಿ ಸಂಹರಿಸಿದ್ದಾನೆ, ಆದುದರಿಂದ ನಿನ್ನ ಅಭಿಪ್ರಾಯದಂತೆ ಮೃಗದ ವೇಷವನ್ನು ಧರಿಸಿ ಬಂದಿರುವ ಆ ರಾಕ್ಷಸನನ್ನು ವಧಿಸಲೇಬೇಕು. ರಾಕ್ಷಸರು ಮೋಸದಿಂದ ತಪಸ್ವಿಗಳನ್ನು ಕೊಲ್ಲುವುದು ಹಿಂದಿನಿಂದಲೂ ನಡೆದುಬಂದಿದೆ. ವಾತಾಪಿಯೆಂಬ ರಾಕ್ಷಸನೊಬ್ಬನಿದ್ದನು. ಅವನೂ ಹೀಗೆಯೇ ತಪಸ್ವಿಗಳಿಗೆ ಮೋಸಮಾಡಿ ಮಾಂಸದ ರೂಪದಲ್ಲಿ ಅವರ ಹೊಟ್ಟೆಯನ್ನು ಹೊಕ್ಕು ಅನಂತರ-ಹೇಸರಗತ್ತೆಯ ಗರ್ಭವು

---

ಅಪೇಕ್ಷಿಸಿದಳು. ಚಿನ್ನದ ಜಿಂಕೆಯೇ 'ಅರ್ಥ'. ಅದನ್ನು ಅವಳು ಅಪೇಕ್ಷಿಸಿದ್ದಾಳೆ. ರಾಮನೂ ಅಪೇಕ್ಷಿಸಿದ್ದಾನೆ. ರಾಮನೂ ಅರ್ಥಿಯಾಗಿದ್ದಾನೆ. ಅರ್ಥೀ-ಶಬ್ದದ ಅರ್ಥದಂತೆ – "ಇದು ಮೃಗವೇ ? ಮಾಯಾಮೃಗವೇ ?" – ಎಂಬ ಯಾವುದನ್ನೂ ವಿಚಾರ ಮಾಡದೇ ಅವರ ಲಾಭಕ್ಕಾಗಿ ಪ್ರಯತ್ನಿಸುವುದೇ ಈಗಿನ ಕರ್ತವ್ಯವಾಗಿದೆ-ಎಂಬುದು ರಾಮನ ಅಭಿಪ್ರಾಯವಾಗಿದೆ. ರಾವಣನೂ ಸೀತೆಯನ್ನಾಶಿಸಿ ಇದೇ ಮಾರ್ಗದಲ್ಲೇ ಹೊರಟಿದ್ದ.

---

ಯಲ್ಲಿ ಕಪ್ಪಾಗಿರುತ್ತವೆ. ಇದು ಇಪ್ಪತ್ತು ಅಂಗುಲದಷ್ಟು ಉದ್ದವಾಗಿರುತ್ತದೆ. ಪ್ರಿಯಕೀ = ಇದೂ ಒಂದು ಜಾತಿಯ ಜಿಂಕೆ; ಚಿತ್ರಮೃಗ, ಮೈಮೇಲೆ ಚುಕ್ಕೆಯಿರುವ ಜಿಂಕೆ. ಪ್ರಿಯಕೀ ಲೋಮಭಿರ್ಯುಕ್ತಾ ಮೃದುಶ್ಚ ಮಸೃಣೈರ್ಘನೈಃ । ಇದು ನುಣುಪಾಗಿಯೂ, ದಟ್ಟವಾಗಿಯೂ ಇರುವ ಹೆಚ್ಚು ಕೂದಲಿನಿಂದ ಕೂಡಿರುತ್ತದೆ. ಇದರ ಕೂದಲು ಮೃದುವಾಗಿಯೂ ಇರುತ್ತದೆ. (ವೈಜಯನ್ತೀ) ಪ್ರವೇಣೀ = ಅಜ ವಿಶೇಷವೆಂದು ಒಬ್ಬ ವ್ಯಾಖ್ಯಾನಕಾರರು ಹೇಳಿದ್ದಾರೆ. ನಿಘಂಟುಕಾರರು ಈ ಪದಕ್ಕೆ ರತ್ನಗಂಬಳಿ ಎಂದು ಅರ್ಥಹೇಳಿದ್ದಾರೆ. ಆವಿಕೀ = ಅವಿರೇವ ಆವಿಕಃ ತಸ್ಯೇಯಂ ಆವಿಕೀ. ಅವಿ ಎಂದರೆ ಕುರಿ. ಕುರಿಯ ಉಣ್ಣೆಯಿಂದ ಮಾಡಿದ ಕಂಬಳಿ ಮೊದಲಾದುವು. ಆವಿಕೀ ಎಂಬುವಕ್ಕೆ ಇಲಿಯ ಚರ್ಮದ ಕಂಬಳಿ ಎಂದೂ ಅರ್ಥವಾಗುತ್ತದೆ. ಅವಿರ್ನಾ ಪರ್ವತೇ ಸೂರ್ಯೇ ಮೇಷೇ ಮೂಷಿಕಕಮ್ಬಲೇ [ನಾನಾರ್ಥರತ್ನಮಾಲಾ]

ಹೊಟ್ಟೆಯನ್ನೇ ಸೀಳಿಕೊಂಡು ಹೊರಬರುವಂತೆ–ಋಷಿಗಳ ಹೊಟ್ಟೆಯನ್ನು ಸೀಳಿಕೊಂಡು ಹೊರಬರುತ್ತಿದ್ದನು. ಹೀಗವನು ಬ್ರಾಹ್ಮಣರನ್ನೂ ಸಂಹರಿಸುತ್ತಿದ್ದನು.* ವಾತಾಪಿಯು ಒಮ್ಮೆ ಋಷಿಮಾಂಸದ ಮೇಲಿನ ಆಸೆಯಿಂದ ತೇಜಸ್ವಿಗಳಾದ ಮುನಿಪುಂಗವರಾದ ಅಗಸ್ತ್ಯರನ್ನು ಸಂಧಿಸಿದನು. ಉಪಚರಿಸುವ ವ್ಯಾಜದಿಂದ ಅವರಿಗೆ ಭಕ್ಷ್ಯವಾಗಿಯೂ ಪರಿಣಮಿಸಿದನು. ಮಾಂಸರೂಪದಲ್ಲಿ ಅವರ ಹೊಟ್ಟೆಯನ್ನು ಸೇರಿದ್ದ ರಾಕ್ಷಸನು ತನ್ನ ಪೂರ್ವರೂಪವನ್ನು ಧರಿಸಿ ಅಗಸ್ತ್ಯರ ಹೊಟ್ಟೆಯನ್ನು ಬಗೆದು ಹೊರಬರಲು ಬಯಸುತ್ತಿದ್ದಾಗ ಪೂಜ್ಯರಾದ ಅಗಸ್ತ್ಯರು ನಗುನಗುತ್ತಾ ವಾತಾಪಿಗೆ ಹೇಳಿದರು :

"ವಾತಾಪಿಯೇ ! ನೀನು–ಈ ಕಾರ್ಯವು ಅತ್ಯಂತಪಾಪಕರವಾದುದೆಂಬುದನ್ನು ವಿಚಾರಮಾಡದೇ–ನಿನ್ನ ದುಷ್ಟವಾದ ತೇಜಸ್ಸಿನಿಂದ ಪ್ರಪಂಚದಲ್ಲಿ ಅನೇಕಬ್ರಾಹ್ಮಣಶ್ರೇಷ್ಠರನ್ನೂ ವಿನಾಶಗೊಳಿಸಿರುವೆ. ಅದರ ಫಲವಾಗಿಯೇ ನೀನೀಗ ನನ್ನ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗಿರುವೆ. ಇನ್ನು ನೀನು ಹೊರಬರುವ ಸಾಧ್ಯತೆಯಿಲ್ಲ."

ಲಕ್ಷ್ಮಣ ! ಹೀಗೆ ವಾತಾಪಿಯು ಅಗಸ್ತ್ಯರಿಂದ ಹತನಾದನು. ಮಾರೀಚನು ಧರ್ಮನಿತ್ಯನಾದ ಜಿತೇಂದ್ರಿಯನಾದ ನನ್ನಂತಹವನನ್ನೂ ವಂಚಿಸಿದ್ದೇ ಆದರೆ ವಾತಾಪಿಯಂತೆ ಅವನೂ ಉಳಿಯಲಾರನು. ವಾತಾಪಿಯು ಅಗಸ್ತ್ಯರನ್ನು ವಂಚಿಸಲು ಹೋಗಿ ಹತನಾದಂತೆ ನನ್ನನ್ನು ವಂಚಿಸಲು ಬಂದಿರುವ ಈ ಮಾರೀಚನೂ ಹತನಾಗಿ ಹೋಗುವನು. ನನ್ನ

* ಅಶ್ವತರೀ = ಗಂಡುಕತ್ತೆಯಿಂದ ಹೆಣ್ಣುಕುದುರೆಯಲ್ಲಿ ಹುಟ್ಟಿದ್ದು ಅಶ್ವತರೀ ಅಥವಾ ಹೇಸರಗತ್ತೆ. ಅದರ ಲಕ್ಷಣವನ್ನು ಶಾಲಿಹೋತ್ರೀಯದಲ್ಲಿ ಹೀಗೆ ಹೇಳಿದೆ. ಖರರೂಕ್ಷಃ ಸ್ವರಸ್ತೀಕ್ಷ್ಣಃ ಖರಶೀಲಃ ಖರಾಙ್ಘ್ರಯಃ । ಕತ್ತೆಯಂತೆಯೇ ಇದಕ್ಕೆ ಒರಟು ಸ್ವಭಾವದ ಗುಣಗಳಿಗಿರುತ್ತವೆ. ಸ್ವರವೂ ಕರ್ಣಕಠೋರವಾಗಿರುತ್ತದೆ. ಕತ್ತೆಯ ಸ್ವಭಾವವೇ ಇದಕ್ಕೂ ಇರುತ್ತದೆ. ಕಾಲುಗಳೂ ಕತ್ತೆಯ ಕಾಲುಗಳಂತೆಯೇ ಇರುತ್ತವೆ. ಗರ್ಭವೇ ಇದನ್ನು ಸಂಹರಿಸುತ್ತದೆ: 'ಗರ್ಭಮಶ್ವತರ್ಯಾ ಇವ' ಎಂದು ವೇದದಲ್ಲಿ ಉದಾಹರಿಸಿರುವುದನ್ನೇ ಇಲ್ಲಿಯೂ ಉದಾಹರಿಸಿದ್ದಾರೆ. ಆದರೆ ಗರ್ಭವನ್ನು ಸೀಳಿಕೊಂಡು ಹೊರಬರುವ ಪ್ರಾಣಿಯೆಂದರೆ ಚೇಳು ಅಥವಾ ಏಡಿ. ಇದು ನಮಗೆ ಪ್ರತ್ಯಕ್ಷಪ್ರಮಾಣವಾಗಿ ಸಿಕ್ಕುತ್ತದೆ. ಹೇಸರಗತ್ತೆಯ ಗರ್ಭವು ತಾಯಿಯ ಹೊಟ್ಟೆಯನ್ನೇ ಸೀಳಿಕೊಂಡು ಹೊರಬರುವುದೆಂಬ ವಿಷಯವನ್ನು ನಾವು ಕೇಳಿಲ್ಲ. ಹೇಸರ

ನಿರ್ದೇಶದಂತೆ ನೀನು ಧನುರ್ಬಾಣಗಳನ್ನು ಹಿಡಿದು ಸನ್ನದ್ಧನಾಗಿ ಸೀತೆಯನ್ನು ರಕ್ಷಿಸು. ಲಕ್ಷ್ಮಣ! ನಮ್ಮ ಯಾವುದೇ ಕಾರ್ಯವೂ ಸೀತೆಯ ಅಧೀನವಾಗಿದೆ. ಇವಳ ಮನಸ್ಸನ್ನು ತೃಪ್ತಿಗೊಳಿಸುವ ಸಲುವಾಗಿ ನಾವು ಕಾರ್ಯಮಾಡಬೇಕಾಗಿದೆ. ಆದುದರಿಂದ ಇವಳ ಆಶಯದಂತೆ ನಾನು ಈ ಮೃಗವನ್ನು ಸಾಧ್ಯವಾದರೆ ಜೀವಸಹಿತವಾಗಿಯೇ ತರುತ್ತೇನೆ. ಇಲ್ಲವಾದರೆ ಸಂಹಾರವನ್ನಾದರೂ ಮಾಡುತ್ತೇನೆ. ಮೃಗವನ್ನು ಸಾಧ್ಯವಾದಷ್ಟು ಬೇಗ ತರಲು ನಾನು ಹೋಗುತ್ತೇನೆ. ಅಲ್ಲಿಯವರೆಗೂ ನೀನು ಜಿಂಕೆಯ ಚಿನ್ನದ ಚರ್ಮದಲ್ಲಿಯೇ ಆಸೆಯನ್ನಿಟ್ಟುಕೊಂಡಿರುವ ಇವಳನ್ನು ರಕ್ಷಿಸುತ್ತಿರು. ಚರ್ಮದಿಂದಲೇ ಶ್ರೇಷ್ಠತೆಯನ್ನು ಪಡೆದಿರುವ ಈ ಮೃಗವು ಹೆಚ್ಚು ಕಾಲ ಬದುಕುವುದಿಲ್ಲ. ಆದರೆ ನೀನು ಮಾತ್ರ ಆಶ್ರಮದಲ್ಲಿ ಜಾಗರೂಕನಾಗಿದ್ದುಕೊಂಡು ಸೀತೆಯನ್ನು ರಕ್ಷಿಸಬೇಕು. ನಾನು ಒಂದೇ ಬಾಣದಿಂದ ಈ ಜಿಂಕೆಯನ್ನು ಕೊಂದು ಇದರ ಚರ್ಮವನ್ನು ತೆಗೆದುಕೊಂಡು ಶೀಘ್ರವಾಗಿ ಬಂದುಬಿಡುತ್ತೇನೆ. ಲಕ್ಷ್ಮಣ! ಬಹಳ ದಕ್ಷನಾದ, ಅತಿಬಲಿಷ್ಠನಾದ, ಬುದ್ಧಿವಂತನಾದ ಜಟಾಯುವಿನ ಸಹಕಾರವನ್ನೂ ಪಡೆದು–ಪ್ರತಿಕ್ಷಣದಲ್ಲಿಯೂ ಆಪತ್ತು ಸಂಭವಿಸುವುದೆಂದು ಶಂಕೆಪಡುತ್ತಾ ಅಪ್ರಮತ್ತನಾಗಿ ಸೀತೆಯನ್ನು ರಕ್ಷಿಸುತ್ತಿರು." *

ಳ೩ನೆಯ ಸರ್ಗವು ಮುಗಿಯಿತು.

---

ಗತ್ತೆಯು ಗರ್ಭಧರಿಸುವುದೇ ಅಪರೂಪ. ಅಕಸ್ಮಾತ್ ಗರ್ಭಧಾರಣೆಮಾಡಿದರೆ ಅದು ಸತ್ತುಹೋಗುತ್ತದೆ. ಆದರೆ ಚೇಳಿನ ವಿಷಯವು ಹಾಗಲ್ಲ. ಅದರ ಮರಿಗಳು ಹೊರಬರಬೇಕಾದರೆ ಹೊಟ್ಟೆಯನ್ನು ಸೀಳಿಕೊಂಡೇ ಹೊರಬರುತ್ತವೆ. ಈ ಕಾರಣಗಳಿಂದ ಅಶ್ವತರೀ ಎಂಬುದಕ್ಕೆ ಚೇಳು ಎಂಬ ಅರ್ಥವಾಗದಿದ್ದರೂ ಕೆಲವು ವ್ಯಾಖ್ಯಾನಕಾರರು ವೃಶ್ಚಿಕ ಎಂಬ ಅರ್ಥವೇ ಸರಿ ಎಂದು ಅಭಿಪ್ರಾಯಪಟ್ಟಿರುತ್ತಾರೆ.

* ಪ್ರತಿಕ್ಷಣಂ ಸರ್ವತ ಏವ ಶಙ್ಕಿತಃ = ಅಪಾಯದ ಚಿಂತೆಯಿದ್ದ ಮನುಷ್ಯನು ಜಾಗರೂಕನಾಗಿರುತ್ತಾನೆ. ಕಳ್ಳ-ಕಾಕರ ಭಯವಿದೆಯೆಂದು ತಿಳಿದಾಗ ರಾತ್ರಿಯಲ್ಲಿ ನಿದ್ದೆಯನ್ನೂ ಮಾಡದೇ ಎಚ್ಚರದಿಂದಿರುತ್ತಾನೆ. ಮಗುವು ಪುಟ್ಟ-ಪುಟ್ಟ ಹೆಜ್ಜೆಗಳನ್ನಿಡು

## ಶ್ರೀರಾಮನಿಂದ ಮಾರೀಚನ ಸಂಹಾರ : ಸಾಯುವಾಗ ಹಾ ಸೀತೇ ! ಹಾ ಲಕ್ಷ್ಮಣ ! ಎಂದು ಕೂಗಿಕೊಂಡುದನ್ನು ಕೇಳಿ ರಾಮನ ಚಿಂತೆ

ತಥಾ ತು ತಂ ಸಮಾದಿಶ್ಯ ಭ್ರಾತರಂ ರಘುನನ್ದನಃ ।
ಬಬನ್ಧಾಸಿಂ ಮಹಾತೇಜಾ ಜಾಮ್ಬೂನದಮಯತ್ಸರುಮ್ ॥೧॥

ಮಹಾತೇಜಸ್ವಿಯಾದ ರಘುನಂದನನು ತಮ್ಮನಿಗೆ ಹೀಗೆ ಆಜ್ಞಾಪಿಸಿ ಸುವರ್ಣಮಯವಾದ ಹಿಡಿಯಿಂದ ಕೂಡಿದ್ದ ಕತ್ತಿಯನ್ನು ಸೊಂಟಕ್ಕೆ ಕಟ್ಟಿಕೊಂಡನು.

ಶ್ರೇಷ್ಠಪರಾಕ್ರಮಿಯಾದ ಶ್ರೀರಾಮನು ಶೋಭಾಯಮಾನವಾಗಿದ್ದ, ಮೂರು ಕಡೆಗಳಲ್ಲಿ ಬಗ್ಗಿದ್ದ ಧನುಸ್ಸನ್ನು ತೆಗೆದುಕೊಂಡು ಎರಡು ಬತ್ತಳಿಕೆಗಳನ್ನೂ ಬೆನ್ನಿಗೆ ಬಿಗಿದುಕೊಂಡು ಜಿಂಕೆಯನ್ನಟ್ಟಿಸಿಕೊಂಡು ಹೊರಟನು. ಮಾಯಾಜಿಂಕೆಯು ತನ್ನನ್ನೇ ಹಿಂಬಾಲಿಸಿ ಬರುತ್ತಿದ್ದ ರಾಜೇಂದ್ರನಾದ ಶ್ರೀರಾಮನನ್ನು ಕಂಡು ಭಯದಿಂದ ಅದೃಶ್ಯವಾಯಿತು. ಶ್ರೀರಾಮನನ್ನು ವಂಚಿಸುವ ಸಲುವಾಗಿ ಪುನಃ ಕಾಣಿಸಿಕೊಂಡಿತು. ಕತ್ತಿಯನ್ನು ಸೊಂಟದಲ್ಲಿ ಬಿಗಿದು, ಧನುಸ್ಸನ್ನು ಕೈಯಲ್ಲೆತ್ತಿಕೊಂಡು ಮೃಗವು ಹೋಗುತ್ತಿದ್ದ ಕಡೆಗೇ ಶ್ರೀರಾಮನೂ ಹೋಗುತ್ತಿದ್ದನು. ತನ್ನ ರೂಪದ ಕಾಂತಿಯಿಂದ ತಾನು ಹೋಗುತ್ತಿರುವ ಮಾರ್ಗವನ್ನೇ ಬೆಳಗುತ್ತಾ ಹೋಗುತ್ತಿರುವುದೋ ಎಂಬಂತೆ ಕಾಣುತ್ತಿದ್ದ ಆ ಮೃಗವನ್ನು ನೋಡುತ್ತಾ ಹೋಗುತ್ತಿದ್ದನು. ಆ

---

ವಾಗ ಅದು ಬೀಳುವುದನ್ನು ನಿರೀಕ್ಷಿಸಿದ ತಾಯಿಯು ಆ ಮಗುವಿನ ಜೊತೆಯಲ್ಲಿಯೇ ಇರುತ್ತಾಳೆ. ಲೋಕದಲ್ಲಿ ಯಾವುದೇ ವ್ಯವಹಾರವನ್ನು ತೆಗೆದುಕೊಂಡರೂ ಅಪಾಯದ ನಿರೀಕ್ಷಣೆಯಲ್ಲಿದ್ದರೆ ಜಾಗರೂಕತೆಯೂ ಸ್ವಾಭಾವಿಕವಾಗಿಯೇ ಬರುತ್ತದೆ. ಅಧ್ಯಾತ್ಮಕ್ಕೂ ಇದೇ ಮಾತು ಅನ್ವಯಿಸುತ್ತದೆ. ಪ್ರಾಣಾಪಾಯವು ಯಾವ ಕ್ಷಣದಲ್ಲಾದರೂ ಯಾವ ಮೂಲಕವಾದರೂ ಒದಗಬಹುದೆಂದು ಕ್ಷಣ-ಕ್ಷಣಕ್ಕೂ ಭಾವಿಸುವವನು ತಾನು ಮಾಡಬೇಕಾದ ಕರ್ತವ್ಯವನ್ನು ಅಪ್ರಮತ್ತನಾಗಿ ಮಾಡಿ ಮುಗಿಸುತ್ತಾನೆ. ಆದುದರಿಂದ ಶ್ರೀರಾಮನ ಈ ಮಾತು ಸರ್ವಗ್ರಾಹ್ಯವಾಗಿರುವುದು.

ಮಹಾರಣ್ಯದಲ್ಲಿ ಧನುಷ್ಪಾಣಿಯಾದ ಶ್ರೀರಾಮನನ್ನು ಹಿಂದು-ಹಿಂದಕ್ಕೆ ತಿರುಗಿ ನೋಡಿಕೊಂಡೇ ಆ ಮೃಗವೂ ಓಡುತ್ತಿದ್ದಿತು. ಮತ್ತೊಮ್ಮೆ ರಾಮನ ಬಾಣದ ವ್ಯಾಪ್ತಿಗಿಂತ ಸ್ವಲ್ಪದೂರದಲ್ಲಿರುತ್ತಾ ಶ್ರೀರಾಮನನ್ನು ಪ್ರಲೋಭನಗೊಳಿಸುತ್ತಿದ್ದಿತು. ಒಮ್ಮೆ ಬಾಣವು ತನ್ನ ಮೇಲೆ ಬಿದ್ದು ಬಿಡುವುದೆಂಬ ಸಂದೇಹದಿಂದ ಭ್ರಾಂತಿಯನ್ನು ಹೊಂದಿ ಆಕಾಶದಲ್ಲಿ ಹಾರಿ



ಹೋಗುತ್ತಿದೆಯೋ ಎಂಬಂತೆ ನೆಗೆದುಕೊಂಡು ಹೋಗುತ್ತಿದ್ದಿತು. ವನ ಪ್ರದೇಶದಲ್ಲಿ ಅದು ಕೆಲವೊಮ್ಮೆ ಕಾಣಿಸಿಕೊಳ್ಳುತ್ತಿದ್ದಿತು. ರಾಮನು ರಭಸ ದಿಂದ ಮುನ್ನಡೆಯುತ್ತಿರುವಾಗ ಮತ್ತೊಂದು ಕ್ಷಣದಲ್ಲಿ ಅದೃಶ್ಯವಾಗಿ ಬಿಡುತ್ತಿದ್ದಿತು. ಶರತ್ಕಾಲದ ರಾತ್ರಿಯಲ್ಲಿ ತುಂಡು-ತುಂಡಾದ ಮೋಡಗಳಿಂದ

ವ್ಯಾಪ್ತವಾದ ಆಕಾಶದಲ್ಲಿ ಚಂದ್ರಮಂಡಲವು ಒಮ್ಮೆ ಕಾಣುತ್ತಲೂ ಮತ್ತೊಮ್ಮೆ ಅದೃಶ್ಯವಾಗುತ್ತಲೂ ಇರುವಂತೆ–ಮಾಯಾಮೃಗವೂ ಕೂಡ ರಾಮನಿಗೆ ಸ್ವಲ್ಪಹೊತ್ತು ಕಾಣಿಸಿಕೊಳ್ಳುತ್ತಿದ್ದಿತು. ಪುನಃ ಸ್ವಲ್ಪಹೊತ್ತು ಅದೃಶ್ಯವಾಗುತ್ತಿದ್ದಿತು.

ಮೃಗದ ರೂಪವನ್ನು ತಳೆದಿದ್ದ ಮಾರೀಚನು ಹೀಗೆಯೇ ಒಮ್ಮೆ ಕಾಣಿಸುತ್ತಲೂ ಮತ್ತೊಮ್ಮೆ ಅದೃಶ್ಯವಾಗುತ್ತಲೂ ರಾಮನನ್ನು ಬಹಳ ದೂರಕ್ಕೆ ಒಯ್ದುಬಿಟ್ಟನು. ಮಾಯಾಮೃಗದ ವಿಷಯದಲ್ಲಿ ಕುತೂಹಲಾವಿಷ್ಟನಾಗಿದ್ದ ಶ್ರೀರಾಮನು ಮೃಗದಿಂದ ಪದೇ-ಪದೇ ವಂಚಿಸಲ್ಪಟ್ಟು ಪರಮಕ್ರುದ್ಧನಾದನು. ಬಹಳ ದೂರ ನಡೆದುಬಂದ ಆಯಾಸದಿಂದ ಭ್ರಾಂತನಾದ ಶ್ರೀರಾಮನು ಚಿಗುರುಹುಲ್ಲಿನ ಬಯಲಿನಲ್ಲಿ ಮರವೊಂದರ ನೆರಳಿನಲ್ಲಿ ನಿಂತುಕೊಂಡನು. ಮಾಯಾಮೃಗವು ಇತರ ಮೃಗಗಳೊಡನೆ ತನ್ನ ಸಮೀಪದಲ್ಲಿಯೇ ನಿಂತಿರುವಂತೆ ರಾಮನಿಗೆ ಗೋಚರಿಸಿತು. ಹೀಗೆ ಹತ್ತಿರದಲ್ಲೇ ಕಾಣಿಸಿಕೊಂಡು ಮೃಗರೂಪನಾಗಿದ್ದ ರಾಕ್ಷಸನು ರಾಮನನ್ನು ಭ್ರಾಂತನನ್ನಾಗಿ ಮಾಡಿಬಿಟ್ಟನು. ತನ್ನನ್ನು ಹಿಡಿಯಲು ಬರುತ್ತಿದ್ದ ರಾಮನನ್ನು ನೋಡಿ ಆ ಜಿಂಕೆಯು ಪುನಃ ದೂರಕ್ಕೆ ಓಡಿಹೋಯಿತು. ರಾಮಬಾಣಪತನದ ಭಯದಿಂದ ಪುನಃ ಅದೃಶ್ಯವೂ ಆಯಿತು. ಪುನಃ ಆ ಮಾಯಾಜಿಂಕೆಯು ದೂರದಲ್ಲಿದ್ದ ಮರಗಳ ಗುಂಪಿನಿಂದ ಹೊರಹೊರಟಿತು. ಮಹಾತೇಜಸ್ವಿಯಾದ ರಾಮನು ಅದನ್ನು ನೋಡಿ ಕೊಲ್ಲಲು ನಿಶ್ಚಯಿಸಿದನು. ಮೃಗದ ವಂಚನೆಯಿಂದ ಕುಪಿತನಾಗಿದ್ದ, ಬಲಿಷ್ಠನಾದ ರಾಮನು ಬತ್ತಳಿಕೆಯಿಂದ ಬಾಣವನ್ನು ತೆಗೆದು ಸೂರ್ಯರಶ್ಮಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಪ್ರಜ್ವಲಿಸುತ್ತಿದ್ದ, ಶತ್ರುಸಂಹಾರಕವಾಗಿದ್ದ, ಬುಸುಗುಟ್ಟುವ ಸರ್ಪದಂತಿದ್ದ, ಬ್ರಹ್ಮನಿಂದಲೇ ನಿರ್ಮಿಸಲ್ಪಟ್ಟಿದ್ದ, ಕಾಂತಿಯುಕ್ತವಾಗಿದ್ದ ಆ ಮಹಾಸ್ತ್ರವನ್ನು ಸುದೃಢವಾದ ಧನುಸ್ಸಿನಲ್ಲಿ ಅನುಸಂಧಾನಮಾಡಿ ಕಿವಿಯ ತುದಿಯವರೆಗೂ ಬಲಪೂರ್ವಕವಾಗಿ ಸೆಳೆದು ಮೃಗಕ್ಕೆ ಗುರಿಯಿಟ್ಟು ಪ್ರಯೋಗಿಸಿದನು. ಸಿಡಿಲಿಗೆ ಸಮಾನವಾಗಿದ್ದ ಉತ್ತಮೋತ್ತಮವಾದ ಆ ಬಾಣವು ಮೃಗರೂಪನಾಗಿದ್ದ ಮಾರೀಚನ ಶರೀರವನ್ನು ಸೀಳಿ ಅವನ ಹೃದಯವನ್ನು ಭೇದಿಸಿತು. ರಾಮನ ಬಾಣದಿಂದ ತಾಡಿತನಾದ ಮಾರೀಚನು ತಾಳೆಯ ಮರದಷ್ಟೆತ್ತರಕ್ಕೆ

ಹಾರಿ ಕೆಳಕ್ಕೆ ಬಿದ್ದನು. ಭೂಮಿಯಲ್ಲಿ ಬಿದ್ದೊಡನೆಯೇ ಗುಟುಕುಜೀವವಿದ್ದ ಆ ಮಾಯಾಮೃಗವು ಭಯಂಕರವಾಗಿ ಕಿರುಚಿಕೊಂಡಿತು. ಸಾಯುವ ಕಡೆಯ ಕ್ಷಣದಲ್ಲಿ ಮಾರೀಚನು ತನ್ನ ಕೃತ್ರಿಮವಾದ ಸುವರ್ಣಮೃಗದ ರೂಪವನ್ನು ತೊರೆದನು. 'ಸೀತೆಯು ಲಕ್ಷ್ಮಣನನ್ನು ಆಶ್ರಮದಿಂದ ಹೊರಕ್ಕೆ ಕಳುಹಿಸ



ಬೇಕು. ಲಕ್ಷ್ಮಣನಿಂದ ಶೂನ್ಯವಾದ ಆಶ್ರಮದಿಂದ ರಾವಣನು ಸೀತೆಯನ್ನು ಅಪಹರಿಸಬೇಕು. ಇದು ಯಾವ ಉಪಾಯದಿಂದ ಸಾಧ್ಯ?'—ಎಂಬ ಬಗೆಗೆ ಮಾರೀಚನು ಕ್ಷಣಕಾಲ ಯೋಚಿಸಿದನು. ಆ ಸಮಯದಲ್ಲಿ ರಾವಣನು ಹೇಳಿದ್ದ ಮಾತುಗಳೂ ಅವನ ಸ್ಮರಣೆಗೆ ಬಂದುವು. ರಾವಣನು ಹೇಳಿದಂತೆ ಮಾಡಲು ಇದು ಸಕಾಲವಾಗಿರುವುದೆಂದು ಭಾವಿಸಿ ರಾಘವನ ಧ್ವನಿಯಂತೆಯೇ

ತನ್ನ ಧ್ವನಿಯನ್ನು ಬದಲಾಯಿಸಿಕೊಂಡು – 'ಹಾ ಸೀತೆ! ಹಾ ಲಕ್ಷ್ಮಣ!' ಎಂದು ಗಟ್ಟಿಯಾಗಿ ಕೂಗಿಕೊಂಡನು. ಅನುಪಮವಾದ ಶ್ರೀರಾಮನ ಬಾಣದಿಂದ ಮರ್ಮಸ್ಥಳದಲ್ಲಿ ಗಾಯಗೊಂಡಿದ್ದ ರಾಕ್ಷಸನು ಮೃಗರೂಪವನ್ನು ಪರಿತ್ಯಜಿಸಿ ನಿಜರೂಪವಾದ ರಾಕ್ಷಸಶರೀರವನ್ನೇ ಹೊಂದಿದನು. ಪ್ರಾಣವು ಹೋಗುವಾಗ ಮಾರೀಚನು ಮಹಾಕಾಯನಾಗಿದ್ದನು. ವಿಚಿತ್ರವಾದ ಭುಜಕೀರ್ತಿಗಳನ್ನು ಧರಿಸಿದ್ದನು. ಸಮಸ್ತವಾದ ಆಭರಣಗಳಿಂದಲೂ ಭೂಷಿತನಾಗಿದ್ದನು. ಸುವರ್ಣಮಾಲೆಯನ್ನು ಧರಿಸಿದ್ದನು. ಅವನಿಗೆ ದೊಡ್ಡದಾದ ಕೋರೆದಾಡೆಗಳಿದ್ದುವು. ರಾಮನ ಬಾಣದಿಂದ ಪ್ರಹೃತನಾದ ರಾಕ್ಷಸನು ಹೀಗೆ ತನ್ನ ಮೊದಲಿನ ಆಕಾರವನ್ನು ಹೊಂದಿದನು. ಭಯಂಕರದರ್ಶನನಾದ, ರಕ್ತದಿಂದ ತೋಯ್ದ ಅಂಗಾಂಗವುಳ್ಳವನಾಗಿದ್ದ, ಭೂಮಿಯ ಮೇಲೆ ಬಿದ್ದು ಹೊರಳಾಡುತ್ತಿದ್ದ ಮಾರೀಚನನ್ನು ನೋಡಿ ಶ್ರೀರಾಮನು ಲಕ್ಷ್ಮಣನು ಹೇಳಿದ ಮಾತನ್ನು ಸ್ಮರಿಸುತ್ತಾ ಸೀತೆಯ ವಿಷಯವಾಗಿ ಮನಸ್ಸಿನಲ್ಲಿಯೇ ಚಿಂತಿಸತೊಡಗಿದನು :

"ನಿಜ! ಹಿಂದೆ ಲಕ್ಷ್ಮಣನು ಹೇಳಿದ್ದಂತೆ ಇದು ಮಾರೀಚನ ಮಾಯೆಯೇ ಆಗಿದೆ. ಅವನು ಹೇಳಿದ್ದ ಹಾಗೆಯೇ ಎಲ್ಲವೂ ನಡೆದು ಹೋಯಿತು. ಮಾರೀಚನನ್ನೇನೋ ನಾನು ಸಂಹರಿಸಿದೆನು. ಆದರೆ ಇವನು–'ಹಾ ಸೀತೇ! ಹಾ ಲಕ್ಷ್ಮಣ' – ಎಂಬುದಾಗಿ ಅದೂ ನನ್ನ ಧ್ವನಿಯಿಂದಲೇ ಕೂಗಿಕೊಳ್ಳುತ್ತಾ ಪ್ರಾಣಗಳನ್ನು ತೊರೆದನು. ಈ ಆರ್ತಧ್ವನಿಯನ್ನು ಕೇಳಿದ ಸೀತೆಯ ಮನಃಸ್ಥಿತಿಯು ಏನಾಗಬಹುದು? ಮಹಾಬಾಹುವಾದ ಲಕ್ಷ್ಮಣನು ಎಂತಹ ಅವಸ್ಥೆಯನ್ನು ಹೊಂದಬಹುದು?"–ಇವೇ ಮುಂತಾಗಿ ಚಿಂತಿಸುತ್ತಾ ರಾಮನು ರೋಮಾಂಚಿತನಾದನು. ಮೃಗರೂಪನಾಗಿದ್ದ ಮಾರೀಚನನ್ನು ಸಂಹರಿಸಿದ ರಾಮನು ಪ್ರಾಣೋತ್ಕ್ರಮಣ ಕಾಲದಲ್ಲಿ ಮಾರೀಚನು ತನ್ನ ಧ್ವನಿಯನ್ನೇ ಅನುಸರಿಸಿ ಕೂಗಿದುದನ್ನೂ ಕೇಳಿ ಬಹಳವಾಗಿ ವಿಷಾದಿಸಿದನು. ಅದರಿಂದಾಗಿ ತೀವ್ರವಾದ ಭಯವೂ ಅವನನ್ನು ಆವರಿಸಿತು. ಅನಂತರ ಶ್ರೀರಾಮನು ಮತ್ತೊಂದು ಜಿಂಕೆ

ಯನ್ನು ಸಂಹರಿಸಿ ಮಾಂಸವನ್ನು ತೆಗೆದುಕೊಂಡು ಜನಸ್ಥಾನದಲ್ಲಿದ್ದ ಆಶ್ರಮದ ಕಡೆಗೆ ತ್ವರೆಯಿಂದ ಹೊರಟನು.

ಳಳನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೪೫ನೆಯ ಸರ್ಗ

## ಸೀತೆಯು ಮಾರ್ಮಿಕವಾದ ಮಾತಿನಿಂದ ಚುಚ್ಚಲ್ಪಟ್ಟ ಲಕ್ಷ್ಮಣನು ರಾಮನ ಬಳಿಗೆ ಹೋದುದು

ಆರ್ತಸ್ವರಂ ತು ತಂ ಭರ್ತುರ್ವಿಜ್ಞಾಯ ಸದೃಶಂ ವನೇ ।
ಉವಾಚ ಲಕ್ಷ್ಮಣಂ ಸೀತಾ ಗಚ್ಛ ಜಾನೀಹಿ ರಾಘವಮ್ ॥೧॥

ಇತ್ತಲಾಗಿ ಆಶ್ರಮದಲ್ಲಿದ್ದ ಸೀತೆಯು–'ಹಾ ಸೀತೇ! ಹಾ ಲಕ್ಷ್ಮಣ!' ಎಂಬ ಪತಿಯ ಧ್ವನಿಯಂತೆಯೇ ಇದ್ದ ಆರ್ತನಾದವನ್ನು ಕೇಳಿ ಲಕ್ಷ್ಮಣನಿಗೆ ಹೇಳಿದಳು :

"ಹೋಗು ; ಲಕ್ಷ್ಮಣ! ರಾಮನಿಗೆ ಏನಾಗಿರುವುದೆಂಬುದನ್ನು ತಿಳಿದು ಬಾ. ಅತ್ಯಂತ ಆರ್ತನಾಗಿ ಕೂಗಿಕೊಂಡ ರಾಮನ ಧ್ವನಿಯನ್ನು ನಾನು ಸ್ಪಷ್ಟವಾಗಿಯೇ ಕೇಳಿಸಿಕೊಂಡೆನು. ಈ ಕಾರಣದಿಂದಾಗಿ ನನ್ನ ಪ್ರಾಣಗಳು, ಹೃದಯ, ಮನಸ್ಸು–ಎಲ್ಲವೂ ಅಸ್ತವ್ಯಸ್ತವಾಗಿವೆ. ವಿಮೋಹಗೊಳ್ಳುತ್ತಿವೆ. ಅರಣ್ಯದಲ್ಲಿ ಅಪಾಯಕ್ಕೊಳಗಾಗಿ ಕೂಗಿಕೊಳ್ಳುತ್ತಿರುವ ನಿನ್ನ ಅಣ್ಣನನ್ನು ರಕ್ಷಿಸುವುದು ಯೋಗ್ಯವಾಗಿದೆ. ರಕ್ಷಕನನ್ನು ಬಯಸಿ ಕೂಗಿಕೊಳ್ಳುತ್ತಿರುವ ನಿನ್ನ ಅಣ್ಣನ ಬಳಿಗೆ ಬೇಗನೆ ಹೋಗು. ಸಿಂಹಗಳ ಆಕ್ರಮಣಕ್ಕೊಳಗಾದ ಹೋರಿಯಂತೆ–ರಾಕ್ಷಸರ ಹಿಡಿತಕ್ಕೆ ಸಿಕ್ಕಿರುವ ನಿಮ್ಮಣ್ಣನನ್ನು ರಕ್ಷಿಸಲು ಶೀಘ್ರವಾಗಿ ಹೋಗು ; ಲಕ್ಷ್ಮಣ!"

ಸೀತೆಯು ಎಷ್ಟೇ ಭಯದಿಂದ ಮತ್ತು ಗಾಬರಿಯಿಂದ ಮಾತನಾಡುತ್ತಿದ್ದರೂ ಲಕ್ಷ್ಮಣನು ಅಣ್ಣನ ಆಜ್ಞೆಯನ್ನು ಸ್ಮರಿಸಿ ರಾಮನನ್ನು ಕಾಣಲು ಹೋಗಲಿಲ್ಲ. ಅದರಿಂದ ಕುಪಿತಳಾದ ಸೀತೆಯು ಲಕ್ಷ್ಮಣನಿಗೆ ಹೇಳಿದಳು :

ಸೌಮಿತ್ರೇ ಮಿತ್ರರೂಪೇಣ ಭ್ರಾತುಸ್ತ್ವಮಸಿ ಶತ್ರುವತ್ ।
ಯಸ್ತ್ವಮಸ್ಯಾಮವಸ್ಥಾಯಾಂ ಭ್ರಾತರಂ ನಾಭಿಪತ್ಸ್ಯಸೇ ॥೫॥

"ಲಕ್ಷ್ಮಣ! ನಿಮ್ಮಣ್ಣನು ಇಂತಹ ದುರವಸ್ಥೆಯಲ್ಲಿರುವಾಗ-ರಕ್ಷಣೆಗಾಗಿ ನಿನ್ನ ಹೆಸರನ್ನೇ ಹಿಡಿದು ಕೂಗಿಕೊಳ್ಳುತ್ತಿರುವಾಗ – ನೀನು ಅವನ ರಕ್ಷಣೆಗೆ ಹೋಗುತ್ತಿಲ್ಲ. ಇದರಿಂದ ನೀನು ನಿಶ್ಚಯವಾಗಿಯೂ ನಿಮ್ಮಣ್ಣನಿಗೆ ಮಿತ್ರರೂಪನಾದ ಶತ್ರುವೇ ಆಗಿರುವೆ.

ಇಚ್ಛಸಿ ತ್ವಂ ವಿನಶ್ಯನ್ತಂ ರಾಮಂ ಲಕ್ಷ್ಮಣ ಮತ್ಕೃತೇ ।
ಲೋಭಾನ್ಮಮ ಕೃತೇ ನೂನಂ ನಾನುಗಚ್ಛಸಿ ರಾಘವಮ್ ॥೬॥

ನನ್ನನ್ನು ಪಡೆಯುವ ಸಲುವಾಗಿ ರಾಮನ ವಿನಾಶವನ್ನೇ ಅಪೇಕ್ಷಿಸುತ್ತಿರುವೆ. ನಿಶ್ಚಯವಾಗಿಯೂ ನೀನು ನನ್ನ ಮೇಲಿನ ಮೋಹದಿಂದಾಗಿ ರಾಮನನ್ನು ರಕ್ಷಿಸಲು ಹೋಗುತ್ತಿಲ್ಲ.

ವ್ಯಸನಂ ತೇ ಪ್ರಿಯಂ ಮನ್ಯೇ ಸ್ನೇಹೋ ಭ್ರಾತರಿ ನಾಸ್ತಿ ತೇ ।
ತೇನ ತಿಷ್ಠಸಿ ವಿಸ್ರಬ್ಧಸ್ತಮಪಶ್ಯನ್ಮಹಾದ್ಯುತಿಮ್ ॥೭॥

ನಿನ್ನಣ್ಣನ ವ್ಯಸನವೇ ನಿನಗೆ ಬಹಳ ಪ್ರಿಯವಾಗಿರಬಹುದು. ಏಕೆಂದರೆ: ಅಣ್ಣನ ವಿಷಯದಲ್ಲಿ ನಿನಗೆ ಯಾವ ರೀತಿಯ ವಿಶ್ವಾಸವೂ ಇಲ್ಲ. ಆದುದರಿಂದಲೇ ಮಹಾತೇಜೋವಂತನಾದ ರಾಮನನ್ನು ಕಾಣಲು ಹೋಗದೇ ನಿಶ್ಚಿಂತೆಯಿಂದ ಇಲ್ಲಿಯೇ ನಿಂತಿರುವೆ.

ಕಿಂ ಹಿ ಸಂಶಯಮಾಪನ್ನೇ ತಸ್ಮಿನ್ನಿಹ ಮಯಾ ಭವೇತ್ ।
ಕರ್ತವ್ಯಮಿಹ ತಿಷ್ಠನ್ತ್ಯಾ ಯತ್ಪ್ರಧಾನಸ್ತ್ವಮಾಗತಃ ॥೮॥

ನಿನಗೆ ಯಾವನು ಪ್ರಧಾನನೋ ಅವನ ಸೇವೆಯನ್ನು ಮಾಡಲು ಮತ್ತು ಅವನನ್ನು ರಕ್ಷಿಸಲು ನೀನಿಲ್ಲಿಗೆ ಬಂದಿರುವೆ. ಅವನೇ ಈಗ ಪ್ರಾಣಸಂಕಟದಲ್ಲಿರುವಾಗ ನಾನೇಕಿಲ್ಲಿರಬೇಕು? ಇರುವುದರಿಂದ ಯಾವ ಪ್ರಯೋಜನವಿದೆ?"

ಇವೇ ಮುಂತಾಗಿ ಕರ್ಣಕಠೋರವಾದ ಮಾತುಗಳನ್ನಾಡುತ್ತಿದ್ದ, ಶೋಕದಿಂದ ಕಣ್ಣೀರಿಡುತ್ತಿದ್ದ, ಹೆಣ್ಣು ಜಿಂಕೆಯಂತೆ ಬಹಳವಾಗಿ ಭಯಗೊಂಡಿದ್ದ ಸೀತಾದೇವಿಗೆ ಲಕ್ಷ್ಮಣನು ಹೇಳಿದನು:

"ದೇವಿ ! ಭಯಪಡಬೇಡ. ದೇವ-ಮನುಷ್ಯ-ಗಂಧರ್ವರಲ್ಲಾಗಲೀ, ಪಕ್ಷಿ-ರಾಕ್ಷಸ-ಪಿಶಾಚರಲ್ಲಾಗಲೀ, ಕಿನ್ನರರಲ್ಲಾಗಲೀ, ಮೃಗಗಳಲ್ಲಾಗಲೀ, ಘೋರರೂಪಿಗಳಾದ ದಾನವರಲ್ಲೀ ಆಗಲೀ–ರಾಮನನ್ನು ಎದುರಿಸಿ ಯುದ್ಧ ಮಾಡುವವರು ಯಾರೂ ಇಲ್ಲವೆಂಬುದರಲ್ಲಿ ಸಂಶಯವೇ ಇಲ್ಲ. ಇಂದ್ರಸದೃಶ ಪರಾಕ್ರಮನಾದ ರಾಮನನ್ನು ಎದುರಿಸಿ ನಿಂತು ಯಾರು ತಾನೇ ಯುದ್ಧ ಮಾಡುತ್ತಾರೆ? ಯುದ್ಧದಲ್ಲಿ ರಾಮನು ಯಾವಾಗಲೂ ವಧಿಸಲ್ಪಡತಕ್ಕವನಲ್ಲ. ಶೋಭನಳೇ ! ಆದುದರಿಂದ ಇಂತಹ ಮಾತುಗಳನ್ನಾಡುವುದು ನಿನಗೆ ಯೋಗ್ಯವಲ್ಲ.

ದೇವಿ ! ರಾಘವನು ಇಲ್ಲಿ ಇಲ್ಲದೇ ಇರುವುದರಿಂದ ನಿನ್ನೊಬ್ಬಳನ್ನೇ ಈ ಅರಣ್ಯದಲ್ಲಿ ಬಿಟ್ಟುಹೋಗಲು ನಾನು ಇಷ್ಟಪಡುತ್ತಿಲ್ಲ. ಮಹಾಬಲಿಷ್ಠರ ಬಲಗಳಿಂದಲೂ, ಮೂರು ಲೋಕಗಳಿಂದಲೂ, ಯುದ್ಧೋದ್ಯುಕ್ತರಾದ ಇಂದ್ರನೇ ಮೊದಲಾದ ದಿಕ್ಪಾಲಕರಿಂದ ಕೂಡಿದ ದೇವತೆಗಳಿಂದಲೂ–ರಾಮನ ಬಲವನ್ನು ತಡೆಯಲು ಸಾಧ್ಯವಾಗುವುದಿಲ್ಲ. ಆದುದರಿಂದ ನೀನು ನಿಶ್ಚಿಂತಳಾಗಿ ನೆಮ್ಮದಿಯಿಂದಿರು. ಈ ನಿನ್ನ ಸಂತಾಪವನ್ನು ಬಿಟ್ಟುಬಿಡು. ಮೃಗವನ್ನು ಕೊಂದು ಬಹಳ ಬೇಗ ನಿನ್ನ ಪತಿಯು ಬಂದುಬಿಡುತ್ತಾನೆ. ಕೇಳಿಬಂದ ಆರ್ತನಾದವು ನಮ್ಮಣ್ಣನದಲ್ಲವೆಂದು ನನಗೆ ಸ್ಪಷ್ಟವಾಗಿ ತಿಳಿದಿದೆ. ಬೇರೆ ಯಾವನೋ ಮಾಯೆಯಿಂದ ನಮ್ಮಣ್ಣನ ಧ್ವನಿಯನ್ನು ಅನುಕರಣೆಮಾಡಿ ಕೂಗಿದ್ದಾನೆ. ರಾಕ್ಷಸನ ಮಾಯೆಯು ಆಕಾಶದಲ್ಲಿ ಕಾಣುವ ಗಂಧರ್ವನಗರಿಯಂತೆ ಸ್ವಲ್ಪ ಹೊತ್ತು ಮಾತ್ರವೇ ಕಾಣುತ್ತಿದ್ದು ಅನಂತರ ಇಲ್ಲವಾಗುವುದು.*

---

* ಗನ್ಧರ್ವನಗರಂ : ಗಂಧರ್ವಪಟ್ಟಣ. ಇದು ಗುಹ್ಯಲೋಕಕ್ಕೆ ಮೇಲುಭಾಗದಲ್ಲಿಯೂ, ವಿದ್ಯಾಧರಲೋಕದ ಕೆಳಭಾಗದಲ್ಲಿ ಇರುವ ಗಂಧರ್ವನಗರವಲ್ಲ. ಇದಕ್ಕೆ ಎರಡನೆಯ ಅರ್ಥ–ಆಕಾಶದಲ್ಲಿ ಹುಟ್ಟುವ ಅಶುಭಸೂಚಕವಾದ ಒಂದು ಪಟ್ಟಣ. ಇದನ್ನೇ ಇಲ್ಲಿ ಹೇಳಲಾಗಿದೆ. ಈ ಪಟ್ಟಣವು ಇಂದ್ರಜಾಲದಂತೆ ಸ್ವಲ್ಪಕಾಲವಿದ್ದು ಅಗೋಚರವಾಗುತ್ತದೆ. ಗನ್ಧರ್ವನಗರಂ ಪ್ರೋಕ್ತಮಿನ್ದ್ರಜಾಲಂ ಮನೀಷಿಭಿಃ । ಅಂತರಿಕ್ಷದಲ್ಲಿ ಮೋಡಗಳು ಚಲಿಸುತ್ತಿರುವಾಗ ದೊಡ್ಡ-ದೊಡ್ಡ ಸೌಧಗಳಂತೆಯೂ, ವನಗಳಂತೆಯೂ, ನಾನಾಬಗೆಯ ಪ್ರಾಣಿಗಳಂತೆಯೂ ನಮಗೆ ಗೋಚರಿಸುತ್ತವೆ.

**ನ್ಯಾಸಭೂತಾಸಿ ವೈದೇಹಿ ನ್ಯಸ್ತಾ ಮಯಿ ಮಹಾತ್ಮನಾ ।**
**ರಾಮೇಣ ತ್ವಂ ವರಾರೋಹೇ ನ ತ್ವಾಂ ತ್ಯಕ್ತುಮಿಹೋತ್ಸಹೇ॥ ೧೬॥**

ವೈದೇಹಿ ! ನೀನು ನಿಕ್ಷೇಪರೂಪಳಾಗಿರುವೆ. ಮಹಾತ್ಮನಾದ ರಾಮನು ನಿನ್ನನ್ನು ನನ್ನಲ್ಲಿ ನಿಕ್ಷೇಪರೂಪವಾಗಿಟ್ಟಿದ್ದಾನೆ. ಅವನು ಬರುವ ವರೆಗೂ ನಿನ್ನನ್ನು ರಕ್ಷಿಸುತ್ತಿದ್ದು ಬಂದೊಡನೆಯೇ ಅವನಿಗೆ ನಿನ್ನನ್ನು ಒಪ್ಪಿಸುವುದು ನನ್ನ ಕರ್ತವ್ಯವಾಗಿದೆ ಮತ್ತು ಧರ್ಮವಾಗಿದೆ. ಆದುದರಿಂದ ನಿನ್ನನ್ನು ಪರಿತ್ಯಜಿಸಿ ಹೋಗಲು ನನಗೆ ಉತ್ಸಾಹವಿಲ್ಲ.* ನಾವು ರಾಕ್ಷಸರೊಡನೆ ಈಗಾಗಲೇ ವೈರವನ್ನು ಕಟ್ಟಿಕೊಂಡಿರುತ್ತೇವೆ. ಜನಸ್ಥಾನದಲ್ಲಿದ್ದ ಹದಿನಾಲ್ಕು ಸಾವಿರ ರಾಕ್ಷಸರನ್ನೂ, ಖರನನ್ನೂ ಸಂಹರಿಸಿದ್ದರಿಂದ ರಾಕ್ಷಸರು ಈ ಮಹಾರಣ್ಯದಲ್ಲಿ ನಾನಾಪ್ರಕಾರವಾಗಿ ಮಾತನಾಡಿಕೊಳ್ಳುತ್ತಿದ್ದಾರೆ. ನಮ್ಮನ್ನು ಭಯಪಡಿಸಲು ನಾನಾರೀತಿಗಳಲ್ಲಿ ಪ್ರಯತ್ನಿಸುತ್ತಿದ್ದಾರೆ. ರಾಕ್ಷಸರಿಗೆ ಇತರರನ್ನು ಹಿಂಸೆಮಾಡುವುದೇ ಒಂದು ಆಟವಾಗಿದೆ. ಆದುದರಿಂದ ರಾಮನ ವಿಷಯದಲ್ಲಿ ನೀನು ಖಂಡಿತವಾಗಿಯೂ ಚಿಂತಿಸಬೇಕಾಗಿಲ್ಲ."

ಲಕ್ಷ್ಮಣನು ಹೀಗೆ ಹೇಳಲು ಸೀತೆಯು ಮತ್ತೂ ಕ್ರುದ್ಧಳಾದಳು. ಅವಳ ಕಣ್ಣುಗಳು ಕೆಂಡದಂತೆ ಕೆಂಪಾದುವು. ಸತ್ಯವಾದಿಯಾದ ಲಕ್ಷ್ಮಣನಿಗೆ ಅವಳು ಹೀಗೆ ಹೇಳಿದಳು :

**ಅನಾರ್ಯಾಕರುಣಾರಮ್ಭ ನೃಶಂಸ ಕುಲಪಾಂಸನ ।**
**ಅಹಂ ತವ ಪ್ರಿಯಂ ಮನ್ಯೇ ರಾಮಸ್ಯ ವ್ಯಸನಂ ಮಹತ್ ।**
**ರಾಮಸ್ಯ ವ್ಯಸನಂ ದೃಷ್ಟ್ವಾ ತೇನೈತಾನಿ ಪ್ರಭಾಷಸೇ ॥ ೨೦॥**

"ನಡತೆಗೆಟ್ಟವನೇ ! ದಯೆಯೆಂಬುದೇ ಇಲ್ಲದವನೇ ! ಕ್ರೂರಿಯೇ ! ಕುಲಾಧಮನೇ ! ರಾಮನು ಕಷ್ಟದಲ್ಲಿ ಸಿಕ್ಕಿರುವುದು ನಿನಗೆ ಬಹಳ ಪ್ರಿಯವಾಗಿದೆಯೆಂದೇ ನಾನು ಭಾವಿಸುತ್ತೇನೆ. ಆದುದರಿಂದಲೇ ರಾಮನ ವ್ಯಸನ

---

ಇವೆಲ್ಲವೂ ಕ್ಷಣಿಕ. ನಂತರ ಯಾವುದೂ ಇರುವುದಿಲ್ಲ. ಇದನ್ನೂ ಗಂಧರ್ವನಗರವೆಂದು ಹೇಳುತ್ತಾರೆ.

* ನ್ಯಾಸಃ = ನಿಕ್ಷೇಪಃ ; ಕೇಳಿದಾಗ ಕೊಡಲು ಹೇಳಿ ಒಬ್ಬನಲ್ಲಿ ನಂಬಿಕೆಯಿಂದ ಇಡುವ ವಸ್ತು. ಪುಮಾನುಪನಿಧಿರ್ನ್ಯಾಸಃ ( ಅಮರಃ )

ವನ್ನು ಅವನ ಬಾಯಿಂದಲೇ ಕೇಳಿಯೂ ಇಂತಹ ಅಸಂಗತವಾದ ಮಾತುಗಳ ನ್ನಾಡುತ್ತಿರುವೆ.

ನೈತಚ್ಚಿತ್ರಂ ಸಪತ್ನೇಷು ಪಾಪಂ ಲಕ್ಷ್ಮಣ ಯದ್ಭವೇತ್ ।
ತ್ವದ್ವಿಧೇಷು ನೃಶಂಸೇಷು ನಿತ್ಯಂ ಪ್ರಚ್ಛನ್ನಚಾರಿಷು ॥೨೧॥

ಲಕ್ಷ್ಮಣ ! ಕ್ರೂರಿಗಳಾದ, ನಿಗೂಢವಾಗಿಯೇ ಕಾರ್ಯಾಚರಣೆಯನ್ನು ನಡೆಸುತ್ತಿರುವ ನಿನ್ನಂತಹ ದಾಯಾದಿಗಳಲ್ಲಿ ಈ ವಿಧವಾದ ಪಾಪ ಬುದ್ಧಿಯು ಹುಟ್ಟಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಸುದುಷ್ಟಸ್ತ್ವಂ ವನೇ ರಾಮಮೇಕಮೇಕೋಽನುಗಚ್ಛಸಿ ।
ಮಮ ಹೇತೋಃ ಪ್ರತಿಚ್ಛನ್ನಃ ಪ್ರಯುಕ್ತೋ ಭರತೇನ ವಾ ।
ತನ್ನ ಸಿಧ್ಯತಿ ಸೌಮಿತ್ರೇ ತವ ವಾ ಭರತಸ್ಯ ವಾ ॥೨೨॥

ನಿಶ್ಚಯವಾಗಿಯೂ ನೀನು ಬಹಳ ದುಷ್ಟನು. ನನ್ನನ್ನು ಪಡೆದುಕೊಳ್ಳುವ ಕಾರಣದಿಂದಲೇ ದುಷ್ಟವಾದ ನಿನ್ನ ಮನಸ್ಸನ್ನು ಬಹಿರಂಗ ಪಡಿಸದೇ ನೀನೊಬ್ಬನೇ ರಾಮನ ಸಂಗಡ ಅರಣ್ಯಕ್ಕೆ ಬಂದಿರುವೆ. ಈ ದುಷ್ಟಕಾರ್ಯವನ್ನೆಸಗಲು ಭರತನಾದರೂ ನಿನ್ನನ್ನು ಕಳುಹಿಸಿರಬಹುದು. ಆದರೆ ನಿನ್ನ ಅಥವಾ ಭರತನ ಈ ದುಷ್ಟಯೋಜನೆಯು ಖಂಡಿತವಾಗಿಯೂ ಕೈಗೂಡುವುದಿಲ್ಲ.

ಕಥಮಿಂದೀವರಶ್ಯಾಮಂ ರಾಮಂ ಪದ್ಮನಿಭೇಕ್ಷಣಮ್ ।
ಉಪಸಂಶ್ರಿತ್ಯ ಭರ್ತಾರಂ ಕಾಮಯೇಯಂ ಪೃಥಗ್ಜನಮ್ ॥೨೩॥

ಕಮಲಸದೃಶವಾದ ಕಣ್ಣುಗಳುಳ್ಳ, ಕನ್ನೈದಿಲೆಯಂತೆ ಶ್ಯಾಮಲವರ್ಣದವನಾದ ರಾಮನನ್ನು ಪತಿಯನ್ನಾಗಿ ಪಡೆದು–ಅವನ ದಿವ್ಯಾಶ್ರಯದಲ್ಲಿಯೇ ಇರುವ ನಾನು–ಪ್ರಾಕೃತನಾದ ಬೇರೊಬ್ಬ ಪುರುಷನನ್ನು ಹೇಗೆತಾನೇ ಕಾಮಿಸುವೆನು ?

ಸಮಕ್ಷಂ ತವ ಸೌಮಿತ್ರೇ ಪ್ರಾಣಾಂಸ್ತ್ಯಕ್ಷ್ಯಾಮ್ಯಸಂಶಯಮ್ ।
ರಾಮಂ ವಿನಾ ಕ್ಷಣಮಪಿ ನೈವ ಜೀವಾಮಿ ಭೂತಲೇ ॥೨೪॥

ಸೌಮಿತ್ರಿಯೇ ! ರಾಮನನ್ನು ಬಿಟ್ಟು ಒಂದು ಕ್ಷಣವಾದರೂ ನಾನು

ಈ ಪ್ರಪಂಚದಲ್ಲಿ ಬದುಕಿರಲಾರೆನು. ನಿನ್ನ ಕಣ್ಣೆದುರಿನಲ್ಲಿಯೇ ನಾನು ಪ್ರಾಣಗಳನ್ನು ತೊರೆದುಬಿಡುತ್ತೇನೆ. ಇದು ನಿಶ್ಚಯ."

ರೋಮಾಂಚಕರವಾದ ಕರ್ಣಕಠೋರವಾದ ಸೀತಾದೇವಿಯ ಆ ಮಾತನ್ನು ಕೇಳಿ ಜಿತೇಂದ್ರಿಯನಾದ ಲಕ್ಷ್ಮಣನು ಕೈಮುಗಿದುಕೊಂಡು ಹೇಳಿದನು :

ಉತ್ತರಂ ನೋತ್ಸಹೇ ವಕ್ತುಂ ದೈವತಂ ಭವತೀ ಮಮ ॥೨೬॥

“ ತಾಯೇ ! ನೀನು ನನಗೆ ದೇವತೆಯ ಸಮಾನಳಾಗಿರುವುದರಿಂದ ಈ ವಿಷಯದಲ್ಲಿ ಯಾವ ಉತ್ತರವನ್ನು ಕೊಡಲೂ ನನಗೆ ಉತ್ಸಾಹವಿಲ್ಲ.

ವಾಕ್ಯಮಪ್ರತಿರೂಪಂ ತು ನ ಚಿತ್ರಂ ಸ್ತ್ರೀಷು ಮೈಥಿಲಿ ।
ಸ್ವಭಾವಸ್ತ್ವೇಷ ನಾರೀಣಾಮೇವಂ ಲೋಕೇಷು ದೃಶ್ಯತೇ ॥೨೭॥

ಮೈಥಿಲಿ ! ನೀನಾಡಿದಂತಹ ಅನುಚಿತವಾದ ಮಾತುಗಳನ್ನು ಸ್ತ್ರೀಯರು ಆಡುವರೆಂಬುವರಲ್ಲಿ ಆಶ್ಚರ್ಯವೇನೂ ಇಲ್ಲ. ಲೋಕದಲ್ಲಿ ಸಾಮಾನ್ಯವಾಗಿ ಇಂತಹ ಸ್ವಭಾವವೇ ಸ್ತ್ರೀಯರಲ್ಲಿ ಕಂಡುಬರುತ್ತದೆ.

ವಿಮುಕ್ತಧರ್ಮಾಶ್ಚಪಲಾಸ್ತೀಕ್ಷ್ಣಾ ಭೇದಕರಾಃ ಸ್ತ್ರಿಯಃ ।
ನ ಸಹೇ ಹೀದೃಶಂ ವಾಕ್ಯಂ ವೈದೇಹಿ ಜನಕಾತ್ಮಜೇ ।
ಶ್ರೋತ್ರಯೋರುಭಯೋರ್ಮೇಽದ್ಯ ತಪ್ತನಾರಾಚಸಂನಿಭಮ್ ॥

ಅವರು ಧರ್ಮಹೀನರಾಗಿರುತ್ತಾರೆ. ಚಪಲಚಿತ್ತರಾಗಿರುತ್ತಾರೆ. ತೀಕ್ಷ್ಣಸ್ವಭಾವದವರಾಗಿರುತ್ತಾರೆ. ಬಂಧುಗಳಲ್ಲಿ ಪರಸ್ಪರವಾಗಿ ಒಡಕನ್ನುಂಟುಮಾಡುವುದರಲ್ಲಿ ನಿಪುಣೆಯರಾಗಿರುತ್ತಾರೆ. ನೀನಾಡಿದ ಇಂತಹ ಕರ್ಣಕಠೋರವಾದ ಮಾತುಗಳನ್ನು ನಾನು ಸಹಿಸಿಕೊಳ್ಳಲಾರೆನು. ಕೆಂಪಗೆ ಕಾಯಿಸಿದ ಬಾಣಗಳಿಂದ ನನ್ನೆರಡು ಕಿವಿಗಳನ್ನೂ ತಿವಿದಂತಾಗಿದೆ.

ಉಪಶೃಣ್ವನ್ತು ಮೇ ಸರ್ವೇ ಸಾಕ್ಷಿಭೂತಾ ವನೇಚರಾಃ ।
ನ್ಯಾಯವಾದೀ ಯಥಾನ್ಯಾಯಮುಕ್ತೋಽಹಂ ಪರುಷಂ ತ್ವಯಾ ॥

ನ್ಯಾಯವಾದಿಯಾದ ನನ್ನ ವಿಷಯದಲ್ಲಿ ನೀನು ಎಂತಹ ಕಠಿನವಾದ

ಮಾತುಗಳನ್ನು ಆಡಿರುವೆಯೆಂಬುದನ್ನು ಈ ಅರಣ್ಯದಲ್ಲಿರುವ ಪ್ರಾಣಿಗಳೆಲ್ಲವೂ ಕೇಳಲಿ. ಇವುಗಳೇ ಇದಕ್ಕೆ ಸಾಕ್ಷಿಗಳಾಗಿರಲಿ.

ಧಿಕ್ತ್ವಾಮದ್ಯ ವಿನಶ್ಯನ್ತೀಂ ಯನ್ಮಾಮೇವಂ ವಿಶಙ್ಕಸೇ ।
ಸ್ತ್ರೀತ್ವಂ ದುಷ್ಟಂ ಸ್ವಭಾವೇನ ಗುರುವಾಕ್ಯೇ ವ್ಯವಸ್ಥಿತಮ್ ॥೩೦॥

ಸಾಮಾನ್ಯವಾಗಿ ಸ್ತ್ರೀತ್ವವು ಸ್ವಭಾವದಿಂದಲೇ ದುಷ್ಟವಾಗಿರುತ್ತದೆ. ಗುರುವಿನ ಆಜ್ಞಾಧಾರಕನಾಗಿ ನಿಂತಿರುವ ನನ್ನನ್ನು ಈ ವಿಧವಾಗಿ ಶಂಕಿಸುತ್ತಿರುವೆಯಲ್ಲವೇ ? ನಿನಗೆ ಧಿಕ್ಕಾರವಿರಲಿ. ಇಂತಹ ಆಡಬಾರದ ಮಾತುಗಳನ್ನು ಆಡುತ್ತಿರುವ ನೀನೂ ವಿನಾಶಹೊಂದುವೆ.

ಗಮಿಷ್ಯೇ ಯತ್ರ ಕಾಕುತ್ಸ್ಥಃ ಸ್ವಸ್ತಿ ತೇಽಸ್ತು ವರಾನನೇ ।
ರಕ್ಷನ್ತು ತ್ವಾಂ ವಿಶಾಲಾಕ್ಷಿ ಸಮಗ್ರಾ ವನದೇವತಾಃ ॥೩೧॥

ವರಾನನೇ ! ನಿನಗೆ ಮಂಗಳವಾಗಲಿ. ರಾಮನ ಬಳಿಗೇ ನಾನು ಹೋಗುತ್ತೇನೆ. ಇಲ್ಲಿರುವ ಎಲ್ಲ ವನದೇವತೆಗಳೂ ನಿನ್ನನ್ನು ರಕ್ಷಿಸಲಿ.

ನಿಮಿತ್ತಾನಿ ಹಿ ಘೋರಾಣಿ ಯಾನಿ ಪ್ರಾದುರ್ಭವನ್ತಿ ಮೇ ।
ಅಪಿ ತ್ವಾಂ ಸಹ ರಾಮೇಣ ಪಶ್ಯೇಯಂ ಪುನರಾಗತಃ ॥೩೨॥

ನಾನು ಹೀಗೆ ಹೇಳುತ್ತಿರುವಾಗಲೇ ಅನೇಕವಿಧವಾದ ಘೋರತರವಾದ ಅಪಶಕುನಗಳನ್ನು ಕಾಣುತ್ತಿದ್ದೇನೆ. ರಾಮನ ಜೊತೆಯಲ್ಲಿ ಆಶ್ರಮಕ್ಕೆ ಹಿಂದಿರುಗಿ ಬಂದು ಪುನಃ ನಿನ್ನನ್ನು ಕಾಣುವೆನೋ ಇಲ್ಲವೋ – ಎಂಬ ಸಂದೇಹವೂ ನನಗುಂಟಾಗಿದೆ."

ಲಕ್ಷ್ಮಣನು ಹೀಗೆ ಹೇಳಲು ಜಾನಕಿಯು ಗೋಳಾಡುತ್ತಾ ಧಾರಾಕಾರವಾಗಿ ಕಣ್ಣೀರನ್ನು ಸುರಿಸುತ್ತಾ ಅತಿತೀಕ್ಷ್ಣವಾದ ಮಾತನ್ನು ಪುನಃ ಹೇಳಿದಳು :

ಗೋದಾವರೀಂ ಪ್ರವೇಕ್ಷ್ಯಾಮಿ ವಿನಾ ರಾಮೇಣ ಲಕ್ಷ್ಮಣ ।
ಆಬನ್ಧಿಷ್ಯೇಽಥ ವಾ ತ್ಯಕ್ಷ್ಯೇ ವಿಷಮೇ ದೇಹಮಾತ್ಮನಃ ॥೩೪॥
ಪಿಬಾಮ್ಯಹಂ ವಿಷಂ ತೀಕ್ಷ್ಣಂ ಪ್ರವೇಕ್ಷ್ಯಾಮಿ ಹುತಾಶನಮ್ ।
ನ ತ್ವಹಂ ರಾಘವಾದನ್ಯಂ ಪದಾಪಿ ಪುರುಷಂ ಸ್ಪೃಶೇ ॥೩೫॥

"ಲಕ್ಷ್ಮಣ! ರಾಮನಿಂದ ರಹಿತಳಾದ ನಾನು ಗೋದಾವರಿಯಲ್ಲಿ ಬಿದ್ದು ಸಾಯುತ್ತೇನೆ. ಅಥವಾ ನೇಣುಹಾಕಿಕೊಳ್ಳುತ್ತೇನೆ. ಬೆಟ್ಟದ ಮೇಲಿಂದ ಬಿದ್ದಾದರೂ ಈ ಶರೀರವನ್ನು ಪರಿತ್ಯಜಿಸುತ್ತೇನೆ. ತೀಕ್ಷ್ಣವಾದ ವಿಷವನ್ನಾದರೂ ಕುಡಿಯುತ್ತೇನೆ. ಉರಿಯುತ್ತಿರುವ ಬೆಂಕಿಯಲ್ಲಾದರೂ ಬೀಳುತ್ತೇನೆ. ಆದರೆ ರಾಘವನೊಬ್ಬನನ್ನು ಬಿಟ್ಟು ಬೇರೆ ಯಾರನ್ನೂ ನಾನು ಕಾಲಿನಿಂದಲೂ ಮುಟ್ಟುವುದಿಲ್ಲ."



ಶೋಕಾಭಿಭೂತಳಾಗಿದ್ದ ಸೀತಾದೇವಿಯು ಲಕ್ಷ್ಮಣನಿಗೆ ಹೀಗೆ ಆಕ್ರೋಶದಿಂದ ಹೇಳಿ, ಗಟ್ಟಿಯಾಗಿ ಅಳುತ್ತಾ ಎರಡು ಕೈಗಳಿಂದಲೂ ಉದರಪ್ರದೇಶವನ್ನು ಬಡಿದುಕೊಂಡಳು.

ಏನು ಮಾಡಬೇಕೆಂಬುದನ್ನು ಅರಿಯದೇ ಉದ್ವಿಗ್ನನಾಗಿದ್ದ,

ಲಕ್ಷ್ಮಣನು ಸಂಕಟಪಡುತ್ತಾ ಗಳ-ಗಳನೆ ಅಳುತ್ತಿದ್ದ ವಿಶಾಲಲೋಚನೆಯಾದ ಸೀತಾದೇವಿಯನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಲು ಪುನಃ ಯತ್ನಿಸಿದನು. ಆದರೆ ಸೀತೆಯು ತನ್ನ ಮೈದುನನೊಡನೆ ಯಾವ ಮಾತನ್ನೂ ಆಡಲಿಲ್ಲ. *

ಅನಂತರ ಧೀಮಂತನಾದ ಜಿತೇಂದ್ರಿಯನಾದ ಲಕ್ಷ್ಮಣನು ಸೀತಾದೇವಿಗೆ ಅಭಿವಾದನಮಾಡಿ ಕೈಮುಗಿದು ಹೆಜ್ಜೆ-ಹೆಜ್ಜೆಗೂ ಹಿಂದಿರುಗಿ ಸೀತಾದೇವಿಯನ್ನೇ ನೋಡುತ್ತಾ ರಾಮನ ಬಳಿಗೆ ಹೊರಟನು.

೪೫ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೪೬ನೆಯ ಸರ್ಗ

ರಾವಣನು ಸಂನ್ಯಾಸಿಯ ವೇಷವನ್ನು ಧರಿಸಿ ಸೀತೆಯ ಬಳಿಗೆ ಹೋಗಿ ಪ್ರಶ್ನಿಸಿದುದು : ಸೀತೆಯಿಂದ ಅತಿಥಿಸತ್ಕಾರ

ತಥಾ ಪರುಷಮುಕ್ತಸ್ತು ಕುಪಿತೋ ರಾಘವಾನುಜಃ ।
ಸ ವಿಕಾಂಕ್ಷನ್ಭೃಶಂ ರಾಮಂ ಪ್ರತಸ್ಥೇ ನ ಚಿರಾದಿವ ॥೧॥

ಸೀತೆಯು ಹೀಗೆ ಕರ್ಣಕಠೋರವಾದ ಮಾತುಗಳನ್ನಾಡಲು ಲಕ್ಷ್ಮಣನು ಕುಪಿತನಾಗಿ ರಾಮನನ್ನು ಬಹಳ ಬೇಗ ನೋಡಬೇಕೆನ್ನುವ ಆಕಾಂಕ್ಷೆಯಿಂದ ಆಶ್ರಮದಿಂದ ಶೀಘ್ರವಾಗಿ ಹೊರಟನು.

ಸೀತೆಯನ್ನು ಕದ್ದೊಯ್ಯಲು ಅವಕಾಶವನ್ನು ನಿರೀಕ್ಷಿಸುತ್ತಿದ್ದ ರಾವಣನು ಸಂನ್ಯಾಸಿಯ ವೇಷವನ್ನು ಧರಿಸಿ ವೈದೇಹಿಯಿದ್ದೆಡೆಗೆ ಬಹಳ ಬೇಗ ತೆರಳಿದನು. ಆ ಸಮಯದಲ್ಲಿ ರಾವಣನು ನವುರಾದ ಕಾಷಾಯವಸ್ತ್ರ

*ಆಗಿನ ಪರಿಸ್ಥಿತಿಯಲ್ಲಿ ಲಕ್ಷ್ಮಣನು ತನ್ನ ಕರ್ತವ್ಯವಾಗಿದ್ದ ರಾಮನ ಆಜ್ಞೆಯನ್ನು ಪರಿಪಾಲಿಸುವ ಸಾಧ್ಯತೆಯೇ ಇರಲಿಲ್ಲ. ಸೀತೆಗೆ ಎಷ್ಟು ಸಮಾಧಾನವನ್ನು ಹೇಳಿದರೂ ಪ್ರಯೋಜನವಾಗಲಿಲ್ಲ. ಅವನ ಸಮಾಧಾನದ ಮಾತುಗಳೆಲ್ಲವೂ ಅವಳ ಕೋಪಕ್ಕೂ ಮತ್ತು ಸಂಶಯಕ್ಕೂ ಎಡೆಮಾಡಿಕೊಡುತ್ತಿದ್ದುವು. ತಾನು ರಾಮನ ಆಜ್ಞೆಯಂತೆ ಅಲ್ಲಿಯೇ ಸ್ಥಿರವಾಗಿ ನಿಂತರೆ ಸೀತಾದೇವಿಯು ಮುಂದಿನ ಕ್ಷಣದಲ್ಲಿ ಏನು ಮಾಡಿಬಿಡುವಳೋ ? ಏನಾಗಿಬಿಡುವಳೋ ?–ಎಂಬ ವಿಷಯದಲ್ಲಿ ಲಕ್ಷ್ಮಣನು ಭ್ರಾಂತ

ವನ್ನುಟ್ಟಿದ್ದನು. ಶಿಖೆಯನ್ನು ಬಿಟ್ಟಿದ್ದನು. ಛತ್ರಿಯನ್ನು ಹಿಡಿದಿದ್ದನು. ತೊಗಲಿನ ಪಾದರಕ್ಷೆಗಳನ್ನು ಹಾಕಿಕೊಂಡಿದ್ದನು. ಶುಭ್ರವಾದ ತ್ರಿದಂಡ-ಕಮಂಡಲುಗಳನ್ನು ಎಡಭಾಗದ ಹೆಗಲಿಗೆ ಕಟ್ಟಿಕೊಂಡು ಸಂನ್ಯಾಸಿರೂಪ ದಿಂದ ವೈದೇಹಿಯ ಬಳಿಗೆ ಬಂದನು.* ಸೂರ್ಯ-ಚಂದ್ರರಿಬ್ಬರೂ ಇಲ್ಲದ ಸಂಧ್ಯೆಯನ್ನು ಗಾಢವಾದ ಕತ್ತಲು ಆವರಿಸುವಂತೆ–ಅಣ್ಣ-ತಮ್ಮಂದಿರಿಂದ ರಹಿತಳಾಗಿದ್ದ ಸೀತಾದೇವಿಯನ್ನು ರಾವಣನು ಸಂಧಿಸಿದನು. ಚಂದ್ರನಿಂದ ವಿಹೀನಳಾದ ರೋಹಿಣಿಯನ್ನು ಕೇತುಗ್ರಹವು ವೀಕ್ಷಿಸುವಂತೆ – ಯಶಸ್ವಿನಿ ಯಾದ ರಾಮನ ಪತ್ನಿಯನ್ನು ಅತ್ಯಂತಕ್ರೂರಿಯಾದ ರಾವಣನು ನೋಡಿ ದನು. ಉಗ್ರವಾದ ಮತ್ತು ಪಾಪಕರ್ಮನಾದ ರಾವಣನನ್ನು ನೋಡಿ ಭಯ ದಿಂದಾಗಿ ಜನಸ್ಥಾನದಲ್ಲಿದ್ದ ವೃಕ್ಷಗಳೂ ಅಲುಗಾಡಲಿಲ್ಲ. ಗಾಳಿಯೂ ಬೀಸಲಿಲ್ಲ.

ಶೀಘ್ರಸ್ರೋತಾಶ್ಚ ತಂ ದೃಷ್ಟ್ವಾ ವೀಕ್ಷನ್ತಂ ರಕ್ತಲೋಚನಮ್ ।
ಸ್ತಿಮಿತಂ ಗನ್ತುಮಾರೇಭೇ ಭಯಾದ್ಗೋದಾವರೀ ನದೀ ॥೭॥

ಅತ್ಯಂತರಭಸದಿಂದ ಪ್ರವಹಿಸುತ್ತಿದ್ದ ಗೋದಾವರಿಯೂ ಕೂಡ ರಾವಣನು ತನ್ನ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಿರುವುದನ್ನು ಕಂಡು ಭಯದಿಂದ ಮೆಲ್ಲ-ಮೆಲ್ಲನೆ ಪ್ರವಹಿಸತೊಡಗಿತು. ರಾಮನಿಲ್ಲದಿರುವುದನ್ನೇ ಬಯಸಿದ್ದ ರಾವಣನು ರಾಮ-ಲಕ್ಷ್ಮಣರಿಬ್ಬರೂ ಇಲ್ಲದಿದ್ದ ಆ ಸಮಯದಲ್ಲಿ ಭಿಕ್ಷುರೂಪದಿಂದ ವೈದೇಹಿಯನ್ನು ಸಮೀಪಿಸಿದನು.

ಅಭವ್ಯೋ ಭವ್ಯರೂಪೇಣ ಭರ್ತಾರಮನುಶೋಚತೀಮ್ ।
ಅಭ್ಯವರ್ತತ ವೈದೇಹೀಂ ಚಿತ್ರಾಮಿವ ಶನೈಶ್ಚರಃ ॥೮॥

---

ನಾದನು. ಆದುದರಿಂದಲೇ ಮನಸ್ಸಿಲ್ಲದಿದ್ದರೂ ಲಕ್ಷ್ಮಣನು ಸೀತೆಯನ್ನು ಬಿಟ್ಟು ಶ್ರೀರಾಮನ ಬಳಿಗೆ ಹೋಗುವುದನ್ನು ನಿಶ್ಚಯಿಸಿದನು.

*ಪರಿವ್ರಾಟ್ = ಸಂನ್ಯಾಸಿ ; ಪರಿತ್ಯಜ್ಯ ಸರ್ವಂ ವ್ರಜತಿ = ಎಲ್ಲವನ್ನೂ ಪರಿತ್ಯಜಿಸಿ ಹೊರಟುಹೋಗತಕ್ಕವನು ಪರಿವ್ರಾಟ್ ಎನಿಸಿಕೊಳ್ಳುತ್ತಾನೆ. ಭಿಕ್ಷುಃ ಪರಿವ್ರಾಟ್ಕರ್ಮನ್ದೀ ಪಾರಾಶರ್ಯಪಿ ಮಸ್ಕರೀ [ ಅಮರಃ ] ಅಂಗಿರಸರು ಯತಿಲಕ್ಷಣವನ್ನು ಹೀಗೆ ಹೇಳಿದ್ದಾರೆ: ಬ್ರಹ್ಮಸೂತ್ರಂ ತ್ರಿದಣ್ಡಂ ಚ ವಸ್ತ್ರಂ ಜನ್ತುನಿವಾರಣಮ್ । ಶಿಕ್ಯಂ ಪಾತ್ರಂ ಬುಸೀ ಚೈವ ಕೌಪೀನಂ ಕಟಿವೇಷ್ಟನಮ್। ತಸ್ಯೈತದ್ವಿದ್ಯತೇ ಲಿಙ್ಗಂ ಸ ಯತಿ

ದುರ್ಜನನಾದ ರಾವಣನು ಸುಜನನ ರೂಪವನ್ನು ಧರಿಸಿ-ಶನೈಶ್ಚರನು ಚಿತ್ರಾನಕ್ಷತ್ರದ ಸಮೀಪಕ್ಕೆ ಹೋಗುವಂತೆ*-ಪತಿಯನ್ನು ಕುರಿತು ದುಃಖಿಸುತ್ತಿದ್ದ ವೈದೇಹಿಯ ಬಳಿಗೆ ಹೋದನು.

ಸ ಪಾಪೋ ಭವ್ಯರೂಪೇಣ ತೃಣೈಃ ಕೂಪ ಇವಾವೃತಃ ।
ಅತಿಷ್ಠತ್ಪ್ರೇಕ್ಷ್ಯ ವೈದೇಹೀಂ ರಾಮಪತ್ನೀಂ ಯಶಸ್ವಿನೀಮ್ ॥ ೧೦॥

ಹುಲ್ಲುಹಿತ್ತಿಗಳಿಂದ ಮುಚ್ಚಿರುವ ಬಾವಿಯಂತೆ-ಸಾತ್ತ್ವಿಕಸಂನ್ಯಾಸಿಯ ರೂಪವನ್ನು ಧರಿಸಿದ್ದ ಪಾಪಿಷ್ಠನಾದ ರಾವಣನು ರಾಮನ ಭಾರ್ಯೆಯಾದ ಯಶಸ್ವಿನಿಯಾದ ಸೀತೆಯನ್ನು ನೋಡಿ ಅಲ್ಲಿಯೇ ನಿಂತನು.

ಮಂಗಳಸ್ವರೂಪಿಣಿಯಾದ, ಸುಮನೋಹರವಾದ ಹಲ್ಲುಗಳನ್ನೂ ತುಟಿಗಳನ್ನೂ ಹೊಂದಿದ್ದ, ಪೂರ್ಣಚಂದ್ರನಂತೆ ಮುಖವಿದ್ದ, ಪರ್ಣಶಾಲೆಯಲ್ಲಿ ಕುಳಿತು ಕಣ್ಣೀರಿಡುತ್ತಿದ್ದ, ರಾಮವಿರಹಶೋಕದಿಂದ ಪೀಡಿತಳಾಗಿದ್ದ, ಪದ್ಮದ ಎಸಳುಗಳಂತಹ ಕಣ್ಣುಗಳನ್ನು ಹೊಂದಿದ್ದ, ಹೊಂಬಣ್ಣದ ರೇಷ್ಮೆಯ ಸೀರೆಯನ್ನುಟ್ಟಿದ್ದ ಸೀತೆಯನ್ನು ಸ್ವಲ್ಪಕಾಲ ನೋಡುತ್ತಲೇ ನಿಂತಿದ್ದ ರಾವಣನು ಆನಂದತುಂದಿಲನಾಗಿ ಅವಳ ಸಮೀಪಕ್ಕೂ ಹೋದನು. ವೈದೇಹಿಯನ್ನು ನೋಡಿದೊಡನೆಯೇ ಮನ್ಮಥನ ಬಾಣಗಳ ಏಟಿಗೆ ಸಿಕ್ಕಿ ಅವನಿಂದ ಪರಾಜಿತನಾದ ರಾವಣನು, ತನ್ನ ವೇಷಕ್ಕೆ ಅನುಗುಣವಾಗಿ ಉಪನಿಷದ್ವಾಕ್ಯಗಳನ್ನು ಹೇಳುತ್ತಾ ಯಾರೂ ಇಲ್ಲದಿದ್ದ ಆ ಸಮಯದಲ್ಲಿ ವಿನಯಭಾವದಿಂದ ಕೂಡಿದ ಮಾತುಗಳನ್ನು ಹೇಳತೊಡಗಿದನು. ಲೋಕದಲ್ಲಿಯೇ

---

ರ್ನೇತರೋ ಯತಿಃ-ಬ್ರಹ್ಮಸೂತ್ರ (ಜನಿವಾರ), ತ್ರಿದಂಡ, ಪ್ರಾಣಿಬಾಧಾನಿವಾರಣಾರ್ಥವಾಗಿ ವಸ್ತ್ರ, ಜೋಳಿಗೆ, ಪಾತ್ರೆ, ಆಸನ, ಕೌಪೀನ, ಉಡಿದಾರ-ಇವುಗಳನ್ನು ಧಾರಣೆ ಮಾಡಿಕೊಂಡಿರುವವನು ಯತಿ ಎನಿಸಿಕೊಳ್ಳುತ್ತಾನೆ. ತ್ರಿದಂಡ ಎಂದರೆ ಒಟ್ಟಾಗಿ ಸೇರಿಸಿ ಕಟ್ಟಿದ ಸಂನ್ಯಾಸಿಗಳ ಮೂರು ದಂಡಗಳು. ವಾಕ್, ಮನಸ್ಸು ಮತ್ತು ಶರೀರ ಇವುಗಳ ದಮನವನ್ನು ಸೂಚಿಸುವುದು ತ್ರಿದಂಡ.

*ಚಿತ್ರಾಮಿವ ಶನೈಶ್ಚರಃ : ಶನಿಗ್ರಹವು ಚಿತ್ತಾನಕ್ಷತ್ರಕ್ಕೆ ಹೋಗುವುದೆಂದರೆ ತುಲಾರಾಶಿಗೆ ಹೋಗುವಂತೆ ಎಂದರ್ಥ. ಚಿತ್ತಾನಕ್ಷತ್ರವು ತುಲಾರಾಶಿಗೂ ಸೇರಿದುದು. ತುಲಾರಾಶಿಯು ಶನಿಯ ಉಚ್ಚಸ್ಥಾನ. ಉಚ್ಚಸ್ಥಾನಕ್ಕೆ ಹೋದನೆಂದರೆ ರಾಮ-ಲಕ್ಷ್ಮಣರು ಇಲ್ಲದೇ ಇದ್ದುದರಿಂದ ಉಚ್ಚಶನಿಯಂತೆ ಅತ್ಯಂತಪ್ರಬಲನಾಗಿ ಸೀತೆಯ ಬಳಿಗೆ ಹೋದನು ಎಂದರ್ಥ.

ಉತ್ತಮಸ್ತ್ರೀರತ್ನಳಾದ, ಕೈಯಲ್ಲಿ ಕಮಲಪುಷ್ಪವಿಲ್ಲದ ಲಕ್ಷ್ಮಿಯೋಪಾದಿಯಲ್ಲಿರುವ, ಶರೀರಕಾಂತಿಯಿಂದ ಜಾಜ್ವಲ್ಯಮಾನಳಾಗಿ ಕಾಣುತ್ತಿದ್ದ ಸೀತಾದೇವಿಯನ್ನು ರಾವಣನು ಬಗೆ-ಬಗೆಯಾಗಿ ಪ್ರಶಂಸಿಸಿದನು.



" ಚಿನ್ನದಂತೆ ಮೈಬಣ್ಣವುಳ್ಳವಳೇ ! ಪೀತಾಂಬರಧಾರಿಣಿಯೇ ! ಲಕ್ಷ್ಮಿಯಂತೆ ಶುಭಕರವಾದ ಕಮಲಪುಷ್ಪಗಳ ಮಾಲೆಯನ್ನು ಧರಿಸಿರುವವಳೇ ! ನೀನು ಯಾರು ? ಸುಮನೋಹರವಾದ ಮುಖವುಳ್ಳವಳೇ ! ನೀನೇನು ಭೂದೇವಿಯೇ ? ಶ್ರೀದೇವಿಯೇ ? ಕೀರ್ತಿದೇವತೆಯೇ ? ಶುಭಾವಹಳಾದ ಲಕ್ಷ್ಮಿಯೇ ? ಅಪ್ಸರೆಯೇ ? ಐಶ್ವರ್ಯದ ಅಧಿದೇವತೆಯೇ ? ಸ್ವಚ್ಛಂದ ಚಾರಿಣಿಯಾದ ಮನ್ಮಥನ ಪತ್ನಿಯಾದ ರತೀದೇವಿಯೇ ? ಇವರಲ್ಲಿ ನೀನು

ಯಾರಾಗಿರುವೆ? ನಿನ್ನ ಹಲ್ಲುಗಳು ಒಂದೇ ಸಮವಾಗಿಯೂ, ಮೊಲ್ಲೆಮೊಗ್ಗುಗಳಂತೆ ಪ್ರಶಸ್ತವಾದ ಅಗ್ರಭಾಗಗಳಿಂದಲೂ ಕೂಡಿವೆ. ಮನೋಹರವಾಗಿವೆ. ಬಿಳುಪಾಗಿವೆ. ನಿನ್ನ ಕಣ್ಣುಗಳು ವಿಶಾಲವಾಗಿವೆ. ಶುಭ್ರವಾಗಿವೆ. ಕಡೆಗಣ್ಣುಗಳು ರಕ್ತದ ಛಾಯೆಯಿಂದ ಕಂಗೊಳಿಸುತ್ತಿವೆ. ಕಪ್ಪಾದ ಪಾಪೆಗಳಿಂದ ಕೂಡಿವೆ. ನಿನ್ನ ಸೊಂಟದ ಮುಂಭಾಗವು ವಿಶಾಲವಾಗಿದೆ. ನಿನ್ನ ಎರಡು ತೊಡೆಗಳೂ ಆನೆಯ ಸೊಂಡಿಲುಗಳಂತಿವೆ. ನಿನ್ನ ಸ್ತನಗಳು ತುಂಬಿಕೊಂಡಿವೆ. ದುಂಡಾಗಿವೆ. ಒಂದಕ್ಕೊಂದು ಸೇರಿಕೊಂಡಿವೆ. ಭಾರದಿಂದ ಬಳುಕುತ್ತಿವೆ. ದಪ್ಪವಾಗಿಯೂ ಎತ್ತರವಾಗಿಯೂ ಇರುವ ಅಗ್ರಭಾಗಗಳಿಂದ ಕೂಡಿವೆ. ಮನೋಹರವಾಗಿವೆ. ನುಣುಪಾಗಿವೆ. ತಾಳೆಹಣ್ಣಿನಂತಿವೆ. ಶ್ರೇಷ್ಠವಾದ ರತ್ನಗಳಿಂದ ಮಾಡಿದ ಆಭರಣಗಳಿಂದ ಸಮಲಂಕೃತವಾಗಿವೆ. ಬಹಳ ಸುಂದರವಾಗಿವೆ.

ಸುಂದರವಾದ ಮಂದಹಾಸವುಳ್ಳವಳೇ! ಸುಂದರವಾದ ದಂತಪಂಕ್ತಿಗಳುಳ್ಳವಳೇ! ಸುಂದರವಾದ ಕಣ್ಣುಗಳುಳ್ಳವಳೇ! ಹಾವ-ಭಾವಾದಿಗಳಿಂದ ಕೂಡಿರುವವಳೇ! ಸುಂದರಾಂಗಿಯೇ! ನದಿಯ ಪ್ರವಾಹಗಳು ದಡಗಳನ್ನು ಕೊರೆಯುವಂತೆ-ನಿನ್ನ ಅನುಪಮವಾದ ಸೌಂದರ್ಯದಿಂದ ನನ್ನ ಮನಸ್ಸನ್ನೇ ಸೂರೆಗೊಳ್ಳುತ್ತಿರುವೆ. ಹೆಬ್ಬೆರಳು ಮತ್ತು ತೋರುಬೆರಳುಗಳಲ್ಲಿ ಹಿಡಿಯಬಹುದಾದಷ್ಟು ನಿನ್ನ ಸೊಂಟದ ಗಾತ್ರವಿದೆ. ಸುಂದರವಾದ ಕೇಶರಾಶಿಯುಳ್ಳವಳಾಗಿರುವೆ. ನಿನ್ನ ಸ್ತನಗಳು ಪರಸ್ಪರವಾಗಿ ಸೇರಿಕೊಂಡಿವೆ. ಅನುಪಮವಾದ ಚೆಲುವೆಯಾಗಿರುವ ನೀನು ದೇವತೆಯಲ್ಲ. ಗಂಧರ್ವಿಯೂ ಅಲ್ಲ; ಯಕ್ಷಿಯೂ ಅಲ್ಲ; ಕಿನ್ನರಿಯೂ ಅಲ್ಲ. ಇಂತಹ ರೂಪವತಿಯಾದ ಸ್ತ್ರೀಯನ್ನು ಭೂಮಂಡಲದಲ್ಲಿಯೇ ನಾನು ಇದುವರೆಗೂ ನೋಡಿಲ್ಲ. ಶ್ರೇಷ್ಠವಾದ ಈ ನಿನ್ನ ರೂಪ, ಸೌಕುಮಾರ್ಯ, ವಯಸ್ಸು, ಎಲ್ಲಕ್ಕೂ ವಿರುದ್ಧವಾಗಿ ಭಯಂಕರವಾದ ಈ ಅರಣ್ಯದಲ್ಲಿ ನೀನು ವಾಸಮಾಡುತ್ತಿರುವುದು-ಈ ವಿಷಯಗಳು ನನ್ನ ಮನಸ್ಸನ್ನು ಕದಡುತ್ತಿವೆ. ಇಂತಹ ಅನುಪಮವಾದ ಸೌಂದರ್ಯದ ಖನಿಯೇ ಆಗಿರುವ ನೀನು ಇಲ್ಲಿಂದ ಹೊರಟುಬಿಡು. ನಿನಗೆ ಮಂಗಳವಾಗಲಿ. ಅರಣ್ಯವಾಸವು ನಿನ್ನಂತಹವಳಿಗೆ ಯೋಗ್ಯವಲ್ಲ. ಕಾಮರೂಪಿಗಳಾದ ಭಯಂಕರರಾದ ರಾಕ್ಷಸರಿಗೆ ಇದು ವಾಸಸ್ಥಾನವಾಗಿದೆ. ರಮ್ಯ

ವಾದ ಮತ್ತು ಶ್ರೇಷ್ಠವಾದ ಸೌಧಗಳಲ್ಲಿರಲು ನೀನು ಯೋಗ್ಯಳು. ಸುಗಂಧ ಯುಕ್ತವಾದ ಉಪವನಗಳುಳ್ಳ ನಗರದಲ್ಲಿರಲು ಯೋಗ್ಯಳು. ಕಾಡಿಗೆಯಂತಹ ಕಣ್ಣುಗಳುಳ್ಳವಳೇ! ನೀನು ಧರಿಸಿರುವ ಮಾಲೆ, ಪೂಸಿಕೊಂಡಿರುವ ಗಂಧ, ಉಟ್ಟಿರುವ ವಸ್ತ್ರ ಎಲ್ಲವೂ ಶ್ರೇಷ್ಠವಾಗಿವೆ. ಹಾಗೆಯೇ ನಿನ್ನ ಕೈಹಿಡಿದ ಪತಿಯೂ ಶ್ರೇಷ್ಠನೆಂದೇ ನಾನು ಭಾವಿಸುತ್ತೇನೆ.

ಶುಭ್ರವಾದ ಕಿರುನಗೆಯವಳೇ! ನೀನು ರುದ್ರರಿಗೆ ಸಂಬಂಧಿಸಿದವಳಾಗಿರುವೆಯಾ? ಮರುದ್ಗಣಕ್ಕೆ ಸಂಬಂಧಿಸಿದವಳಾಗಿರುವೆಯಾ? ಅಥವಾ ವಸುಗಳಿಗೆ ಸಂಬಂಧಿಸಿರುವೆಯಾ? ನಿಶ್ಚಯವಾಗಿಯೂ ನೀನು ಯಾರು? ನೀನೊಬ್ಬಳು ದೇವತಾಸ್ತ್ರೀಯೇ ಆಗಿರಬಹುದೆಂದು ನನ್ನ ಭಾವನೆಯಾಗಿದೆ. ಆದರೆ ಇಲ್ಲಿಗೆ ದೇವತೆಗಳಾಗಲೀ, ಗಂಧರ್ವರಾಗಲೀ, ಕಿನ್ನರರಾಗಲೀ ಬರುವುದಿಲ್ಲ. ಇದು ರಾಕ್ಷಸರಿಗೆ ಆವಾಸಸ್ಥಾನವಾಗಿದೆ. ಹೀಗಿರುವಾಗ ನೀನಿಲ್ಲಿಗೆ ಹೇಗೆ ಬಂದೆ? ದೊಡ್ಡ-ದೊಡ್ಡ ಕಪಿಗಳೂ, ಸಿಂಹಗಳೂ, ಚಿರತೆಗಳೂ, ಹುಲಿಗಳೂ, ತೋಳಗಳೂ, ಕರಡಿಗಳೂ, ಕಿರುಬಗಳೂ, ರಣಹದ್ದುಗಳೂ ಇಲ್ಲಿ ಅಪಾರಸಂಖ್ಯೆಯಲ್ಲಿವೆ. ಅವುಗಳನ್ನು ಕಂಡರೆ ನಿನಗೆ ಭಯವಾಗುವುದಿಲ್ಲವೇ? ಭಯಪಡದೇ ಇರುವುದಾದರೂ ಹೇಗೆ ಸಾಧ್ಯ? ಮದಿಸಿರುವ, ಭಯಂಕರವಾಗಿ ಕಾಣುವ, ವೇಗವಾಗಿ ಓಡುವ ಆನೆಗಳೂ ಇಲ್ಲಿ ಅನೇಕವಾಗಿವೆ. ಈ ಮಹಾರಣ್ಯದಲ್ಲಿ ಒಬ್ಬಳೇ ಇರುವ ನೀನು ಹೆದರದೆ ಹೇಗಿರುವೆ? ಕಲ್ಯಾಣಿ! ನೀನು ಯಾರೆಂಬುದನ್ನು ಹೇಳು. ಯಾರವಳಾಗಿರುವೆ? ಎಲ್ಲಿಂದ ಬಂದಿರುವೆ? ರಾಕ್ಷಸರಿಂದ ನಿಬಿಡವಾಗಿರುವ ಈ ಘೋರಾರಣ್ಯದಲ್ಲಿ ಯಾವ ಕಾರಣದಿಂದ ಒಬ್ಬಳೇ ಸಂಚರಿಸುವೆ?"

ದುರಾತ್ಮನಾದ ರಾವಣನು ಹಲವಾರು ಬಗೆಗಳಲ್ಲಿ ವೈದೇಹಿಯನ್ನು ಹಾಡಿ-ಹೊಗಳಿದನು. ರಾವಣನು ಬ್ರಾಹ್ಮಣಸಂನ್ಯಾಸಿಯ ವೇಷವನ್ನು ಧರಿಸಿ ಬಂದಿರುವುದನ್ನು ನೋಡಿ ಮೈಥಿಲಿಯು ಎಲ್ಲ ವಿಧವಾದ ಅತಿಥಿ ಸತ್ಕಾರಗಳಿಂದಲೂ ಅವನನ್ನು ಸತ್ಕರಿಸಿದಳು. ಸೌಮ್ಯಸ್ವಭಾವದವನಾಗಿ ಕಾಣುತ್ತಿದ್ದ ರಾವಣನಿಗೆ ಮೊದಲು ಕುಳಿತುಕೊಳ್ಳಲು ಆಸನವನ್ನು ಕೊಟ್ಟು, ಕಾಲುತೊಳೆಯಲು ನೀರುಕೊಟ್ಟು ಸತ್ಕರಿಸಿ, ಭೋಜನಮಾಡಲು ಊಟವು ಸಿದ್ಧವಾಗಿರುವುದೆಂದೂ ಹೇಳಿದಳು. ಬ್ರಾಹ್ಮಣವೇಷದಿಂದ ಬಂದಿದ್ದ,

ಅದಕ್ಕೆ ತಕ್ಕಂತೆ ಕಮಂಡಲುವನ್ನು ಕೈಯಲ್ಲಿ ಹಿಡಿದಿದ್ದ, ಕಾಷಾಯವಸ್ತ್ರಗಳನ್ನು ಧರಿಸಿದ್ದ, ಉಪೇಕ್ಷಿಸಲು ಅಶಕ್ಯನಾಗಿದ್ದ, ಸೀತೆಯ ಅಪಹರಣದಲ್ಲಿಯೇ ಅವ್ಯಗ್ರಚಿತ್ತನಾಗಿದ್ದ ರಾವಣನನ್ನು ಸೀತಾದೇವಿಯು ಬ್ರಾಹ್ಮಣನನ್ನು ಆಮಂತ್ರಿಸುವಂತೆಯೇ ಭೋಜನಕ್ಕೆ ಆಮಂತ್ರಿಸಿದಳು.

ಇಯಂ ಬ್ರುಸೀ ಬ್ರಾಹ್ಮಣ ಕಾಮಮಾಸ್ಯತಾ-
ಮಿದಂ ಚ ಪಾದ್ಯಂ ಪ್ರತಿಗೃಹ್ಯತಾಮಿತಿ ।
ಇದಂ ಚ ಸಿದ್ಧಂ ವನಜಾತಮುತ್ತಮಂ
ತ್ವದರ್ಥಮವ್ಯಗ್ರಮಿಹೋಪಭುಜ್ಯತಾಮ್ ॥೩೬॥

"ಬ್ರಾಹ್ಮಣೋತ್ತಮನೇ ! ಇದೇ ಆಸನ. ಯಥಾನುಕೂಲವಾಗಿ ಈ ಆಸನದಲ್ಲಿ ಕುಳಿತುಕೊ. ಇದು ಕಾಲುಗಳನ್ನು ತೊಳೆಯಲು ನೀಡುತ್ತಿರುವ ಪಾದ್ಯ. ಇದನ್ನು ಪ್ರತಿಗ್ರಹಿಸು. ಅರಣ್ಯದಲ್ಲಿ ಸಿಕ್ಕುವ ಉತ್ತಮೋತ್ತಮವಾದ ಗೆಡ್ಡೆ-ಗೆಣಸು ಮತ್ತು ಫಲಾದಿಗಳಿಂದ ನಿನಗಾಗಿ ಸಿದ್ಧಪಡಿಸಿರುವ ಆಹಾರವಿದು. ಇದನ್ನು ನೀನು ಯಾವ ವಿಧವಾದ ಸಂಕೋಚವೂ ಇಲ್ಲದೇ ಉಪಭುಂಜಿಸು. ಅತಿಥಿಸತ್ಕಾರಕ್ಕಾಗಿ ಎಲ್ಲವೂ ಸಿದ್ಧವಾಗಿದೆ" – ಎಂದು ಹೇಳಿದ ಸೀತಾದೇವಿಯಿಂದ ಭೋಜನಕ್ಕೆ ಆಹ್ವಾನಿಸಲ್ಪಟ್ಟ ರಾವಣನು ನರೇಂದ್ರಪತ್ನಿಯಾದ ಸೀತೆಯನ್ನು ದಿಟ್ಟಿಸಿ ನೋಡುತ್ತಾ ಅವಳನ್ನು ಬಲಾತ್ಕಾರದಿಂದಲಾದರೂ ಅಪಹರಿಸಿಕೊಂಡು ಹೋಗಲೇಬೇಕೆಂದು ದೃಢವಾಗಿ ನಿಶ್ಚಯಿಸಿ–ತನ್ನ ವಧೆಗೆ ತಾನೇ ತನ್ನನ್ನು ಸಮರ್ಪಿಸಿಕೊಂಡನು.

ಚಿನ್ನದ ಜಿಂಕೆಯ ಬೇಟೆಗಾಗಿ ಹೋಗಿದ್ದ ಸುಂದರವಾದ ವೇಷ-ಭೂಷಣಗಳನ್ನು ತೊಟ್ಟಿದ್ದ ಲಕ್ಷ್ಮಣಸಮೇತನಾದ ಶ್ರೀರಾಮನನ್ನು ಆಶ್ರಮದ್ವಾರದಲ್ಲಿ ನಿಂತು ಪ್ರತೀಕ್ಷಿಸುತ್ತಿದ್ದ ಸೀತಾದೇವಿಯು, ಹಸಿರಾದ ವನಸಿರಿಯಿಂದ ತುಂಬಿದ್ದ ಆ ಮಹಾರಣ್ಯವನ್ನು ಕಂಡಳೇ ಹೊರತು, ರಾಮ-ಲಕ್ಷ್ಮಣರನ್ನು ಕಾಣಲೇ ಇಲ್ಲ.

ನಲವತ್ತಾರನೆಯ ಸರ್ಗವು ಮುಗಿಯಿತು.

ಸೀತಾದೇವಿಯು ರಾವಣನಿಗೆ ತನ್ನ ಪರಿಚಯವನ್ನು ಮಾಡಿಕೊಟ್ಟು ಅರಣ್ಯಕ್ಕೆ ಬಂದ ಕಾರಣವನ್ನು ತಿಳಿಸಿದುದು : ರಾವಣನು ಸೀತೆಯನ್ನು ತನ್ನ ಪಟ್ಟದರಸಿಯನ್ನಾಗಿ ಮಾಡಿಕೊಳ್ಳುವ ಆಸೆಯನ್ನು ವ್ಯಕ್ತಪಡಿಸಿದುದು : ಸೀತಾದೇವಿಯ ತಿರಸ್ಕಾರ

ರಾವಣೇನ ತು ವೈದೇಹೀ ತದಾ ಪೃಷ್ಟಾ ಜಿಹೀರ್ಷತಾ ।
ಪರಿವ್ರಾಜಕಲಿಙ್ಗೇನ ಶಶಂಸಾತ್ಮಾನಮಾತ್ಮನಾ ॥೧॥

ಪರಿವ್ರಾಜಕಲಾಂಛನಗಳನ್ನು ಧರಿಸಿ ತನ್ನನ್ನು ಅಪಹರಿಸುವ ಸಲುವಾಗಿಯೇ ಆಗಮಿಸಿದ್ದ ರಾವಣನಿಂದ ಪ್ರಶ್ನಿಸಲ್ಪಟ್ಟ ಸೀತಾದೇವಿಯು ತನ್ನ ವಿಷಯವನ್ನು ಹೇಳಲು ಉಪಕ್ರಮಿಸಿದಳು.

'ಇವನು ಬ್ರಾಹ್ಮಣನಾಗಿದ್ದಾನೆ. ಮೇಲಾಗಿ ಅತಿಥಿಯಾಗಿ ಬಂದಿದ್ದಾನೆ. ಒಂದು ವೇಳೆ ಇವನು ಕೇಳಿದ ಪ್ರಶ್ನೆಗಳಿಗೆ ನಾನು ಉತ್ತರಿಸದಿದ್ದರೆ ನನಗೆ ಶಾಪವನ್ನೇ ಕೊಡಬಹುದು'–ಹೀಗೆ ಮುಹೂರ್ತಕಾಲ ಚಿಂತಿಸಿ ಅನಂತರ ಹೀಗೆ ಹೇಳಿದಳು :

"ಬ್ರಾಹ್ಮಣೋತ್ತಮನೇ ! ನಿನಗೆ ಮಂಗಳವಾಗಲಿ. ಮಿಥಿಲೆಯ ಅರಸನಾದ ಮಹಾತ್ಮನಾದ ಜನಕನ ಮಗಳು ನಾನು. 'ಸೀತಾ'–ಎಂದು ನನ್ನ ಹೆಸರು. ರಾಮನಿಗೆ ಅತ್ಯಂತ ಪ್ರಿಯಳಾದ ಭಾರ್ಯೆಯಾಗಿರುವೆನು. ಹನ್ನೆರಡು ವರ್ಷಗಳ ಕಾಲ ಇಕ್ಷ್ವಾಕುವಂಶದರಸರ ಅರಮನೆಯಲ್ಲಿ ವಾಸಮಾಡುತ್ತಿದ್ದು ಸಕಲಕಾಮನಾವಸ್ತುಗಳಿಂದಲೂ ಸಮೃದ್ಧವಾಗಿದ್ದ ಮಾನುಷವಾದ ಭೋಗಗಳೆಲ್ಲವನ್ನೂ ಅನುಭವಿಸುತ್ತಾ ಸುಖವಾಗಿದ್ದೆನು. ಹದಿಮೂರನೆಯ ವರ್ಷದಲ್ಲಿ ಪ್ರಭುವಾದ ದಶರಥರಾಜನು ಮಂತ್ರಿಗಳೊಡನೆ ಸಮಾಲೋಚಿಸಿ ರಾಮನಿಗೆ ಪಟ್ಟಾಭಿಷೇಕಮಾಡಲು ನಿಶ್ಚಯಿಸಿದನು. ಆತನು ಪಟ್ಟಾಭಿಷೇಕಕ್ಕಾಗಿ ಎಲ್ಲ ಸಾಮಗ್ರಿಗಳನ್ನೂ ಸಿದ್ಧಪಡಿಸುತ್ತಿರಲು ಕೈಕೇಯೀ ಎಂಬ ಹೆಸರಿನ ನನ್ನ ಚಿಕ್ಕತ್ತೆಯು ದಶರಥರಾಜನಿಂದ ವರವನ್ನು ಯಾಚಿಸಿದಳು. ಕೈಕೇಯಿಯು–ಪತಿಯಾದ, ಸತ್ಯಸಂಧನಾದ, ನೃಪಶ್ರೇಷ್ಠನಾದ ದಶರಥಮಹಾರಾಜನಿಗೆ ತಾನು ಹಿಂದೆ ಮಾಡಿದ್ದ ಉಪಕಾರ

ವನ್ನೂ ಮತ್ತು ಆ ಸಮಯದಲ್ಲಿ ರಾಜನು ಅವಳಿಗೆ ಕೊಟ್ಟಿದ್ದ ಎರಡು ವರಗಳನ್ನೂ ಜ್ಞಾಪಿಸಿ, ಆ ಮೂಲಕವಾಗಿ ಅವನನ್ನು ತನ್ನ ವಶಮಾಡಿಕೊಂಡು ನನ್ನ ಪತಿಗೆ ಅರಣ್ಯವಾಸ ಮತ್ತು ಭರತನಿಗೆ ಪಟ್ಟಾಭಿಷೇಕ–ಎಂಬ ಎರಡು ವರಗಳನ್ನು ಕೇಳಿದಳು. ಆ ವರಗಳು ಬೇಕೇಬೇಕೆಂದು ಒತ್ತಾಯಿಸುತ್ತಾ ನನ್ನ ಮಾವನಿಗೆ ಹೀಗೂ ಹೇಳಿದಳು:

ನಾದ್ಯ ಭೋಕ್ಷ್ಯೇ ನ ಚ ಸ್ವಪ್ಸ್ಯೇ ನ ಪಾಸ್ಯೇ ಚ ಕಥಂಚನ ।
ಏಷ ಮೇ ಜೀವಿತಸ್ಯಾನ್ತೋ ರಾಮೋ ಯದ್ಯಭಿಷಿಚ್ಯತೇ ॥೮॥

"ರಾಮನಿಗೇನಾದರೂ ನೀನು ಪಟ್ಟಾಭಿಷೇಕಮಾಡಿದ್ದೇ ಆದರೆ–ನಾನು ಊಟಮಾಡುವುದಿಲ್ಲ; ಮಲಗುವುದಿಲ್ಲ; ಏನನ್ನೂ ಕುಡಿಯುವುದೂ ಇಲ್ಲ. ಇದೇ ನನ್ನ ಜೀವನದ ಕೊನೆಯೆಂದು ತಿಳಿ."

ರಾಮನ ಪಟ್ಟಾಭಿಷೇಕಕ್ಕೆ ತಡೆಮಾಡಬಾರದೆಂದೂ – ವನವಾಸಕ್ಕೆ ಕಳುಹಿಸಲು ಒತ್ತಾಯಿಸಕೂಡದೆಂದೂ – ಹಾಗೆ ಅವಳು ಪಟ್ಟಾಭಿಷೇಕಕ್ಕೆ ಒಪ್ಪಿಗೆ ನೀಡಿದರೆ ಬೇಕುಬೇಕಾದ ಧನ-ಕನಕ-ವಸ್ತುಗಳನ್ನು ಯಥೇಚ್ಛವಾಗಿ ಕೊಡುವುದಾಗಿಯೂ ದಶರಥನು ಪತ್ನಿಯನ್ನು ಪ್ರಾರ್ಥಿಸಿದನು. ಆದರೆ ಕೈಕೇಯಿಯು ರಾಮನ ವನವಾಸ; ಭರತನಿಗೆ ಪಟ್ಟಾಭಿಷೇಕ–ಈ ಎರಡು ವರಗಳನ್ನು ಬಿಟ್ಟು ಬೇರಾವುದಕ್ಕೂ ಸಮ್ಮತಿಸಲಿಲ್ಲ. ಆ ಸಮಯದಲ್ಲಿ ನನ್ನ ಪತಿಯು ಇಪ್ಪತ್ತೈದು ವರ್ಷದವನಾಗಿದ್ದನು. ನನಗೆ ಹದಿನೆಂಟು ವರ್ಷಗಳಾಗಿದ್ದುವು.* ನನ್ನ ಪತಿಯು ಲೋಕದಲ್ಲಿ ರಾಮನೆಂಬ ಹೆಸರಿನಿಂದ ವಿಖ್ಯಾತನಾಗಿದ್ದಾನೆ. ಅವನು ಸತ್ಯವಂತನು, ಶೀಲವಂತನು, ಪರಿಶುದ್ಧನು, ವಿಶಾಲಾಕ್ಷನು, ಮಹಾಬಾಹುವು, ಸರ್ವಪ್ರಾಣಿಗಳ ಹಿತದಲ್ಲಿಯೇ ಸರ್ವದಾ ನಿರತನಾಗಿರತಕ್ಕವನು. ನನ್ನ ಮಾವನು ಕಾಮಪೀಡಿತನಾಗಿಯೂ ಇದ್ದುದರಿಂದ ಕೈಕೇಯಿಗೆ ಅತ್ಯಂತಪ್ರಿಯವಾದ ಕಾಮನೆಯನ್ನು ಪೂರೈಸಿಕೊಡುವ

---

* ವನವಾಸದಲ್ಲಿ ಹದಿಮೂರು ವರ್ಷಗಳು ಕಳೆದಿರುವುದರಿಂದ ಪ್ರಕೃತ ಶ್ರೀರಾಮನಿಗೆ ಮೂವತ್ತೆಂಟು ವರ್ಷಗಳು. ಸೀತಾದೇವಿಗೆ ಮೂವತ್ತೊಂದು ವರ್ಷಗಳು. ಶ್ರೀರಾಮನು ಮುನಿಗಳ ಆಶ್ರಮದಲ್ಲಿ ಹತ್ತು ವರ್ಷಗಳನ್ನೂ, ಪಂಚವಟಿಯಲ್ಲಿ ಮೂರು ವರ್ಷಗಳನ್ನೂ ಸೀತಾ-ಲಕ್ಷ್ಮಣರೊಡನೆ ಕಳೆದಿರುತ್ತಾನೆ. ಹದಿನಾಲ್ಕನೆಯ ವರ್ಷದ ಆರಂಭದಲ್ಲಿ ಸೀತಾಪಹರಣವಾಗುತ್ತದೆ.

ಸಲುವಾಗಿ ರಾಮನಿಗೆ ಪಟ್ಟಾಭಿಷೇಕವನ್ನು ಮಾಡಲಿಲ್ಲ. ದಶರಥನ ನಿರ್ದೇಶದಂತೆ ಪಟ್ಟಾಭಿಷಿಕ್ತನಾಗಲು ತಂದೆಯ ಬಳಿಗೆ ಹೋದ ನನ್ನ ಪತಿಯಾದ ರಾಮನಿಗೆ ಕೈಕೇಯಿಯು ಗಡುಸಾಗಿಯೇ ಹೇಳಿದಳು :

" ರಾಘವ ! ನಿನ್ನ ತಂದೆಯು ಮಾಡಿರುವ ಆಜ್ಞೆಯ ವಿಷಯವಾಗಿ ನಾನು ಹೇಳುವುದನ್ನು ಕೇಳು. ನಿಷ್ಕಂಟಕವಾದ ಈ ರಾಜ್ಯವನ್ನು ಭರತನಿಗೆ ಒಪ್ಪಿಸಬೇಕು. ನೀನು ಹದಿನಾಲ್ಕು ವರ್ಷಗಳ ಕಾಲ ಅರಣ್ಯದಲ್ಲಿರಬೇಕು. ಇದು ನಿನ್ನ ತಂದೆಯ ಆಜ್ಞೆಯಾಗಿದೆ. ಆದುದರಿಂದ ನೀನು ಈಗಲೇ ಅರಣ್ಯಕ್ಕೆ ಹೊರಡು. ಸುಳ್ಳುಹೇಳುವುದರಿಂದ ಉಂಟಾಗುವ ಪಾಪದಿಂದ ತಂದೆಯನ್ನು ಬಿಡುಗಡೆಮಾಡು."

ಭಯವೇನೆಂಬುದನ್ನೇ ಅರಿಯದ ದೃಢವ್ರತನಾದ ನನ್ನ ಪತಿ ಶ್ರೀರಾಮನು ಕೈಕೇಯಿಯ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಹೇಳಿ ಅದರಂತೆಯೇ ಮಾಡಿದನು.

ದದ್ಯಾನ್ನ ಪ್ರತಿಗೃಹ್ಣೀಯಾತ್ಸತ್ಯಂ ಬ್ರೂಯಾನ್ನ ಚಾನೃತಮ್ ।
ಏತದ್ಬ್ರಾಹ್ಮಣ ರಾಮಸ್ಯ ವ್ರತಂ ಧೃತಮನುತ್ತಮಮ್ ॥೧೭॥

ಬ್ರಾಹ್ಮಣ ! ಯಾವಾಗಲೂ ದಾನಮಾಡಬೇಕು, ಪ್ರತಿಗ್ರಹವನ್ನು ಮಾಡಬಾರದು. ಸತ್ಯವನ್ನೇ ಹೇಳಬೇಕು, ಸುಳ್ಳನ್ನು ಹೇಳಬಾರದು. ಇದು ರಾಮನು ಕೈಗೊಂಡಿರುವ ಉತ್ತಮೋತ್ತಮವಾದ ವ್ರತವಾಗಿದೆ. ವೀರ್ಯವಂತನಾದ ಲಕ್ಷ್ಮಣನೆಂಬ ಹೆಸರಿನ ತಮ್ಮನು ರಾಮನ ಚಿಕ್ಕತಾಯಿಯಲ್ಲಿ ಹುಟ್ಟಿದವನು. ಪುರುಷವ್ಯಾಘ್ರನಾದ, ಶತ್ರುಹಂತಕನಾದ ಲಕ್ಷ್ಮಣನು ರಾಮನಿಗೆ ಯಾವಾಗಲೂ ಯುದ್ಧದಲ್ಲಿ ಸಹಾಯಕನಾಗಿರುತ್ತಾನೆ. ಧರ್ಮಚಾರಿಯಾದ ದೃಢವ್ರತನಾದ ಲಕ್ಷ್ಮಣನು–ನನ್ನೊಡನೆ ಅರಣ್ಯಕ್ಕೆ ಹೊರಟಿದ್ದ ನನ್ನ ಪತಿಯನ್ನು ಧನುಷ್ಪಾಣಿಯಾಗಿ ಹಿಂಬಾಲಿಸಿದನು.

ಜಟಾಧಾರಿಯಾಗಿ ತಾಪಸವೇಷವನ್ನು ಧರಿಸಿ ನನ್ನೊಡನೆಯೂ ಮತ್ತು ತಮ್ಮನಾದ ಲಕ್ಷ್ಮಣನೊಡನೆಯೂ ಧರ್ಮನಿತ್ಯನಾದ, ದೃಢವ್ರತನಾದ ರಾಮನು ದಂಡಕಾರಣ್ಯಕ್ಕೆ ಬಂದನು. ಕೈಕೇಯಿಯ ಕಾರಣದಿಂದಾಗಿ ರಾಜ್ಯಭ್ರಷ್ಟರಾದ ನಾವು ಮೂವರೂ ಭಯಂಕರವಾದ ಈ ಅರಣ್ಯಪ್ರದೇಶ

ದಲ್ಲಿ ಪರಾಕ್ರಮವನ್ನು ಅವಲಂಬಿಸಿ ಸಂಚರಿಸುತ್ತಿದ್ದೇವೆ. ಬ್ರಾಹ್ಮಣೋತ್ತಮನೇ ! ನಿನಗೆ ಅವಕಾಶವಿದ್ದರೆ ಮುಹೂರ್ತಕಾಲ ಇಲ್ಲಿಯೇ ವಿಶ್ರಮಿಸಿಕೊಂಡಿರು. ಹೇರಳವಾಗಿ ವನ್ಯಮೃಗಗಳನ್ನು ಸಂಹರಿಸಿ ಅವುಗಳ ಮಾಂಸವನ್ನು ತೆಗೆದುಕೊಂಡು ನನ್ನ ಪತಿಯು ಬಂದುಬಿಡುತ್ತಾನೆ. ರುರು ಮೃಗಗಳನ್ನೂ, ನೀರುಡಗಳನ್ನೂ, ಹಂದಿಗಳನ್ನೂ ಕೊಂದು ಮಾಂಸವನ್ನು ತರುತ್ತಾನೆ.

ತಪಸ್ವಿಯೇ ! ನೀನೂ ಕೂಡ ನಿನ್ನ ಹೆಸರನ್ನೂ, ಕುಲ-ಗೋತ್ರಗಳನ್ನೂ ಹೇಳು. ಈ ಭಯಂಕರವಾದ ದಂಡಕಾರಣ್ಯದಲ್ಲಿ ನೀನೊಬ್ಬನೇ ಯಾವ ಕಾರಣದಿಂದ ಸಂಚರಿಸುತ್ತಿರುವೆ ? ”

ಶ್ರೀರಾಮನ ಪತ್ನಿಯಾದ ಸೀತಾದೇವಿಯು ಹೀಗೆ ಪ್ರಶ್ನಿಸಲು ಮಹಾಬಲನಾದ ರಾಕ್ಷಸಾಧಿಪನಾದ ರಾವಣನು ತೀಕ್ಷ್ಣವಾಗಿಯೇ ಉತ್ತರಿಸಿದನು :

“ ಸೀತೇ ! ದೇವಾಸುರ-ಮಾನವರಿಂದ ಕೂಡಿರುವ ಈ ಎಲ್ಲ ಲೋಕಗಳನ್ನೂ ಭುಜಬಲ-ಪರಾಕ್ರಮಗಳಿಂದ ಭಯಗೊಳಿಸುತ್ತಿರುವ ರಾವಣನೆಂಬ ಹೆಸರಿನ ಪ್ರಸಿದ್ಧನಾದ ರಾಕ್ಷಸನು ನಾನೇ. ಚಿನ್ನದ ಬಣ್ಣದ ಕಾಂತಿಯಿಂದ ಕೂಡಿರುವ, ನವುರಾದ ರೇಷ್ಮೆಯ ಪೀತಾಂಬರವನ್ನುಟ್ಟಿರುವ ನಿನ್ನನ್ನು ನೋಡಿದನಂತರ ನನಗೆ ನನ್ನ ಭಾರ್ಯೆಯರ ಮೇಲಿದ್ದ ವ್ಯಾಮೋಹವೇ ಹೊರಟುಹೋಗಿದೆ. ನಾನು ನಾನಾಕಡೆಗಳಿಂದ ಅನೇಕ ಉತ್ತಮಸ್ತ್ರೀಯರನ್ನು ನನ್ನ ಅಂತಃಪುರಕ್ಕೆ ಕರೆತಂದಿರುತ್ತೇನೆ. ನಿನಗೆ ಮಂಗಳವಾಗಲಿ. ಅವರೆಲ್ಲರಿಗೂ ನೀನು ಮೊದಲನೆಯವಳಾಗಿ ಪಟ್ಟಮಹಿಷಿಯಾಗು. ಲಂಕಾ ಎಂಬ ಹೆಸರಿನ ನನ್ನ ಮಹಾನಗರಿಯು ಸಮುದ್ರದ ಮಧ್ಯದಲ್ಲಿದೆ. ಸಾಗರದಿಂದ ಸುತ್ತುವರಿದಿರುವ ಆ ನನ್ನ ಪಟ್ಟಣವು ಪರ್ವತದ ಮೇಲ್ಭಾಗದಲ್ಲಿದೆ.

ಸೀತೇ ! ಅಲ್ಲಿ ನೀನು ನನ್ನೊಡನೆ ಉದ್ಯಾನವನಗಳಲ್ಲಿ ಸ್ವಚ್ಛಂದವಾಗಿ ವಿಹರಿಸಬಹುದು. ನೀನು ಅಲ್ಲಿಗೆ ಬಂದೆಯಾದರೆ ಕ್ಲಿಷ್ಟಕರವಾದ ಈ ವನವಾಸವನ್ನು ಎಂದಿಗೂ ಅಪೇಕ್ಷಿಸುವುದಿಲ್ಲ. ನೀನು ನನ್ನ ಭಾರ್ಯೆಯೇ ಆದರೆ ಸರ್ವಾಭರಣಗಳಿಂದ ಭೂಷಿತೆಯರಾದ ಐದು ಸಾವಿರ ದಾಸಿಯರು ನಿನ್ನನ್ನು ಸರ್ವಕಾಲದಲ್ಲಿಯೂ ಉಪಚರಿಸುತ್ತಿರುತ್ತಾರೆ.”

ರಾವಣನು ಹೀಗೆ ಹೇಳಲು, ದೋಷವಿಲ್ಲದ ಅಂಗಾಂಗಗಳುಳ್ಳವಳಾಗಿದ್ದ ಜಾನಕಿಯು ಬಹಳ ಕುಪಿತಳಾಗಿ–ರಾಕ್ಷಸನು ಮಹಾಭಯಂಕರನೆಂಬುದನ್ನೂ ಘೋರನೆಂಬುದನ್ನೂ ಕ್ರೂರಿಯೆಂಬುದನ್ನೂ ಲೆಕ್ಕಿಸದೇ ತಿರಸ್ಕಾರಭಾವದಿಂದಲೇ ಉತ್ತರಿಸಿದಳು :

ಮಹಾಗಿರಿಮಿವಾಕಂಪ್ಯಂ ಮಹೇಂದ್ರಸದೃಶಂ ಪತಿಮ್ ।
ಮಹೋದಧಿಮಿವಾಕ್ಷೋಭ್ಯಮಹಂ ರಾಮಮನುವ್ರತಾ ॥೩೨॥

"ದುರುಳನೇ ! ಮಹಾಗಿರಿಯಂತೆ ಅಚಲನಾದ, ಮಹಾಸಮುದ್ರದಂತೆ ಪ್ರಶಾಂತನಾದ, ಮಹೇಂದ್ರಸದೃಶನಾದ ನನ್ನ ಪತಿಯಾದ ಶ್ರೀರಾಮನನ್ನೇ ನಾನು ಯಾವಾಗಲೂ ಅನುಸರಿಸಿರತಕ್ಕವಳು.

ಸರ್ವಲಕ್ಷಣಸಂಪನ್ನಂ ನ್ಯಗ್ರೋಧಪರಿಮಣ್ಡಲಮ್ ।
ಸತ್ಯಸಂಧಂ ಮಹಾಭಾಗಮಹಂ ರಾಮಮನುವ್ರತಾ ॥೩೩॥

ಸರ್ವಲಕ್ಷಣಸಂಪನ್ನನಾದ–ಮಂಡಲಾಕಾರವಾಗಿ ವಿಶಾಲವಾಗಿ ಹರಡಿಕೊಂಡಿರುವ ಆಲದ ಮರದಂತೆ–ಆಶ್ರಿತರ ಸಂತಾಪವನ್ನು ಪರಿಹರಿಸುವ, ಮಹಾಭಾಗನಾದ, ಸತ್ಯಸಂಧನಾದ ಶ್ರೀರಾಮನನ್ನೇ ನಾನು ಯಾವಾಗಲೂ ಅನುಸರಿಸಿರತಕ್ಕವಳು.*

ಮಹಾಬಾಹುಂ ಮಹೋರಸ್ಕಂ ಸಿಂಹವಿಕ್ರಾನ್ತಗಾಮಿನಮ್ ।
ನೃಸಿಂಹಂ ಸಿಂಹಸಂಕಾಶಮಹಂ ರಾಮಮನುವ್ರತಾ ॥೩೪॥

ಮಹಾಬಾಹುವಾದ, ವಿಶಾಲವಕ್ಷಸ್ಥಳದಿಂದ ಕೂಡಿರುವ, ಸಿಂಹದ ನಡಿಗೆಯಂತೆ ಗಂಭೀರವಾದ ಗಮನವುಳ್ಳ, ನರಶ್ರೇಷ್ಠನಾದ ಶ್ರೀರಾಮನನ್ನೇ ನಾನು ಯಾವಾಗಲೂ ಅನುಸರಿಸಿರತಕ್ಕವಳು.

---

* ನ್ಯಗ್ರೋಧಪರಿಮಣ್ಡಲಂ = ಈ ಪದಕ್ಕೆ ನಿಘಂಟುಕಾರರ ಅರ್ಥ : ಮಾರುದ್ದದ ಮನುಷ್ಯ. ಅಥವಾ ನಾಲ್ಕು ಮೊಳಗಳ ಮನುಷ್ಯ. ಪ್ರತಿಯೊಬ್ಬ ಮನುಷ್ಯನ ಮಾರು ಎಷ್ಟಿರುತ್ತದೆಯೋ ಅವನ ಎತ್ತರವೂ ಅಷ್ಟೇ ಇರುತ್ತದೆ. ಶ್ರೀರಾಮನ ಮಾರು ಎಷ್ಟು ಉದ್ದವಿದ್ದಿತೋ ಅವನ ಎತ್ತರವೂ ಅಷ್ಟೇ ಇದ್ದಿತು. ಇಲ್ಲಿ ನ್ಯಗ್ರೋಧ ಎಂಬುದಕ್ಕೆ ಅರ್ಥ ನಾಲ್ಕು ಮೊಳಗಳು ಅಥವಾ ಒಂದು ಮಾರು, ಪರಿಮಂಡಲ ಎಂದರೆ ಪರಿಮಾಣ. ನ್ಯಗ್ರೋಧಃ ವ್ಯಾಸಃ ಪರಿಮಣ್ಡಲಂ ಯಸ್ಯ ಸಃ ನ್ಯಗ್ರೋಧಪರಿಮಂಡಲಃ. ಆದರೆ ವ್ಯಾಖ್ಯಾನಕಾರರು ಯಾರೂ ಈ ಅರ್ಥವನ್ನು ತೆಗೆದುಕೊಂಡಿಲ್ಲ. 1) ನ್ಯಗ್ರೋಧಪರಿಮಣ್ಡಲಂ = ತತ್ಸದೃಶಪರಿಣಾಹಂ ತದ್ವತ್ಸರ್ವಾಶ್ರಯಂ–ಆಲದ ಮರದಂತೆ ವಿಶಾಲ

ಪೂರ್ಣಚನ್ದ್ರಾನನಂ ರಾಮಂ ರಾಜವತ್ಸಂ ಜಿತೇನ್ದ್ರಿಯಮ್ |
ಪೃಥುಕೀರ್ತಿಂ ಮಹಾತ್ಮಾನಮಹಂ ರಾಮಮನುವ್ರತಾ ||೩೫||

ಹುಣ್ಣಿಮೆಯ ಚಂದ್ರನಂತೆ ಮುಖವಿರುವ, ರಾಜಕುಮಾರನಾದ, ಜಿತೇಂದ್ರಿಯನಾದ, ಮಹಾಕೀರ್ತಿವಂತನಾದ, ಮಹಾತ್ಮನಾದ ಶ್ರೀರಾಮನನ್ನೇ ನಾನು ಯಾವಾಗಲೂ ಅನುಸರಿಸಿರತಕ್ಕವಳು.

ತ್ವಂ ಪುನರ್ಜಮ್ಬುಕಃ ಸಿಂಹೀಂ ಮಾಮಿಹೇಚ್ಛಸಿ ದುರ್ಲಭಾಮ್ |
ನಾಹಂ ಶಕ್ಯಾ ತ್ವಯಾ ಸ್ಪ್ರಷ್ಟುಮಾದಿತ್ಯಸ್ಯ ಪ್ರಭಾ ಯಥಾ ||೩೬||

ಗುಳ್ಳೇನರಿಯಂತಿರುವ ನೀನು ಸಿಂಹಿಣಿಯಂತಿರುವ ಸುದುರ್ಲಭಳಾದ ನನ್ನನ್ನು ಅಪೇಕ್ಷಿಸುತ್ತಿರುವೆ. ಸೂರ್ಯನ ಪ್ರಭೆಯನ್ನು ಹೇಗೆ ಮುಟ್ಟಲು ಸಾಧ್ಯವಾಗಲಾರದೋ –ಹಾಗೆಯೇ ನನ್ನನ್ನು ಮುಟ್ಟಲು ಕೂಡ ನಿನಗೇ ಸಾಧ್ಯವಿಲ್ಲ.

ಪಾದಪಾನ್ಕಾಞ್ಚನಾನ್ನೂನಂ ಬಹೂನ್ಪಶ್ಯಸಿ ಮನ್ದಭಾಕ್ |
ರಾಘವಸ್ಯ ಪ್ರಿಯಾಂ ಭಾರ್ಯಾಂ ಯಸ್ತ್ವಮಿಚ್ಛಸಿ ರಾವಣ ||೩೭||

---

ವಾದ (ಉದಾರವಾದ) ಬುದ್ಧಿಯಿರತಕ್ಕವನು. 2) ನ್ಯಗ್ರೋಧಸ್ಯ ಮಹಾವಟಸ್ಯೇವ ಪರಿಮಣ್ಡಲಂ ಯಸ್ಯ = ಸ್ವಾಶ್ರಿತಸನ್ತಾಪಧ್ವಂಸಕವತ್ – ವಟವೃಕ್ಷದಂತೆ ಪರಿಮಂಡಲವುಳ್ಳ; ವಿಶಾಲವಾದ ಮನಸ್ಸುಳ್ಳ ; ನ್ಯಗ್ರೋಧವೃಕ್ಷದಂತೆ ತನ್ನನ್ನು ಆಶ್ರಯಿಸಿದವರ ಸಂತಾಪವನ್ನು ನಾಶಮಾಡುವ 3) ನ್ಯಗ್ರೋಧವತ್ ಬಹುಶಾಖಬನ್ಧುಸ್ತೋಮಂ-ತದ್ವತ್ = ಆಲದಮರಕ್ಕೆ ಬಹುಶಾಖೆಗಳಿರುವಂತೆ–ಬಂಧುಗಳ ಸಮೂಹದಿಂದ ಕೂಡಿರುವ 4) ಕೂಪೋದಕಂ ವಟಚ್ಛಾಯಾ ತಾಂಬೂಲಂ ತರುಣೀಸ್ತನಮ್ | ಶೀತಕಾಲೇ ಭವತ್ಯುಷ್ಣಮುಷ್ಣಕಾಲೇ ಚ ಶೀತಲಮ್ – ಬಾವಿಯ ನೀರು, ಆಲದ ಮರದ ನೆರಳು, ತಾಂಬೂಲ, ಯುವತಿಯರ ಕುಚಗಳು-ಶೀತಕಾಲದಲ್ಲಿ ಉಷ್ಣವಾಗಿಯೂ ಉಷ್ಣಕಾಲದಲ್ಲಿ ಶೀತವಾಗಿಯೂ ಇರುತ್ತವೆ. ಆದುದರಿಂದ ನ್ಯಗ್ರೋಧಪರಿಮಂಡಲದಂತೆ (ಮಂಡಲಾಕಾರವಾಗಿರುವ ಆಲದ ಮರದಂತೆ) ಶ್ರೀರಾಮನು ಸರ್ವಕಾಲೇಽಪಿ ಸರ್ವಜನಾನುಕೂಲಃ-ಸರ್ವಕಾಲದಲ್ಲಿಯೂ ಸರ್ವಜನರಿಗೂ ಅನುಕೂಲನಾದವನು. ಪರಿಮಂಡಲ ಎಂಬುದಕ್ಕೆ ವಿಶಾಲ ಎಂದು ಅರ್ಥವಾಗುವದಿಲ್ಲ. ಗೋಳ ಅಥವಾ ಮಂಡಲ ಎಂದು ಅರ್ಥವಾಗುತ್ತದೆ. ಸಂದರ್ಭಾನುಸಾರವಾಗಿ ವಿಶಾಲ ಮತ್ತು ಪರಿಮಾಣ ಎಂದು ಅರ್ಥ ಮಾಡಲಾಗಿದೆ.

ರಾಕ್ಷಸನೇ ! ತಿಳಿಗೇಡಿಯಾಗಿರುವ ನೀನು ರಾಘವನ ಪ್ರಿಯಭಾರ್ಯೆಯನ್ನು ಆಶಿಸುತ್ತಿರುವುದರಿಂದ–ಈ ಅರಣ್ಯದಲ್ಲಿರುವ ಮರಗಳೆಲ್ಲವೂ ಈಗ ನಿನಗೆ ನಿಶ್ಚಯವಾಗಿಯೂ ಸುವರ್ಣಮಯವಾಗಿ ಕಾಣುತ್ತಿರಬಹುದು.*

ಕ್ಷುಧಿತಸ್ಯ ಚ ಸಿಂಹಸ್ಯ ಮೃಗಶತ್ರೋಸ್ತರಸ್ವಿನಃ ।
ಆಶೀವಿಷಸ್ಯ ವದನಾದ್ದಂಷ್ಟ್ರಾಮಾದಾತುಮಿಚ್ಛಸಿ ||೩೮||

ಮೃಗಗಳಿಗೆ ಬದ್ಧವೈರಿಯಾದ, ವೇಗಶಾಲಿಯಾದ, ಅದರಲ್ಲಿಯೂ ವಿಶೇಷವಾಗಿ ಹಸಿದಿರುವ ಸಿಂಹದ ಕೋರೆದಾಡೆಗಳನ್ನೂ, ಮತ್ತು ಹಲ್ಲಿನಲ್ಲಿ ವಿಷ ತುಂಬಿರುವ ಸರ್ಪದ ಬಾಯಿಂದ ವಿಷದ ಹಲ್ಲನ್ನೂ ಕೀಳಲು ನೀನು ಬಯಸಿರುವೆ.

ಮನ್ದರಂ ಪರ್ವತಶ್ರೇಷ್ಠಂ ಪಾಣಿನಾ ಹರ್ತುಮಿಚ್ಛಸಿ ।
ಕಾಲಕೂಟಂ ವಿಷಂ ಪೀತ್ವಾ ಸ್ವಸ್ತಿಮಾನ್ಗನ್ತುಮಿಚ್ಛಸಿ ||೩೯||

ಪರ್ವತಗಳಲ್ಲಿಯೇ ಶ್ರೇಷ್ಠವಾದ ಮಂದರವನ್ನು ಕೈಯಿಂದಲೇ ಕೀಳಲು ಇಚ್ಛಿಸಿರುವೆ. ಕಾಲಕೂಟವಿಷವನ್ನು ಕುಡಿದು ಒಳ್ಳೆಯದಾಗಬೇಕೆಂದು ಬಯಸಿರುವೆ.

ಅಕ್ಷಿ ಸೂಚ್ಯಾ ಪ್ರಮೃಜಸಿ ಜಿಹ್ವಯಾ ಲೇಕ್ಷಿ ಚ ಕ್ಷುರಮ್ ।
ರಾಘವಸ್ಯ ಪ್ರಿಯಾಂ ಭಾರ್ಯಾಂ ಯೋಽಧಿಗನ್ತುಂ ತ್ವಮಿಚ್ಛಸಿ ||

ರಾಘವನ ಪ್ರಿಯಭಾರ್ಯೆಯಾದ ನನ್ನನ್ನು ಬಯಸಿರುವ ನೀನು–ಕಣ್ಣುಗಳನ್ನು ಸೂಜಿಯಿಂದ ಚುಚ್ಚಿಕೊಳ್ಳುತ್ತಿರುವೆ. ಕತ್ತಿಯ ಅಲುಗನ್ನು ನಾಲಿಗೆಯಿಂದ ನೆಕ್ಕುತ್ತಿರುವೆ.

ಅವಸಜ್ಯ ಶಿಲಾಂ ಕಣ್ಠೇ ಸಮುದ್ರಂ ತರ್ತುಮಿಚ್ಛಸಿ ।
ಸೂರ್ಯಾಚನ್ದ್ರಮಸೌ ಚೋಭೌ ಪಾಣಿಭ್ಯಾಂ ಹರ್ತುಮಿಚ್ಛಸಿ ।
ಯೋ ರಾಮಸ್ಯ ಪ್ರಿಯಾಂ ಭಾರ್ಯಾಂ ಪ್ರಧರ್ಷಯಿತುಮಿಚ್ಛಸಿ ||

* ಮರಣವು ಸನ್ನಿಹಿತವಾದಾಗ ವೃಕ್ಷಗಳೆಲ್ಲವೂ ಸುವರ್ಣಮಯವಾಗಿ ಕಾಣುವುದೆಂದು ಪ್ರಸಿದ್ಧಿಯಿದೆ. ವೃಕ್ಷಗಳು ಸುವರ್ಣಮಯವಾಗಿ ಕಂಡರೆ ಮರಣವು ಸನ್ನಿಹಿತವಾಗಿದೆಯೆಂದು ತಿಳಿದುಕೊಳ್ಳಬೇಕು. ರಾವಣನಿಗೂ ಮರಣವು ಸನ್ನಿಹಿತವಾಗಿರುವುದರಿಂದ ವೃಕ್ಷಗಳೆಲ್ಲವೂ ಸುವರ್ಣಮಯವಾಗಿ ಕಾಣುತ್ತಿರಬಹುದೆಂದು ಸೀತೆಯು ಹೇಳುತ್ತಾಳೆ. ಮಹಾಪರಾಕ್ರಮಿಯಾದ ಶ್ರೀರಾಮನ ಪತ್ನಿಯನ್ನು ಆಶಿಸುತ್ತಿರುವುದರಿಂದ ಮರಣವು ಸನ್ನಿಹಿತವಾಗಿದೆಯೆಂದು ರಾವಣನನ್ನು ಎಚ್ಚರಿಸುತ್ತಾಳೆ.

ರಾಮನ ಪ್ರಿಯಸತಿಯನ್ನು ಕೆಣಕುತ್ತಿರುವ ನೀನು ಕಲ್ಲನ್ನು ಕುತ್ತಿಗೆಗೆ ಕಟ್ಟಿಕೊಂಡು ಸಮುದ್ರವನ್ನು ದಾಟಲು ಇಚ್ಛಿಸಿರುವೆ. ಸೂರ್ಯ-ಚಂದ್ರ ರಿಬ್ಬರನ್ನೂ ಕೈಗಳಿಂದಲೇ ಕೀಳಲು ಬಯಸಿರುವೆ.

ಅಗ್ನಿಂ ಪ್ರಜ್ವಲಿತಂ ದೃಷ್ಟ್ವಾ ವಸ್ತ್ರೇಣಾಹರ್ತುಮಿಚ್ಛಸಿ ।
ಕಲ್ಯಾಣವೃತ್ತಾಂ ಯೋ ಭಾರ್ಯಾಂ ಪ್ರಧರ್ಷಯಿತುಮಿಚ್ಛಸಿ ॥

ಶುಭಾಚಾರಳಾದ ಶ್ರೀರಾಮನ ಪತ್ನಿಯನ್ನು ಬಲಾತ್ಕಾರದಿಂದ ಸೆಳೆದೊಯ್ಯಲು ಬಯಸಿರುವ ನೀನು ಪ್ರಜ್ವಲಿಸುತ್ತಿರುವ ಬೆಂಕಿಯನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಕೊಂಡೊಯ್ಯಬೇಕೆಂದು ಬಯಸುತ್ತಿರುವಂತೆ ನನಗೆ ಭಾಸವಾಗುತ್ತಿದೆ.

ಅಯೋಮುಖಾನಾಂ ಶೂಲಾನಾಮಗ್ರೇ ಚರಿತುಮಿಚ್ಛಸಿ ।
ರಾಮಸ್ಯ ಸದೃಶೀಂ ಭಾರ್ಯಾಂ ಯೋಽಧಿಗನ್ತುಂ ತ್ವಮಿಚ್ಛಸಿ ॥

ಸುಚರಿತೆಯಾದ, ಶ್ರೀರಾಮನಿಗೆ ಅನುರೂಪಳಾದ ಭಾರ್ಯೆಯನ್ನು ಬಲಾತ್ಕಾರದಿಂದ ಅಪಹರಿಸಲು ಮತ್ತು ನಿನ್ನವಳನ್ನಾಗಿ ಮಾಡಿಕೊಳ್ಳಲು ಆಶಿಸಿರುವ ನೀನು ಚೂಪಾಗಿರುವ ಕಬ್ಬಿಣದ ಶೂಲಗಳ ತುದಿಯಲ್ಲಿ ನಡೆದಾಡಲು ಇಚ್ಛಿಸಿರುವೆಯೆಂದು ನನಗೆ ಭಾಸವಾಗುತ್ತಿದೆ.

ಯದನ್ತರಂ ಸಿಂಹಸೃಗಾಲಯೋರ್ವನೇ
ಯದನ್ತರಂ ಸ್ಯನ್ದನಿಕಾಸಮುದ್ರಯೋಃ ।
ಸುರಾಗ್ರ್ಯಸೌವೀರಕಯೋರ್ಯದನ್ತರಂ
ತದನ್ತರಂ ವೈ ತವ ರಾಘವಸ್ಯ ಚ ॥೪೪॥

ರಾಕ್ಷಸ! ಅರಣ್ಯದಲ್ಲಿರುವ ಸಿಂಹಕ್ಕೂ-ಗುಳ್ಳೇನರಿಗೂ ಯಾವ ತಾರತಮ್ಯವಿರುವುದೋ, ಸಮುದ್ರಕ್ಕೂ-ಕ್ಷುದ್ರನದಿಗೂ ಯಾವ ತಾರತಮ್ಯವಿರುವುದೋ, ಶ್ರೇಷ್ಠವಾದ ಮದ್ಯಕ್ಕೂ (ಅಮೃತಕ್ಕೂ)-ನವಣೆಯ ಗಂಜಿಗೂ ಯಾವ ತಾರತಮ್ಯವಿರುವುದೋ ಅಷ್ಟೇ ಅಂತರವು ರಾಮನಿಗೂ ಮತ್ತು ನಿನಗೂ ಇದೆ.*

* ಸುರಾಗ್ರ್ಯಂ= ಶ್ರೇಷ್ಠವಾದ ಮದ್ಯ. ಮತ್ತೊಬ್ಬ ವ್ಯಾಖ್ಯಾನಕಾರರು ಸುರಾ ಅಗ್ರ್ಯ= ಪೂರ್ವಮುತ್ಪನ್ನಾ ಯಸ್ಮಾತ್ ತತ್ ಎಂದು ವ್ಯುತ್ಪತ್ತಿಮಾಡಿ ಅಮೃತವೆಂದೂ ಅರ್ಥಮಾಡಿದ್ದಾರೆ.

ಯದನ್ತರಂ ಕಾಞ್ಚನಸೀಸಲೋಹಯೋ-
ರ್ಯದನ್ತರಂ ಚನ್ದನವಾರಿಪಙ್ಕಯೋಃ ।
ಯದನ್ತರಂ ಹಸ್ತಿಬಿಡಾಲಯೋರ್ವನೇ
ತದನ್ತರಂ ದಾಶರಥೇಸ್ತವೈವ ಚ ॥೪೫॥

ಚಿನ್ನಕ್ಕೂ – ಸೀಸಕ್ಕೂ ಎಷ್ಟು ಅಂತರವಿರುವುದೋ, ಚಂದನದ ನೀರಿಗೂ – ಕೆಸರಿಗೂ ಎಷ್ಟು ಅಂತರವಿರುವುದೋ, ಕಾಡಾನೆಗೂ – ಕಾಡು ಬೆಕ್ಕಿಗೂ ಎಷ್ಟು ಅಂತರವಿರುವುದೋ–ಅಷ್ಟೇ ಅಂತರವು ನನ್ನ ಪತಿಯಾದ ಶ್ರೀರಾಮನಿಗೂ ಮತ್ತು ನಿನಗೂ ಇರುವುದು.

ಯದನ್ತರಂ ವಾಯಸವೈನತೇಯಯೋ-
ರ್ಯದನ್ತರಂ ಮದ್ಗುಮಯೂರಯೋರಪಿ ।
ಯದನ್ತರಂ ಸಾರಸಗೃಧ್ರಯೋರ್ವನೇ
ತದನ್ತರಂ ದಾಶರಥೇಸ್ತವೈವ ಚ ॥೪೬॥

ಗರುಡನಿಗೂ–ಕಾಗೆಗೂ ಎಷ್ಟು ಅಂತರವಿರುವುದೋ, ನವಿಲಿಗೂ–ನೀರು ಕಾಗೆಗೂ ಎಷ್ಟು ಅಂತರವಿರುವುದೋ, ಸರೋವರದಲ್ಲಿರುವ ರಾಜಹಂಸಕ್ಕೂ–ರಣಹದ್ದಿಗೂ ಎಷ್ಟು ಅಂತರವಿರುವುದೋ–ಅಷ್ಟೇ ಅಂತರವು ದಶರಥನ ಮಗನಾದ ಶ್ರೀರಾಮನಿಗೂ ಮತ್ತು ನಿನಗೂ ಇರುವುದು.

ತಸ್ಮಿನ್ಸಹಸ್ರಾಕ್ಷಸಮಪ್ರಭಾವೇ
ರಾಮೇ ಸ್ಥಿತೇ ಕಾರ್ಮುಕಬಾಣಪಾಣೌ ।
ಹೃತಾಪಿ ತೇಽಹಂ ನ ಜರಾಂ ಗಮಿಷ್ಯೇ
ಆಜ್ಯಂ ಯಥಾ ಮಕ್ಷಿಕಯಾವಗೀರ್ಣಮ್ ॥೪೭॥

ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿರುವ, ಧನುರ್ಬಾಣಗಳನ್ನು ಹಿಡಿದಿರುವ ಶ್ರೀರಾಮನಿರುವಾಗ–ನನ್ನನ್ನು ನೀನು ಅಪಹರಿಸಿಕೊಂಡು ಹೋದರೂ–ನೊಣದೊಡನೆ ನುಂಗಿದ ತುಪ್ಪವನ್ನು ಜೀರ್ಣಿಸಿಕೊಳ್ಳಲು ಸಾಧ್ಯವಾಗಲಾರದಂತೆ, ( ವಜ್ರಂ–ಎಂಬ ಪಾಠಾಂತರದ ಪ್ರಕಾರ ವಜ್ರದ ಹರಳನ್ನು ಜೀರ್ಣಿಸಿಕೊಳ್ಳಲು ಸಾಧ್ಯವಾಗದಂತೆ ) ಜೀರ್ಣಿಸಿಕೊಳ್ಳಲಾರೆ."

ಸ್ವಲ್ಪವಾದರೂ ದುಷ್ಟವಾದ ಭಾವನೆಯೇ ಇಲ್ಲದಿದ್ದ ಕೃಶಾಂಗಿಯಾದ

ಸೀತಾದೇವಿಯು ಅತ್ಯಂತದುಷ್ಟನಾದ ರಾಕ್ಷಸನಿಗೆ ಹೀಗೆ ಹೇಳಿದಳು. ಆದರೂ ಬಿರುಗಾಳಿಯ ಹೊಡೆತದಿಂದ ತರ-ತರಗುಟ್ಟುವ ನಡುಗುವ ಬಾಳೆಯ ಕಂದಿನಂತೆ-ಮುಂದಿನ ಆಗು-ಹೋಗುಗಳನ್ನು ನೆನೆದು ಅವಳ ಅಂಗಾಂಗಗಳು ನಡುಗುತ್ತಿದ್ದುವು. ತನ್ನ ಆಗಿನ ಸ್ಥಿತಿಯಿಂದ ಸೀತಾದೇವಿಯು ಅತ್ಯಂತ ವ್ಯಥಿತಳಾದಳು.

ಮೃತ್ಯುವಿಗೆ ಸಮಾನವಾದ ಕರಾಳಪ್ರಭೆಯಿಂದ ಕೂಡಿದ್ದ ರಾವಣನು-ಸೀತಾದೇವಿಯು ಭಯದಿಂದ ನಡುಗುತ್ತಿರುವುದನ್ನು ಕಂಡು ಆಕೆಯನ್ನು ಮತ್ತಷ್ಟು ಭಯಪಡಿಸುವ ಸಲುವಾಗಿ ತನ್ನ ವಂಶ, ಹೆಸರು, ತಾನು ಮಾಡಿರುವ ಭಯಂಕರವಾದ ಕಾರ್ಯಗಳು-ಎಲ್ಲವನ್ನೂ ವಿವರಿಸಿ ಹೇಳಲು ಉಪಕ್ರಮಿಸಿದನು.

ಳ೭ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೪೮ನೆಯ ಸರ್ಗ

## ರಾವಣನ ಆತ್ಮಪ್ರಶಂಸೆ: ಸೀತೆಯ ಧಿಕ್ಕಾರ

ಏವಂ ಬ್ರುವನ್ತ್ಯಾಂ ಸೀತಾಯಾಂ ಸಂರಬ್ಧಃ ಪರುಷಂ ವಚಃ ।
ಲಲಾಟೇ ಭ್ರುಕುಟೀಂ ಕೃತ್ವಾ ರಾವಣಃ ಪ್ರತ್ಯುವಾಚ ಹ ॥೧॥

ಹೀಗೆ ಸೀತೆಯು ಕಠಿಣವಾದ ಮಾತುಗಳನ್ನಾಡಲು ರಾವಣನು ಬಹಳ ಕೋಪಗೊಂಡು ಹುಬ್ಬುಗಳನ್ನು ಗಂಟಿಕ್ಕಿಕೊಂಡು ಹೇಳಿದನು:

"ವರವರ್ಣಿನಿಯೇ! ನಿನಗೆ ಮಂಗಳವಾಗಲಿ. ನಾನು ಕುಬೇರನ ಬಲತಾಯಿಯ ಮಗನು. ಆದುದರಿಂದ ಅವನಿಗೆ ನಾನು ತಮ್ಮನಾಗಬೇಕು. ನನಗೆ ಹತ್ತು ತಲೆಗಳಿವೆ. ಪ್ರತಾಪವಂತನಾದ ನಾನು ರಾವಣನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವೆನು. ಮೃತ್ಯುವಿಗೆ ಪ್ರಜೆಗಳು ಯಾವಾಗಲೂ ಹೆದರುವಂತೆ-ಗಂಧರ್ವಸಹಿತರಾದ ದೇವತೆಗಳೂ, ಪಿಶಾಚ-ಪಕ್ಷಿ-ಸರ್ಪಗಳೂ ನನ್ನನ್ನು ಕಂಡೊಡನೆಯೇ ಭಯದಿಂದ ಓಡಿಹೋಗುತ್ತಾರೆ. ನನ್ನ ತಾಯಿಯ ಸವತಿಯ ಮಗನಾದ, ಯಕ್ಷರಿಗೆ ಅಧಿಪತಿಯಾದ ನಮ್ಮಣ್ಣ ಕುಬೇರನು ಕಾರಣಾಂತರದಿಂದ ನನ್ನೊಡನೆ ಯುದ್ಧಕ್ಕೆ ಬಂದನು. ನರವಾಹನನಾದ ಅವನು ನನ್ನ ಅತುಲಪರಾಕ್ರಮದಿಂದ ಪರಾಜಿತನಾಗಿ ನನ್ನ ಭಯದಿಂದಲೇ ಸಕಲಸಂಪತ್ಸಮೃದ್ಧವಾಗಿದ್ದ ಲಂಕಾಪಟ್ಟಣವನ್ನು ಪರಿ

ತ್ಯಜಿಸಿ ಈಗ ಶ್ರೇಷ್ಠವಾದ ಕೈಲಾಸಪರ್ವತದಲ್ಲಿ ವಾಸಮಾಡುತ್ತಿದ್ದಾನೆ. ಮನಬಂದಲ್ಲಿಗೆ ಹೋಗುವ ಶುಭಾವಹವಾದ ಪುಷ್ಪಕವಿಮಾನವನ್ನೂ ನಾನು ನನ್ನ ಭುಜಬಲ-ಪರಾಕ್ರಮಗಳಿಂದ ಅವನಿಂದಲೇ ಕಿತ್ತುಕೊಂಡೆನು. ಈಗ ನಾನು ಅದೇ ವಿಮಾನದಲ್ಲಿಯೇ ಆಕಾಶದಲ್ಲಿ ಸಂಚರಿಸುತ್ತಿರುವೆನು. ಕೋಪಗೊಂಡ ನನ್ನ ಮುಖವನ್ನು ನೋಡಿದ ಮಾತ್ರದಿಂದಲೇ ಇಂದ್ರನೇ ಮೊದಲಾದ ದೇವತೆಗಳೂ ಭಯಗೊಂಡು ಓಡಿಹೋಗುತ್ತಾರೆ. ನಾನು ಇರುವಲ್ಲಿ ಗಾಳಿಯು ಕೂಡ ಭಯಪಟ್ಟುಕೊಂಡೇ ಹಿತಕರವಾಗುವಂತೆ ಬೀಸುತ್ತದೆ. ಸೂರ್ಯನು ತೀಕ್ಷ್ಣಕಿರಣನಾಗಿದ್ದರೂ ನನ್ನ ಭಯದಿಂದ ಶೀತಕಿರಣನಾಗುತ್ತಾನೆ. ನಾನೆಲ್ಲಿ ನಿಂತಿರುವೆನೋ ಮತ್ತು ಎಲ್ಲೆಲ್ಲಿ ಸಂಚರಿಸುವೆನೋ ಅಲ್ಲಲ್ಲಿರುವ ವೃಕ್ಷಗಳು ಎಲೆಗಳನ್ನೂ ಅಲುಗಾಡಿಸುವುದಿಲ್ಲ. ನದಿಗಳೂ ನಿಧಾನವಾಗಿ ಹರಿಯುತ್ತವೆ. ನನ್ನ ಭಯದಿಂದ ಸ್ತಬ್ಧವಾಗಿರುತ್ತವೆ. ಸಮುದ್ರದ ತೀರದಲ್ಲಿ ಘೋರರಾದ ರಾಕ್ಷಸರಿಂದ ತುಂಬಿದ್ದು ಇಂದ್ರನ ಅಮರಾವತಿಯಂತೆಯೇ ಕಂಗೊಳಿಸುತ್ತಿರುವ ಶುಭಾವಹವಾದ ಲಂಕಾ ಎಂಬ ಹೆಸರಿನ ನನ್ನ ಪಟ್ಟಣವಿದೆ. ಆ ಪಟ್ಟಣವು ಬಿಳಿಯ ಬಣ್ಣದ ಪ್ರಾಕಾರದಿಂದ ಸುತ್ತುವರಿಯಲ್ಪಟ್ಟದ್ದು ರಾರಾಜಿಸುತ್ತಿದೆ. ಸುವರ್ಣಮಯವಾದ ಹಜಾರಗಳಿಂದಲೂ, ವೈಡೂರ್ಯಖಚಿತವಾದ ಹೆಬ್ಬಾಗಿಲುಗಳಿಂದಲೂ ಶೋಭಾಯಮಾನವಾಗಿದೆ. ಆ ನನ್ನ ರಾಜಧಾನಿಯು ಆನೆ-ಕುದುರೆ ಮತ್ತು ರಥಗಳಿಂದ ಸಮೃದ್ಧವಾಗಿದೆ. ಎಲ್ಲ ಕಾಲಗಳಲ್ಲಿಯೂ ಆ ಪಟ್ಟಣವು ಮಂಗಳವಾದ್ಯಗಳಿಂದ ನಿನಾದಿತವಾಗುತ್ತಿರುತ್ತದೆ. ಸರ್ವರ್ತುಗಳಲ್ಲಿಯೂ ಫಲಕೊಡುವ ವೃಕ್ಷಗಳಿಂದಲೂ ವಿಸ್ತಾರವಾದ ಉದ್ಯಾನವನಗಳಿಂದಲೂ ರಾರಾಜಿಸುತ್ತಿದೆ.

ಅಂತಹ ಅತ್ಯಂತಸುಂದರವಾಗಿರುವ ಲಂಕಾಪಟ್ಟಣದಲ್ಲಿ ಇದ್ದುದಾದರೆ ಮನಸ್ವಿನಿಯಾದ ನೀನು ಮನುಷ್ಯಸ್ತ್ರೀಯರನ್ನೇ ಸ್ಮರಿಸುವುದಿಲ್ಲ. ವರವರ್ಣಿನಿಯೇ! ಅಲ್ಲಿ ಮನುಷ್ಯಭೋಗಗಳನ್ನೂ ದೇವಭೋಗಗಳನ್ನೂ ಯಥೇಚ್ಛವಾಗಿ ಉಪಭೋಗಿಸುವ ನೀನು–ಆಯುಷ್ಯವು ಮುಗಿದುಹೋಗಿರುವ ಮನುಷ್ಯಮಾತ್ರದವನಾದ ರಾಮನನ್ನು ಒಮ್ಮೆಯಾದರೂ ಸ್ಮರಿಸುವುದಿಲ್ಲ. ದಶರಥನು ತನ್ನ ಪ್ರಿಯಪುತ್ರನಾದ ಭರತನಿಗೆ ಪಟ್ಟಗಟ್ಟಿದನು. ಜ್ಯೇಷ್ಠ

ಪುತ್ರನಾದ ರಾಮನು ಅಲ್ಪವೀರ್ಯನಾಗಿದ್ದುದರಿಂದಲೇ ಅವನನ್ನು ಕಾಡಿಗಟ್ಟಿದನು. ವಿಶಾಲಾಕ್ಷಿಯೇ! ಬುದ್ಧಿಗೆಟ್ಟ, ರಾಜ್ಯಭ್ರಷ್ಟನಾದ, ನಿತ್ಯವೂ ಶೋಕದಲ್ಲಿಯೇ ಮುಳುಗಿರುವ, ತಪಸ್ವಿಯಾದ ಆ ರಾಮನನ್ನು ಕಟ್ಟಿಕೊಂಡು ನೀನೇನು ಮಾಡುವೆ? ಸರ್ವರಾಕ್ಷಸರಿಗೂ ಒಡೆಯನಾದ, ನಾನಾಗಿಯೇ ಅಪೇಕ್ಷೆಪಟ್ಟು ಬಂದಿರುವ, ಮನ್ಮಥನ ಬಾಣಗಳಿಂದ ಪೀಡಿತನಾಗಿರುವ ನನ್ನನ್ನು ನಿರಾಕರಿಸುವುದು ನಿನಗೆ ಸರ್ವಥಾ ಯೋಗ್ಯವಲ್ಲ. ಹಾಗೇನಾದರೂ ನನ್ನ ಪ್ರಾರ್ಥನೆಯನ್ನು ತಿರಸ್ಕರಿಸಿದೆಯಾದರೆ – ಉರ್ವಶಿಯು ಪುರೂರವನನ್ನು ಕಾಲಿನಿಂದ ಒದೆದು ಅನಂತರ ಪಶ್ಚಾತ್ತಾಪಪಟ್ಟಂತೆ – ನೀನೂ ಪಶ್ಚಾತ್ತಾಪಪಡಬೇಕಾಗುವುದು.*

ಅಙ್ಗುಲ್ಯಾ ನ ಸಮೋ ರಾಮೋ ಮಮ ಯುದ್ಧೇ ಸ ಮಾನುಷಃ ।
ತವ ಭಾಗ್ಯೇನ ಸಂಪ್ರಾಪ್ತಂ ಭಜಸ್ವ ವರವರ್ಣಿನಿ ॥೧೯॥

ವರವರ್ಣಿನಿಯೇ! ಮನುಷ್ಯಮಾತ್ರದವನಾದ ರಾಮನು ನನ್ನ ಒಂದು ಬೆರಳಿಗೂ ಸಾಟಿಯಲ್ಲ. ನಿನ್ನ ಸೌಭಾಗ್ಯದಿಂದಲೇ ನಾನು ನಿನ್ನನ್ನು ಕಾಮಿಸಿ ಬಂದಿರುವೆನು. ಆದುದರಿಂದ ನನ್ನನ್ನು ಸೇವಿಸುತ್ತಾ ಸುಖವಾಗಿ ನನ್ನೊಡನೆ ಇದ್ದುಬಿಡು."

ರಾವಣನು ಹೀಗೆ ಹೇಳುತ್ತಿರುವಾಗಲೇ ಸೀತೆಯು ಪರಮಕ್ರುದ್ಧಳಾದಳು. ಅವಳ ಕಣ್ಣುಗಳು ಕೆಂಡದಂತೆ ಕೆಂಪಾದುವು. ತನ್ನವರಾರೂ

---

*ಉರ್ವಶೀ ಅಥವಾ ಊರ್ವಶೀ = ಇವಳೊಬ್ಬ ಅಪ್ಸರೆ. ಉರೂನ್ = ಮಹತಃ ವಶೀಕರೋತಿ ಇತಿ ಉರ್ವಶೀ—ಜಿತೇಂದ್ರಿಯರಾದ ಮಹಾತ್ಮರನ್ನೂ ವಶೀಕರಣಮಾಡಿಕೊಳ್ಳುವವಳು. ಅಥವಾ ೨) ನರ-ನಾರಾಯಣರು ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿದ್ದಾಗ ಇಂದ್ರನಿಂದ ಪ್ರೇರಿತರಾದ ಕೆಲವು ದೇವವಿಲಾಸಿನಿಯರು ನರ-ನಾರಾಯಣರ ತಪೋಭಂಗಕ್ಕಾಗಿ ಅಲ್ಲಿಗೆ ಬಂದರು. ಆಗ ನಾರಾಯಣನು ತೊಡೆಯನ್ನು ತಟ್ಟಲಾಗಿ ಅಲ್ಲಿಂದ ಲೋಕೋತ್ತರಸೌಂದರ್ಯವತಿಯಾದ ಒಬ್ಬ ತರುಣಿಯು ಜನಿಸಿದಳು. ಅವಳೇ ಊರ್ವಶೀ. ಅವಳ ಲಾವಣ್ಯಾತಿಶಯವನ್ನು ಕಂಡು ದೇವವಿಲಾಸಿನಿಯರು ನಾಚಿಕೆಯಿಂದ ಹಿಂದಿರುಗಿದರು. ಪುರೂರವಾಃ = ಚಂದ್ರನ ಪುತ್ರನಾದ ಬುಧನಿಂದ ಇಲಾ ಎಂಬುವಳಲ್ಲಿ ಜನಿಸಿದವನು.

ಇಲ್ಲದಿದ್ದ ಆ ಸಮಯದಲ್ಲಿ ರಾಕ್ಷಸರ ಅಧಿಪತಿಯಾದ ರಾವಣನಿಗೆ ಅತ್ಯಂತ ಕಠೋರವಾದ ಮಾತುಗಳನ್ನೇ ಹೇಳಿದಳು.[1]

ಕಥಂ ವೈಶ್ರವಣಂ ದೇವಂ ಸರ್ವಭೂತನಮಸ್ಕೃತಮ್ ।
ಭ್ರಾತರಂ ವ್ಯಪದಿಶ್ಯ ತ್ವಮಶುಭಂ ಕರ್ತುಮಿಚ್ಛಸಿ ॥೨೦॥

"ಮೂಢನೇ! ಎಲ್ಲ ಪ್ರಾಣಿಗಳೂ ನಮಸ್ಕರಿಸಿ ಪೂಜಿಸುವ ಕುಬೇರನನ್ನು ಅಣ್ಣನೆಂದು ಹೇಳಿಕೊಳ್ಳುವ ನೀನು ಇಂತಹ ಪಾಪಕರವಾದ ಕಾರ್ಯವನ್ನು ಹೇಗೆ ಮಾಡುವೆ?

ಅವಶ್ಯಂ ವಿನಶಿಷ್ಯನ್ತಿ ಸರ್ವೇ ರಾವಣ ರಾಕ್ಷಸಾಃ ।
ಯೇಷಾಂ ತ್ವಂ ಕರ್ಕಶೋ ರಾಜಾ ದುರ್ಬುದ್ಧಿರಜಿತೇನ್ದ್ರಿಯಃ ॥

ದುರ್ಬುದ್ಧಿಯುಳ್ಳವನಾದ, ಜಿತೇಂದ್ರಿಯನಲ್ಲದ, ಕ್ರೂರನಾದ ನಿನ್ನನ್ನು ರಾಜನನ್ನಾಗಿ ಹೊಂದಿರುವ ಎಲ್ಲ ರಾಕ್ಷಸರೂ ಅವಶ್ಯವಾಗಿ ವಿನಾಶಹೊಂದುತ್ತಾರೆ.

ಅಪಹೃತ್ಯ ಶಚೀಂ ಭಾರ್ಯಾಂ ಶಕ್ಯಮಿನ್ದ್ರಸ್ಯ ಜೀವಿತುಮ್ ।
ನ ಹಿ ರಾಮಸ್ಯ ಭಾರ್ಯಾಂ ಮಾಮಪನೀಯಾಸ್ತಿ ಜೀವಿತಮ್ ॥

ಇಂದ್ರನ ಭಾರ್ಯೆಯಾದ ಶಚಿಯನ್ನಾದರೂ ಅಪಹರಿಸಿ ಜೀವಿಸಿರಬಹುದು. ಆದರೆ ರಾವಣ! ರಾಮನ ಭಾರ್ಯೆಯಾದ ನನ್ನನ್ನು ಅಪಹರಿಸಿಕೊಂಡು ಹೋಗುವವನು ಬದುಕಿರಲು ಸಾಧ್ಯವೇ ಇಲ್ಲ.

---

[1] ಇಲ್ಲಿ 'ರಹಿತೇ' = 'ಯಾರೂ ಇಲ್ಲದ ಸಮಯದಲ್ಲಿ' ಎಂಬ ಪದವು ಔಚಿತ್ಯಪೂರ್ಣವಾಗಿದೆ. ಮಹಾಪರಾಕ್ರಮಿಯಾದ ರಾಕ್ಷಸೇಶ್ವರನು ತನ್ನೆದುರಿಗೆ ನಿಂತಿದ್ದಾನೆ. ತನ್ನವರಾರೂ ಹತ್ತಿರದಲ್ಲಿಲ್ಲ. ಅಂತಹ ಸಮಯದಲ್ಲಿ ಅಬಲೆಯಾದವಳು ಏನುಮಾಡಬಲ್ಲಳು? ಬಲಾತ್ಕಾರಕ್ಕೆ ಮಣಿಯುವುದು ಒಂದು ವಿಧಾನ. ಅಪಾಯವಿರುವುದೆಂದು ತಿಳಿದಿದ್ದರೂ ಬಲಾತ್ಕಾರಕ್ಕೆ ಮಣಿಯದಿರುವುದು ದಿಟ್ಟತನ. ಮಣಿಯದಿರುವುದು ಮಾತ್ರವಲ್ಲದೇ ಮಹಾಪರಾಕ್ರಮಿಯಾದವನೊಬ್ಬನನ್ನು ತೆಗಳುವುದಂತೂ ಸಾಮಾನ್ಯರಿಂದ ಸಾಧ್ಯವಾಗುವ ಕಾರ್ಯವಲ್ಲ. ಸೀತೆಯಂತಹ ವೀರರಮಣಿಗೆ ಮಾತ್ರವೇ ಸಾಧ್ಯವಾಗುವುದು. ಇದನ್ನು ಸೂಚಿಸುವ ಸಲುವಾಗಿಯೇ 'ಯಾರೂ ಇಲ್ಲದಿದ್ದಾಗಲೂ ರಾಕ್ಷಸೇಶ್ವರನಿಗೆ ಸೀತೆಯು ಕಠೋರವಾದ ಮಾತುಗಳನ್ನಾಡಿದಳು'–ಎಂದು ವಾಲ್ಮೀಕಿಗಳು 'ರಹಿತೇ' ಎಂಬ ಪದವನ್ನು ಔಚಿತ್ಯಪೂರ್ಣವಾಗಿ ಪ್ರಯೋಗಿಸಿದ್ದಾರೆ.

ಜೀವೇಚ್ಚಿರಂ ವಜ್ರಧರಸ್ಯ ಹಸ್ತಾ-
ಚ್ಛಚೀಂ ಪ್ರಧೃಷ್ಯಾಪ್ರತಿರೂಪರೂಪಾಮ್ ।
ನ ಮಾದೃಶೀಂ ರಾಕ್ಷಸ ದೂಷಯಿತ್ವಾ
ಪೀತಾಮೃತಸ್ಯಾಪಿ ತವಾಸ್ತಿ ಮೋಕ್ಷಃ ॥೨೪॥

ಇಂದ್ರನ ಬಳಿಯಿಂದ ಅಪ್ರತಿಮರೂಪವತಿಯಾದ ಶಚಿದೇವಿಯನ್ನಾದರೂ ಅಪಹರಿಸಿಕೊಂಡು ಹೋಗಿ ಜೀವಿಸಿರಲು ಸಾಧ್ಯವಾಗಬಹುದು. ಆದರೆ ನನ್ನಂತಹವಳನ್ನು ನೀನು ಅಪಹರಿಸಿಕೊಂಡು ಹೋದರೆ-ಒಂದು ವೇಳೆ ನೀನು ಅಮೃತವನ್ನೇ ಪಾನಮಾಡಿದ್ದರೂ-ಮೃತ್ಯುವಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲಾರದು"

೪೮ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೪೯ನೆಯ ಸರ್ಗ

## ರಾವಣನಿಂದ ಸೀತೆಯ ಅಪಹರಣ : ಜಟಾಯುವಿನ ನಿರೋಧ

ಸೀತಾಯಾ ವಚನಂ ಶ್ರುತ್ವಾ ದಶಗ್ರೀವಃ ಪ್ರತಾಪವಾನ್ ।
ಹಸ್ತೇ ಹಸ್ತಂ ಸಮಾಹತ್ಯ ಚಕಾರ ಸುಮಹದ್ವಪುಃ ॥೧॥

ಸೀತೆಯ ಆ ಮಾತುಗಳನ್ನು ಕೇಳಿ ಪ್ರತಾಪವಂತನಾದ ದಶಗ್ರೀವನು ರೋಷದಿಂದ ಕೈಯಿಂದ ಕೈಯನ್ನು ಅಪ್ಪಳಿಸುತ್ತಾ ಶರೀರವನ್ನು ಬಹಳ ದೊಡ್ಡದಾಗಿ ಬೆಳೆಸಿದನು.

ವಾಕ್ಯಕೋವಿದನಾದ ರಾವಣನು ಪುನಃ ಸೀತೆಗೆ ಹೇಳಿದನು :

ನೋನ್ಮತ್ತಯಾ ಶ್ರುತೌ ಮನ್ಯೇ ಮಮ ವೀರ್ಯಪರಾಕ್ರಮೌ ॥೨॥

"ವೈದೇಹಿ ! ಹುಚ್ಚಿಯಾಗಿರುವ ನೀನು ನನ್ನ ವೀರ್ಯ-ಪರಾಕ್ರಮಗಳನ್ನು ಕೇಳಿಲ್ಲವೆಂದೇ ಭಾವಿಸಿದ್ದೇನೆ.

ಉದ್ವಹೇಯಂ ಭುಜಾಭ್ಯಾಂ ತು ಮೇದಿನೀಮಂಬರೇ ಸ್ಥಿತಃ ।
ಆಪಿಬೇಯಂ ಸಮುದ್ರಂ ಚ ಹನ್ಯಾಂ ಮೃತ್ಯುಂ ರಣೇ ಸ್ಥಿತಃ ॥೩॥

ಆಕಾಶದಲ್ಲಿ ನಿಂತು ಈ ನನ್ನ ಎರಡು ಭುಜಗಳಿಂದಲೇ ಪೃಥ್ವಿಯನ್ನು

ನಾನು ಎತ್ತಬಲ್ಲೆನು. ಸಮುದ್ರವನ್ನೂ ಸಂಪೂರ್ಣವಾಗಿ ಕುಡಿದುಬಿಡಬಲ್ಲೆನು. ಸಮಸ್ತಪ್ರಾಣಿಗಳನ್ನೂ ಅಪಹರಿಸುವ ಮೃತ್ಯುದೇವತೆಯನ್ನೂ ಯುದ್ಧದಲ್ಲಿ ಸಾವಿಗೆ ಈಡುಮಾಡಬಲ್ಲೆನು.

ಅರ್ಕಂ ರುಂಧ್ಯಾಂ ಶರೈಸ್ತೀಕ್ಷ್ಣೈರ್ವಿಭಿಂದ್ಯಾಂ ಹಿ ಮಹೀತಲಮ್।
ಕಾಮರೂಪಿಣಮುನ್ಮತ್ತೇ ಪಶ್ಯ ಮಾಂ ಕಾಮದಂ ಪತಿಮ್ ॥೪॥

ಹರಿತವಾದ ಬಾಣಗಳಿಂದ ಸೂರ್ಯನ ಸಂಚಾರವನ್ನೇ ತಡೆಯಬಲ್ಲೆನು. ಭೂಮಿಯ ತಲಭಾಗವನ್ನು ಭೇದಿಸಬಲ್ಲೆನು. ಸುಂದರವಾದ ರೂಪವಿರುವುದೆಂದು ಉನ್ಮತ್ತಳಾಗಿರುವ ವೈದೇಹಿಯೇ! ಬೇಕಾದ ರೂಪಗಳನ್ನು ಧರಿಸುವ ಸಾಮರ್ಥ್ಯವಿರುವ ನನ್ನನ್ನು–ಇಷ್ಟಾರ್ಥಗಳನ್ನು ನೆರವೇರಿಸುವ ಪತಿಯನ್ನಾಗಿ ಭಾವಿಸು."

ಹೀಗೆ ಹೇಳುತ್ತಿದ್ದ ಕ್ರುದ್ಧನಾದ ರಾವಣನ ಕೆಂಪಾದ ಕಣ್ಣುಗಳು ಸೂರ್ಯನಂತೆಯೂ ಬೆಂಕಿಯಂತೆಯೂ ಉಗ್ರವಾದ ಪ್ರಭೆಯಿಂದ ಕೂಡಿದ್ದುವು. ವೈಶ್ರವಣನ ತಮ್ಮನಾದ ರಾವಣನು ಸೌಮ್ಯವಾದ ರೂಪವನ್ನು ಪರಿತ್ಯಜಿಸಿ ಯಮನ ರೂಪಕ್ಕೆ ಸದೃಶವಾದ ಭಯಂಕರವಾದ ರೂಪವನ್ನು ತಾಳಿದನು.

ಪರಿವ್ರಾಜಕರೂಪವನ್ನು ಪರಿತ್ಯಜಿಸಿದ ರಾವಣನು–ಸುವರ್ಣಾಭರಣಗಳಿಂದ ವಿಭೂಷಿತನಾಗಿ, ಕಾಲಾಂತಕಸದೃಶನಾಗಿ, ಮಹಾಕಾಯನಾಗಿ ಮಹಾಕೋಪದಿಂದ ಆವಿಷ್ಟನಾಗಿ, ಹತ್ತು ತಲೆಯವನೂ–ಇಪ್ಪತ್ತು ಭುಜದವನೂ ಆದನು. ಹೀಗೆ ರಾಕ್ಷಸಾಧಿಪತಿಯಾದ ರಾವಣನು ನಿಜಸ್ವರೂಪವನ್ನು ತಾಳಿದನು. ಕೋಪದಿಂದ ಅವನ ಕಣ್ಣುಗಳು ಕೆಂಪಾಗಿದ್ದುವು. ಅವನು ಮೇಘರಾಶಿಗಳ ಪ್ರಭೆಯನ್ನು ಹೊಂದಿದ್ದನು. ರಕ್ತವಸ್ತ್ರವನ್ನುಟ್ಟಿದ್ದ ರಾವಣನು ಸ್ತ್ರೀಯರಿಗೆ ರತ್ನಪ್ರಾಯಳಾಗಿದ್ದ ಮೈಥಿಲಿಯನ್ನು ನೋಡುತ್ತಾ ನಿಂತನು. ರಾವಣನು ಹೀಗೆ ಕ್ಷಣಕಾಲ ದುರುಗುಟ್ಟಿಕೊಂಡು ನೋಡುತ್ತಿದ್ದು ಕಪ್ಪಾದ ಕೇಶರಾಶಿಯಿಂದ ಕೂಡಿದ್ದ, ಸೂರ್ಯನ ಪ್ರಭೆಯೋಪಾದಿಯಲ್ಲಿ ಉಜ್ಜ್ವಲವಾದ ಕಾಂತಿಯಿಂದ ಪರಿಶೋಭಿಸುತ್ತಿದ್ದ, ಪೀತಾಂಬರವನ್ನುಟ್ಟಿದ್ದ, ಆಭರಣಗಳನ್ನು ತೊಟ್ಟಿದ್ದ ಮೈಥಿಲಿಗೆ ಹೇಳಿದನು:

"ಶ್ರೇಷ್ಠವಾದ ಕಟಿಪ್ರದೇಶವುಳ್ಳ ವೈದೇಹಿಯೇ! ಮೂರು ಲೋಕಗಳಲ್ಲಿಯೂ ವಿಖ್ಯಾತನಾದವನೇ ಪತಿಯಾಗಬೇಕೆಂದು ನೀನು ಬಯಸುವವೆಯಾದರೆ– ನನ್ನನ್ನೇ ಆಶ್ರಯಿಸು. ನಾನೇ ನಿನಗೆ ಅನುರೂಪನಾದ ಪತಿಯು. ನಾನು ನಿನಗೆ ಅತ್ಯಂತಶ್ಲಾಘ್ಯಪ್ರಿಯನೂ ಆಗಿರುತ್ತೇನೆ. ಬಹಳ ಕಾಲದವರೆಗೂ ನನ್ನನ್ನು ನೀನು ಸೇವಿಸಿಕೊಂಡಿರು. ನಾನೂ ಕೂಡ ನಿನ್ನ ವಿಷಯದಲ್ಲಿ ವಿಶೇಷವಾದ ಅನುರಾಗವನ್ನು ಹೊಂದಿದ್ದು ನಿನಗೆ ಅಪ್ರಿಯವೆನಿಸುವ ಯಾವುದೊಂದು ಕಾರ್ಯವನ್ನೂ ಮಾಡುವುದಿಲ್ಲ. ಹುಲುಮನುಜನೊಬ್ಬನ ವಿಷಯದಲ್ಲಿ ನೀನಿಟ್ಟಿರುವ ಪತಿಭಾವವನ್ನು ನನ್ನಲ್ಲಿರಿಸು. ಮೂಢಳೇ! ನಾನೇ ಮಹಾಪಂಡಿತೆಯೆಂದು ಭಾವಿಸಿರುವವಳೇ! ರಾಜ್ಯಭ್ರಷ್ಟನಾಗಿರುವ, ಯಾವ ವಿಧವಾದ ಅರ್ಥಸಿದ್ಧಿಯನ್ನೂ ಪಡೆಯದಿರುವ, ಪರಿಮಿತವಾದ ಆಯುಷ್ಯದಿಂದ ಕೂಡಿರುವ ರಾಮನಲ್ಲಿ ಯಾವ ಶ್ರೇಷ್ಠಗುಣಗಳಿವೆಯೆಂದು ಭಾವಿಸಿ ಅವನಲ್ಲಿ ನೀನು ಇಷ್ಟೊಂದು ಅನುರಕ್ತಳಾಗಿರುವೆ? ದುರ್ಮತಿಯಾದ ಆ ರಾಮನು ಸ್ತ್ರೀಯೊಬ್ಬಳ ಮಾತಿಗೆ ಪುರಸ್ಕಾರವನ್ನಿತ್ತು ಸುಹೃಜ್ಜನರಿಂದ ಕೂಡಿದ್ದ ರಾಜ್ಯವನ್ನೂ ಪರಿತ್ಯಜಿಸಿ ಹಿಂಸ್ರಪ್ರಾಣಿಗಳು ಸಂಚರಿಸುವ ಈ ಅರಣ್ಯದಲ್ಲಿ ವಾಸಮಾಡುತ್ತಿದ್ದಾನೆ."

ಕಾಮಮೋಹಿತನಾಗಿದ್ದ. ಅತ್ಯಂತ ಕೆಟ್ಟಮನಸ್ಸಿನಿಂದ ಕೂಡಿದ್ದ ರಾವಣನು–ಪ್ರಿಯವಾದ ಮಾತುಗಳಿಂದ ಸಂತೈಸಲು ಯೋಗ್ಯಳಾದ, ಯಾವಾಗಲೂ ಪ್ರಿಯವಾದ ಮಾತುಗಳನ್ನೇ ಆಡುವ ಮೈಥಿಲಿಯ ಕಡೆಗೆ ಧಾವಿಸಿ–ಅಂತರಿಕ್ಷದಲ್ಲಿ ಬುಧನು ರೋಹಿಣಿಯನ್ನು ಹಿಡಿದುಕೊಳ್ಳುವಂತೆ–ಸೀತೆಯನ್ನು ಹಿಡಿದುಕೊಂಡನು.*

---

*ಖೇ ಬುಧಃ ರೋಹಿಣೀಮಿವ–ಎಂಬುದನ್ನು ಅಭೂತೋಪಮೆಯೆಂದು ಒಬ್ಬ ವ್ಯಾಖ್ಯಾನಕಾರರು ಹೇಳಿದ್ದಾರೆ. ರೋಹಿಣಿಯು ಚಂದ್ರನ ಪತ್ನಿಯು. ಬುಧನು ಚಂದ್ರನ ಮಗ. ಬೃಹಸ್ಪತಿಯ ಪತ್ನಿಯಾದ ತಾರೆಯಲ್ಲಿ ಚಂದ್ರನಿಂದ ಹುಟ್ಟಿದವನು. ಬುಧನಿಗೆ ರೋಹಿಣಿಯು ತಾಯಿಗೆ ಸಮಾನಳು. ಆದುದರಿಂದ ಮಗನು ತಾಯಿಯನ್ನು ಹಿಡಿಯಲು ಹೋಗುವುದೆಂದರೆ ಮಹಾಪಾಪಕರ್ಮಕ್ಕೆ ತೊಡಗಿದಂತೆ. ಅದೇ ರೀತಿಯಲ್ಲಿ ರಾವಣನು ಸೀತೆಯನ್ನು ಹಿಡಿದು ಮಹಾಪಾಪಕರ್ಮಕ್ಕೆ ತೊಡಗಿದನು–ಎಂದವರು ವಿವರಿಸಿದ್ದಾರೆ.

ರಾವಣನು ಎಡಗೈಯಿಂದ ಕಮಲಲೋಚನೆಯಾದ ಸೀತಾದೇವಿಯ ಮುಡಿಯನ್ನೂ ಬಲಗೈಯಿಂದ ತೊಡೆಗಳನ್ನೂ ಹಿಡಿದೆತ್ತಿಕೊಂಡನು.[1]



ಬೆಟ್ಟದ ಕೋಡುಗಲ್ಲಿನ ಕಾಂತಿಗೆ ಸಮಾನವಾದ ಕಾಂತಿಯಿಂದ

---

1 ವೇದವತಿಯ ಶಾಪದ ಭಯದಿಂದ ರಾವಣನು ಸೀತೆಯನ್ನು ಸಾಕ್ಷಾತ್ತಾಗಿ ಸ್ಪರ್ಶಿಸಿ ಅಪಹರಿಸಿಕೊಂಡು ಹೋಗಲಿಲ್ಲವೆಂದೂ – ರಾಕ್ಷಸರು ಛಾಯಾಗ್ರಾಹಿಗಳಾದುದರಿಂದ ರಾವಣನು ಸೀತೆಯ ಜಾನು-ಕೇಶಾದಿಗಳ ಛಾಯೆಯನ್ನು ಹಿಡಿದು ಅಪಹರಿಸಿದನೆಂದೂ– ಒಬ್ಬ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿದ್ದಾರೆ. ಛಾಯಾಗ್ರಾಹಿತ್ವಮಸ್ತ್ಯಸ್ತಿ ಸರ್ವವಿದ್ಯಾವಿಶಾರದೇ । ಕೇಶಚ್ಛಾಯಾಂ ಪರಾಮೃಶ್ಯ ಜಾನುಚ್ಛಾಯಾಂ ತಥೈವ ಚ । ಗೃಹೀತ್ವಾ ಜಾನಕೀಂ ಹೃಷ್ಟೋ ಲಙ್ಕಾಂ ಪ್ರಾಯಾತ್ಸ ರಾವಣಃ ॥ ಎಂಬ ಸ್ಕಾಂದಪುರಾಣದ ಪ್ರಮಾಣವನ್ನೂ ಕೊಟ್ಟಿದ್ದಾರೆ.

ಕೂಡಿದ್ದ, ಚೂಪಾದ ಕೋರೆದಾಡೆಗಳನ್ನು ಹೊಂದಿದ್ದ, ಮಹಾಭುಜನಾದ, ಮೃತ್ಯುಸದೃಶನಾದ ರಾವಣನನ್ನು ಕಂಡು ವನದೇವತೆಗಳೂ ಭಯಪೀಡಿತರಾಗಿ ಓಡಿಹೋದರು.

ಮಾಯಾಮಯವಾಗಿದ್ದ, ಹೇಸರಗತ್ತೆಗಳಿಂದ ಹೂಡಲ್ಪಟ್ಟಿದ್ದ ಕರ್ಕಶಧ್ವನಿಯಿಂದ ನಾದಿತವಾಗಿದ್ದ, ಸುವರ್ಣಮಯವಾದ ಚಕ್ರಗಳಿಂದ ಕೂಡಿದ್ದ, ದಿವ್ಯವಾದ ರಾವಣನ ಮಹಾರಥವು ಅಲ್ಲಿಯೇ ಕಾಣಿಸಿಕೊಂಡಿತು. ಭಯಂಕರವಾದ ಕರ್ಕಶಧ್ವನಿಯಿಂದ ಕೂಡಿದ್ದ ರಾವಣನು ಕಠಿಣವಾದ ಮಾತುಗಳಿಂದ ವೈದೇಹಿಯನ್ನು ಭಯಪಡಿಸುತ್ತಾ ಎಡಗೈಯಿಂದ ತಲೆಯನ್ನೂ ಬಲಗೈಯಿಂದ ತೊಡೆಗಳನ್ನೂ ಹಿಡಿದು ರಥಕ್ಕೆ ಹತ್ತಿಸಿದನು. ಹಾಗೆ ರಾವಣನಿಂದ ಹಿಡಿಯಲ್ಪಟ್ಟ ಸೀತಾದೇವಿಯು ದುಃಖದಿಂದ ಸಂಕಟಪಡುತ್ತಾ ಅರಣ್ಯದಲ್ಲಿ ಬಹಳ ದೂರಕ್ಕೆ ಹೋಗಿದ್ದ ರಾಮನನ್ನು ಸಂಬೋಧಿಸಿ– "ಹಾ ರಾಮ! ರಕ್ಷಿಸು. ಅಯ್ಯೋ ನೀನೆಲ್ಲಿರುವೆ?" – ಎಂದು ಗಟ್ಟಿಯಾಗಿ ಕೂಗಿಕೊಂಡಳು. ರಾವಣನನ್ನು ನೋಡಲು ಕೂಡ ಇಚ್ಛಿಸದಿದ್ದ, ಅವನ ಹಿಡಿತದಿಂದ ಬಿಡಿಸಿಕೊಳ್ಳಲು ನಾಗಕನ್ಯೆಯಂತೆ ವಿಲಿ-ವಿಲಿಗುಟ್ಟುತ್ತಿದ್ದ ಸೀತಾದೇವಿಯನ್ನು, ಕಾಮಾರ್ತನಾದ ರಾವಣನು ರಥದಲ್ಲಿ ಕುಳ್ಳಿರಿಸಿಕೊಂಡು ಅಂತರಿಕ್ಷಕ್ಕೆ ಹಾರಿದನು. ರಾಕ್ಷಸೇಂದ್ರನಾದ ರಾವಣನಿಂದ ಆಕಾಶಮಾರ್ಗದಲ್ಲಿ ಸೆಳೆದೊಯ್ಯಲ್ಪಡುತ್ತಿದ್ದ ಸೀತಾದೇವಿಯು ಹುಚ್ಚಳಂತೆ ಮತ್ತು ರೋಗಪೀಡಿತಳಾದವಳಂತೆ ಭ್ರಮೆಹೊಂದಿದ ಬುದ್ಧಿಯಿಂದ ಕೂಡಿದವಳಾಗಿ ಕೂಗಿಕೊಳ್ಳಲಾರಂಭಿಸಿದಳು.

ಹಾ ಲಕ್ಷ್ಮಣ ಮಹಾಬಾಹೋ ಗುರುಚಿತ್ತಪ್ರಸಾದಕ ।
ಹ್ರಿಯಮಾಣಾಂ ನ ಜಾನೀಷೇ ರಕ್ಷಸಾ ಮಾಮಮರ್ಷಿಣಾ ॥೨೩॥

"ಅಯ್ಯೋ ಲಕ್ಷ್ಮಣ! ಮಹಾಬಾಹುವೇ! ಗುರುವಾದ ರಾಮನ ಮನಸ್ಸನ್ನು ಯಾವಾಗಲೂ ಪ್ರಸನ್ನಗೊಳಿಸುವವನೇ! ಕಾಮರೂಪಿಯಾದ ರಾಕ್ಷಸನು ನನ್ನನ್ನು ಸೆಳೆದುಕೊಂಡು ಹೋಗುತ್ತಿರುವುದನ್ನು ನೀನು ಅರಿಯೆಯಾ?

ಜೀವಿತಂ ಸುಖಮರ್ಥಾಂಶ್ಚ ಧರ್ಮಹೇತೋಃ ಪರಿತ್ಯಜನ್ ।
ಹ್ರಿಯಮಾಣಾಮಧರ್ಮೇಣ ಮಾಂ ರಾಘವ ನ ಪಶ್ಯಸಿ ॥೨೪॥

ರಾಘವ ! ಧರ್ಮದ ಸಲುವಾಗಿಯೇ ಜೀವನವನ್ನೂ, ಸುಖವನ್ನೂ, ಐಶ್ವರ್ಯವನ್ನೂ ಪರಿತ್ಯಾಗಮಾಡಿರುವ ನೀನು ಅಧರ್ಮದಿಂದ ಸೆಳೆದೊಯ್ಯಲ್ಪಡುತ್ತಿರುವ ನನ್ನನ್ನು ಕಾಣುತ್ತಿಲ್ಲವೇ ?

ನನು ನಾಮಾವಿನೀತಾನಾಂ ವಿನೇತಾಸಿ ಪರಂತಪ ।
ಕಥಮೇವಂವಿಧಂ ಪಾಪಂ ನ ತ್ವಂ ಶಾಸ್ಸಿ ಹಿ ರಾವಣಮ್ ॥ ೨೫॥

ನೀನು ಅವಿನೀತರಾದ ದುರ್ಜನರನ್ನು ಶಿಕ್ಷಿಸತಕ್ಕವನಲ್ಲವೇ ? ಹೀಗಿರುವಾಗ ಇಂತಹ ಪರಮಪಾಪಿಷ್ಠನಾದ ರಾವಣನನ್ನು ನೀನೇಕೆ ಶಿಕ್ಷಿಸುತ್ತಿಲ್ಲ ?

ನನು ಸದ್ಯೋಽವಿನೀತಸ್ಯ ದೃಶ್ಯತೇ ಕರ್ಮಣಃ ಫಲಮ್ ।
ಕಾಲೋಽಪ್ಯಙ್ಗೀ ಭವತ್ಯತ್ರ ಸಸ್ಯಾನಾಮಿವ ಪಕ್ತಯೇ ॥ ೨೬॥

ಧರ್ಮದ ಹತೋಟಿಯನ್ನು ಮೀರಿದವನ ಕರ್ಮದ ಫಲವು ಒಡನೆಯೇ ಕಾಣಿಸಿಕೊಳ್ಳುವುದಿಲ್ಲ. ಸಸ್ಯಗಳು ( ಬೀಜಗಳು ) ಪಕ್ವಾವಸ್ಥೆಗೆ ಬರಲು ಕಾಲವು ಸಹಕಾರಿಕಾರಣವಾಗಿದ್ದು ಸ್ವಲ್ಪಕಾಲ ಅವು ಹೊರಹೊಮ್ಮದೇ ಇರುವಂತೆ – ಮನುಷ್ಯನು ಮಾಡುವ ಕರ್ಮದ ಫಲಗಳಿಗೂ ಕಾಲವು ಸಹಕಾರಿಕಾರಣವಾಗಿದ್ದು ಆ ಕರ್ಮದ ಫಲವು ಸ್ವಲ್ಪಕಾಲದವರೆಗೆ ಗೋಚರಿಸುವುದಿಲ್ಲ. *

* ಸಸ್ಯದಲ್ಲಿ ಫಲಬರುವುದು ನಿಶ್ಚಯವಾದರೂ ಬಿತ್ತಿದ ಸ್ವಲ್ಪಕಾಲದವರೆಗೆ ಮತ್ತು ಹುಟ್ಟಿದ ಸ್ವಲ್ಪಕಾಲದವರೆಗೆ ಆ ಸಸ್ಯದ ಫಲವು ಹೊರಕ್ಕೆ ಕಾಣುವುದಿಲ್ಲ. ಅದು ಕಾಲದ ಗರ್ಭದಲ್ಲಿ ಅಡಗಿರುತ್ತದೆ. ಅಂತೆಯೇ ಮನುಷ್ಯರು ದುಷ್ಟವಾದ ಕಾರ್ಯ ಮಾಡಲಿ ಅಥವಾ ಒಳ್ಳೆಯ ಕಾರ್ಯಮಾಡಲಿ–ಆ ಕರ್ಮದ ಫಲವು ಬೀಜದ ರೂಪದಲ್ಲಿ ಒಡನೆಯೇ ಸಿದ್ಧವಾಗಿಬಿಡುತ್ತದೆ. ಕಾಲವೆಂಬ ಕಾರಣಾಂಗದಿಂದ ಫಲರೂಪವಾದ ಬೀಜವು ಮುಚ್ಚಿಕೊಂಡಿರುತ್ತದೆ. ದುಷ್ಕರ್ಮಗಳು ಹೆಚ್ಚುತ್ತಾ ಹೋದರೆ ಅಥವಾ ಮನುಷ್ಯನು ದುಷ್ಕರ್ಮಗಳನ್ನೇ ಅನವರತವಾಗಿ ಮಾಡುತ್ತಾ ಹೋದರೆ ದುಷ್ಕರ್ಮದ ಬೀಜವು ಬಹಳ ಬೇಗ ಮೊಳಕೆಯಾಗಿ, ಗಿಡವಾಗಿ, ಹೆಮ್ಮರವಾಗಿ ಸ್ವಲ್ಪಕಾಲದಲ್ಲಿಯೇ ಫಲ ಕೊಡಲು ಪ್ರಾರಂಭಿಸುತ್ತದೆ. ಸತ್ಕರ್ಮದ ಫಲವೂ ಹೀಗೆಯೆ. ಸತ್ಕರ್ಮವನ್ನೇ ಆಗಲೀ, ದುಷ್ಕರ್ಮವನ್ನೇ ಆಗಲೀ–ಪುನಃ ಪುನಃ ಮಾಡುತ್ತಿರುವುದು ಬೀಜಕ್ಕೆ ನೀರೆರೆದು ಪೋಷಿಸಿದಂತೆ. ಆ ಕರ್ಮಫಲಗಳಿಗೆ ಕಾಲವೇ ಸಹಕಾರಿಕಾರಣವಾಗಿದ್ದು ಪಕ್ವಾವಸ್ಥೆಗೆ ಬಂದಾಗ ಸುಖ-ದುಃಖಗಳ ರೂಪದಲ್ಲಿ ಆ ಫಲಗಳು ಹೊರಕಾಣಿಸಿಕೊಳ್ಳುತ್ತವೆ.

ಸೀತೆಯು ರಾವಣನಿಗೆ ಹೇಳುತ್ತಾಳೆ:

"ರಾವಣ! ಕಾಲದ ಆಘಾತಕ್ಕೆ ಈಡಾಗಿ ಬುದ್ಧಿಗೆಟ್ಟಿರುವ ನೀನು ಜೀವನವನ್ನೇ ಕೊನೆಗಾಣಿಸಿಕೊಳ್ಳುವ ಅತಿಘೋರವಾದ ಕರ್ಮವನ್ನು ಮಾಡುತ್ತಿರುವೆ. ಇದರಿಂದ ನೀನು ಖಂಡಿತವಾಗಿಯೂ ರಾಮನಿಂದ ವಿನಾಶವನ್ನು ಹೊಂದಿಯೇ ತೀರುವೆ.

ಧರ್ಮಕಾಮನಾದ, ಯಶೋವಂತನಾದ ಶ್ರೀರಾಮನ ಧರ್ಮಪತ್ನಿಯಾದ ನನ್ನನ್ನು ರಾವಣನು ಅಪಹರಿಸಿಕೊಂಡು ಹೋಗುತ್ತಿರುವನು. ಅಯ್ಯೋ! ಇದರಿಂದ ಬಂಧುಸಹಿತಳಾದ ಕೈಕೇಯಿಯ ಇಷ್ಟಾರ್ಥವು ಈಡೇರಿದಂತಾಯಿತು.

ಜನಸ್ಥಾನದಲ್ಲಿರುವ ಹೂಗಳಿಂದ ತುಂಬಿರುವ ಕರ್ಣಿಕಾರವೃಕ್ಷವನ್ನು ಪ್ರಾರ್ಥಿಸುತ್ತೇನೆ. ಕರ್ಣಿಕಾರವೃಕ್ಷಗಳೇ! ಸೀತೆಯನ್ನು ರಾವಣನೆಂಬ ರಾಕ್ಷಸನು ಅಪಹರಿಸಿಕೊಂಡು ಹೋಗುತ್ತಿರುವನೆಂಬ ವಾರ್ತೆಯನ್ನು ಶೀಘ್ರವಾಗಿ ರಾಮನಿಗೆ ಹೇಳಿರಿ.

ಪುಷ್ಪಗಳಿಂದ ತುಂಬಿರುವ ಶಿಖರದಿಂದ ಕೂಡಿರುವ ಪ್ರಸ್ರವಣಪರ್ವತವನ್ನು ಪ್ರಾರ್ಥಿಸುತ್ತೇನೆ. ಪರ್ವತೋತ್ತಮನೇ! ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿರುವನೆಂದು ರಾಮನಿಗೆ ಶೀಘ್ರವಾಗಿ ಹೇಳು. ಹಂಸ-ಸಾರಸಪಕ್ಷಿಗಳಿಂದ ನಿನಾದಿತಳಾದ ಗೋದಾವರೀನದಿಯನ್ನು ನಮಸ್ಕರಿಸಿ ಪ್ರಾರ್ಥಿಸುತ್ತೇನೆ. ನದೀಶ್ರೇಷ್ಠಳೇ! ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿರುವನೆಂದು ರಾಮನಿಗೆ ಶೀಘ್ರವಾಗಿ ಹೇಳು.

ನಾನಾವಿಧವಾದ ವೃಕ್ಷಗಳಿಂದ ನಿಬಿಡವಾಗಿರುವ ಈ ಅರಣ್ಯದಲ್ಲಿ ಯಾವ ಯಾವ ದೇವತೆಗಳಿರುವರೋ-ಅವರೆಲ್ಲರನ್ನೂ ನಮಸ್ಕರಿಸಿ ಕೇಳಿಕೊಳ್ಳುತ್ತೇನೆ. ವನದೇವತೆಗಳೇ! ರಾವಣನು ನನ್ನನ್ನು ಅಪಹರಿಸಿಕೊಂಡು ಹೋದನೆಂಬ ವಾರ್ತೆಯನ್ನು ನನ್ನ ಪತಿಗೆ ಹೇಳಿರಿ.

ಈ ಅರಣ್ಯದಲ್ಲಿರುವ ಎಲ್ಲ ಪ್ರಾಣಿಗಳಿಗೂ ಮತ್ತು ಎಲ್ಲ ಜಾತಿಯ ಮೃಗ-ಪಕ್ಷಿಗಳಿಗೂ ನಾನು ಶರಣಾಗತಳಾಗಿದ್ದೇನೆ. ನನ್ನ ಪತಿಗೆ ಪ್ರಾಣ

ಗಳಿಗಿಂತಲೂ ಹೆಚ್ಚಿನವಳಾದ ಮತ್ತು ಪರಮಪ್ರಿಯಳಾದ ನಾನು ರಾವಣ ನಿಂದ ಅಪಹೃತಳಾಗುತ್ತಿರುವುದನ್ನು ನೀವೆಲ್ಲರೂ ನೋಡಿರಿ. ಪರಾಧೀನ ಳಾದ ನಿನ್ನ ಸೀತೆಯು ರಾವಣನಿಂದ ಅಪಹೃತಳಾದಳೆಂದು ರಾಮನಿಗೆ ಹೇಳಿರಿ. ನನ್ನನ್ನು ಯಾರು ಅಪಹರಿಸಿದರು? ನಾನೆಲ್ಲಿರುವೆನು?–ಇಷ್ಟು ಮಾತ್ರ ರಾಮನಿಗೆ ತಿಳಿದರೆ ಸಾಕು. ಮಹಾಬಾಹುವಾದ, ಮಹಾಬಲನಾದ ಅವನು ನಾನು ಸ್ವರ್ಗದಲ್ಲಿದ್ದರೂ, ಯಮಧರ್ಮನಿಂದಲೇ ಅಪಹೃತಳಾಗಿ ದ್ದರೂ–ತನ್ನ ಅತುಲಪರಾಕ್ರಮವನ್ನು ತೋರ್ಪಡಿಸಿ ನನ್ನನ್ನು ಹಿಂದಕ್ಕೆ ಕರೆತರುತ್ತಾನೆ."

ಹೀಗೆ ಕರುಣಾಜನಕವಾದ ಮಾತುಗಳನ್ನು ಹೇಳಿಕೊಂಡು ಗೋಳಾಡು ತ್ತಿದ್ದ ವಿಶಾಲನೇತ್ರೆಯಾದ ಸೀತಾದೇವಿಯು ಅತ್ಯಂತದುಃಖಿತೆಯಾಗಿ ಮುಂದೆ ಹೋಗುತ್ತಿದ್ದಾಗ ಮರದ ಮೇಲಿದ್ದ ಜಟಾಯುವನ್ನು ನೋಡಿದಳು. ರಾವಣನ ವಶದಲ್ಲಿದ್ದ, ಭಯದಿಂದ ವಿಹ್ವಲಳಾಗಿದ್ದ, ಸುಶ್ರೋಣಿಯಾದ ಸೀತೆಯು ಕುಗ್ಗಿದ ಧ್ವನಿಯಿಂದ ಜಟಾಯುವನ್ನು ಕೂಗುತ್ತಾ ಹೇಳಿದಳು:

ಜಟಾಯೋ ಪಶ್ಯಮಾಮಾರ್ಯ ಹ್ರಿಯಮಾಣಾಮನಾಥವತ್ ।
ಅನೇನ ರಾಕ್ಷಸೇನ್ದ್ರೇಣ ಕರುಣಂ ಪಾಪಕರ್ಮಣಾ ॥೩೮॥

"ಆರ್ಯನೇ! ಪಾಪಿಷ್ಠನಾದ ರಾಕ್ಷಸೇಂದ್ರನು ನನ್ನನ್ನು ಅನಾಥೆ ಯಾದವಳನ್ನು ಸೆಳೆದೊಯ್ಯುವಂತೆ ಸೆಳೆದುಕೊಂಡು ಹೋಗುತ್ತಿರುವುದನ್ನು ನೋಡು.

ಆದರೆ ಕ್ರೂರಿಯಾದ ಈ ರಾಕ್ಷಸನನ್ನು ತಡೆಯಲು ನಿನ್ನಿಂದ ಸಾಧ್ಯ ವಾಗುವುದಿಲ್ಲ. ಏಕೆಂದರೆ: ಇವನು ವೀರ್ಯವಂತನು, ಜಯಾವಹನು, ಕಪಟಯೋಧಿಯು. ಆದರೆ ನೀನು ನನಗೆ ಒಂದು ಉಪಕಾರವನ್ನು ಮಾಡ ಬಹುದು. ನನ್ನ ಅಪಹರಣದ ವಾರ್ತೆಯನ್ನು ನೀನು ರಾಮನಿಗೆ ಯಥಾವ ತ್ತಾಗಿ ಹೇಳು. ಲಕ್ಷ್ಮಣನಿಗೂ ಈ ಎಲ್ಲ ವಿಷಯಗಳನ್ನೂ ಹೇಳಬೇಕು."

೪೯ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೫೦ನೆಯ ಸರ್ಗ

## ಜಟಾಯುವು ರಾವಣನಿಗೆ ದುಷ್ಕರ್ಮದಿಂದ ಹಿಂದೆಗೆಯುವಂತೆ ತಿಳಿಯಹೇಳಿದುದು : ಅವನು ಕೇಳದಿರಲು ಯುದ್ಧಕ್ಕೆ ಆಹ್ವಾನಿಸಿದುದು

ತಂ ಶಬ್ದಮವಸುಪ್ತಸ್ತು ಜಟಾಯುರಥ ಶುಶ್ರುವೇ ।
ನಿರೀಕ್ಷ್ಯ ರಾವಣಂ ಕ್ಷಿಪ್ರಂ ವೈದೇಹೀಂ ಚ ದದರ್ಶ ಸಃ ॥೧॥

ಮರದ ಮೇಲೆ ಮಲಗಿದ್ದ ಜಟಾಯುವು ಸೀತೆಯ ಕೂಗನ್ನು ಕೇಳಿದನು. ಮರುಕ್ಷಣದಲ್ಲಿಯೇ ರಾವಣನನ್ನೂ ವೈದೇಹಿಯನ್ನೂ ನೋಡಿದನು.

ಪರ್ವತಶಿಖರದಂತೆ ಕಾಂತಿಯನ್ನು ಹೊಂದಿದ್ದ, ತೀಕ್ಷ್ಣವಾದ ಕೊಕ್ಕುಳ್ಳ, ಪಕ್ಷಿಶ್ರೇಷ್ಠನಾದ, ಶ್ರೀಮಂತನಾದ ಜಟಾಯುವು ವೃಕ್ಷದ ಮೇಲೆ ಕುಳಿತೇ ಶುಭಾವಹವಾದ ಮಾತುಗಳನ್ನು ಹೇಳಿದನು:

"ದಶಕಂಠನೇ! ನೀನು ಪುರಾತನವಾದ ಸನಾತನಧರ್ಮದಲ್ಲಿ ನಿಷ್ಠನಾಗಿದ್ದು ಸತ್ಯಪ್ರತಿಜ್ಞನಾಗಿದ್ದು ಇಂತಹ ನಿಂದಿತವಾದ ಕಾರ್ಯವನ್ನು ಈಗ ಮಾಡುತ್ತಿರುವುದು ಖಂಡಿತವಾಗಿಯೂ ನಿನಗೆ ಉಚಿತವಲ್ಲ. ಸೋದರನೇ! ನಾನೊಬ್ಬ ಮಹಾಬಲನಾದ ಗೃಧ್ರರಾಜನು. ಜಟಾಯು ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವೆನು.

ಸಕಲಲೋಕಗಳಿಗೂ ರಾಜನಾದ, ಮಹೇಂದ್ರ-ವರುಣರಿಗೆ ಸದೃಶನಾದ, ಪ್ರಜೆಗಳ ಹಿತದಲ್ಲಿಯೇ ಸರ್ವದಾ ನಿರತನಾದ ರಾಮನು ದಶರಥ ರಾಜನ ಸುಪುತ್ರನು.

ರಾವಣ! ನೀನು ಯಾರನ್ನು ಅಪಹರಿಸಿಕೊಂಡು ಹೋಗುತ್ತಿರುವೆಯೋ-ಅವಳು ತ್ರಿಲೋಕನಾಥನಾದ ರಾಮನ ಯಶಸ್ವಿನಿಯಾದ ಧರ್ಮಪತ್ನಿ. ಶ್ರೇಷ್ಠವಾದ ಕಟಿಪ್ರದೇಶದಿಂದ ಶೋಭಿತಳಾದ ಇವಳು ಸೀತಾ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವಳು.

ಮಹಾಬಲನೇ! ಧರ್ಮದಲ್ಲೇ ಸ್ಥಿರನಾಗಿರುವ ರಾಜನಾಗಿದ್ದು ಪರಪತ್ನಿಯನ್ನು ಹೇಗೆತಾನೇ ಸ್ಪರ್ಶಿಸುವೆ? ಅದರಲ್ಲಿಯೂ ವಿಶೇಷವಾಗಿ ರಾಜ

ಪತ್ನಿಯರು ರಕ್ಷಣೀಯರು. ಆದುದರಿಂದ ಪರಪತ್ನಿಯರನ್ನು ಸಂಪರ್ಕಿಸ ಬೇಕೆನ್ನುವ ನೀಚಬುದ್ಧಿಯನ್ನು ಬಿಟ್ಟುಬಿಡು. ಶ್ರೇಷ್ಠರಾದವರು ಯಾವ ಕಾರ್ಯವನ್ನು ನಿಂದಿಸುವರೋ-ಅಂತಹ ಕಾರ್ಯವನ್ನು ಧೀರನಾದವನು ಮಾಡಲು ಹೋಗಬಾರದು. ನಮ್ಮ ಪತ್ನಿಯರನ್ನು ಯಾವ ರೀತಿಯಲ್ಲಿ ಇತರರು ಸ್ಪರ್ಶಿಸದಂತೆ ರಕ್ಷಿಸುವೆವೋ-ಹಾಗೆಯೇ ಇತರರ ಪತ್ನಿಯರನ್ನೂ ಯಾರೂ ಸ್ಪರ್ಶಿಸದಂತೆ ಸಂರಕ್ಷಿಸುವುದು ಯುಕ್ತವಾಗಿದೆ. ಪೌಲಸ್ತ್ಯವಂಶ ವರ್ಧನನೇ! ಸತ್ಪುರುಷರಾದ ರಾಜರು ಶಾಸ್ತ್ರಗಳಲ್ಲಿ ಹೇಳದಿರುವ ಧರ್ಮ ವನ್ನಾಗಲೀ, ಅರ್ಥವನ್ನಾಗಲೀ, ಕಾಮವನ್ನಾಗಲೀ-ಆಚರಿಸುವುದಿಲ್ಲ.*

ರಾಜಾ ಧರ್ಮಶ್ಚ ಕಾಮಶ್ಚ ದ್ರವ್ಯಾಣಾಂ ಚೋತ್ತಮೋ ನಿಧಿಃ ।
ಧರ್ಮಃ ಶುಭಂ ವಾ ಪಾಪಂ ವಾ ರಾಜಮೂಲಂ ಪ್ರವರ್ತತೇ ॥೯॥

ಧರ್ಮಾರ್ಥ-ಕಾಮಗಳಿಗೆ ರಾಜನು ಉತ್ತಮನಾದ ಆಶ್ರಯನು. ಧರ್ಮವು ಶುಭವಾಗಿರಲೀ ಅಥವಾ ಅಶುಭವಾಗಿರಲೀ-ರಾಜನನ್ನೇ ಮೊದಲು ಆಶ್ರಯಿಸಿ ಅಲ್ಲಿಂದ ಮುಂದೆ ಪ್ರಜೆಗಳಲ್ಲಿ ವ್ಯಾಪಿಸುತ್ತದೆ. [2]

ರಾಕ್ಷಸಶ್ರೇಷ್ಠನೇ! ನೀನು ಪಾಪಸ್ವಭಾವದವನು. ಚಪಲಚಿತ್ತನು. ಪಾಪಕರ್ಮವನ್ನು ಮಾಡಿದವನು ದೇವಯೋಗ್ಯವಾದ ಯಾನವನ್ನು ಪಡೆದು

---

* ಶಾಸ್ತ್ರಾರ್ಥಗಳು ಬಹಳ ಸೂಕ್ಷ್ಮವಾಗಿರುವುದರಿಂದ ಎಲ್ಲರಿಂದಲೂ ತಿಳಿಯಲು ಅಸಾಧ್ಯವಾಗಿರುವುದರಿಂದ ಶಿಷ್ಟರಾದವರು ರಾಜನು ಅನುಸರಿಸುವ ಮಾರ್ಗವನ್ನೇ ಮೇಲ್ಪಂಕ್ತಿಯನ್ನಾಗಿಟ್ಟುಕೊಂಡು ಧರ್ಮಾಚರಣೆಯನ್ನು ಮಾಡುತ್ತಾರೆ. ರಾಜನಾದವನು ಯಾವುದೇ ಕಾರಣದಿಂದಲೂ ಧರ್ಮಕ್ಕೆ ವಿರುದ್ಧವಾಗಿ ವರ್ತಿಸುವುದಿಲ್ಲವೆಂಬ ದೃಢವಾದ ನಂಬಿಕೆಯೇ ಇದಕ್ಕೆ ಕಾರಣವಾಗಿರುತ್ತದೆ. ಆದುದರಿಂದ ನಿನ್ನಂತಹ ಧೀರನಾದ ರಾಜನು ಕುತ್ಸಿತವಾದ ಕರ್ಮವನ್ನೆಂದಿಗೂ ಮಾಡಬಾರದು. ರಾಜನು ಮಾಡುವ ಇಂತಹ ಕುತ್ಸಿತಕರ್ಮಗಳೇ ಪ್ರಜೆಗಳಿಗೆ ದಾರಿದೀಪವಾಗಿ ರಾಜನೂ ಮತ್ತು ಪ್ರಜೆಗಳೂ ಪತಿತರಾಗುತ್ತಾರೆ.

2 ಶಾಸ್ತ್ರವಿಹಿತವಾದ ಧರ್ಮಾರ್ಥಕಾಮಗಳಿಗೆ ರಾಜನು ಉತ್ತಮಾಶ್ರಯವಾಗಿರ ಬೇಕು. ರಾಜನ ಆಶ್ರಯವಿಲ್ಲದಿದ್ದರೆ ಶಾಸ್ತ್ರವಿಹಿತವಾದ ರೀತಿಯಲ್ಲಿ ಧರ್ಮಾರ್ಥಕಾಮ ಗಳ ಆಚರಣೆಯಿರುವುದಿಲ್ಲ. ಮೇಲಾಗಿ ಶಾಸ್ತ್ರವಿಹಿತವಾದ ಧರ್ಮಾರ್ಥಕಾಮಗಳಿಗಾಗಲೀ ಶಾಸ್ತ್ರವಿರುದ್ಧವಾದ ಧರ್ಮಾರ್ಥಕಾಮಗಳಿಗಾಗಲೀ ರಾಜನೇ ಮೂಲನಾಗಿರುತ್ತಾನೆ. ರಾಜನು ಧರ್ಮವನ್ನು ಯಥಾಶಾಸ್ತ್ರವಾಗಿ ಪರಿಪಾಲಿಸುತ್ತಿದ್ದರೆ-ಅರ್ಥವನ್ನು ವಿವೇಕ

ಕೊಳ್ಳಲು ಸಾಧ್ಯವಾಗುವುದಿಲ್ಲ. ಹಾಗೆಯೇ–ನೀನೂ ಕೂಡ ರಾಜ್ಯೈಶ್ವರ್ಯವನ್ನು ಪಡೆಯಬಾರದಾಗಿತ್ತು. ನೀನದನ್ನು ಹೇಗೆ ಪಡೆದುಕೊಂಡೆ ?

ಕಾಮಂ ಸ್ವಭಾವೋ ಯೋ ಯಸ್ಯ ನ ಶಕ್ಯಃ ಪರಿಮಾರ್ಜಿತುಮ್ ।
ನ ಹಿ ದುಷ್ಟಾತ್ಮನಾಮಾರ್ಯಮಾವಸತ್ಯಾಲಯೇ ಚಿರಮ್ ॥೧೧॥

ರಾವಣ ! ಯಾರಿಗೆ ಯಾವ ಕಾಮುಕಸ್ವಭಾವವು ಹುಟ್ಟಿದಾಗಿನಿಂದಲೇ ಬಂದಿರುವುದೋ–ಅಂತಹ ಸ್ವಭಾವವನ್ನು ಹೋಗಲಾಡಿಸಲು ಸಾಧ್ಯವೇ ಇಲ್ಲ. ದುಷ್ಟಾತ್ಮರ ಹೃದಯದಲ್ಲಿ ಸದುಪದೇಶವು ಹೆಚ್ಚುಕಾಲ ಇರುವುದಿಲ್ಲ.*

ರಾವಣ ! ಧರ್ಮಾತ್ಮನಾದ ಮಹಾಬಲನಾದ ರಾಮನು ನಿನ್ನ ದೇಶದಲ್ಲಾಗಲೀ ಪಟ್ಟಣದಲ್ಲಾಗಲೀ ಯಾವ ವಿಧವಾದ ಅಪರಾಧವನ್ನೂ ಮಾಡಿಲ್ಲದಿರುವಾಗ ನೀನೇಕೆ ಅವನ ವಿಷಯದಲ್ಲಿ ಅಪರಾಧವನ್ನೆಸಗುತ್ತಿರುವೆ ? ಶೂರ್ಪಣಖೆಯ ಸಲುವಾಗಿ ಜನಸ್ಥಾನದಲ್ಲಿದ್ದ ಖರನು ರಾಮನ ಮೇಲೆ ದಂಡೆತ್ತಿ ಬಂದನು. ಅನಾಯಾಸವಾಗಿ ಕಾರ್ಯಮಾಡುವ ರಾಮನು ಅವನನ್ನು ಸಂಹರಿಸಿದನು. ಇದರಲ್ಲಿ ರಾಮನು ಮಾಡಿದ ಅಪರಾಧವೇನೆಂಬುದನ್ನು ಯಥಾವತ್ತಾಗಿ ಹೇಳು. ಲೋಕನಾಥನಾದ ಯಾವನ ಭಾರ್ಯೆ

---

ಪೂರ್ಣವಾಗಿ ಯೋಜಿಸುತ್ತಿದ್ದರೆ–ಧರ್ಮದ ಚೌಕಟ್ಟಿನಲ್ಲಿ ಕಾಮರತನಾದರೆ–ಪ್ರಜೆಗಳೂ ಅವನನ್ನೇ ಅನುಸರಿಸುತ್ತಾರೆ. ರಾಜನು ಅಧರ್ಮಿಯಾಗಿದ್ದರೆ, ಅವಿವೇಕಿಯಾಗಿದ್ದರೆ, ಸ್ವೇಚ್ಛಾಚಾರಿಯಾಗಿದ್ದರೆ ಜನರೂ ಅವನನ್ನೇ ಅನುಸರಿಸಿ ನಡೆಯುತ್ತಾರೆ. ತನಗೇ ಒಂದು ಕಟ್ಟುಪಾಡು ; ಜನರಿಗೇ ಒಂದು ಕಟ್ಟುಪಾಡು–ಎಂದು ವಿಧಾಯಕ ಮಾಡಿದರೆ ಪ್ರಜೆಗಳು ಕೇಳುವುದಿಲ್ಲ. ನೀತಿನಿಯಮಗಳ ಅನುಸರಣೆಯು ರಾಜನಿಂದಲೇ ಮೊದಲಾಗಿ ಕೆಳಕ್ಕೆ ಹರಿದುಬರಬೇಕು. ರಾಜನು ಸ್ವೇಚ್ಛಾಚಾರಿಯಾಗಿದ್ದು ಪ್ರಜೆಗಳು ಸದಾಚಾರಿಗಳಾಗಿರಬೇಕೆಂದು ಕಟ್ಟುಪಾಡು ಮಾಡಿದರೆ ಅದೆಂದಿಗೂ ನಡೆಯುವುದಿಲ್ಲ. ' ಯಥಾ ರಾಜಾ ತಥಾ ಪ್ರಜಾಃ ' ಎಂಬುದು ಸಾರ್ವಕಾಲಿಕಸತ್ಯ.

* ಪಾಪಸ್ವಭಾವ – ಕಾಮಸ್ವಭಾವಗಳೆಂಬ ಎರಡು ಬಗೆಯಾದ ಸ್ವಭಾವಗಳನ್ನು ಜಟಾಯು ಹೇಳಿದ್ದಾನೆ. ಪಾಪಸ್ವಭಾವದವನಾಗಿದ್ದರೆ ಅವನನ್ನು ಹೇಗಾದರೂ ಮಾಡಿ ತಿದ್ದಬಹುದು. ಅವನನ್ನು ದಾರಿಗೆ ತರಬಹುದು. ಪಾಪಸ್ವಭಾವ ಅಥವಾ ಪಾಪಕಾರ್ಯಗಳೆಂದರೆ–ಸತ್ಪುರುಷರಿಗೆ ತೊಂದರೆಯನ್ನು ಕೊಡುವುದು, ಹಸುಗಳನ್ನು ಹಿಂಸಿಸುವುದು, ಕಳ್ಳತನ, ದರೋಡೆ ಮುಂತಾದ ಬಹಿರಿಂದ್ರಿಯಗಳಿಗೆ ಸೇರಿದ ಕಾರ್ಯಗಳಾಗುತ್ತವೆ. ಇಂತಹ ಪಾಪಕಾರ್ಯಗಳನ್ನು ಅಥವಾ ಪಾಪಸ್ವಭಾವವನ್ನು ಸದ್ಬೋಧನೆ

ಯನ್ನು ನೀನು ಅಪಹರಿಸಿಕೊಂಡು ಹೋಗುತ್ತಿರುವೆಯೋ–ಅಂತಹ ಶ್ರೀರಾಮನ ಅಪರಾಧವೇನಿದೆ?

ಕ್ಷಿಪ್ರಂ ವಿಸೃಜ ವೈದೇಹೀಂ ಮಾ ತ್ವಾ ಘೋರೇಣ ಚಕ್ಷುಷಾ ।
ದಹೇದ್ದಹನಭೂತೇನ ವೃತ್ರಮಿನ್ದ್ರಾಶನಿರ್ಯಥಾ ॥೧೫॥

ವೈದೇಹಿಯನ್ನು ಈ ಕೂಡಲೇ ಬಿಟ್ಟುಬಿಡು. ಶ್ರೀರಾಮನು ಅಗ್ನಿರೂಪವಾದ ತನ್ನ ಘೋರವಾದ ಕಣ್ಣುಗಳಿಂದ–ಇಂದ್ರನ ವಜ್ರಾಯುಧವು ವೃತ್ರಾಸುರನನ್ನು ದಹಿಸಿದಂತೆ–ನಿನ್ನನ್ನು ದಹಿಸದಿರಲಿ.

ಸರ್ಪಮಾಶೀವಿಷಂ ಬದ್ಧ್ವಾ ವಸ್ತ್ರಾನ್ತೇ ನಾವಬುಧ್ಯಸೇ ।
ಗ್ರೀವಾಯಾಂ ಪ್ರತಿಮುಕ್ತಂ ಚ ಕಾಲಪಾಶಂ ನ ಪಶ್ಯಸಿ ॥೧೬॥

ನೀನು ನಿನ್ನ ಹೊದಿಕೆಯ ಸೆರಗಿನಲ್ಲಿ ವಿಷಸರ್ಪವನ್ನು ಕಟ್ಟಿಕೊಂಡಿರುವೆ. ಆದರೆ ಅದು ವಿಷಸರ್ಪವೆಂಬುದನ್ನು ನೀನರಿಯೆ. ಕುತ್ತಿಗೆಗೆ ಕಾಲಪಾಶವು ಸುತ್ತಿಕೊಂಡಿರುವುದನ್ನೂ ನೀನು ಕಾಣುತ್ತಿಲ್ಲ.

ಸ ಭಾರಃ ಸೌಮ್ಯ ಭರ್ತವ್ಯೋ ಯೋ ನರಂ ನಾವಸಾದಯೇತ್ ।
ತದನ್ನಮುಪಿ ಭೋಕ್ತವ್ಯಂ ಜೀರ್ಯತೇ ಯದನಾಮಯಮ್ ॥೧೭॥

ಮನುಷ್ಯನಿಗೆ ಎಷ್ಟು ಭಾರವನ್ನು ಹೊರಲು ಸಾಧ್ಯವಾಗುವುದೋ ಅಷ್ಟೇ ಭಾರವನ್ನು ಹೊರಬೇಕು. ಕುತ್ತಿಗೆಯು ಉಳುಕಿಹೋಗಿ ಕುಸಿದು ಬೀಳುವಷ್ಟು ಭಾರವನ್ನು ಹೊರಲು ಪ್ರಯತ್ನಿಸಬಾರದು. ಜೀರ್ಣಿಸಿ

---

ಯಿಂದ ಸತ್ಸಹವಾಸದಿಂದ ತಿದ್ದಲು ಪ್ರಯತ್ನಿಸಬಹುದು. ಧರ್ಮೇಣ ಪಾಪಮಪನುದತಿ ಎಂಬ ವೇದವಾಕ್ಯವೂ ಇದೆ. ಆದರೆ ಕಾಮಸ್ವಭಾವದವರನ್ನು ತಿದ್ದಲಾಗುವುದಿಲ್ಲ. ಕಾಮವೆಂಬುದು ಅಂತರಂಗಕ್ಕೆ ಸೇರಿದುದು. ಇಂದ್ರಿಯಗಳನ್ನು ಜಯಿಸದೇ ಇರುವುದು. ಕಾಮಸ್ವಭಾವದವರಲ್ಲಿ ವಿದ್ಯಾವಂತರು ಅವಿದ್ಯಾವಂತರೆಂಬ ತಾರತಮ್ಯವಿಲ್ಲ. ಎಂತಹ ವಿದ್ಯಾವಂತರಾದರೂ ಇಂದ್ರಿಯಗಳನ್ನು ಜಯಿಸದೇ ಇದ್ದರೆ ಕಾಮಾಸಕ್ತರಾಗುತ್ತಾರೆ. ಅದು ಪ್ರತ್ಯಕ್ಷವಾಗಿ ಕಾಣದೇ ಇರುವುದರಿಂದ ಅದನ್ನು ಬಿಡಿಸಲು ಯಾರೂ ಪ್ರಯತ್ನಿಸುವುದೂ ಇಲ್ಲ; ಸಾಧ್ಯವೂ ಆಗುವುದಿಲ್ಲ. ಪಾಪಸ್ವಭಾವವನ್ನು ತೊಡೆದು ಹಾಕಬಹುದೆಂಬುದಕ್ಕೆ ವಾಲ್ಮೀಕಿಗಳೇ ಸಾಕ್ಷಿ. ಕಾಮಸ್ವಭಾವವನ್ನು ತೊಡೆದುಹಾಕಲು ಸಾಧ್ಯವಿಲ್ಲವೆಂಬುದಕ್ಕೆ ರಾವಣನೇ ಸಾಕ್ಷಿ.

ಕೊಳ್ಳಲು ಸಾಧ್ಯವಾಗುವಷ್ಟು ಅನ್ನವನ್ನು ಮಾತ್ರವೇ ತಿನ್ನಬೇಕು. ಅದು ಆರೋಗ್ಯಕರವಾಗಿಯೂ ಇರಬೇಕು. *

ಯತ್ಕೃತ್ವಾ ನ ಭವೇದ್ಧರ್ಮೋ ನ ಕೀರ್ತಿರ್ನ ಯಶೋ ಭುವಿ ।
ಶರೀರಸ್ಯ ಭವೇತ್ಖೇದಃ ಕಸ್ತತ್ಕರ್ಮ ಸಮಾಚರೇತ್ ॥೧೮॥

ಯಾವ ಕಾರ್ಯವನ್ನು ಮಾಡುವುದರಿಂದ ಪ್ರಪಂಚದಲ್ಲಿ ಧರ್ಮಸಾಧನೆಯಾಗುವುದಿಲ್ಲವೋ, ಕೀರ್ತಿಯಾಗಲೀ–ಯಶಸ್ಸಾಗಲೀ ಲಭಿಸುವುದಿಲ್ಲವೋ, ಶರೀರಕ್ಕೆ ಖೇದವನ್ನುಂಟುಮಾಡುವುದರಲ್ಲಿಯೇ ಪರ್ಯವಸಾನವನ್ನು ಹೊಂದುವುದೋ – ಅಂತಹ ಕಾರ್ಯವನ್ನು ಯಾವ ಮೂಢನು ತಾನೇ ಮಾಡುವನು ?

ರಾವಣ ! ತಾತ-ಮುತ್ತಾತರಿಂದ ಪ್ರಾಪ್ತವಾದ ಪಕ್ಷಿರಾಜ್ಯವನ್ನು ಯಥಾರೀತಿಯಲ್ಲಿ ಪರಿಪಾಲಿಸುತ್ತಿರುವ ನನಗೆ ಅರುವತ್ತು ಸಾವಿರ ವರ್ಷಗಳಾಗಿವೆ. ನಾನೀಗ ವೃದ್ಧನಾಗಿದ್ದೇನೆ. ನೀನಾದರೋ ಯುವಕನಾಗಿರುವೆ. ಧನುರ್ಬಾಣಗಳನ್ನು ಧರಿಸಿರುವೆ. ಕವಚವನ್ನು ತೊಟ್ಟು ರಥದಲ್ಲಿ ಕುಳಿತಿರುವೆ. ಆದರೂ ನನ್ನ ಕಣ್ಣೆದುರಿನಲ್ಲಿ ನೀನು ವೈದೇಹಿಯನ್ನು ಕ್ಷೇಮದಿಂದ ಕೊಂಡೊಯ್ಯಲಾರೆ. ನ್ಯಾಯಶಾಸ್ತ್ರಗಳಿಂದ ಸಿದ್ಧವಾಗುವ ಅನುಮಾನಗಳಿಂದ ಅಪರ್ಷೇಯವಾಗಿ ಬಂದಿರುವ ವೇದಪಾಠವನ್ನು ವಿಕೃತಗೊಳಿಸಲು ಸಾಧ್ಯವಾಗದಂತೆ–ನನ್ನ ಸಮ್ಮುಖದಲ್ಲಿ ನೀನು ವೈದೇಹಿಯನ್ನು ಬಲಾತ್ಕಾರ

---

*ಇಲ್ಲಿ ಭಾರ ಎಂದರೆ ತೂಕವೂ ಆಗಬಹುದು. ಹೊಣೆಯೂ ಆಗಬಹುದು. ಎರಡರ್ಥಗಳಲ್ಲಿಯೂ ಈ ಮಾತು ಸತ್ಯವಾಗಿದೆ. ಎತ್ತಲು ಸಾಧ್ಯವಾಗದ ಭಾರವನ್ನು ಎತ್ತಲು ಹೋದರೆ ಕೈ ಉಳುಕುತ್ತದೆ. ಎದೆಗೆ ನೋವುಂಟಾಗುತ್ತದೆ. ಕತ್ತು ಉಳುಕುತ್ತದೆ. ತನ್ನಿಂದ ಸಾಧ್ಯವಾಗದೇ ಇರುವ ಹೆಚ್ಚು ಹೊಣೆಗಾರಿಕೆಯ ಕಾರ್ಯವನ್ನು ಮಾಡಲು ಹೋಗುವ ಮನುಷ್ಯನು ಕಾರ್ಯವನ್ನೂ ಕೆಡಿಸಿ ತಾನೂ ಕಷ್ಟ-ನಷ್ಟಗಳಿಗೆ ಗುರಿಯಾಗುತ್ತಾನೆ. 'ತುಂಬ ಭಾರವಾದ ಕೆಲಸ' ಎಂದು ಹೇಳುವ ವಾಡಿಕೆಯೂ ಇದೆ. ಎರಡನೆಯ ದೃಷ್ಟಾಂತವೂ ಬಹುಸುಂದರವಾಗಿದೆ. ಸ್ತ್ರೀಯ ವಿಷಯದಲ್ಲಿಯೂ ಇದನ್ನು ಸಮನ್ವಯಿಸಬಹುದಾಗಿದೆ. 'ದಕ್ಕದೇ ಇರುವ ಕಷ್ಟದಾಯಕಳಾದ ಅನ್ಯಸ್ತ್ರೀಯು ಉಪಭೋಗಕ್ಕೆ ಅರ್ಹಳಾಗುವುದಿಲ್ಲ' – ಎಂಬುದನ್ನು ಜಟಾಯುವು ಈ ದೃಷ್ಟಾಂತದ ಮೂಲಕ ಎಚ್ಚರಿಸಿದ್ದಾನೆ.

ವಾಗಿ ಸೆಳೆದುಕೊಂಡು ಹೋಗಲಾರೆ.* ನಿನಗೇನಾದರೂ ಸಾಮರ್ಥ್ಯವಿದ್ದರೆ ಮುಹೂರ್ತಕಾಲ ನಿಲ್ಲು. ರಾಮನೊಡನೆ ಯುದ್ಧಮಾಡು. ಹಿಂದೆ ಖರನು ಹತನಾದಂತೆ ನೀನೂ ಹತನಾಗಿ ಭೂಮಿಯ ಮೇಲೆ ಮಲಗುವೆ. ಶ್ರೀರಾಮನು ಹಲವಾರು ಬಾರಿ ರಾಕ್ಷಸರನ್ನು ಸಂಹರಿಸಿದ್ದಾನೆ. ಅತ್ಯಲ್ಪ ಸಮಯದಲ್ಲಿಯೇ ನಾರುಮಡಿಯನ್ನುಟ್ಟಿರುವ ರಾಮನು ಬಂದು ನಿನ್ನನ್ನು ಯುದ್ಧದಲ್ಲಿ ಸಂಹರಿಸುತ್ತಾನೆ. ರಾಜಕುಮಾರರಿಬ್ಬರೂ ಬಹಳ ದೂರ ಹೋಗಿದ್ದಾರೆ. ಈಗ ನನಗೇನು ಮಾಡಲು ತಾನೇ ಶಕ್ಯವಿದೆ? ರಾವಣ! ಇಷ್ಟು ಮಾತ್ರ ನಿಶ್ಚಯ. ಅವರಿಬ್ಬರ ಭಯದಿಂದ ಓಡಿಹೋಗುತ್ತಿರುವ ನೀನು ಬಹಳ ಬೇಗ ವಿನಾಶಹೊಂದುವೆ. ಇದರಲ್ಲಿ ಸಂಶಯವೇ ಇಲ್ಲ. ನಾನು ವೃದ್ಧನಾಗಿದ್ದರೂ ದುರ್ಬಲನಾಗಿದ್ದರೂ, ನಿರಾಯುಧನಾಗಿದ್ದರೂ ನಾನು ಜೀವದಿಂದಿರುವವರೆಗೂ–ಶುಭಾಂಗಿಯಾದ, ಕಮಲಪತ್ರಾಕ್ಷಿಯಾದ, ರಾಮನ ಧರ್ಮಪತ್ನಿಯೂ ಅವನಿಗೆ ಅತ್ಯಂತಪ್ರಿಯಳೂ ಆಗಿರುವ ಸೀತಾದೇವಿಯನ್ನು ನೀನು ಸೆಳೆದೊಯ್ಯಲಾರೆ. ನನ್ನ ಜೀವಿತವನ್ನೇ ಒತ್ತೆಯಿಟ್ಟಾದರೂ ನಾನು ಮಹಾತ್ಮನಾದ ರಾಮನಿಗೂ–ನನ್ನ ಪ್ರಿಯವಯಸ್ಯನಾದ ದಶರಥನಿಗೂ ಪ್ರಿಯವಾಗುವ ಕಾರ್ಯವನ್ನು ಮಾಡಲೇಬೇಕು. ನಿಲ್ಲು! ರಾವಣ; ನಿಲ್ಲು! ಮುಹೂರ್ತಕಾಲ ನನ್ನ ಪರಾಕ್ರಮವೆಷ್ಟೆಂಬುದನ್ನು ನೋಡು. ತೊಟ್ಟಿನಿಂದ ಹಣ್ಣನ್ನು ಕೆಳಕ್ಕೆ ಬೀಳಿಸುವಂತೆ ನಿನ್ನನ್ನೂ ರಥದಿಂದ ಕೆಳಕ್ಕೆ ಕೆಡವುತ್ತೇನೆ. ನಿಶಾಚರನೇ! ಪ್ರಾಣವಿರುವವರೆಗೂ ನಾನು ನಿನಗೆ ಯುದ್ಧರೂಪವಾದ ಆತಿಥ್ಯವನ್ನು ನೀಡುತ್ತೇನೆ."

೫೦ನೆಯ ಸರ್ಗವು ಮುಗಿಯಿತು.

---

* ವೇದಶ್ರುತಿಯು ಯಾವುದೇ ಕಾಲಕ್ಕೂ ವ್ಯತ್ಯಾಸವಿಲ್ಲದೇ ಇರತಕ್ಕುದು. ತರ್ಕ-ನ್ಯಾಯ-ವ್ಯಾಕರಣ ಇವುಗಳ ಚೌಕಟ್ಟಿನೊಳಗೆ ವೇದಶ್ರುತಿಯನ್ನು ಅಳವಡಿಸಲು ಸಾಧ್ಯವಿಲ್ಲ. ಲೌಕಿಕವ್ಯಾಕರಣದ ಅನೇಕ ನಿಯಮಗಳು ವೈದಿಕಪ್ರಯೋಗಗಳಿಗೆ ಅನ್ವಯಿಸುವುದಿಲ್ಲ. ಆದುದರಿಂದ ಲೌಕಿಕವ್ಯಾಕರಣನಿಯಮಗಳನ್ನು ಆಧರಿಸಿ ವೇದಗಳನ್ನು ವ್ಯತ್ಯಾಸಗೊಳಿಸಬಾರದು.

ಅರಣ್ಯಕಾಂಡ ೫೧ನೆಯ ಸರ್ಗ

## ಜಟಾಯು-ರಾವಣರ ಘೋರಯುದ್ಧ : ರಾವಣನು ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿದುದು

ಇತ್ಯುಕ್ತಸ್ಯ ಯಥಾನ್ಯಾಯಂ ರಾವಣಸ್ಯ ಜಟಾಯುಷಾ ।
ಕ್ರುದ್ಧಸ್ಯಾಗ್ನಿನಿಭಾಃ ಸರ್ವಾ ರೇಜುರ್ವಿಂಶತಿದೃಷ್ಟಯಃ ॥೧॥

ಜಟಾಯುವು ರಾವಣನಿಗೆ ಹೀಗೆ ನ್ಯಾಯಸಮ್ಮತವಾದ ಈ ಮಾತುಗಳನ್ನು ಹೇಳಲಾಗಿ ಕ್ರುದ್ಧನಾದ ರಾವಣನ ಅಗ್ನಿಸದೃಶವಾದ ಇಪ್ಪತ್ತು ಕಣ್ಣುಗಳೂ ಪ್ರಜ್ವಲಿಸಿದುವು.

ಜಟಾಯುವಿನ ಮಾತನ್ನು ಕೇಳಿ ಕೋಪದಿಂದ ಕೆಂಗಣ್ಣನಾಗಿದ್ದ, ಚಿನ್ನದ ಕುಂಡಲಗಳನ್ನು ಧರಿಸಿದ್ದ, ಅಸಹನಶೀಲನಾಗಿದ್ದ ರಾವಣನು ಜಟಾಯುವನ್ನು ಆಕ್ರಮಿಸಿದನು. ಚಂಡಮಾರುತದಿಂದ ಮೇಲಕ್ಕೆದ್ದಿರುವ ಎರಡು ಮೇಘಗಳು ಆಕಾಶದಲ್ಲಿ ಸಂಘರ್ಷಿಸುವಂತೆ-ರಾವಣ-ಜಟಾಯುಗಳಿಗೆ ಆ ಮಹಾವನದಲ್ಲಿ ಭಯಂಕರವಾದ ಯುದ್ಧವು ಪ್ರಾರಂಭವಾಯಿತು. ರೆಕ್ಕೆಗಳನ್ನೊಳಗೊಂಡ ಪುಷ್ಪಮಾಲಿಕೆಗಳಿಂದ ಕೂಡಿದ ಎರಡು ಮಹಾಪರ್ವತಗಳ ನಡುವೆ ಯುದ್ಧವಾಗುವ ರೀತಿಯಲ್ಲಿ ಜಟಾಯು-ರಾವಣರ ಆ ಯುದ್ಧವು ಪರಮಾದ್ಭುತವಾಗಿದ್ದಿತು. ರಾವಣನು ಮಹಾಬಲನಾದ ಗೃಧ್ರರಾಜನನ್ನು ನಾಲೀಕಗಳಿಂದಲೂ, ನಾರಾಚಗಳಿಂದಲೂ, ತೀಕ್ಷ್ಣವಾದ ಅಗ್ರಭಾಗಗಳಿಂದ ಕೂಡಿದ್ದ ಮತ್ತು ಮಹಾಘೋರವಾಗಿದ್ದ ವಿಕರ್ಣಿಗಳೆಂಬ ಬಾಣಗಳಿಂದಲೂ ಪ್ರಹರಿಸಿದನು. ಪಕ್ಷಿರಾಜನಾದ ಜಟಾಯುವು ರಾವಣನು ಬಿಟ್ಟ ಆ ಎಲ್ಲ ಶಸ್ತ್ರಾಸ್ತ್ರಗಳನ್ನೂ ತಡೆಹಿಡಿದು, ಸುತೀಕ್ಷ್ಣವಾದ ಉಗುರುಗಳಿಂದಲೂ ಕಾಲುಗಳಿಂದಲೂ ರಾವಣನ ಶರೀರವನ್ನು ಪರಚಿ ಬಹಳವಾಗಿ ಗಾಯಗೊಳಿಸಿದನು. ಅನಂತರ ದಶಕಂಠನು ಕೋಪಾವಿಷ್ಟನಾಗಿ ಶತ್ರುವನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ಯಮದಂಡಕ್ಕೆ ಸಮಾನವಾಗಿದ್ದ, ಭಯಂಕರವಾಗಿದ್ದ ಹತ್ತು ಬಾಣಗಳನ್ನು ಬತ್ತಳಿಕೆಯಿಂದ ತೆಗೆದನು. ಮಹಾವೀರ್ಯನಾದ ರಾವಣನು ನೇರವಾಗಿ ಹೋಗುವ, ತೀಕ್ಷ್ಣವಾದ, ಘೋರವಾದ, ದೀರ್ಘವಾಗಿ ಸೆಳೆದು ಬಿಟ್ಟ ಆ ಬಾಣಗಳಿಂದ ಗೃಧ್ರರಾಜನನ್ನು ಪ್ರಹರಿಸಿದನು.

ರಾಕ್ಷಸನ ರಥದಲ್ಲಿ ಕಂಬನಿತುಂಬಿದ ಕಣ್ಣುಗಳಿಂದ ಕೂಡಿದ್ದ ಸೀತಾದೇವಿಯನ್ನು ನೋಡಿ ಜಟಾಯುವು ತನ್ನೆದುರಾಗಿ ಬಂದ ತೀಕ್ಷ್ಣವಾದ ಬಾಣಗಳನ್ನು ಲೆಕ್ಕಿಸದೇ ರಾಕ್ಷಸನನ್ನು ಪುನಃ ಆಕ್ರಮಿಸಿದನು. ಮುತ್ತಿನ ಮಣಿಗಳಿಂದ ವಿಭೂಷಿತವಾಗಿದ್ದ ಬಾಣದೊಡನೆ ಕೂಡಿದ್ದ ರಾವಣನ ಧನುಸ್ಸನ್ನು ಪಕ್ಷಿಶ್ರೇಷ್ಠನಾದ ಮಹಾತೇಜಸ್ವಿಯಾದ ಜಟಾಯುವು ತನ್ನ ಪಂಜಗಳಿಂದ ಮುರಿದನು. ಆದರಿಂದ ಅತಿಕ್ರುದ್ಧನಾದ ರಾವಣನು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಜಟಾಯುವಿನ ಮೇಲೆ ಸಾವಿರಾರು ಬಾಣಗಳನ್ನು ಸುರಿಸಿದನು. ಯುದ್ಧದಲ್ಲಿ ರಾವಣನ ಬಾಣಗಳಿಂದ ಮುಚ್ಚಲ್ಪಟ್ಟ ಜಟಾಯುವು ಗೂಡಿನೊಳಗೆ ಸೇರಿಕೊಂಡಿರುವ ಪಕ್ಷಿಯಂತೆಯೇ ಪ್ರಕಾಶಿಸಿದನು. ಮಹಾತೇಜಸ್ವಿಯಾದ ಜಟಾಯುವು ರಾವಣನು ಬಿಟ್ಟ ಸಾವಿರಾರು ಬಾಣಗಳನ್ನೂ ರೆಕ್ಕೆಗಳಿಂದಲೇ ಕೊಡವಿ ಹಾಕಿ ಪುನಃ ಪಂಜಗಳಿಂದ ರಾವಣನ ಧನುಸ್ಸನ್ನು ಮುರಿದನು. ಅಗ್ನಿಸದೃಶವಾಗಿದ್ದ ದೇದೀಪ್ಯಮಾನವಾಗಿದ್ದ ರಾವಣನ ಕವಚವನ್ನು ತನ್ನೆರಡು ರೆಕ್ಕೆಗಳಿಂದಲೇ ಹರಿದು ಹಾಕಿದನು. ಸುವರ್ಣಮಯವಾದ ಬೆನ್ನುಹೊದಿಕೆಗಳಿಂದ ಆಚ್ಛಾದಿತವಾಗಿದ್ದ, ಆಕಾಶದಲ್ಲಿ ಅತ್ಯಂತವೇಗವಾಗಿ ಹೋಗುತ್ತಿದ್ದ, ಪಿಶಾಚಿಗಳಂತೆ ಮುಖವನ್ನು ಹೊಂದಿದ್ದ ರಾವಣನ ರಥದಲ್ಲಿದ್ದ ಹೇಸರಗತ್ತೆಗಳನ್ನು ಬಲಿಷ್ಠನಾದ ಜಟಾಯುವು ತನ್ನ ರೆಕ್ಕೆಗಳಿಂದಲೇ ಕೊಂದುಹಾಕಿದನು. ಬಳಿಕ ಜಟಾಯುವು ಭದ್ರವಾದ ನೊಗದಿಂದ ಕೂಡಿದ್ದ, ಇಚ್ಛೆಯಿದ್ದೆಡೆಗೆ ಹೋಗುವುದಾಗಿದ್ದ, ಅಗ್ನಿಯ ಜ್ವಾಲೆಯಂತೆ ಪ್ರಕಾಶಮಾನವಾಗಿದ್ದ, ರತ್ನದಿಂದಲೂ ಚಿನ್ನದಿಂದಲೂ ಚಿತ್ರಿತವಾಗಿದ್ದ ರಾವಣನ ರಥವನ್ನು ಮುರಿದುಹಾಕಿದನು. ಪೂರ್ಣಚಂದ್ರಸದೃಶವಾಗಿದ್ದ ಶ್ವೇತಚ್ಛತ್ರವನ್ನೂ, ವ್ಯಜನಗಳನ್ನೂ ಅವುಗಳನ್ನು ಹಿಡಿದಿದ್ದ ರಾಕ್ಷಸರ ಸಮೇತವಾಗಿಯೇ ಕೆಳಕ್ಕೆ ಕೆಡಹಿದನು. ಮಹಾಬಲನಾದ, ಪಕ್ಷಿರಾಜನಾದ, ಶ್ರೀಮಂತನಾದ ಜಟಾಯುವು ರಾವಣನ ಸಾರಥಿಯ ಶಿರಸ್ಸನ್ನು ಕೊಕ್ಕಿನಿಂದಲೇ ಕುಕ್ಕಿ ಸಂಹರಿಸಿದನು. ಧನುಸ್ಸೂ ಮುರಿದು, ಕುದುರೆಗಳೂ ಸಾರಥಿಯೂ ಸತ್ತುಹೋಗಿ ರಥವೂ ಛಿನ್ನ-ಭಿನ್ನವಾಗಲು ರಾವಣನು ವೈದೇಹಿಯನ್ನು ತೊಡೆಯ ಮೇಲಿರಿಸಿಕೊಂಡು ಭೂಮಿಯಲ್ಲಿ ಬಿದ್ದನು. ಹಾಗೆ ಬಿದ್ದುದನ್ನು ಕಂಡು ಎಲ್ಲ ಪ್ರಾಣಿಗಳೂ–'ಸಾಧು ಜಟಾಯು!

ಸಾಧು!'–ಎಂದು ಹೇಳುತ್ತಾ ಪಕ್ಷಿರಾಜನನ್ನು ಪ್ರಶಂಸಿಸಿದುವು. ಮುಪ್ಪಿನಿಂದಲೂ, ಬಾಣಗಳ ಪ್ರಹಾರಗಳಿಂದಲೂ ಬಹಳವಾಗಿ ಬಳಲಿದ್ದ ಜಟಾಯುವನ್ನು ಗಮನಿಸಿದ ರಾವಣನು ಪ್ರಹೃಷ್ಟನಾಗಿ ಮೈಥಿಲಿಯನ್ನೆತ್ತಿಕೊಂಡೇ ಪುನಃ ಮೇಲಕ್ಕೆ ಹಾರಿದನು. ಅತಿಸಂತೋಷದಿಂದ ಜಾನಕಿಯನ್ನು ಸೊಂಟದಲ್ಲೆತ್ತಿಕೊಂಡು ಹೋಗುತ್ತಿದ್ದ, ಶತ್ರುಗಳನ್ನು ಕೊಲ್ಲಬಹುದಾದ ಎಲ್ಲ ಆಯುಧಗಳಿಂದಲೂ ವಿಹೀನನಾಗಿದ್ದ, ಕತ್ತಿಯನ್ನು ಮಾತ್ರವೇ ಉಳಿಸಿಕೊಂಡಿದ್ದ ರಾವಣನನ್ನು ಜಟಾಯುವು ಅಟ್ಟಿಸಿಕೊಂಡೇ ಹೋಗಿ ತಡೆದು ನಿಲ್ಲಿಸಿ ಹೇಳಿದನು :

ವಜ್ರಸಂಸ್ಪರ್ಶಬಾಣಸ್ಯ ಭಾರ್ಯಾಂ ರಾಮಸ್ಯ ರಾವಣ ।
ಅಲ್ಪಬುದ್ಧೇ ಹರಸ್ಯೇನಾಂ ವಧಾಯ ಖಲು ರಕ್ಷಸಾಮ್ ॥೨೫॥

“ಅಲ್ಪಬುದ್ಧಿಯವನೇ! ರಾಕ್ಷಸೇಶ್ವರನೇ! ವಜ್ರಾಯುಧದ ಸ್ಪರ್ಶಕ್ಕೆ ಸಮಾನವಾದ ಘೋರಸ್ಪರ್ಶವಿರುವ ಬಾಣವನ್ನು ಹೊಂದಿರುವ ರಾಮನ ಭಾರ್ಯೆಯನ್ನು ನೀನು ರಾಕ್ಷಸರೆಲ್ಲರ ಸಂಹಾರಕ್ಕಾಗಿಯೇ ಅಪಹರಿಸಿಕೊಂಡು ಹೋಗುತ್ತಿರುವೆ.

ಸಮಿತ್ರಬನ್ಧುಃ ಸಾಮಾತ್ಯಃ ಸಬಲಃ ಸಪರಿಚ್ಛದಃ ।
ವಿಷಪಾನಂ ಪಿಬಸ್ಯೇತತ್ಪಿಪಾಸಿತ ಇವೋದಕಮ್ ॥೨೬॥

ಬಾಯಾರಿದವನು ನೀರುಕುಡಿಯುವಂತೆ – ಮಿತ್ರರು, ಬಂಧುಗಳು, ಅಮಾತ್ಯರು, ಸೈನಿಕರು ಮತ್ತು ಪರಿವಾರದವರು–ಇವರೆಲ್ಲರ ಸಮೇತವಾಗಿ ವಿಷವನ್ನು ಪಾನಮಾಡುತ್ತಿರುವೆ.*

ಅನುಬನ್ಧಮಜಾನನ್ತಃ ಕರ್ಮಣಾಮವಿಚಕ್ಷಣಾಃ ।
ಶೀಘ್ರಮೇವ ವಿನಶ್ಯನ್ತಿ ಯಥಾ ತ್ವಂ ವಿನಶಿಷ್ಯಸಿ ॥೨೭॥

---

* ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿರುವುದು ವಿಷಪಾನಕ್ಕೆ ಸದೃಶವಾಗಿದೆ. ಬಾಯಾರಿದವನು ನೀರುಕುಡಿಯುವಷ್ಟೇ ಕಾತರತೆಯಿಂದ ನೀನು ವಿಷಪಾನವನ್ನು ಮಾಡುತ್ತಿರುವೆ. ವಿಷಪಾನ ಮತ್ತು ಜಲಪಾನಗಳ ಪರಿಣಾಮವು ಹೀಗಿರುತ್ತದೆ: ಬಾಯಾರಿದವನು ಮಾಡಿದ ಜಲಪಾನವು ಕುಡಿದವನ ಬಾಯಾರಿಕೆಯನ್ನು ಇಂಗಿಸುತ್ತದೆ. ಕಾಮದ ತೃಷೆಯಿಂದ ಮಾಡುತ್ತಿರುವ ಸೀತಾಪಹರಣರೂಪವಾದ ವಿಷಪಾನವು ಕದ್ದವನನ್ನು

ತಾವು ಮಾಡುವ ಕರ್ಮದ ಪರಿಣಾಮವೇನೆಂಬುದನ್ನು ಅರಿಯದ ಅವಿದ್ವಾಂಸರು ನೀನು ನಾಶವಾಗುವಂತೆಯೇ ಬಹಳ ಶೀಘ್ರವಾಗಿ ವಿನಾಶ ಹೊಂದುತ್ತಾರೆ.

ಬದ್ಧಸ್ತ್ವಂ ಕಾಲಪಾಶೇನ ಕ್ವ ಗತಸ್ತಸ್ಯ ಮೋಕ್ಷ್ಯಸೇ ।
ವಧಾಯ ಬಡಿಶಂ ಗೃಹ್ಯ ಸಾಮಿಷಂ ಜಲಜೋ ಯಥಾ ॥೨೮॥

ರಾವಣ ! ನೀನು ಕಾಲಪಾಶದಿಂದ ಕಟ್ಟಲ್ಪಟ್ಟಿರುವೆ. ಎಲ್ಲಿಗೆ ಹೋದರೆ ತಾನೇ ನಿನಗೆ ಆ ಕಾಲಪಾಶದಿಂದ ಬಿಡಿಸಿಕೊಳ್ಳಲು ಸಾಧ್ಯವಾಗುವುದು ? ಮಾಂಸದ ತುಂಡಿರುವ ಗಾಳಕ್ಕೆ ಬಾಯಿಹಾಕಿದ ಮೀನು ಯಾವ ರೀತಿಯಲ್ಲಿ ಮರಣದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೋ ಹಾಗೆಯೇ ನೀನೂ ಈ ಕಾಲಪಾಶದಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ.

ಎದುರಿಸಲು ಅಸಾಧ್ಯರಾದ ರಾಮ-ಲಕ್ಷ್ಮಣರು ಇಲ್ಲದಿರುವಾಗ ಆಶ್ರಮದಲ್ಲಿ ನೀನು ಮಾಡಿರುವ ಅತಿಕ್ರಮವನ್ನು ಯಾವುದೇ ಕಾರಣದಿಂದಲೂ ಸಹಿಸಿಕೊಳ್ಳುವುದಿಲ್ಲ. ಹೇಡಿಯಾದ ನೀನು ಮಾಡಿರುವ ಲೋಕನಿಂದ್ಯವಾದ ಈ ಕಾರ್ಯವನ್ನು ವೀರರಾದವರು ಖಂಡಿತವಾಗಿಯೂ ಮಾಡುವುದಿಲ್ಲ. ಕಳ್ಳರಾದವರು ಮಾತ್ರವೇ ಇಂತಹ ಕುತ್ಸಿತವಾದ ಮಾರ್ಗವನ್ನು ಆಶ್ರಯಿಸುತ್ತಾರೆ.

ರಾವಣ ! ನೀನು ಶೂರನೇ ಆಗಿದ್ದರೆ–ಮುಹೂರ್ತಕಾಲ ಇಲ್ಲಿಯೇ ನಿಲ್ಲು. ರಾಮನೊಡನೆ ಯುದ್ಧಮಾಡು. ನಿನ್ನ ತಮ್ಮನಾದ ಖರನು ಹತನಾದಂತೆ ನೀನೂ ರಾಮನ ಬಾಣಗಳಿಂದ ಹತನಾಗಿ ನೆಲದ ಮೇಲೆ ಮಲಗುವೆ.

ಪರೇತಕಾಲೇ ಪುರುಷೋ ಯತ್ಕರ್ಮ ಪ್ರತಿಪದ್ಯತೇ ।
ವಿನಾಶಾಯಾತ್ಮನೋಽಧರ್ಮ್ಯಂ ಪ್ರತಿಪನ್ನೋಽಸಿ ಕರ್ಮ ತತ್ ॥

---

ಮಾತ್ರವಲ್ಲ ; ಕಾಮತೃಷೆಯಿರುವವನನ್ನು ಮಾತ್ರವಲ್ಲ – ಅವನ ಬಂಧುಗಳು, ಸ್ನೇಹಿತರು, ಮಂತ್ರಿಗಳು, ಪರಿವಾರದವರು ಎಲ್ಲರನ್ನೂ ಕೊಲ್ಲುತ್ತದೆ. ರಾವಣನೊಬ್ಬನು ಮಾಡುವ ಸೀತಾಹರಣರೂಪವಾದ ವಿಷಪಾನದಿಂದ ಯಾರೊಬ್ಬರೂ ಉಳಿಯಲಾರರು– ಎಂಬುದು ಜಟಾಯುವಿನ ಅಭಿಪ್ರಾಯವಾಗಿದೆ.

ಮರಣಕಾಲವು ಸನ್ನಿಹಿತವಾದಾಗ ಪುರುಷನು ಮಾಡಬಾರದ ಕೆಲಸಗಳನ್ನೇ ಮಾಡುತ್ತಾನೆ. ನೀನೂ ಕೂಡ ಅದೇ ರೀತಿಯಲ್ಲಿ ನಿನ್ನ ಆತ್ಮವಿನಾಶಕ್ಕಾಗಿಯೇ ಸೀತಾಪಹರಣರೂಪವಾದ ಅಧರ್ಮಕಾರ್ಯದಲ್ಲಿ ತೊಡಗಿರುವೆ.

ಪಾಪಾನುಬನ್ಧೋ ವೈ ಯಸ್ಯ ಕರ್ಮಣಃ ಕರ್ಮ ಕೋ ನು ತತ್ ।
ಕುರ್ವೀತ ಲೋಕಾಧಿಪತಿಃ ಸ್ವಯಂಭೂರ್ಭಗವಾನಪಿ ॥೩೩॥

ಒಂದು ಕರ್ಮಕ್ಕೆ ಪಾಪದ ಫಲವೇ ಲಭಿಸುವುದೆಂದು ಶಾಸ್ತ್ರದ ಸಿದ್ಧಾಂತವೇ ಆಗಿದ್ದ ಮೇಲೆ–ಅಂತಹ ಪಾಪಫಲದಾಯಕವಾದ ಕರ್ಮವನ್ನು ಯಾವ ಮನುಷ್ಯನು ತಾನೇ ಮಾಡುತ್ತಾನೆ? ಲೋಕಾಧಿಪತ್ಯವೇ ನನಗಿದೆ–ಎಂಬ ಕಾರಣದಿಂದ ಮಹೇಂದ್ರನಾಗಲೀ, ಎಲ್ಲ ಪ್ರಾಣಿಗಳಿಗೂ ಪಾಪ-ಪುಣ್ಯಗಳ ಫಲವನ್ನು ಕೊಡತಕ್ಕವನೇ ನಾನು–ಎಂಬ ಕಾರಣದಿಂದ ಭಗವಾನ್ ಬ್ರಹ್ಮನೇ ಆಗಲೀ–ಪಾಪಕಾರ್ಯಗಳನ್ನು ಎಂದಿಗೂ ಮಾಡುವುದಿಲ್ಲ."

ವೀರ್ಯವಂತನಾದ ಜಟಾಯುವು ಹೀಗೆ ರಾವಣನಿಗೆ ನೀತಿಯುಕ್ತವಾದ ಶುಭವಾಕ್ಯಗಳನ್ನು ಹೇಳಿ ಶೀಘ್ರವಾಗಿ ಅವನ ಬೆನ್ನ ಮೇಲೆ ಬಿದ್ದನು. ಮಾವಟಿಗನು ತುಂಟ ಆನೆಗಳನ್ನು ಯಾವ ರೀತಿಯಲ್ಲಿ ಅಂಕುಶದಿಂದ ಚುಚ್ಚುವನೋ–ಅದೇ ರೀತಿಯಲ್ಲಿ ಜಟಾಯುವು ತನ್ನ ತೀಕ್ಷ್ಣವಾದ ಉಗುರುಗಳಿಂದ ರಾವಣನನ್ನು ಬೆನ್ನಿನಲ್ಲಿ ಪರಚಿದನು. ಉಗುರು, ರೆಕ್ಕೆಗಳು ಮತ್ತು ಕೊಕ್ಕು–ಇವುಗಳನ್ನೇ ಆಯುಧಗಳನ್ನಾಗಿ ಹೊಂದಿದ್ದ ಜಟಾಯುವು ರಾಕ್ಷಸನ ತಲೆಗೂದಲುಗಳನ್ನು ಕೊಕ್ಕಿನಿಂದ ಕೀಳುತ್ತಾ ಪೃಷ್ಠಭಾಗವನ್ನು ಉಗುರುಗಳಿಂದ ಪರಚಿ ಗಾಯಗೊಳಿಸಿದನು. ಹೀಗೆ ಜಟಾಯುವು ರಾವಣನನ್ನು ಪುನಃ ಪುನಃ ಕ್ಲೇಶಗೊಳಿಸುತ್ತಿರಲು ರಾಕ್ಷಸನು ಬಹಳವಾಗಿ ಕೋಪಗೊಂಡನು. ತುಟಿಗಳು ಅದುರತೊಡಗಿದುವು. ಶರೀರವು ಕಂಪಿಸಿತು. ರೆಕ್ಕೆಗಳ ಪ್ರಹಾರದಿಂದ ಪೀಡಿತನಾಗಿದ್ದ ಕ್ರೋಧಮೂರ್ಛಿತನಾದ ರಾವಣನು ಎಡತೊಡೆಯ ಮೇಲಿದ್ದ ವೈದೇಹಿಯನ್ನು ಎಡತೋಳಿನಿಂದ ಭದ್ರವಾಗಿ ಹಿಡಿದುಕೊಂಡು ಅಂಗೈಯಿನಿಂದ ಜಟಾಯುವನ್ನು ಅಪ್ಪಳಿಸಿದನು. ಪಕ್ಷಿರಾಜನಾದ ಶತ್ರುದಮನನಾದ ಜಟಾಯುವು ರಾವಣನ ಪ್ರಹಾರವನ್ನು

ತಾವು ಮಾಡುವ ಕರ್ಮದ ಪರಿಣಾಮವೇನೆಂಬುದನ್ನು ಅರಿಯದ ಅವಿದ್ವಾಂಸರು ನೀನು ನಾಶವಾಗುವಂತೆಯೇ ಬಹಳ ಶೀಘ್ರವಾಗಿ ವಿನಾಶ ಹೊಂದುತ್ತಾರೆ.

ಬದ್ಧಸ್ತ್ವಂ ಕಾಲಪಾಶೇನ ಕ್ವ ಗತಸ್ತಸ್ಯ ಮೋಕ್ಷ್ಯಸೇ ।
ವಧಾಯ ಬಡಿಶಂ ಗೃಹ್ಯ ಸಾಮಿಷಂ ಜಲಜೋ ಯಥಾ ॥೨೮॥

ರಾವಣ ! ನೀನು ಕಾಲಪಾಶದಿಂದ ಕಟ್ಟಲ್ಪಟ್ಟಿರುವೆ. ಎಲ್ಲಿಗೆ ಹೋದರೆ ತಾನೇ ನಿನಗೆ ಆ ಕಾಲಪಾಶದಿಂದ ಬಿಡಿಸಿಕೊಳ್ಳಲು ಸಾಧ್ಯವಾಗುವುದು ? ಮಾಂಸದ ತುಂಡಿರುವ ಗಾಳಕ್ಕೆ ಬಾಯಿಹಾಕಿದ ಮೀನು ಯಾವ ರೀತಿಯಲ್ಲಿ ಮರಣದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೋ ಹಾಗೆಯೇ ನೀನೂ ಈ ಕಾಲಪಾಶದಿಂದ ಬಿಡಿಸಿಕೊಳ್ಳಲು ಸಾಧ್ಯವೇ ಇಲ್ಲ.

ಎದುರಿಸಲು ಅಸಾಧ್ಯರಾದ ರಾಮ-ಲಕ್ಷ್ಮಣರು ಇಲ್ಲದಿರುವಾಗ ಆಶ್ರಮದಲ್ಲಿ ನೀನು ಮಾಡಿರುವ ಅತಿಕ್ರಮವನ್ನು ಯಾವುದೇ ಕಾರಣದಿಂದಲೂ ಸಹಿಸಿಕೊಳ್ಳುವುದಿಲ್ಲ. ಹೇಡಿಯಾದ ನೀನು ಮಾಡಿರುವ ಲೋಕನಿಂದ್ಯವಾದ ಈ ಕಾರ್ಯವನ್ನು ವೀರರಾದವರು ಖಂಡಿತವಾಗಿಯೂ ಮಾಡುವುದಿಲ್ಲ. ಕಳ್ಳರಾದವರು ಮಾತ್ರವೇ ಇಂತಹ ಕುತ್ಸಿತವಾದ ಮಾರ್ಗವನ್ನು ಆಶ್ರಯಿಸುತ್ತಾರೆ.

ರಾವಣ ! ನೀನು ಶೂರನೇ ಆಗಿದ್ದರೆ–ಮುಹೂರ್ತಕಾಲ ಇಲ್ಲಿಯೇ ನಿಲ್ಲು. ರಾಮನೊಡನೆ ಯುದ್ಧಮಾಡು. ನಿನ್ನ ತಮ್ಮನಾದ ಖರನು ಹತನಾದಂತೆ ನೀನೂ ರಾಮನ ಬಾಣಗಳಿಂದ ಹತನಾಗಿ ನೆಲದ ಮೇಲೆ ಮಲಗುವೆ.

ಪರೇತಕಾಲೇ ಪುರುಷೋ ಯತ್ಕರ್ಮ ಪ್ರತಿಪದ್ಯತೇ ।
ವಿನಾಶಾಯಾತ್ಮನೋಽಧರ್ಮ್ಯಂ ಪ್ರತಿಪನ್ನೋಽಸಿ ಕರ್ಮ ತತ್ ॥

---

ಮಾತ್ರವಲ್ಲ ; ಕಾಮತೃಷೆಯಿರುವವನನ್ನು ಮಾತ್ರವಲ್ಲ – ಅವನ ಬಂಧುಗಳು, ಸ್ನೇಹಿತರು, ಮಂತ್ರಿಗಳು, ಪರಿವಾರದವರು ಎಲ್ಲರನ್ನೂ ಕೊಲ್ಲುತ್ತದೆ. ರಾವಣನೊಬ್ಬನು ಮಾಡುವ ಸೀತಾಹರಣರೂಪವಾದ ವಿಷಪಾನದಿಂದ ಯಾರೊಬ್ಬರೂ ಉಳಿಯಲಾರರು– ಎಂಬುದು ಜಟಾಯುವಿನ ಅಭಿಪ್ರಾಯವಾಗಿದೆ.

ಮರಣಕಾಲವು ಸನ್ನಿಹಿತವಾದಾಗ ಪುರುಷನು ಮಾಡಬಾರದ ಕೆಲಸಗಳನ್ನೇ ಮಾಡುತ್ತಾನೆ. ನೀನೂ ಕೂಡ ಅದೇ ರೀತಿಯಲ್ಲಿ ನಿನ್ನ ಆತ್ಮವಿನಾಶಕ್ಕಾಗಿಯೇ ಸೀತಾಪಹರಣರೂಪವಾದ ಅಧರ್ಮಕಾರ್ಯದಲ್ಲಿ ತೊಡಗಿರುವೆ.

ಪಾಪಾನುಬನ್ಧೋ ವೈ ಯಸ್ಯ ಕರ್ಮಣಃ ಕರ್ಮ ಕೋ ನು ತತ್ ।
ಕುರ್ವೀತ ಲೋಕಾಧಿಪತಿಃ ಸ್ವಯಂಭೂರ್ಭಗವಾನಪಿ ॥೩೩॥

ಒಂದು ಕರ್ಮಕ್ಕೆ ಪಾಪದ ಫಲವೇ ಲಭಿಸುವುದೆಂದು ಶಾಸ್ತ್ರದ ಸಿದ್ಧಾಂತವೇ ಆಗಿದ್ದ ಮೇಲೆ-ಅಂತಹ ಪಾಪಫಲದಾಯಕವಾದ ಕರ್ಮವನ್ನು ಯಾವ ಮನುಷ್ಯನು ತಾನೇ ಮಾಡುತ್ತಾನೆ? ಲೋಕಾಧಿಪತ್ಯವೇ ನನಗಿದೆ-ಎಂಬ ಕಾರಣದಿಂದ ಮಹೇಂದ್ರನಾಗಲೀ, ಎಲ್ಲ ಪ್ರಾಣಿಗಳಿಗೂ ಪಾಪ-ಪುಣ್ಯಗಳ ಫಲವನ್ನು ಕೊಡತಕ್ಕವನೇ ನಾನು-ಎಂಬ ಕಾರಣದಿಂದ ಭಗವಾನ್ ಬ್ರಹ್ಮನೇ ಆಗಲೀ-ಪಾಪಕಾರ್ಯಗಳನ್ನು ಎಂದಿಗೂ ಮಾಡುವುದಿಲ್ಲ."

ವೀರ್ಯವಂತನಾದ ಜಟಾಯುವು ಹೀಗೆ ರಾವಣನಿಗೆ ನೀತಿಯುಕ್ತವಾದ ಶುಭವಾಕ್ಯಗಳನ್ನು ಹೇಳಿ ಶೀಘ್ರವಾಗಿ ಅವನ ಬೆನ್ನ ಮೇಲೆ ಬಿದ್ದನು. ಮಾವಟಿಗನು ತುಂಟ ಆನೆಗಳನ್ನು ಯಾವ ರೀತಿಯಲ್ಲಿ ಅಂಕುಶದಿಂದ ಚುಚ್ಚುವನೋ-ಅದೇ ರೀತಿಯಲ್ಲಿ ಜಟಾಯುವು ತನ್ನ ತೀಕ್ಷ್ಣವಾದ ಉಗುರುಗಳಿಂದ ರಾವಣನನ್ನು ಬೆನ್ನಿನಲ್ಲಿ ಪರಚಿದನು. ಉಗುರು, ರೆಕ್ಕೆಗಳು ಮತ್ತು ಕೊಕ್ಕು-ಇವುಗಳನ್ನೇ ಆಯುಧಗಳನ್ನಾಗಿ ಹೊಂದಿದ್ದ ಜಟಾಯುವು ರಾಕ್ಷಸನ ತಲೆಗೂದಲುಗಳನ್ನು ಕೊಕ್ಕಿನಿಂದ ಕೀಳುತ್ತಾ ಪೃಷ್ಠಭಾಗವನ್ನು ಉಗುರುಗಳಿಂದ ಪರಚಿ ಗಾಯಗೊಳಿಸಿದನು. ಹೀಗೆ ಜಟಾಯುವು ರಾವಣನನ್ನು ಪುನಃ ಪುನಃ ಕ್ಲೇಶಗೊಳಿಸುತ್ತಿರಲು ರಾಕ್ಷಸನು ಬಹಳವಾಗಿ ಕೋಪಗೊಂಡನು. ತುಟಿಗಳು ಅದುರತೊಡಗಿದುವು. ಶರೀರವು ಕಂಪಿಸಿತು. ರೆಕ್ಕೆಗಳ ಪ್ರಹಾರದಿಂದ ಪೀಡಿತನಾಗಿದ್ದ ಕ್ರೋಧಮೂರ್ಛಿತನಾದ ರಾವಣನು ಎಡತೊಡೆಯ ಮೇಲಿದ್ದ ವೈದೇಹಿಯನ್ನು ಎಡತೋಳಿನಿಂದ ಭದ್ರವಾಗಿ ಹಿಡಿದುಕೊಂಡು ಅಂಗೈಯಿನಿಂದ ಜಟಾಯುವನ್ನು ಅಪ್ಪಳಿಸಿದನು. ಪಕ್ಷಿರಾಜನಾದ ಶತ್ರುದಮನನಾದ ಜಟಾಯುವು ರಾವಣನ ಪ್ರಹಾರವನ್ನು

ಲೆಕ್ಕಿಸದೇ ಅವನನ್ನು ಆಕ್ರಮಿಸಿ ಸೀತೆಯನ್ನು ತಬ್ಬಿಹಿಡಿದುಕೊಂಡಿದ್ದ ರಾವಣನ ಎಡಭಾಗದ ಹತ್ತು ತೋಳುಗಳನ್ನೂ ಕೊಕ್ಕಿನಿಂದ ಕತ್ತರಿಸಿದನು. ವಿಷಜ್ವಾಲೆಗಳ ಗುಂಪನ್ನೇ ಮುಖದಲ್ಲಿ ಹೊಂದಿರುವ ಸರ್ಪಗಳು ಹುತ್ತದಿಂದ



ಸಾಲು-ಸಾಲಾಗಿ ಹೊರಬರುವಂತೆ – ಜಟಾಯುವಿನಿಂದ ಕತ್ತರಿಸಲ್ಪಟ್ಟಿದ್ದ ರಾವಣನ ತೋಳುಗಳು ಪುನಃ ಹುಟ್ಟಿಕೊಂಡುವು. ಕ್ರುದ್ಧನಾಗಿದ್ದ ರಾವಣನು ಸೀತೆಯನ್ನು ಕೆಳಗಿಳಿಸಿ ಜಟಾಯುವನ್ನು ಮುಷ್ಟಿಗಳಿಂದ ಗುದ್ದಿ ಕಾಲುಗಳಿಂದಲೂ ಒದೆದನು. ಮುಹೂರ್ತಕಾಲದವರೆಗೆ ರಾಕ್ಷಸರಾಜನಿಗೂ ಪಕ್ಷಿರಾಜನಿಗೂ ದೊಡ್ಡ ಯುದ್ಧವೇ ನಡೆಯಿತು. ರಾವಣನು ಖಡ್ಗವನ್ನು ಹೊರತೆಗೆದು ರಾಮನ ಸಲುವಾಗಿ ಪ್ರಯಾಸದಿಂದ ಯುದ್ಧಮಾಡುತ್ತಿದ್ದ ಜಟಾಯುವಿನ ಎರಡು ರೆಕ್ಕೆಗಳನ್ನೂ, ಎರಡು ಕಾಲುಗಳನ್ನೂ, ಪಾರ್ಶ್ವ

ಭಾಗಗಳನ್ನೂ ಕತ್ತರಿಸಿಬಿಟ್ಟನು. ಹೀಗೆ ಭಯಂಕರಕರ್ಮನಾದ ರಾವಣನು ರೆಕ್ಕೆಗಳನ್ನು ಕತ್ತರಿಸಿದ ನಂತರ ಜಟಾಯುವು ಪ್ರಾಣೋತ್ಕ್ರಮಣಸ್ಥಿತಿಯಲ್ಲಿ (ಕುಟುಕುಜೀವದಿಂದ) ಭೂಮಿಯಲ್ಲಿ ಬಿದ್ದನು. ಗಾಯಗಳಿಂದ ಹೊರಬಂದ ರಕ್ತದಿಂದ ತೋಯ್ದುಹೋಗಿದ್ದ ಜಟಾಯುವನ್ನು ನೋಡಿ ಸೀತಾದೇವಿಯು ಬಹಳ ದುಃಖಿತೆಯಾಗಿ–ಕಷ್ಟದಲ್ಲಿ ಸಿಕ್ಕಿರುವ ಹತ್ತಿರದ ಬಂಧುವಿನ ಬಳಿಗೆ ಹೋಗುವಂತೆಯೇ–ರಾವಣನ ತೊಡೆಯಿಂದ ಧುಮುಕಿ ಜಟಾಯುವಿನ ಬಳಿಗೆ ಧಾವಿಸಿದಳು.

ನೀಲಮೇಘದೋಪಾದಿಯಲ್ಲಿ ಬಿದ್ದಿದ್ದ, ಬಿಳುಪಾದ ವಕ್ಷಃಸ್ಥಳವನ್ನು ಹೊಂದಿದ್ದ, ಶಾಂತವಾದ ಕಾಳ್ಗಿಚ್ಚಿನಂತೆ ಕಾಣುತ್ತಿದ್ದ, ವೀರ್ಯವಂತನಾದ ಜಟಾಯುವನ್ನು ರಾವಣನು ನೋಡಿದನು. ರಾವಣನ ಪರಾಕ್ರಮದಿಂದ ಸಮ್ಮರ್ದಿತನಾಗಿ ನೆಲದ ಮೇಲೆ ಬಿದ್ದಿದ್ದ ಪತ್ರರಥನಾದ ಜಟಾಯುವಿನ ಶರೀರವನ್ನು ಚಂದ್ರವದನೆಯಾದ ಜಾನಕಿಯು ಪುನಃ ಪುನಃ ನೇವರಿಸುತ್ತಾ ರೋದಿಸುತ್ತಿದ್ದಳು.

೫೧ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೫೨ನೆಯ ಸರ್ಗ

## ರಾವಣನು ಸೀತೆಯನ್ನು ಅಪಹರಿಸಿಕೊಂಡು ಲಂಕೆಗೆ ಹೊರಟುದು

**ತಮಲ್ಪಜೀವಿತಂ ಗೃಧ್ರಂ ಸ್ಫುರನ್ತಂ ರಾಕ್ಷಸಾಧಿಪಃ ।**
**ದದರ್ಶ ಭೂಮೌ ಪತಿತಂ ಸಮೀಪೇ ರಾಘವಾಶ್ರಮಾತ್ ॥೧॥**

ಕುಟುಕುಜೀವದಿಂದಿದ್ದ, ರಾಮಾಶ್ರಮದ ಸನಿಹದಲ್ಲಿಯೇ ಭೂಮಿಯ ಮೇಲೆ ಬಿದ್ದಿದ್ದ, ತೇಜಸ್ವಿಯಾಗಿದ್ದ ಜಟಾಯುವನ್ನು ರಾವಣನು ನೋಡಿದನು.

ಚಂದ್ರವದನೆಯಾದ ಸೀತಾದೇವಿಯು ಗೃಧ್ರರಾಜನಾದ ಜಟಾಯುವು ರಾವಣನಿಂದ ಹತನಾದುದನ್ನು ನೋಡಿ ಅತ್ಯಂತದುಃಖಿತೆಯಾಗಿ ಜಟಾಯುವನ್ನು ಆಲಿಂಗಿಸಿಕೊಂಡು ವಿಲಪಿಸಿದಳು :

**ನಿಮಿತ್ತಂ ಲಕ್ಷಣಜ್ಞಾನಂ ಶಕುನಿಸ್ವರದರ್ಶನಮ್ ।**
**ಅವಶ್ಯಂ ಸುಖದುಃಖೇಷು ನರಾಣಾಂ ಪರಿದೃಶ್ಯತೇ ॥೪॥**

"ಮನುಷ್ಯರ ಮುಂಬರುವ ಸುಖ-ದುಃಖಗಳಲ್ಲಿ-ಮುಖಚಹರೆಗಳು, ಸ್ವಪ್ನಗಳು, ಸಂಚರಿಸುವ ಮೃಗ-ಪಕ್ಷಿಗಳ ಸ್ವರಗಳು ಮತ್ತು ದರ್ಶನ-ಇವೆಲ್ಲವೂ ಸೂಚನಾರೂಪವಾಗಿ ಕಂಡುಬರುತ್ತವೆ.*

ರಾಮ ! ನನಗೆ ಮಹಾವ್ಯಸನವು ಪ್ರಾಪ್ತವಾಗಿರುವುದೆಂಬುದನ್ನು ನೀನು ತಿಳಿದಿಲ್ಲ. ನನ್ನ ಸಲುವಾಗಿ ಈ ಮೃಗ-ಪಕ್ಷಿಗಳು ನನಗೆ ಕಷ್ಟವು ಒದಗಿರುವುದನ್ನು ನಿನಗೆ ಸೂಚಿಸಲು ಧಾವಿಸುತ್ತಿವೆ. ಈ ಜಟಾಯುವಾದರೋ ನನ್ನ ಮೇಲಿನ ಅನುಕಂಪದಿಂದ ನನ್ನನ್ನು ರಕ್ಷಿಸುವ ಸಲುವಾಗಿ ಪಾಪಕರ್ಮಿಯಾದ ರಾಕ್ಷಸನೊಡನೆ ಯುದ್ಧಮಾಡಿದನು. ಆದರೆ ನನ್ನ ದೌರ್ಭಾಗ್ಯದ ಕಾರಣದಿಂದಲೇ ಇವನೀಗ ಹತನಾಗಿ ಭೂಮಿಯ ಮೇಲೆ ಬಿದ್ದಿದ್ದಾನೆ. ಕಾಕುತ್ಸ್ಥ ! ಕೂಡಲೇ ನನ್ನನ್ನು ರಕ್ಷಿಸು. ಲಕ್ಷ್ಮಣ ! ನೀನಾದರೂ ರಕ್ಷಿಸು."

ಬಹಳವಾಗಿ ಹೆದರಿದ್ದ ಸೀತಾದೇವಿಯು ಹತ್ತಿರದಲ್ಲಿರುವವರಿಗೆ ಮಾತ್ರವೇ ಕೇಳಿಸುವಷ್ಟು ಕುಗ್ಗಿದ ಧ್ವನಿಯಲ್ಲಿ ಹೀಗೆ ಹೇಳಿಕೊಂಡು ಗೋಳಾಡಿದಳು. ಅಸ್ತವ್ಯಸ್ತವಾಗಿದ್ದ ಮಾಲೆಗಳನ್ನೂ ಆಭರಣಗಳನ್ನೂ ಧರಿಸಿದ್ದ, ಅನಾಥಳಂತೆ ವಿಲಪಿಸುತ್ತಿದ್ದ ವೈದೇಹಿಯ ಬಳಿಗೆ ರಾಕ್ಷಸಾಧಿಪನಾದ ರಾವಣನು ಆಗಮಿಸಿದನು. ಬಳ್ಳಿಯಂತೆ ತರಗುಟ್ಟುತ್ತಾ ದೊಡ್ಡ-ದೊಡ್ಡ ಮರಗಳನ್ನು ತಬ್ಬಿಕೊಂಡು ಅವುಗಳ ಹಿಂಬದಿಯಲ್ಲಿ ಹೋಗಿ ನಿಲ್ಲುತ್ತಾ-"ಅಯ್ಯೋ! ನನ್ನನ್ನು

* ಮನುಷ್ಯರಿಗೆ ಮುಂದಾಗುವ ಒಳ್ಳೆಯದನ್ನು ಅಥವಾ ಕೆಟ್ಟುದನ್ನು ಕೆಲವು ಶಕುನಗಳು ಸೂಚಿಸುತ್ತವೆ. ಅವಾವುವೆಂದರೆ ಎಡಭಾಗ ಮತ್ತು ಬಲಭಾಗದಲ್ಲಿರುವ ಅಂಗಗಳ ಸ್ಪಂದನ. ಬಲಗಣ್ಣು ಸ್ಪಂದಿಸಿದರೆ ಗಂಡಸರಿಗೆ ಒಳ್ಳೆಯದಾಗುತ್ತದೆ; ಹೆಂಗಸರಿಗೆ ಕೆಟ್ಟದಾಗುತ್ತದೆ – ಮುಂತಾಗಿ ಅಂಗಸ್ಪಂದನಶಾಸ್ತ್ರವು ಹೇಳುತ್ತದೆ. ಕನ್ನಡಿಯಲ್ಲಿ ಮುಖವು ಕಾಣದಿದ್ದರೆ ಶೀಘ್ರಮರಣವೆನ್ನುತ್ತಾರೆ. ಸ್ವಪ್ನೇ ಯಃ ಪುರುಷಂ ಕೃಷ್ಣಂ ಕೃಷ್ಣದನ್ತಂ ಪ್ರಪಶ್ಯತಿ । ಸ ಏವಂ ಹನ್ತಿ-ಕಪ್ಪುಹಲ್ಲುಗಳಿರುವವನನ್ನೂ ಕಪ್ಪುಬಣ್ಣದವನನ್ನೂ ಸ್ವಪ್ನದಲ್ಲಿ ನೋಡಿದರೆ-ಮೃತ್ಯುವು ಸನ್ನಿಹಿತವಾಗಿರುವುದೆಂದು ತಿಳಿಯಬೇಕು. ಪಕ್ಷಿಗಳು ಎಡದಿಂದ ಬಲಕ್ಕೆ ಹೋದರೆ ಶುಭಶಕುನವೆನ್ನುತ್ತಾರೆ. ಬಲದಿಂದ ಎಡಕ್ಕೆ ಹೋಗಬಾರದು. ಅವುಗಳ ಧ್ವನಿಗೂ ಒಂದು ಅರ್ಥವಿದೆ. ಅವುಗಳ ಕೂಗನ್ನು ಕೇಳಿಯೇ ಶುಭಾಶುಭಗಳನ್ನು ನಿರ್ಧರಿಸುತ್ತಾರೆ. ಎಲ್ಲ ಮನುಷ್ಯರಿಗೂ ಇಂತಹ ಸೂಚನೆಗಳು ಆಯಾ ಕಾಲಗಳಲ್ಲಿ ಗೋಚರಿಸುತ್ತವೆ. ಆಗುವ ಸ್ವಪ್ನಗಳಿಗೆಲ್ಲಾ ಅರ್ಥವಿರುವು

ಬಿಟ್ಟುಬಿಡು. ಮುಟ್ಟಬೇಡ"-ಎಂದು ಬಾರಿ-ಬಾರಿಗೂ ಕೂಗುತ್ತಿದ್ದ ಸೀತಾದೇವಿಯನ್ನು ರಾಕ್ಷಸನು ಸಮೀಪಿಸಿದನು.

ಯಮರಾಜನಿಗೆ ಸಮಾನನಾಗಿ ಕಾಣುತ್ತಿದ್ದ ರಾವಣನು ತನ್ನ ಜೀವಿತದ ಅಂತ್ಯಕ್ಕಾಗಿಯೇ-"ರಾಮ! ರಾಮ! ಎಲ್ಲಿ ಹೋದೆ? ನನ್ನ ಕಷ್ಟವನ್ನು ನೀನು ನೋಡುತ್ತಿಲ್ಲವೇ? ಅಯ್ಯೋ! ಈಗೇನು ಮಾಡಲಿ?"-ಎಂದು ಅರಣ್ಯದಲ್ಲಿ ಕೂಗಿಕೊಳ್ಳುತ್ತಿದ್ದ, ರಾಮನಿಂದ ರಹಿತಳಾಗಿದ್ದ ಸೀತಾದೇವಿಯ ಮುಡಿಯನ್ನು ಹಿಡಿದುಕೊಂಡನು. ಸಾಧ್ವಿಯಾದ ವೈದೇಹಿಯನ್ನು ರಾವಣನು ಹೀಗೆ ಅವಮಾನಿಸುತ್ತಿರುವಾಗ ಚರಾಚರಪ್ರಾಣಿಗಳಿಂದ ಕೂಡಿರುವ ಈ ಜಗತ್ತೇ ಎಲ್ಲೆಯನ್ನು ಮೀರಿ ನಡೆದುಕೊಂಡಿತು. ಎಲ್ಲೆಲ್ಲೂ ಕಗ್ಗತ್ತಲು ಆವರಿಸಿತು. ಗಾಳಿಯೂ ಬೀಸುತ್ತಿರಲಿಲ್ಲ. ಸೂರ್ಯನೂ ಪ್ರಭಾಹೀನನಾದನು. ದೇವದೇವನಾದ ಬ್ರಹ್ಮನು ದಿವ್ಯದೃಷ್ಟಿಯಿಂದ, ರಾವಣನು ಸೀತೆಯನ್ನು ಅವಮಾನಗೊಳಿಸಿದ್ದನ್ನು ನೋಡಿ-ಕಾರ್ಯದ ಸಿದ್ಧಿಯಾಯಿತು-ಎಂದುಕೊಂಡನು. ದಂಡಕಾರಣ್ಯದಲ್ಲಿದ್ದ ಎಲ್ಲ ಮಹರ್ಷಿಗಳೂ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿರುವುದನ್ನು ನೋಡಿ ಅವನ

---

ದೆಂದಲ್ಲ. ಸ್ವಪ್ನವಾಗುವುದಕ್ಕೆ ಕಾರಣಗಳು ನೂರಾರಿವೆ. ನಿಷ್ಕಾರಣವಾಗಿ ನೂರಾರು ದೃಶ್ಯಗಳು ಸ್ವಪ್ನದಲ್ಲಿ ಕಾಣಿಸಿಕೊಂಡರೆ ಅವುಗಳಿಗೆ ಅರ್ಥವಿದ್ದೇ ಇದೆ. ನಮಗೆ ತಿಳಿಯದಿದ್ದ ಮಾತ್ರಕ್ಕೆ ಅವು ಮೂಢಭಾವನೆಗಳಾಗಲಾರವು. ಸ್ವಪ್ನವೃತ್ತಾಂತದ ಅನುಭವಿಗಳು ಸಾವಿರಾರು ಮಂದಿ ಇದ್ದಾರೆ. ಅವರೇ ನಮಗೆ ಪ್ರಮಾಣಭೂತರು. ಶಕುನಗಳನ್ನು ನಂಬದವರು ಅನೇಕರಿರಬಹುದು. ಒಬ್ಬರ ನಂಬಿಕೆಯನ್ನವಲಂಬಿಸಿ ಶಕುನಗಳು ನಡೆಯುವುದಿಲ್ಲ. ಇವುಗಳೆಲ್ಲವೂ ಸ್ವಾಭಾವಿಕವಾಗಿಯೇ ನಡೆಯುತ್ತವೆ. ಅದನ್ನು ಮನುಷ್ಯನು ಗ್ರಹಿಸಬೇಕು. ಒಂದು ಪ್ರಾಣಿಯು ಒಬ್ಬನಿಗೆ ತೊಂದರೆಯಾಗಲೆಂದು ಅಥವಾ ಒಳ್ಳೆಯದಾಗಲೆಂದು ಎಡಕ್ಕಾಗಲೀ ಬಲಕ್ಕಾಗಲೀ ಹೋಗುವುದಿಲ್ಲ. ಅದಕ್ಕೆ ಈ ವಿಷಯದ ಅರಿವೇ ಇರುವುದಿಲ್ಲ. ಆದರೆ ನಂಬಲಿ; ನಂಬದಿರಲಿ ಅದರ ಪರಿಣಾಮವಂತೂ ಇದ್ದೇ ಇರುತ್ತದೆ. ಕನ್ನಡಿಯಲ್ಲಿ ಮುಖವು ಕಾಣದ ವಿಷಯವು ಎಷ್ಟೋ ಮಂದಿಯ ಅನುಭವಕ್ಕೆ ಬಂದಿರುತ್ತದೆ. ಅದೇ ರೀತಿಯಲ್ಲಿ ಅವರು ಮರಣವನ್ನೂ ಹೊಂದಿದ್ದಾರೆ. ಇದನ್ನು ಇಂದಿನ ವಿಜ್ಞಾನಿಗಳು ಎನಿಸಿಕೊಳ್ಳುವವರಿಂದ ಸಮರ್ಥನೆಮಾಡಲು ಆಗದಿರಬಹುದು. ಇಷ್ಟುಮಾತ್ರದಿಂದ ಇವುಗಳನ್ನು ಮೂಢನಂಬಿಕೆಗಳೆಂದು ಹೇಳಿದರೆ ತಪ್ಪಾಗುತ್ತದೆ.

ವಧೆಯು ಸನ್ನಿಹಿತವಾಯಿತೆಂದು ಪ್ರಹೃಷ್ಟರಾದರು. ಸಾಧ್ವಿಯಾದ ಸೀತೆಯ ಹೃದಯವಿದ್ರಾವಕವಾದ ಸಂಕಟವನ್ನು ನೋಡಿ ವ್ಯಥಿತರೂ ಆದರು.

'ಅಯ್ಯೋ ರಾಮ! ಅಯ್ಯೋ ಲಕ್ಷ್ಮಣ!'–ಎಂದು ಕೂಗಿಕೊಂಡು ರೋದನಮಾಡುತ್ತಿದ್ದ ಸೀತಾದೇವಿಯನ್ನೆತ್ತಿಕೊಂಡು ರಾಕ್ಷಸೇಶ್ವರನಾದ ರಾವಣನು ಆಕಾಶಮಾರ್ಗದಲ್ಲಿ ಹೊರಟುಹೋದನು. ಪುಟಕ್ಕೆ ಹಾಕಿದ ಚಿನ್ನದಂತೆ ಕಾಂತಿಯುಕ್ತವಾದ ಶರೀರವನ್ನು ಹೊಂದಿದ್ದ, ಹೊಂಬಣ್ಣದ ರೇಷ್ಮೆಯ ಸೀರೆಯನ್ನುಟ್ಟಿದ್ದ ಸೀತಾದೇವಿಯು – ಸುದಾಮಪರ್ವತದಲ್ಲಿ ಹುಟ್ಟುವ ಅತ್ಯಂತಪ್ರಕಾಶಮಾನವಾದ ಮಿಂಚಿನಂತೆಯೇ ಪ್ರಕಾಶಿಸುತ್ತಿದ್ದಳು. ಅಗ್ನಿಯಿಂದ ದೀಪ್ತವಾದ ಪರ್ವತದ ಶಿಖರದಂತೆ–ಮೇಲೆ ಹಾರಾಡುತ್ತಿದ್ದ ಸೀತೆಯ ಹೊಂಬಣ್ಣದ ಸೀರೆಯಿಂದ ರಾವಣನು ವಿಶೇಷವಾಗಿ ಪ್ರಕಾಶಿಸಿದನು. ಪರಮಕಲ್ಯಾಣಮಯಿಯಾದ ಸೀತಾದೇವಿಯು ಮುಡಿದಿದ್ದ ಸುಗಂಧಯುಕ್ತವಾದ ಮತ್ತು ಕೆಂಪುಬಣ್ಣದ ಕಮಲಪುಷ್ಪದ ಎಸಳುಗಳು ರಾವಣನ ಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದುವು. ಗಾಳಿಯಿಂದ ಹಾರಾಡುತ್ತಿದ್ದ, ಸುವರ್ಣಮಯವಾದ ಪ್ರಭೆಯಿಂದ ಕೂಡಿದ್ದ, ಸೀತಾದೇವಿಯ ರೇಷ್ಮೆಯ ಸೀರೆಯು ಸಾಯಂಕಾಲದ ಸೂರ್ಯನ ಕಿರಣಗಳಿಂದ ಸಮ್ಮಿಶ್ರವಾದ ಕೆಂಪಾಗಿರುವ ಮೇಘದಂತೆಯೇ ಕಾಣುತ್ತಿದ್ದಿತು. ಆಕಾಶದಲ್ಲಿ ರಾವಣನ ತೊಡೆಯ ಮೇಲಿದ್ದ ಸೀತಾದೇವಿಯ ಮಾಟವಾದ ಮೂಗಿನಿಂದ ಕೂಡಿದ್ದ ಮುಖವು, ರಾಮನು ಜೊತೆಯಲ್ಲಿಲ್ಲದ ಕಾರಣ ದಂಟಿಲ್ಲದ ಕಮಲದಂತೆ ಶೋಭಾರಹಿತವಾಯಿತು. ಸುಂದರವಾದ ಹಣೆಯಿಂದಲೂ – ಮನೋಹರವಾದ ಕೇಶಾಗ್ರಗಳಿಂದಲೂ, ಕಮಲದ ಒಳಗಿರುವ ಕುಸುರಿಗೆ ಸಮಾನವಾದ ಕಾಂತಿಯಿಂದಲೂ ಕೂಡಿದ್ದ, ಕಲೆಗಳಿಂದ ರಹಿತವಾಗಿದ್ದ, ಶುಭ್ರವಾಗಿಯೂ ಸ್ವಚ್ಛವಾಗಿಯೂ ಇದ್ದ ಹಲ್ಲುಗಳಿಂದಲೂ–ಸುಂದರವಾದ ಕಣ್ಣುಗಳಿಂದಲೂ ಸಮಲಂಕೃತವಾಗಿದ್ದ, ರಾವಣನ ತೊಡೆಯ ಮೇಲಿದ್ದ ಸೀತಾದೇವಿಯ ಮುಖಾರವಿಂದವು–ನೀಲ ಮೇಘವನ್ನು ಭೇದಿಸಿಕೊಂಡು ಹೊರಬಂದ ಚಂದ್ರನಂತೆಯೇ ಕಾಣುತ್ತಿದ್ದಿತು. ಕಣ್ಣೀರಿನಿಂದಲೇ ತೊಳೆಯಲ್ಪಡುತ್ತಿದ್ದ, ಚಂದ್ರನಂತೆ ನೋಡಲು ಬಹಳ ಪ್ರಿಯವಾಗಿದ್ದ, ಸುಂದರವಾದ ಮೂಗಿನಿಂದ ಕೂಡಿದ್ದ, ಸುಂದರವಾದ ಕೆಂದುಟಿಗಳಿಂದ ಕೂಡಿದ್ದ, ಪುಟಕ್ಕೆ ಹಾಕಿದ ಚಿನ್ನದಂತೆ ಕಾಂತಿಯುಕ್ತ

ವಾಗಿದ್ದ, ಶೋಭಾಯಮಾನವಾಗಿದ್ದ ಸೀತಾದೇವಿಯ ಮುಖವು ರಾವಣನ ಭಯದಿಂದ ಕಂಪನಗೊಂಡಿದ್ದರಿಂದಲೂ, ಶ್ರೀರಾಮನು ಇಲ್ಲದಿದ್ದುದರಿಂದಲೂ- ಹಗಲಿನಲ್ಲಿ ಹುಟ್ಟಿದ ಚಂದ್ರನಂತೆ ಚೆನ್ನಾಗಿ ಪ್ರಕಾಶಿಸುತ್ತಿರಲಿಲ್ಲ. ನೀಲಾಂಗನಾದ ರಾಕ್ಷಸಾಧಿಪನ ತೊಡೆಯ ಮೇಲಿದ್ದ ಚಿನ್ನದ ಬಣ್ಣದ ಸೀತಾ ದೇವಿಯು-ನೀಲಮಣಿಗಳನ್ನು ಮೆಟ್ಟಿದ ಚಿನ್ನದ ಒಡ್ಯಾಣದಂತೆ-ಪ್ರಕಾ ಶಿಸಿದಳು. ಕಮಲಪುಷ್ಪದ ಪರಾಗದಂತೆ ಹೊಂಬಣ್ಣದವಳಾಗಿದ್ದ, ಸುವರ್ಣದ ಕಾಂತಿಯಂತೆ ದಿವ್ಯವಾದ ಕಾಂತಿಯಿಂದ ರಾರಾಜಿಸುತ್ತಿದ್ದ, ಪುಟಕ್ಕೆ ಹಾಕಿದ ಚಿನ್ನದ ಆಭರಣಗಳನ್ನು ತೊಟ್ಟಿದ್ದ ಜಾನಕಿಯು ರಾವಣನ ಬಳಿಯಲ್ಲಿ- ಕಾರ್ಮುಗಿಲಿನ ಮಧ್ಯದಲ್ಲಿ ಕ್ಷಣ-ಕ್ಷಣಕ್ಕೂ ಕಾಣಿಸಿಕೊಳ್ಳುವ ಮಿಂಚಿ ನಂತೆಯೇ ಪ್ರಕಾಶಿಸುತ್ತಿದ್ದಳು. ಸೀತಾದೇವಿಯು ಹಾಕಿಕೊಂಡಿದ್ದ ಒಡ್ಯಾಣ-ಂ ಗೆಜ್ಜೆ-ಗೊಲಸು-ಕಾಲಂದಿಗೆ-ಇವೇ ಮುಂತಾದ ಆಭರಣಗಳ ಝಣ-ಝಣಾ ತ್ಕಾರಗಳಿಂದ ರಾವಣೇಶ್ವರನು-ಮಿಂಚು-ಗುಡುಗುಗಳಿಂದ ಕೂಡಿದ ಕಾರ್ಮು ಗಿಲಿನಂತೆಯೇ ಪ್ರಕಾಶಿಸುತ್ತಿದ್ದನು. ರಾವಣನು ಸೀತಾದೇವಿಯನ್ನು ಆಕಾಶದಲ್ಲಿ ಎತ್ತಿಕೊಂಡು ಹೋಗುತ್ತಿದ್ದಾಗ ಅವಳ ತಲೆಯಿಂದ ಪುಷ್ಪಗಳ ವೃಷ್ಟಿಯು ಭೂಮಿಯ ಮೇಲೆ ಚೆಲ್ಲಿತು. ಆದರೆ ರಾವಣನು ವೇಗವಾಗಿ ಹೋಗುತ್ತಿದ್ದುದರಿಂದ ಹುಟ್ಟಿಕೊಂಡ ಗಾಳಿಯ ಸೆಳೆತಕ್ಕೆ ಸಿಕ್ಕಿದ ಆ ಪುಷ್ಪ ಗಳು ಪುನಃ ರಾವಣನನ್ನೇ ಅನುಸರಿಸಿ ಹೋಗುತ್ತಿದ್ದುವು. ವಿಮಲವಾದ ನಕ್ಷತ್ರಗಳ ಪಂಕ್ತಿಯು ಉನ್ನತವಾದ ಮೇರುಪರ್ವತವನ್ನು ಅನುಸರಿಸಿ ಹೋಗುವಂತೆ-ಸೀತಾದೇವಿಯ ತಲೆಯಿಂದ ಜಾರಿದ ಪುಷ್ಪಗಳ ಸಾಲುಗಳು ಕುಬೇರನ ತಮ್ಮನಾದ ರಾವಣನನ್ನು ಅನುಸರಿಸಿ ಹೋಗುತ್ತಿದ್ದುವು. ವಿದ್ಯು ನ್ಮಂಡಲಸದೃಶವಾಗಿದ್ದ, ರತ್ನಭೂಷಿತವಾಗಿದ್ದ ವೈದೇಹಿಯ ಒಂದು ಕಾಲಂದುಗೆಯು ಅವಳ ಕಾಲಿನಿಂದ ಜಾರಿ ಕೆಳಕ್ಕೆ ಬಿದ್ದಿತು. ಸುವರ್ಣಮಯ ವಾದ ನಡುಪಟ್ಟಿಯು ಆನೆಯನ್ನು ಶೋಭಾಯಮಾನವನ್ನಾಗಿ ಮಾಡುವಂತೆ- ವೃಕ್ಷದ ಚಿಗುರಿನಂತೆ ಎಣ್ಣೆಗೆಂಪಾಗಿದ್ದ ಸೀತಾದೇವಿಯು ರಾಕ್ಷಸೇಶ್ವರನನ್ನು ಶೋಭಾಯಮಾನವನ್ನಾಗಿ ಮಾಡಿದಳು. ದೊಡ್ಡದಾದ ಬಾಲಚುಕ್ಕೆಯೋ ಪಾದಿಯಲ್ಲಿ ತನ್ನ ತೇಜಸ್ಸಿನಿಂದ ದೇದೀಪ್ಯಮಾನಳಾಗಿ ಬೆಳಗುತ್ತಿದ್ದ ಸೀತಾ ದೇವಿಯನ್ನು ಕುಬೇರನ ತಮ್ಮನಾದ ರಾವಣನು ಆಕಾಶದ ಮಾರ್ಗವಾಗಿ ಅಪ

ಹರಿಸಿಕೊಂಡು ಹೋದನು. ಆ ಸಮಯದಲ್ಲಿ – ಮಂಕಾದ ನಕ್ಷತ್ರಗಳು ಆಕಾಶದಿಂದ ಕೆಳಕ್ಕೆ ಬೀಳುವಂತೆ–ಅಗ್ನಿಯಂತೆ ಪ್ರಕಾಶಿಸುತ್ತಿದ್ದ ಸೀತೆಯ ಮೈಮೇಲಿದ್ದ ಆಭರಣಗಳು ಝಣ-ಝಣ ಎಂಬ ಶಬ್ದದೊಡನೆ ಕೆಳಕ್ಕೆ ಬಿದ್ದುವು. ತಾರಾಧಿಪನಾದ ಚಂದ್ರನಂತೆ ಕಾಂತಿಯುಕ್ತವಾಗಿದ್ದ ಸೀತಾದೇವಿಯ ಸ್ತನಗಳ ಮಧ್ಯಭಾಗದಿಂದ ಕೆಳಕ್ಕೆ ಬಿದ್ದ ಚಂದ್ರಹಾರವು ಆಕಾಶದಿಂದ ಹರಿದುಬರುವ ಗಂಗಾನದಿಯಂತೆಯೇ ಪ್ರಕಾಶಿಸುತ್ತಿದ್ದಿತು. ಮೇಲ್ಮುಖವಾಗಿ ಬೀಸುತ್ತಿದ್ದ ಗಾಳಿಯಿಂದ ಶಬ್ದಾಯಮಾನವಾಗಿದ್ದ, ನಾನಾವಿಧವಾದ ಪಕ್ಷಿಗಳ ಸಮೂಹಗಳಿಂದ ಕೂಡಿದ್ದ, ಅಲ್ಲಾಡುತ್ತಿರುವ ಕೊಂಬೆಗಳಿಂದ ಕೂಡಿದ್ದ ವೃಕ್ಷಗಳು ಸೀತಾದೇವಿಗೆ ತಲೆಯನ್ನಲ್ಲಾಡಿಸುತ್ತಾ–' ಮಾ ಭೈಃ – ಹೆದರಬೇಡ! ಹೆದರಬೇಡ '–ಎಂದು ಹೇಳುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಕಮಲಪುಷ್ಪಗಳಿಂದ ರಹಿತವಾಗಿದ್ದ, ಭಯಗೊಂಡ ಜಲಚರಪ್ರಾಣಿಗಳಿಂದ ಸಮಾವೃತವಾಗಿದ್ದ ಸರೋವರಗಳು ಮೂರ್ಛಿತಳಾಗುತ್ತಿರುವ ಸೀತಾದೇವಿಯನ್ನು ಗೆಳತಿಯರಂತೆ ಮರುಕಗೊಂಡು ಶೋಕಿಸುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಸಿಂಹ-ವ್ಯಾಘ್ರ-ಮೃಗ-ಪಕ್ಷಿಗಳು ಎಲ್ಲ ಕಡೆಗಳಿಂದಲೂ ಓಡುತ್ತಾ ಬಂದು ರಾವಣನ ಮೇಲಿನ ಕೋಪದಿಂದ ಸೀತೆಯ ನೆಳಲನ್ನೇ ಅನುಸರಿಸಿ ಹೋಗುತ್ತಿದ್ದುವು. ಸೀತೆಯನ್ನು ರಾವಣನು ಅಪಹರಿಸಿಕೊಂಡು ಹೋಗುತ್ತಿರುವಾಗ ಜಲಪಾತವೆಂಬ ಕಂಬನಿಯಿಂದ ತುಂಬಿದ ಮುಖವುಳ್ಳ ಪರ್ವತಗಳು ಶಿಖರರೂಪವಾಗಿರುವ ತೋಳುಗಳನ್ನೇ ಮೇಲೆತ್ತಿಕೊಂಡು ರೋದನಮಾಡುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ಸೀತಾದೇವಿಯನ್ನು ರಾವಣನು ಸೆಳೆದುಕೊಂಡು ಹೋಗುತ್ತಿರುವುದನ್ನು ನೋಡಿ ಕಾಂತಿಯುಕ್ತನಾಗಿದ್ದ ಸೂರ್ಯನು ದೀನನಾಗಿ ಪ್ರಭೆಯನ್ನು ಕಳೆದುಕೊಂಡು ಬಿಳಿಯಬಿಂಬದವನಾದನು.

ನಾಸ್ತಿ ಧರ್ಮಃ ಕುತಃ ಸತ್ಯಂ ನಾರ್ಜವಂ ನಾನೃಶಂಸತಾ ।
ಯತ್ರ ರಾಮಸ್ಯ ವೈದೇಹೀಂ ಭಾರ್ಯಾಂ ಹರತಿ ರಾವಣಃ ॥೪೦॥

" ಸಾಧ್ವಿಯಾದ ರಾಮನ ಭಾರ್ಯೆಯಾದ ಸೀತಾದೇವಿಯನ್ನು ರಾವಣನು ಸೆಳೆದೊಯ್ಯುತ್ತಿದ್ದಾನೆ. ಅಯ್ಯೋ! ಧರ್ಮವೆಲ್ಲಿದೆ? ಸತ್ಯವೆಲ್ಲಿದೆ? ಋಜುತ್ವ-ದಯಾಪರತೆ ಯಾವುದೂ ಈಗ ಇಲ್ಲವಾಗಿದೆ."

ಹೀಗೆ ಹೇಳಿಕೊಂಡು ಎಲ್ಲ ಪ್ರಾಣಿಗಳೂ ಗುಂಪು-ಗುಂಪಾಗಿ ಕುಳಿತು ದುಃಖಿಸುತ್ತಿದ್ದುವು. ಭಯಗೊಂಡ ಜಿಂಕೆಯಮರಿಗಳೂ ದೀನವಾದ ಮುಖದಿಂದ ಅಳುತ್ತಿದ್ದುವು. ದೀನಳಾಗಿ ಕೂಗಿಕೊಂಡು ಗೋಳಾಡುತ್ತಿದ್ದ, ಅತ್ಯಂತದುಃಖಿತೆಯಾಗಿದ್ದ ವೈದೇಹಿಯನ್ನು ವಿಲಕ್ಷಣವಾದ ಕಣ್ಣುಗಳಿಂದ ಬಾರಿ-ಬಾರಿಗೂ ನೋಡುತ್ತಿದ್ದ ವನದೇವತೆಗಳೂ ಭಯದಿಂದ ನಡುಗಿದರು. 'ಹಾ ರಾಮ! ಹಾ ಲಕ್ಷ್ಮಣ'–ಎಂದು ಮಧುರಧ್ವನಿಯಿಂದ ಕೂಗಿಕೊಳ್ಳುತ್ತಾ ಬಾರಿ-ಬಾರಿಗೂ ಭೂಮಿಯ ಕಡೆಗೇ ನೋಡುತ್ತಿದ್ದ, ಕೆದರಿಹೋದ ಕೇಶರಾಶಿಯುಳ್ಳವಳೂ, ಅಳಿಸಿಹೋದ ತಿಲಕವುಳ್ಳವಳೂ, ಮನನಶೀಲಳೂ ಆಗಿದ್ದ ವೈದೇಹಿಯನ್ನು ದಶಗ್ರೀವನು ಆತ್ಮವಿನಾಶದ ಸಲುವಾಗಿಯೇ ಅಪಹರಿಸಿಕೊಂಡು ಹೋದನು. ಸುಮನೋಹರವಾದ ದಂತಪಂಕ್ತಿಯುಳ್ಳವಳೂ, ಶುಭ್ರವಾದ ಮುಗುಳ್ನಗೆಯುಳ್ಳವಳೂ ಆಗಿದ್ದ, ಬಂಧುಜನಗಳಿಂದಲೂ ವಿಹೀನಳಾಗಿ ರಾಮ-ಲಕ್ಷ್ಮಣರನ್ನೂ ಕಾಣದ ಮೈಥಿಲಿಯ ಮುಖವು ಮಹಾಭಯದಿಂದ ಕಂಗೆಟ್ಟಿತು.

೫೨ನೆಯ ಸರ್ಗವು ಮುಗಿಯಿತು.



## ಸೀತೆಯಿಂದ ರಾವಣನ ಧಿಕ್ಕಾರ

ಖಮುತ್ಪತನ್ತಂ ತಂ ದೃಷ್ಟ್ವಾ ಮೈಥಿಲೀ ಜನಕಾತ್ಮಜಾ ।
ದುಃಖಿತಾ ಪರಮೋದ್ವಿಗ್ನಾ ಭಯೇ ಮಹತಿ ವರ್ತಿನೀ ॥೧॥

ರೋಷರೋದನತಾಮ್ರಾಕ್ಷೀ ಭೀಮಾಕ್ಷಂ ರಾಕ್ಷಸಾಧಿಪಮ್ ।
ರುದನ್ತೀ ಕರುಣಂ ಸೀತಾ ಹ್ರಿಯಮಾಣೇದಮಬ್ರವೀತ್ ॥೨॥

ತನ್ನನ್ನೆತ್ತಿಕೊಂಡು ಆಕಾಶದಲ್ಲಿ ಮೇಲು-ಮೇಲಕ್ಕೆ ಹೋಗುತ್ತಿದ್ದ, ಭಯಂಕರನೇತ್ರನಾದ, ರಾಕ್ಷಸಾಧಿಪತಿಯಾದ ರಾವಣನನ್ನು ನೋಡಿ ಅತ್ಯಂತ ದುಃಖಿತಳೂ, ಮಹಾಭಯದಿಂದ ಉದ್ವಿಗ್ನಳೂ, ರೋಷದಿಂದಲೂ ಮತ್ತು ನಿರಂತರರೋದನದಿಂದಲೂ ಕೆಂಪಾದ ಕಣ್ಣುಗಳಿಂದ ಕೂಡಿದ್ದ ಸೀತಾದೇವಿಯು ಅಳುತ್ತಳುತ್ತಲೇ ರಾವಣನಿಗೆ ಕರುಣಾಜನಕವಾದ ಈ ಮಾತನ್ನು ಹೇಳಿದಳು :

"ನೀಚರಾವಣನೇ! ರಾಮ-ಲಕ್ಷ್ಮಣರು ಇಲ್ಲದಿರುವುದನ್ನು ತಿಳಿದು ಕಳ್ಳನಂತೆ ಬಂದು ನನ್ನನ್ನು ಅಪಹರಿಸಿಕೊಂಡು ಪಲಾಯನಮಾಡುತ್ತಿರುವೆ. ಈ ಕುತ್ಸಿತವಾದ ಕರ್ಮವನ್ನು ಮಾಡುತ್ತಿರುವ ನಿನಗೆ ನಾಚಿಕೆಯಾಗುವುದಿಲ್ಲವೇ?

ಪಾಪಿಷ್ಠನೇ! ಈಗ ನನಗೆಲ್ಲವೂ ಅರ್ಥವಾಗುತ್ತಿದೆ. ಹೇಡಿಯಾದ ನೀನು ನನ್ನನ್ನು ಕದ್ದುಕೊಂಡು ಹೋಗಬೇಕೆಂಬ ಇಚ್ಛೆಯಿಂದಲೇ ಮೃಗರೂಪವಾದ ನಿನ್ನ ಮಾಯೆಯಿಂದ ನನ್ನ ಪತಿಯು ಬೇರೆಯ ಕಡೆಗೆ ಹೋಗುವಂತೆ ಮಾಡಿದೆ. ನನ್ನನ್ನು ರಕ್ಷಿಸುವ ಸಲುವಾಗಿ ಮುಂದೆ ಬಂದ ನನ್ನ ಮಾವನಾದ ದಶರಥನ ಸಖನಾದ, ಜಟಾಯುವನ್ನೂ ಕೆಳಕ್ಕೆ ಕೆಡವಿದೆ. ಇದರಿಂದಲೇ ನಿನ್ನಲ್ಲಿ ಎಂತಹ ಅದ್ಭುತವಾದ ಪರಾಕ್ರಮವಿರುವುದೆಂಬುದನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ಮುದಿಯಾದ ಪಕ್ಷಿಯನ್ನು ಕೊಂದ ನಿನ್ನ ಸಾಹಸವು ಮೆಚ್ಚತಕ್ಕುದೇ ಆಗಿದೆ. ರಾಕ್ಷಸಾಧಮನೇ! ಶೂರ-ವೀರರಂತೆ ನೀನು ನಿನ್ನ ನಾಮ-ಕುಲ-ಗೋತ್ರಗಳನ್ನು ತಿಳಿಯಪಡಿಸಿ ರಾಮನೊಡನೆ ಯುದ್ಧಮಾಡಿ ನನ್ನನ್ನು ಗೆದ್ದುಕೊಳ್ಳಲಿಲ್ಲ.

ನೀಚನೇ! ಯಾರೂ ಇಲ್ಲದಿರುವಾಗ ಪರಸ್ತ್ರೀಯರನ್ನು ಅಪಹರಿಸುವುದು ಅತ್ಯಂತಕುತ್ಸಿತವಾದ ಕಾರ್ಯವೆಂದು ಲೋಕದಲ್ಲಿ ಸತ್ಪುರುಷರು ಹೇಳುತ್ತಾರೆ. ಸಾಧುನಿಂದಿತವಾದ ಇಂತಹ ಕಾರ್ಯವನ್ನು ಮಾಡಿಯೂ ನೀನು ಹೇಗೆ ನಾಚುತ್ತಿಲ್ಲ? ನಿನಗೆ ನಾಚಿಕೆಯೆಂಬುದೇ ಇಲ್ಲವೆಂದು ತೋರುತ್ತದೆ. ನಾನೇ ಮಹಾಶೂರನೆಂದು ಭಾವಿಸಿಕೊಂಡಿರುವ ನಿನ್ನ ಈ ಕಾರ್ಯವು ಅತ್ಯಂತಕ್ರೂರವಾದುದು ಮತ್ತು ಧರ್ಮಬಾಹಿರವಾದುದು. ಈ ಹಿಂದೆ ನೀನು ನನ್ನೊಡನೆ ಮಹಾಸತ್ತ್ವವಂತನೆಂದೂ-ಶೌರ್ಯವಂತನೆಂದೂ ಹೇಳಿಕೊಂಡಿದ್ದೆಯಲ್ಲವೇ! ಆ ನಿನ್ನ ಶೌರ್ಯಕ್ಕೂ-ಸತ್ತ್ವಕ್ಕೂ ಧಿಕ್ಕಾರವಿರಲಿ. ಹುಟ್ಟಿದ ಕುಲಕ್ಕೇ ಕಳಂಕವನ್ನುಂಟುಮಾಡುವ ಇಂತಹ ನಿನ್ನ ದುಷ್ಟವಾದ ನಡವಳಿಕೆಗೂ ಧಿಕ್ಕಾರವಿರಲಿ. ಆಕಾಶದಲ್ಲಿ ಇಷ್ಟು ವೇಗವಾಗಿ ನೀನು ಹೋಗುತ್ತಿರುವಾಗ ನಾನು ಏನು ಮಾಡಲು ತಾನೇ ಸಾಧ್ಯವಿದೆ? ನೀನು ಮಹಾಶೂರನೇ ಆಗಿರುವುದಾದರೆ ಮುಹೂರ್ತಕಾಲ ಮಾತ್ರವೇ

ನಿಲ್ಲು. ಹಾಗೆ ನಿಂತಿದ್ದೇ ಆದರೆ ಜೀವಸಹಿತವಾಗಿ ನೀನು ಮುಂದೆ ಪ್ರಯಾಣ ಮಾಡಲಾರೆ. ಇದು ನಿಶ್ಚಯ.

ರಾಜಪುತ್ರರಾದ ರಾಮ-ಲಕ್ಷ್ಮಣರ ಕಣ್ಣುಗಳಿಗೇನಾದರೂ ನೀನು ಬಿದ್ದುದೇ ಆದರೆ–ಚತುರಂಗಬಲಸಮೇತನಾಗಿಯೇ ಬಂದರೂ ಅವರೆದುರಿನಲ್ಲಿ ಮುಹೂರ್ತಕಾಲವೂ ನೀನು ಜೀವಿಸಿರಲಾರೆ. ಅರಣ್ಯದಲ್ಲಿ ಧಗ-ಧಗನೆ ಉರಿಯುತ್ತಿರುವ ಕಾಳ್ಗಿಚ್ಚಿನ ಜ್ವಾಲೆಯನ್ನು ಸಹಿಸಿಕೊಳ್ಳಲು ಆಕಾಶದಲ್ಲಿ ಹಾರಿಹೋಗುತ್ತಿರುವ ಪಕ್ಷಿಗೆ ಸಾಧ್ಯವಾಗದಂತೆ – ಆ ಪುರುಷಶ್ರೇಷ್ಠರು ಬಿಡುವ ಬಾಣಗಳ ಸ್ಪರ್ಶವನ್ನು ಸಹಿಸಿಕೊಳ್ಳಲು ನೀನು ಖಂಡಿತವಾಗಿಯೂ ಶಕ್ತನಲ್ಲ. ನೀನೇನಾದರೂ ನನ್ನನ್ನು ಬಿಡದಿದ್ದರೆ ನನ್ನ ಅವಮಾನದಿಂದ ಕ್ರುದ್ಧನಾಗುವ ನನ್ನ ಪತಿಯು ತಮ್ಮನೊಡನೆ ನಿನ್ನನ್ನು ಧ್ವಂಸಮಾಡಲು ತಕ್ಕುದಾದ ಉಪಾಯವನ್ನು ಕೈಗೊಳ್ಳುತ್ತಾನೆ. ಈ ವಿಷಯವನ್ನು ನೀನು ನಿನ್ನ ಮನಸ್ಸಿನಲ್ಲಿಯೇ ಚೆನ್ನಾಗಿ ಯೋಚಿಸಿ ನನ್ನನ್ನು ಬಿಟ್ಟುಬಿಡು. ಹೀಗೆ ಮಾಡುವುದರಿಂದ ನಿನಗೆ ಒಳ್ಳೆಯದಾಗುತ್ತದೆ. ನೀಚನೇ ! ನಾನಿಷ್ಟು ಹೇಳಿದರೂ ಬಲಾತ್ಕಾರಪೂರ್ವಕವಾಗಿ ನನ್ನನ್ನು ಸೆಳೆದೊಯ್ಯಲು ಇಚ್ಛಿಸುವೆಯಾದರೆ–ನಿನ್ನ ಪ್ರಯತ್ನವು ಖಂಡಿತವಾಗಿಯೂ ನಿಷ್ಫಲವಾಗುತ್ತದೆ. ನಿನ್ನ ಮನೋರಥವು ಕೈಗೂಡುವುದಿಲ್ಲ. ಶತ್ರುಗಳ ವಶದಲ್ಲಿರುವ ನಾನು ಸುರಸುತೋಪಮನಾದ ನನ್ನ ಪತಿಯನ್ನು ಕಾಣದೇ ಹೆಚ್ಚು ಕಾಲ ಜೀವಂತಳಾಗಿರಲು ಇಷ್ಟಪಡುವುದಿಲ್ಲ. ನಿನಗೆ ಯಾವುದರಿಂದ ಶ್ರೇಯಸ್ಸಾಗುವುದೆಂಬುದನ್ನೂ ಮತ್ತು ನಿನಗೆ ಹಿತವಾದುದು ಯಾವುದೆಂಬುದನ್ನೂ ನೀನು ವಿವೇಚನೆಯಿಂದ ಕಂಡುಕೊಂಡಿಲ್ಲ. ಮೃತ್ಯುವು ಸನ್ನಿಹಿತವಾದಾಗ ಮನುಷ್ಯನು ತಿನ್ನಬಾರದ ಪದಾರ್ಥಗಳನ್ನೂ ತಿನ್ನುವಂತೆ–ಮಾಡಬಾರದ ಕಾರ್ಯಗಳನ್ನೂ ಮಾಡುವಂತೆ–ನೀನೂ ಮಾಡುತ್ತಿರುವೆ. ಮೃತ್ಯುವು ಸನ್ನಿಹಿತವಾದಾಗ ಸಾಮಾನ್ಯವಾಗಿ ಎಲ್ಲ ಮನುಷ್ಯರಿಗೂ ಪಥ್ಯವಾದುದು ರುಚಿಸುವುದಿಲ್ಲ. ನಿನ್ನ ಕುತ್ತಿಗೆಯಲ್ಲಿ ಕಾಲಪಾಶವು ಸುತ್ತಿಕೊಂಡಿರುವುದನ್ನೂ ನಾನೀಗಲೇ ಕಾಣುತ್ತಿದ್ದೇನೆ. ಭಯಪಡಬೇಕಾಗಿರುವ ಈ ಸಮಯದಲ್ಲಿ ನೀನು ಭಯಪಡದೇ ಇರುವುದರಿಂದ ನಿನಗೆ ಮೃತ್ಯುವು ಸನ್ನಿಹಿತವಾಗಿರುವುದಂತೂ ನಿಜ. ಸುವರ್ಣಮಯವಾದ ವೃಕ್ಷಗಳನ್ನೇ ನೀನೀಗ ಕಾಣುತ್ತಿರಬೇಕು.

ಈ ಅರಣ್ಯದಲ್ಲಿರುವ ವೃಕ್ಷಗಳೆಲ್ಲವೂ ನಿನಗೆ ಚಿನ್ನದ ಮರಗಳಂತೆ ಕಾಣುತ್ತಿವೆಯಲ್ಲವೇ ? ರಕ್ತದ ಪ್ರವಾಹದಿಂದ ತುಂಬಿರುವ ಅತಿಘೋರವಾದ ವೈತರಣೀ ನದಿಯನ್ನು ನೀನು ಕಾಣುತ್ತಿರಬೇಕು. ಭಯಂಕರವಾದ ಕತ್ತಿಗಳೇ ಎಲೆಗಳಾಗಿ ಉಳ್ಳ ವೃಕ್ಷಗಳಿಂದ ಕೂಡಿರುವ ಅಸಿಪತ್ರವನವನ್ನೂ ನೀನು ಕಾಣುತ್ತಿರಬೇಕು. ಆ ಮಹಾರಣ್ಯದಲ್ಲಿ ನೀನು ಚಿನ್ನದ ಹೂವುಗಳಿಂದಲೂ, ವೈಡೂರ್ಯದ ಎಲೆಗಳಿಂದಲೂ ಕೂಡಿ ಕಬ್ಬಿಣದ ಮುಳ್ಳುಗಳಿಂದ ಸುತ್ತುವರಿಯಲ್ಪಟ್ಟಿರುವ ಬೂರುಗದ ಮರವನ್ನೂ ಕಾಣುತ್ತಿರಬೇಕು. ಇವೆಲ್ಲವೂ ನಿನ್ನ ಅವಸಾನದ ಸೂಚಕಗಳಾಗಿವೆ.

ಕ್ರೂರಿಯೇ ! ವಿಷವನ್ನು ಕುಡಿದನಂತರ ಮನುಷ್ಯನು ಬದುಕುವುದಿಲ್ಲ. ಹಾಗೆಯೇ ಮಹಾತ್ಮನಾದ ರಾಮನಿಗೆ ಇಂತಹ ಅಪರಾಧವನ್ನು ಮಾಡಿರುವ ನೀನೂ ಬಹಳಕಾಲ ಜೀವಿಸಿರಲಾರೆ. ಬಿಡಿಸಿಕೊಳ್ಳಲು ದುಸ್ಸಾಧ್ಯವಾದ ಕಾಲಪಾಶದಿಂದ ನೀನೀಗ ಬಿಗಿಯಲ್ಪಟ್ಟಿರುವೆ. ಮಹಾತ್ಮನಾದ ನನ್ನ ಪತಿಯಿಂದ ತಪ್ಪಿಸಿಕೊಂಡು ಹೋಗಿ ನೀನೆಲ್ಲಿ ತಾನೇ ಸುಖವಾಗಿರಲು ಸಾಧ್ಯವಾಗುತ್ತದೆ ? ರಾಮನ ಪರಾಕ್ರಮದ ಅರಿವು ನಿನಗಿದ್ದಂತಿಲ್ಲ. ತಮ್ಮನ ಸಹಕಾರವೂ ಇಲ್ಲದೇ ಮಹಾತ್ಮನಾದ ಶ್ರೀರಾಮನು ಕಣ್ಣುರೆಪ್ಪೆಗಳನ್ನು ಮುಚ್ಚಿತೆಗೆಯುವುದರೊಳಗಾಗಿ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಸಂಹರಿಸಿದನು. ಹೀಗಿರುವಾಗ ಸರ್ವಾಸ್ತ್ರಕುಶಲನಾದ, ಮಹಾಬಲಿಷ್ಠನಾದ, ವೀರನಾದ ರಾಘವನು ತನಗೆ ಪರಮಪ್ರಿಯಳಾದ ಭಾರ್ಯೆಯನ್ನು ಅಪಹರಿಸಿರುವ ನಿನ್ನನ್ನು ನಿಶಿತವಾದ ಬಾಣಗಳಿಂದ ಸಂಹರಿಸದೇ ಇರುವನೇ ? "

ರಾವಣನ ತೊಡೆಯ ಮೇಲಿದ್ದ, ಭಯದಿಂದಲೂ ಶೋಕದಿಂದಲೂ ಕೂಡಿದ್ದ ವೈದೇಹಿಯು ಇವೇ ಮುಂತಾಗಿ ಕಠೋರವಾದ ಹಲವು ಮಾತುಗಳನ್ನು ರಾವಣನಿಗೆ ಹೇಳಿದಳು. ಅದರಿಂದ ಯಾವ ಪ್ರಯೋಜನವೂ ಆಗದಿರಲು ಕರುಣಾಜನಕವಾದ ರೀತಿಯಲ್ಲಿ ಗಳ-ಗಳನೆ ವಿಲಪಿಸಿದಳು. ರಾವಣನ ಹಿಡಿತದಿಂದ ಅತ್ಯಂತಪೀಡಿತಳಾಗಿದ್ದ, ಹಿಡಿತದಿಂದ ತಪ್ಪಿಸಿಕೊಳ್ಳಲು ಬಹಳವಾಗಿ ಪ್ರಯತ್ನಿಸುತ್ತಿದ್ದ, ಅಳುವಿನೊಡನೆ ದಯನೀಯವಾದ ರೀತಿಯಲ್ಲಿ ಅನೇಕಪ್ರಕಾರವಾಗಿ ಮಾತನಾಡುತ್ತಿದ್ದ, ಭಯದಿಂದ ನಡುಗುತ್ತಿದ್ದ,

ಕೋಪಿಷ್ಠಳಾಗಿದ್ದ, ರಾಜಕುಮಾರಿಯಾದ, ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೊರಟೇಹೋದನು.

೫೩ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೫೪ನೆಯ ಸರ್ಗ

ಸೀತಾದೇವಿಯು ತನ್ನ ಆಭರಣಗಳನ್ನೂ ವಸ್ತ್ರವನ್ನೂ
ಕಪಿಗಳ ಮಧ್ಯದಲ್ಲಿ ಎಸೆದುದು : ಲಂಕೆಯನ್ನು ಸೇರಿದ
ರಾವಣನು ಸೀತೆಯನ್ನು ಅಂತಃಪುರದಲ್ಲಿಟ್ಟಿದ್ದು :
ಎಂಟು ಮಂದಿ ರಾಕ್ಷಸರನ್ನು ಜನಸ್ಥಾನದಲ್ಲಿ
ಗುಪ್ತಚಾರರನ್ನಾಗಿ ನಿಯಮಿಸಿದುದು

ಹ್ರಿಯಮಾಣಾ ತು ವೈದೇಹೀ ಕಂಚಿನ್ನಾಥಮಪಶ್ಯತೀ ।
ದದರ್ಶ ಗಿರಿಶೃಙ್ಗಸ್ಥಾನ್ಪಞ್ಚ ವಾನರಪುಂಗವಾನ್ ॥೧॥

ಹೀಗೆ ರಾವಣನಿಂದ ಅಪಹೃತಳಾದ ಸೀತಾದೇವಿಯು ರಕ್ಷಕರಾರನ್ನೂ ಕಾಣದೇ ಇದ್ದಾಗ–ಪರ್ವತದ ಶಿಖರದ ಮೇಲಿದ್ದ ಐವರು ವಾನರಶ್ರೇಷ್ಠರನ್ನು ನೋಡಿದಳು. ವಿಶಾಲಾಕ್ಷಿಯಾದ ಸೀತಾದೇವಿಯು ಅವರ ಮಧ್ಯದಲ್ಲಿ ಚಿನ್ನದ ಪ್ರಭೆಯಿಂದ ಕೂಡಿದ್ದ ರೇಷ್ಮೆಯ ಉತ್ತರೀಯವನ್ನೂ, ಶೋಭಾಯಮಾನವಾದ ಆಭರಣಗಳನ್ನೂ ಹಾಕಿದಳು. ಶ್ರೀರಾಮನಿಗೆ ಅವರೇನಾದರೂ ಈ ಗುರುತುಗಳನ್ನು ತೋರಿಸಿ ತನ್ನ ವಿಷಯವನ್ನು ಹೇಳಬಹುದೆಂಬ ಭಾವನೆಯು ಅವಳದಾಗಿದ್ದಿತು. ಉತ್ತರೀಯವನ್ನು ತೆಗೆದು ಅದರಲ್ಲಿ ಆಭರಣಗಳನ್ನು ಸುತ್ತಿ ಕಪಿಶ್ರೇಷ್ಠರ ಮಧ್ಯದಲ್ಲಿ ಹಾಕಿದ ಸೀತಾದೇವಿಯ ಆ ಕಾರ್ಯವನ್ನು ಲಂಕೆಗೆ ಹೋಗುವ ಸಂಭ್ರಮದಲ್ಲಿದ್ದ ರಾವಣನು ಗಮನಿಸಲಿಲ್ಲ. ಹಳದೀ ಬಣ್ಣದ ಕಣ್ಣುಗಳಿಂದ ಕೂಡಿದ್ದ ಆ ವಾನರಶ್ರೇಷ್ಠರು–' ಅಯ್ಯೋ ! ರಾಮ ! ಎಲ್ಲಿರುವೆ ? '– ಎಂದು ಮುಂತಾಗಿ ಕೂಗಿಕೊಳ್ಳುತ್ತಿದ್ದ ವಿಶಾಲಾಕ್ಷಿಯಾದ ಸೀತಾದೇವಿಯನ್ನು ರೆಪ್ಪೆಗಳೇ ಇಲ್ಲದಂತಿದ್ದ ಕಣ್ಣುಗಳಿಂದ ಎವೆಯಿಕ್ಕದೇ ನೋಡುತ್ತಿದ್ದರು.

ರಾಕ್ಷಸೇಶ್ವರನಾದ ರಾವಣನು ಅಳುತ್ತಿರುವ ವೈದೇಹಿಯನ್ನೆತ್ತಿಕೊಂಡು ಆಕಾಶಮಾರ್ಗದಿಂದ ಪಂಪಾಕ್ಷೇತ್ರವನ್ನು ದಾಟಿ ಲಂಕಾಪಟ್ಟಣದ ಕಡೆಗೆ

ಪ್ರಯಾಣಮಾಡಿದನು. ಪರಮಹೃಷ್ಟನಾದ ರಾವಣನು ತೀಕ್ಷ್ಣವಾದ ಹಲ್ಲುಗಳಿಂದ ಕೂಡಿರುವ ಮಹಾವಿಷಯುಕ್ತವಾದ ಹೆಣ್ಣುಹಾವನ್ನು ತೊಡೆಯ ಮೇಲೆ ಬಿಟ್ಟುಕೊಳ್ಳುವಂತೆ-ತನಗೆ ಮೃತ್ಯುಪ್ರಾಯಳಾಗಿದ್ದ ಸೀತಾದೇವಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಹೋದನು.



ರಾವಣನು ಸೀತೆಯನ್ನೆತ್ತಿಕೊಂಡು ಅಂತರಿಕ್ಷಮಾರ್ಗದಿಂದ ಹಲವಾರು ಅರಣ್ಯಗಳನ್ನೂ, ಸರೋವರಗಳನ್ನೂ, ಪರ್ವತಗಳನ್ನೂ, ಸರಸ್ಸುಗಳನ್ನೂ ಬಿಲ್ಲಿನಿಂದ ಹೊರಟ ಬಾಣದಂತೆ-ಬಹಳ ಕ್ಷಿಪ್ರವಾಗಿಯೂ ನೇರವಾಗಿಯೂ ದಾಟಿಕೊಂಡು ಪ್ರಯಾಣಮಾಡಿದನು. ತಿಮಿಂಗಿಲಗಳಿಗೂ ಮೊಸಳೆಗಳಿಗೂ ವಾಸಸ್ಥಾನವೂ, ನದಿಗಳಿಗೆ ಗಮ್ಯಸ್ಥಾನವೂ, ವರುಣನಿಗೆ ಅಕ್ಷಯವಾದ ವಾಸ

ಸ್ಥಾನವೂ ಆಗಿದ್ದ ಸಮುದ್ರವನ್ನು ಸಮೀಪಿಸಿ ಆಕಾಶಮಾರ್ಗದ ಮೂಲಕವಾಗಿ ಅದನ್ನೂ ದಾಟಿ ಮುಂದೆ ಹೋದನು. ವೈದೇಹಿಯನ್ನು ರಾವಣನು ಒಯ್ಯುತ್ತಿದ್ದಾಗ ಸಮುದ್ರವು ಸ್ತಬ್ಧವಾಯಿತು. ಸಂಭ್ರಮದಿಂದ ಅಲೆಗಳೇ ಮೇಲೇಳಲಿಲ್ಲ. ಮೀನುಗಳೂ ಮತ್ತು ದೊಡ್ಡ-ದೊಡ್ಡ ಸರ್ಪಗಳೂ ಬಂಧಿತವಾದಂತೆ ಸ್ತಬ್ಧವಾಗಿ ನಿಂತಲ್ಲಿಯೇ ನಿಂತಿದ್ದುವು. ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ ಸಿದ್ಧ-ಚಾರಣರು ಇಲ್ಲಿಗೆ ರಾವಣನ ಕೊನೆಯಾಯಿತು–ಎಂಬುದಾಗಿ ಹೇಳಿಕೊಳ್ಳುತ್ತಿದ್ದರು. ರಾವಣನಾದರೋ ರೂಪವತಿಯಾದ, ತನಗೆ ಮೃತ್ಯುಪ್ರಾಯಳಾದ, ಬಹಳವಾಗಿ ಚಡಪಡಿಸುತ್ತಿದ್ದ ಸೀತಾದೇವಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸುಂದರವಾಗಿ ಸಿಂಗಡಿಸಲ್ಪಟ್ಟ, ರಾಜಮಾರ್ಗಗಳುಳ್ಳ, ಜನಬಾಹುಳ್ಯವಿರುವ, ಮಹಾದ್ವಾರಗಳಿಂದ ಕೂಡಿದ್ದ ಲಂಕಾಪಟ್ಟಣವನ್ನು ಪ್ರವೇಶಿಸಿದನು. ಅನಂತರ ಅರಮನೆಗೆ ಹೋಗಿ–ಮಯನು ಮಾಯಾಮಯಿಯಾದ ಸ್ವಯಂಪ್ರಭೆಯನ್ನು ಬಿಲದಲ್ಲಿ ಬಚ್ಚಿಟ್ಟಿದ್ದಂತೆ–ರಾವಣನು ಕಾಡಿಗೆಯಂತೆ ಕಣ್ಣುಗಳುಳ್ಳ ಶೋಕ.ಮೋಹಗಳಿಂದ ಬಸವಳಿದಿದ್ದ ಸೀತಾದೇವಿಯನ್ನು ಅಂತಃಪುರದ ಒಂದು ಭಾಗದಲ್ಲಿರಿಸಿದನು. ಭಯಂಕರವಾಗಿ ಕಾಣುತ್ತಿದ್ದ ಪಿಶಾಚಿಗಳನ್ನು ಅವಳ ರಕ್ಷಣೆಗೆ ನಿಯಮಿಸಿ ಹೇಳಿದನು :

" ನನ್ನ ಅನುಮತಿಯಿಲ್ಲದೇ ಇವಳನ್ನು ನೋಡಲು ಸ್ತ್ರೀಯರನ್ನಾಗಲೀ ಪುರುಷರನ್ನಾಗಲೀ ಬಿಡಬಾರದು. ಮುತ್ತುಗಳನ್ನೂ, ರತ್ನಗಳನ್ನೂ, ಸುವರ್ಣಾಭರಣಗಳನ್ನೂ, ದಿವ್ಯವಾದ ವಸ್ತ್ರಗಳನ್ನೂ ಮತ್ತು ಇವಳು ಅಪೇಕ್ಷಿಸುವ ಇತರ ವಸ್ತುಗಳನ್ನೂ ಇವಳಿಗೆ ಯಥೇಚ್ಛವಾಗಿ ಕೊಡಿರಿ. ನಾನು ಬಯಸಿದೊಡನೆಯೇ ನನಗೆ ಬೇಕಾದ ವಸ್ತುಗಳನ್ನು ಯಾವ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಸಿದ್ಧಪಡಿಸುವಿರೋ–ಅದೇ ರೀತಿಯಲ್ಲಿ ಇವಳು ಕೇಳುವ ಯಾವುದೇ ವಸ್ತುವನ್ನೂ ಒಡನೆಯೇ ಒದಗಿಸಿಕೊಡಿರಿ. ತಿಳಿದೋ ತಿಳಿಯದೆಯೋ ಯಾವಳಾದರೂ ವೈದೇಹಿಗೆ ಅಪ್ರಿಯವಾದ ಮಾತುಗಳನ್ನು ಆಡಿದ್ದೇ ಆದರೆ–ಅಂತಹವರು ತಮ್ಮ ಬದುಕಿನಲ್ಲಿಯೇ ಆಸಕ್ತಿಯನ್ನು ತೊರೆದವರಾಗುತ್ತಾರೆ. "

ಪ್ರತಾಪವಂತನಾದ ರಾವಣೇಶ್ವರನು ರಾಕ್ಷಸಿಯರಿಗೆ ಹೀಗೆ ಆಜ್ಞಾಪಿಸಿ

ಮುಂದೇನು ಮಾಡಬೇಕೆಂಬುದನ್ನು ಯೋಚಿಸುತ್ತಾ ಅಂತಃಪುರದಿಂದ ಹೊರಬಂದನು. ಅಲ್ಲವನು ಮಹಾವೀರ್ಯರಾದ ಮಾಂಸಾಹಾರಿಗಳಾದ ಎಂಟು ಮಂದಿ ರಾಕ್ಷಸರನ್ನು ಕಂಡನು. ಬ್ರಹ್ಮನ ವರದಾನದಿಂದ ಮೋಹಿತನಾಗಿದ್ದ ರಾವಣನು ಆ ರಾಕ್ಷಸರನ್ನು ನೋಡಿದೊಡನೆಯೇ ಅವರ ಬಲ-ಪರಾಕ್ರಮಗಳನ್ನು ಪ್ರಶಂಸೆಮಾಡುತ್ತಾ ಹೇಳಿದನು :

" ರಾಕ್ಷಸಶ್ರೇಷ್ಠರೇ ! ನೀವೀಗಲೇ ನಾನಾವಿಧವಾದ ಆಯುಧಗಳನ್ನು ತೆಗೆದುಕೊಂಡು ಹಿಂದೆ ಖರನ ರಾಜಧಾನಿಯಾಗಿದ್ದು ಈಗ ಶೂನ್ಯಸ್ಥಾನವಾಗಿರುವ ಜನಸ್ಥಾನಕ್ಕೆ ಪ್ರಯಾಣಮಾಡಿರಿ. ನಿಮ್ಮ ಬಲವನ್ನೂ ಪೌರುಷವನ್ನೂ ಆಶ್ರಯಿಸಿ ಭಯವೆಂಬುದನ್ನು ಸಂಪೂರ್ಣವಾಗಿ ಪರಿತ್ಯಜಿಸಿ, ರಾಕ್ಷಸರಿಂದ ವಿಹೀನವಾಗಿ ಈಗ ಶೂನ್ಯಸ್ಥಿತಿಯಲ್ಲಿರುವ ಜನಸ್ಥಾನದಲ್ಲಿ ನೆಲೆಸಿರಿ. ನಾನಲ್ಲಿ ಸ್ಥಾಪಿಸಿದ್ದ ಅಪಾರವಾದ ಸೈನ್ಯವನ್ನೂ ಮಹಾವೀರ್ಯನಾಗಿದ್ದ ಖರನನ್ನೂ ದೂಷಣನ ಸಮೇತವಾಗಿ ರಾಮನು ಬಾಣಗಳಿಂದ ಸಂಹರಿಸಿದ್ದಾನೆ. ಈ ಕಾರಣದಿಂದಲೇ ನನಗೆ ಹಿಂದೆಂದೂ ಬಾರದ ಕೋಪವುಂಟಾಗಿದೆ. ನನ್ನ ಧೈರ್ಯವನ್ನು ಮೆಟ್ಟಿ ಕೋಪವೇ ಮಿತಿಮೀರಿ ಹೋಗುತ್ತಿದೆ. ರಾಮನ ಮೇಲೆ ನನಗೆ ಸುದಾರುಣವಾದ ವೈರವು ಹುಟ್ಟಿಕೊಂಡಿದೆ. ಪರಮಶತ್ರುವಿನ ಮೇಲೆ ಹುಟ್ಟಿರುವ ಆ ನನ್ನ ದ್ವೇಷವನ್ನು ಅವನನ್ನು ಧ್ವಂಸಮಾಡುವುದರ ಮೂಲಕ ತೀರಿಸಿಕೊಳ್ಳಬೇಕೆಂದಿದ್ದೇನೆ. ಯುದ್ಧದಲ್ಲಿ ಶತ್ರುವನ್ನು ಸಂಹರಿಸುವವರೆಗೂ ನನಗೆ ನಿದ್ರೆಯೇ ಬಾರದು. ಖರ-ದೂಷಣರನ್ನು ಸಂಹರಿಸಿರುವ ಆ ರಾಮುನನ್ನು ನಾನೀಗಲೇ ಸಂಹರಿಸಿ–ಸಂಪತ್ತನ್ನು ಪಡೆದ ದರಿದ್ರನಂತೆ–ಸುಖವನ್ನು ಹೊಂದುವೆನು. ನನ್ನ ಆಜ್ಞೆಯಂತೆ ಜನಸ್ಥಾನದಲ್ಲಿ ವಾಸಮಾಡುವ ನೀವು ರಾಮನ ಸುದ್ದಿಯನ್ನು ಪದೇಪದೇ ತಿಳಿಸುತ್ತಿರಬೇಕು. ಅವನೇನು ಮಾಡುತ್ತಿದ್ದಾನೆ ? ಎಲ್ಲಿಗೆ ಹೋಗುತ್ತಾನೆ ? ಯಾರೊಡನೆ ಸಖ್ಯ ಬೆಳೆಸುತ್ತಾನೆ ?–ಈ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿ ತಿಳಿದು ನನಗೆ ತಿಳಿಸುತ್ತಲೇ ಇರಬೇಕು. ಜನಸ್ಥಾನದಲ್ಲಿ ಎಲ್ಲ ರಾಕ್ಷಸರೂ ಬಹಳ ಜಾಗರೂಕತೆಯಿಂದ ನಡೆದುಕೊಳ್ಳಬೇಕು. ರಾಘವನನ್ನು ಸಂಹರಿಸುವ ಸಲುವಾಗಿ ಎಡೆಬಿಡದೇ ಪ್ರಯತ್ನಿಸುವುದು ನಿಮ್ಮ ಮುಖ್ಯಕರ್ತವ್ಯವಾಗಿದೆ. ನಾನು ಹಿಂದೆ ನಡೆದ ಅನೇಕಯುದ್ಧಗಳಲ್ಲಿ ನಿಮ್ಮ ಶೌರ್ಯ-ಪರಾಕ್ರಮ

ಗಳನ್ನು ಮನಗಂಡಿದ್ದೇನೆ. ಆದುದರಿಂದಲೇ ಮಹಾಬಲಿಷ್ಠರಾದ ನಿಮ್ಮನ್ನು ಜನಸ್ಥಾನಕ್ಕೆ ಕಳುಹಿಸುತ್ತಿದ್ದೇನೆ."

ಮಹತ್ತ್ವಪೂರ್ಣವಾದ ಮತ್ತು ಪ್ರಶಂಸಾಯುಕ್ತವಾದ ಪ್ರಿಯೋಕ್ತಿಗಳನ್ನು ರಾವಣನಿಂದ ಕೇಳಿ ಆ ಎಂಟು ಮಂದಿ ರಾಕ್ಷಸರೂ ರಾವಣನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಎಲ್ಲರೂ ಒಟ್ಟಾಗಿ ಲಂಕೆಯನ್ನು ಬಿಟ್ಟು ಯಾರಿಗೂ ತಿಳಿಯದಂತೆ ಜನಸ್ಥಾನಕ್ಕೆ ಹೊರಟುಹೋದರು.

ಸೀತೆಯನ್ನು ನೋಡಿದ ಮಾತ್ರದಿಂದಲೇ ಪರಮಹೃಷ್ಟನಾಗಿದ್ದ ರಾವಣನು ಅವಳನ್ನು ಲಂಕೆಗೆ ಕರೆತಂದು-ಅದರ ಪರಿಣಾಮವಾಗಿ ರಾಮನೊಡನೆ ಮಹಾದ್ವೇಷವನ್ನು ಕಟ್ಟಿಕೊಂಡರೂ-ಅಜ್ಞಾನದಿಂದ ಸೀತೆಯೇ ತನಗೆ ಮೃತ್ಯುವಾಗುವಳೆಂಬುದನ್ನರಿಯದೇ ತನ್ನ ಕಾರ್ಯದ ಸಾಧನೆಯಾಯಿತೆಂದು ಸಂತೋಷಪಟ್ಟನು.

೫೪ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ೫೫ನೆಯ ಸರ್ಗ

## ರಾವಣನು ಸೀತೆಗೆ ತನ್ನ ಅಂತಃಪುರವೆಲ್ಲವನ್ನೂ ತೋರಿಸಿದುದು: ಒಲಿಯುವಂತೆ ಪುನಃ ಅವಳನ್ನು ಒತ್ತಾಯಿಸಿದುದು

ಸಂದಿಶ್ಯ ರಾಕ್ಷಸಾನ್ಘೋರಾನ್ರಾವಣೋಽಷ್ಟೌ ಮಹಾಬಲಾನ್ ।
ಆತ್ಮಾನಂ ಬುದ್ಧಿವೈಕ್ಲವ್ಯಾತ್ಕೃತಕೃತ್ಯಮಮನ್ಯತ ॥೧॥

ರಾವಣನು ಘೋರರೂಪಿಗಳಾದ, ಮಹಾಬಲರಾದ ಎಂಟು ಮಂದಿ ರಾಕ್ಷಸರನ್ನು ಜನಸ್ಥಾನಕ್ಕೆ ಹೋಗುವಂತೆ ನಿರ್ದೇಶಿಸಿ, ಬುದ್ಧಿಯ ವೈಪರೀತ್ಯದಿಂದ–' ನಾನು ಕೃತಕೃತ್ಯನಾದೆನು ' ' ಕಾರ್ಯವನ್ನು ಸಾಧಿಸಿದೆನು '– ಎಂದುಕೊಂಡನು. ಮನ್ಮಥನ ಬಾಣಗಳಿಂದ ಪೀಡಿತನಾಗಿದ್ದ ರಾವಣನು ವೈದೇಹಿಯನ್ನೇ ಸರ್ವದಾ ಚಿಂತಿಸುತ್ತಾ ಅವಳನ್ನು ಕಾಣಲು ಅವಸರಪಡುತ್ತಾ ರಮ್ಯವಾದ ಅಂತಃಪುರಕ್ಕೆ ಹೋಗಿ ರಾಕ್ಷಸಿಯರ ಮಧ್ಯದಲ್ಲಿ ದುಃಖದಲ್ಲಿಯೇ ಮುಳುಗಿಹೋಗಿದ್ದ ಸೀತಾದೇವಿಯನ್ನು ಕಂಡನು.

ಆ ಸಮಯದಲ್ಲಿ ಸೀತಾದೇವಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿ

ದ್ದಿತು. ಅವಳು ಅತ್ಯಂತ ದೀನಳಾಗಿದ್ದಳು. ಸಮುದ್ರದಲ್ಲಿ ಬಿರುಗಾಳಿಗೆ ಸಿಕ್ಕಿ ಮುಳುಗಿ ಹೋಗುವುದರಲ್ಲಿರುವ ನೌಕೆಯಂತಿದ್ದಳು. ಜಿಂಕೆಗಳ ಗುಂಪಿನಿಂದ ತಪ್ಪಿಸಿಕೊಂಡು ನಾಯಿಗಳಿಂದ ಸುತ್ತುವರಿಯಲ್ಪಟ್ಟಿರುವ ಹೆಣ್ಣು ಜಿಂಕೆಯಂತಿದ್ದಳು. ತಲೆಯನ್ನು ತಗ್ಗಿಸಿಕೊಂಡಿದ್ದಳು. ಇಂತಹ ದಯನೀಯವಾದ ಸ್ಥಿತಿಯಲ್ಲಿದ್ದ ಜಾನಕಿಯ ಬಳಿಗೆ ರಾವಣನು ಬಂದನು.

ಶೋಕಾಧಿಕ್ಯದಿಂದ ಅತ್ಯಂತದೀನಳಾಗಿ, ಪರಾಧೀನೆಯಾಗಿದ್ದ ಅವಳಿಗೆ ದೇವಗೃಹದಂತೆಯೇ ಇದ್ದ ಅರಮನೆಯೆಲ್ಲವನ್ನೂ ಬಲಾತ್ಕಾರಪೂರ್ವಕವಾಗಿ ತೋರಿಸಲು ಹೊರಟನು. ಮನಸ್ಸಿಲ್ಲದಿದ್ದರೂ ಸೀತೆಯು ರಾವಣನ ಹಿಂದೆ ಹೋಗುತ್ತಿದ್ದಳು.

ಅರಮನೆಯ ಪ್ರಾಕಾರವು ಸುಂದರವಾದ ಮನೆಗಳಿಂದಲೂ ರಾಜಗೃಹಗಳಿಂದಲೂ ನಿಬಿಡವಾಗಿದ್ದಿತು. ಸಾವಿರಾರು ಮಂದಿ ಸ್ತ್ರೀಯರು ಅಲ್ಲಿನ ರಾಜಗೃಹಗಳಲ್ಲಿ ವಾಸಮಾಡುತ್ತಿದ್ದರು. ನಾನಾವಿಧವಾದ ಪಕ್ಷಿಗಳ ಸಮೂಹಗಳು ಅಲ್ಲಲ್ಲಿಯೇ ಗೂಡುಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದುವು. ನಾನಾವಿಧವಾದ ರತ್ನದ ರಾಶಿಗಳು ಆ ಅರಮನೆಗಳಲ್ಲಿದ್ದುವು. ಚಿನ್ನ-ಸ್ಫಟಿಕ ಮತ್ತು ಬೆಳ್ಳಿಗಳಿಂದ ಮಾಡಲ್ಪಟ್ಟ, ವಜ್ರ-ವೈಡೂರ್ಯಗಳಿಂದ ಚಿತ್ರಿತವಾದ ಕಣ್ಣಿಗೆ ಹಬ್ಬವನ್ನುಂಟುಮಾಡುವ ಅನೇಕ ಕಂಬಗಳು ರಾವಣನ ಅರಮನೆಯಲ್ಲಿದ್ದುವು. ಹೊರಬಾಗಿಲುಗಳಲ್ಲಿ ಚಿನ್ನದ ತೋರಣಗಳಿದ್ದುವು. ಅಲ್ಲಿಯೇ ಇದ್ದ ಸುವರ್ಣಮಯವಾದ ಮತ್ತು ಚಿತ್ರಿತವಾಗಿದ್ದ ಸೋಪಾನವನ್ನು ರಾವಣನು ಸೀತೆಯೊಡನೆ ಹತ್ತಿದನು. ಅಲ್ಲಿ ದಂತದ ಮತ್ತು ಬೆಳ್ಳಿಯ ಕಿಟಕಿಗಳಿದ್ದುವು. ಸುವರ್ಣಮಯವಾದ ಬಲೆಗಳಿಂದ ಆ ಕಿಟಕಿಗಳನ್ನು ಅಲಂಕರಿಸಿದ್ದರು. ಅಂತಹ ನೂರಾರು ಕಿಟಕಿಗಳಿರುವ ರಾಜಗೃಹಗಳ ಸಾಲು ನೋಡಲು ಆಪ್ಯಾಯಮಾನವಾಗಿ ಕಾಣುತ್ತಿದ್ದಿತು.

ಅರಮನೆಯ ಎಲ್ಲೆಡೆಗಳಲ್ಲಿಯೂ ಹೊಳೆಯುವ ಅಮೃತಶಿಲೆಯ ಹಾಸುಬಿಲ್ಲೆಗಳಿಂದ ಅಲಂಕೃತವಾಗಿದ್ದ ನೆಲವನ್ನು ದಶಗ್ರೀವನು ಗವಾಕ್ಷಿಯ ಮೂಲಕವಾಗಿ ಸೀತಾದೇವಿಗೆ ತೋರಿಸಿದನು. ಸರೋವರಗಳನ್ನೂ ನಾನಾವಿಧವಾದ ಪುಷ್ಪಗಳಿಂದ ಸಮಾವೃತವಾಗಿದ್ದ ಚಚ್ಚೌಕದ ಕೊಳಗಳನ್ನೂ

ಶೋಕಪರಾಯಣೆಯಾಗಿದ್ದ* ಸೀತೆಗೆ ತೋರಿಸಿದನು. ಪಾಪಾತ್ಮನಾದ ರಾವಣನು ಅತ್ಯಂತಶ್ರೇಷ್ಠವಾಗಿದ್ದ, ನಯನಮನೋಹರವಾಗಿದ್ದ, ದಿವ್ಯವಾಗಿದ್ದ ತನ್ನ ರಾಜಭವನವನ್ನು ಸಂಪೂರ್ಣವಾಗಿ ಸೀತಾದೇವಿಗೆ ತೋರಿಸಿ ಅವಳಲ್ಲಿ ಆಸೆಯನ್ನು ಮೂಡಿಸುವ ಬಯಕೆಯಿಂದ ಹೇಳಿದನು :

"ಸೀತೆ ! ನನ್ನ ರಾಜ್ಯದಲ್ಲಿ ಮುದುಕರನ್ನೂ ಬಾಲಕರನ್ನೂ ಬಿಟ್ಟು ಮೂವತ್ತೆರಡು ಕೋಟಿ ರಾಕ್ಷಸರಿದ್ದಾರೆ. ಭಯಂಕರವಾದ ಕಾರ್ಯಗಳನ್ನು ಮಾಡುವ ಅವರೆಲ್ಲರಿಗೂ ನಾನೇ ಪ್ರಭುವಾಗಿದ್ದೇನೆ. ನಾಮುಂದು; ತಾಮುಂದು–ಎಂದು ಹೇಳುತ್ತಾ ಕಾರ್ಯಗಳಲ್ಲಿ ನಿರತರಾಗಿರುವ ಒಂದು ಸಾವಿರ ಮಂದಿ ರಾಕ್ಷಸರು ನನ್ನೊಬ್ಬನ ಸೇವೆಯಲ್ಲಿಯೇ ಸದಾ ನಿರತರಾಗಿರುವರು. ಇನ್ನು ಮುಂದೆ ಈ ರಾಜ್ಯಾಡಳಿತವೂ ಮತ್ತು ನನ್ನ ಜೀವಿತವೂ ನಿನ್ನಲ್ಲಿಯೇ ಪ್ರತಿಷ್ಠಿತವಾಗುತ್ತವೆ. ವಿಶಾಲಾಕ್ಷಿಯೇ ! ನಿಶ್ಚಯವಾಗಿ ಹೇಳುವುದಾದರೆ–ನೀನು ನನ್ನ ಪ್ರಾಣಗಳಿಗಿಂತಲೂ ಹೆಚ್ಚಿನವಳಾಗಿರುವೆ. ನನ್ನ ಬಳಿ ನೂರಾರು ಉತ್ತಮಸ್ತ್ರೀಯರಿದ್ದಾರೆ. ಆದರೂ ನಿನ್ನನ್ನು ನಾನು ಪರಿಗ್ರಹಿಸುತ್ತೇನೆ. ನೀನು ನನ್ನ ಭಾರ್ಯೆಯಾಗು. ಆ ನನ್ನ ಪತ್ನಿಯರೆಲ್ಲರಿಗೂ ಸ್ವಾಮಿನಿಯಾಗಿರು. ಬೇರೆಯ ವಿಧವಾಗಿ ಯೋಚಿಸುವುದರಿಂದ ಯಾವ ಪ್ರಯೋಜನವಿದೆ ? ರಾಮನಂತೂ ನಿನಗೆ ಸಿಕ್ಕುವುದಿಲ್ಲ. ಆದುದರಿಂದ ನಿನಗೆ ಹಿತಕರವಾದ ಈ ನನ್ನ ಮಾತನ್ನು ಆದರಿಸು. ನನ್ನನ್ನು ಸೇವಿಸು. ಕಾಮದಿಂದ ಪರಿತಪಿಸುತ್ತಿರುವ ನನ್ನ ವಿಷಯದಲ್ಲಿ ಪ್ರಸನ್ನಳಾಗು. ಯಾರೂ ಇಲ್ಲಿಗೆ ಬಂದು ನಿನ್ನನ್ನು ಕರೆದುಕೊಂಡು ಹೋಗಲಾರರು. ಈ ಲಂಕಾ ಪಟ್ಟಣವು ಸಮುದ್ರದಿಂದ ಸುತ್ತುವರಿಯಲ್ಪಟ್ಟಿದ್ದು ನೂರು ಯೋಜನಗಳಷ್ಟು ವಿಸ್ತಾರವಾಗಿದೆ. ಆದುದರಿಂದ ಇದನ್ನು ಇಂದ್ರಸಹಿತರಾದ ಸುರಾಸುರರೂ

---

* ಶೋಕಪರಾಯಣಾಂ ಸೀತಾಂ ಎಂದೂ ಇಲ್ಲಿ ವಾಲ್ಮೀಕಿಗಳು ಹೇಳಿದ್ದಾರೆ. ಮನಸ್ಸನ್ನು ತಣಿಸುವ, ಕಣ್ಣುಗಳಿಗೆ ಹಬ್ಬವನ್ನುಂಟುಮಾಡುವ ಅದ್ಭುತವಾದ, ಆಶ್ಚರ್ಯಕರವಾದ, ದೃಶ್ಯಗಳನ್ನು ರಾವಣನು ತೋರಿಸುತ್ತಿದ್ದರೂ ಸೀತೆಯ ಮನಸ್ಸು ಅವುಗಳ ಕಡೆಗಿರಲಿಲ್ಲ. ಸೂತ್ರದ ಗೊಂಬೆಯಂತೆ ಬಲಾತ್ಕಾರದಿಂದ ರಾವಣನ ಹಿಂದೆ ಹೋಗುತ್ತಿದ್ದಳು. ಮನಸ್ಸು ರಾಮನನ್ನೇ ನೆನೆಯುತ್ತಿದ್ದು ಶೋಕಾಭಿಭೂತವಾಗಿದ್ದಿತು–ಎಂಬುದನ್ನು 'ಶೋಕಪರಾಯಣಾಂ' ಎಂಬ ವಿಶೇಷಣವು ಸೂಚಿಸುತ್ತದೆ.

ಆಕ್ರಮಿಸಲಾರರು. ದೇವತೆಗಳಲ್ಲಾಗಲೀ, ಯಕ್ಷ-ಗಂಧರ್ವರಲ್ಲಾಗಲೀ, ಪಕ್ಷಿಗಳಲ್ಲಾಗಲೀ-ನನ್ನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿರುವವರನ್ನು ನಾನು ಇದುವರೆಗೂ ಕಂಡಿಲ್ಲ. ದೇವ-ದಾನವರಲ್ಲಿಯೇ ಇಲ್ಲದಿರುವಾಗ ನಿಕೃಷ್ಟರಾದ ಮನುಷ್ಯರ ವಿಷಯವಾಗಿ ಹೇಳುವ ಕಾರಣವೇ ಇಲ್ಲ. ಹೀಗಿರುವಾಗ ರಾಜ್ಯದಿಂದ ಭ್ರಷ್ಟನಾಗಿರುವ, ದೀನನಾಗಿರುವ, ತಪಸ್ಸಿನಲ್ಲಿ ನಿರತನಾಗಿರುವ, ಪದಾತಿಯಾಗಿರುವ, ಅಲ್ಪಬಲನಾದ, ಮನುಷ್ಯಮಾತ್ರದವನಾದ ರಾಮನನ್ನು ಕಟ್ಟಿಕೊಂಡು ಏನು ಮಾಡುವೆ? ಇನ್ನವನು ನಿನಗೆ ಸಿಕ್ಕುವಂತೆಯೂ ಇಲ್ಲವಲ್ಲ! ಆದುದರಿಂದ ನೀನು ನನ್ನನ್ನೇ ಸೇವಿಸು. ನಾನು ನಿನಗೆ ಅನುರೂಪನಾದ ಪತಿಯಾಗಿದ್ದೇನೆ. ಭಯಸ್ವಭಾವದವಳೇ! ಯೌವನವು ಶಾಶ್ವತವಲ್ಲ. ಆದುದರಿಂದ ಅದು ವ್ಯರ್ಥವಾಗಿ ಹೋಗಲು ಅವಕಾಶವಾಗದಂತೆ ನನ್ನೊಡನೆ ಸ್ವೇಚ್ಛೆಯಿಂದ ವಿಹರಿಸು. ಪುನಃ ನಿನಗೆ ರಾಘವನ ದರ್ಶನವಾಗುವುದೆಂದು ಮನಸ್ಸಿನಲ್ಲಿಯೂ ಯೋಚಿಸಬೇಡ. ಅವನಿಲ್ಲಿಗೆ ಬರಲು ಅವನಲ್ಲಿ ವಿಶೇಷವಾದ ಯಾವ ಶಕ್ತಿಯಿದೆ? ಇಲ್ಲಿಗೆ ಬರುವುದನ್ನು ಅವನು ಮನಸ್ಸಿನಿಂದಲೂ ಕಲ್ಪಿಸಿಕೊಳ್ಳಲಾರನು.

ವೈದೇಹಿ! ಬಿರುಸಾದ ಗಾಳಿಯನ್ನು ಆಕಾಶದಲ್ಲಿ ಹಗ್ಗಗಳಿಂದ ಕಟ್ಟಿಹಾಕಲು ಸಾಧ್ಯವಿಲ್ಲ. ಧಗ-ಧಗಿಸುತ್ತಿರುವ ಅಗ್ನಿಯ ಜ್ವಾಲೆಗಳನ್ನು ಕೈಯಿಂದ ಹಿಡಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಹಾಗೆಯೇ ನನ್ನ ಬಾಹುಗಳಿಂದ ಪರಿಪಾಲಿತಳಾಗಿರುವ ನಿನ್ನನ್ನು ಪರಾಕ್ರಮದಿಂದ ಕರೆದೊಯ್ಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಮೂರು ಲೋಕಗಳಲ್ಲಿಯೂ ಅಂತಹ ವೀರನೊಬ್ಬನಿರುವುದನ್ನು ನಾನು ಇದುವರೆಗೂ ಕಂಡಿರುವುದಿಲ್ಲ.

ಸೀತೆ! ಆದುದರಿಂದ ಅತ್ಯಂತವಿಶಾಲವಾಗಿರುವ ಈ ಲಂಕಾರಾಜ್ಯವನ್ನು ಇನ್ನು ಮುಂದೆ ನೀನೇ ಪರಿಪಾಲಿಸು. ನನ್ನಂತಹ ಅನೇಕರಾಕ್ಷಸಶ್ರೇಷ್ಠರೂ, ದೇವತೆಗಳೂ ಮತ್ತು ಚರಾಚರಪ್ರಾಣಿಗಳೂ ನಿನ್ನ ಸೇವಕರಾಗಿರುತ್ತಾರೆ. ಪಟ್ಟಾಭಿಷೇಕದ ಸಮಯದಲ್ಲಿ ಪವಿತ್ರೋದಕಗಳ ಅಭಿಷೇಕದಿಂದ ತೋಯ್ದುಹೋಗುವ ನೀನು ಸಂತುಷ್ಟಳಾಗು. ನನ್ನನ್ನೂ ಸಂತೋಷಗೊಳಿಸು. ನೀನು ಹಿಂದಿನ ಜನ್ಮದಲ್ಲಿ ಮಾಡಿದ್ದ ದುಷ್ಕಾರ್ಯದ

ಫಲವು ಈವರೆಗಿನ ವನವಾಸದಿಂದ ಪರಿಹಾರವಾಗಿದೆ. ನೀನು ಮಾಡಿರುವ ಸತ್ಕಾರ್ಯಕ್ಕೆ ತಕ್ಕುದಾದ ಶುಭಫಲವನ್ನು ನೀನಿಲ್ಲಿ ಪಡೆಯುವೆ. ಈ ನನ್ನ ಅರಮನೆಯಲ್ಲಿ ದಿವ್ಯಗಂಧಯುಕ್ತವಾದ ಸಕಲವಿಧವಾದ ಪುಷ್ಪಮಾಲಿಕೆಗಳೂ ಶ್ರೇಷ್ಠವಾದ ಒಡವೆ-ವಸ್ತುಗಳೂ ಇವೆ. ಅವೆಲ್ಲವನ್ನೂ ನೀನು ನನ್ನೊಡನೆ ಉಪಭೋಗಿಸು. ಸುಂದರವಾದ ಕಟಿಪ್ರದೇಶವುಳ್ಳವಳೇ! ವೈದೇಹಿ! ಸೂರ್ಯಸದೃಶವಾದ ಪುಷ್ಪಕವೆಂಬ ವಿಮಾನವು ನಮ್ಮಣ್ಣನಿಗೆ ಸೇರಿದ್ದಿತು. ಅವನನ್ನು ಪರಾಕ್ರಮದಿಂದ ಜಯಿಸಿ ಅದನ್ನು ನಾನು ತಂದಿದ್ದೇನೆ. ಆ ವಿಮಾನವು ಬಹಳ ವಿಶಾಲವಾಗಿದೆ. ಅತ್ಯಂತ ರಮಣೀಯವಾಗಿಯೂ ಇದೆ. ಮನಸ್ಸಿನಷ್ಟೇ ವೇಗವಾಗಿ ಅದು ಹೋಗಬಲ್ಲುದು. ಅದರಲ್ಲಿ ನೀನು ನನ್ನೊಡನೆ ಸುಖದಿಂದ ವಿಹರಿಸಬಹುದಾಗಿದೆ. ಚಾರುಮುಖಿಯೇ! ನಿನ್ನ ಮುಖವು ನಿಶ್ಚಯವಾಗಿಯೂ ಕಮಲಸದೃಶವಾಗಿದೆ. ಶುಭ್ರವಾಗಿದೆ. ಬಹಳ ಸುಂದರವಾಗಿಯೂ ಇದೆ. ಆದರೆ ಅದೀಗ ಶೋಕಪೀಡಿತವಾಗಿರುವುದರಿಂದ ಅಷ್ಟು ಚೆನ್ನಾಗಿ ಪ್ರಕಾಶಿಸುತ್ತಿಲ್ಲ."

ಕಾಮಾಭಿಭೂತನಾಗಿದ್ದ ರಾವಣನು ನಿರ್ಲಜ್ಜನಾಗಿ ಹೀಗೆ ಹೇಳುತ್ತಿರಲು- ಸಾಧ್ವೀಮಣಿಯಾದ ಸೀತಾದೇವಿಯು ಚಂದ್ರಸದೃಶವಾದ ಸುಂದರ ಮುಖವನ್ನು ಸೀರೆಯ ಸೆರಗಿನಿಂದ ಮುಚ್ಚಿಕೊಂಡು ಕಣ್ಣೀರಿಟ್ಟಳು. ರಾಮನ ವಿಷಯವಾಗಿಯೇ ಚಿಂತಿಸುತ್ತಿದ್ದ, ಅದರಿಂದಲೇ ಕುಂದಿದ ಕಾಂತಿಯುಳ್ಳವಳಾಗಿದ್ದ, ಬಹಳ ಅಸ್ವಸ್ಥಳಾಗಿರುವವಳಂತೆ ಕಾಣುತ್ತಿದ್ದ ಸೀತಾದೇವಿಗೆ ಪಾಪಿಷ್ಠನಾದ ರಾವಣನು ಪುನಃ ಹೇಳಿದನು :

"ವಿದೇಹನಂದಿನಿ! ನನ್ನನ್ನು ಸೇರಿದರೆ ಧರ್ಮಲೋಪದ ಕಾರ್ಯವಾಗುವುದೆಂದು ಯೋಚಿಸಿ ನೀನು ನಾಚುತ್ತಿರಬಹುದು. ನನ್ನೊಡನೆ ಆಗಲಿರುವ ಈ ಸ್ನೇಹಸಂಬಂಧವು ದೈವಿಕವಾಗಿದೆ. ಸ್ತ್ರೀಯರನ್ನು ಬಲಾತ್ಕಾರವಾಗಿ ಅಪಹರಿಸಿಕೊಂಡು ವಿವಾಹಮಾಡಿಕೊಳ್ಳುವುದು ರಾಕ್ಷಸರಿಗೆ ಋಷಿಪ್ರೋಕ್ತವಾದ ಧರ್ಮವೇ ಆಗಿದೆ.*

---

[1] ಒಬ್ಬರು ಈ ಶ್ಲೋಕಕ್ಕೆ ಹೀಗೂ ವ್ಯಾಖ್ಯಾನಿಸಿದ್ದಾರೆ. 'ನಿನ್ನನ್ನು ಹೊಂದುವ ನಾನು ಸಾಮಾನ್ಯಪುರುಷನಲ್ಲ. ಚತುರ್ಮುಖದೇವನ ವಂಶದವನು. ಋಷಿಯಾದ

ಏತೌ ಪಾದೌ ಮಯಾ ಸ್ನಿಗ್ಧೌ ಶಿರೋಭಿಃ ಪರಿಪೀಡಿತೌ ।
ಪ್ರಸಾದಂ ಕುರು ಮೇ ಕ್ಷಿಪ್ರಂ ವಶ್ಯೋ ದಾಸೋಽಹಮಸ್ಮಿ ತೇ ॥
ಇಮಾಃ ಶೂನ್ಯಾ ಮಯಾ ವಾಚಃ ಶುಷ್ಯಮಾಣೇನ ಭಾಷಿತಾಃ ।
ನ ಚಾಪಿ ರಾವಣಃ ಕಾಂಚಿನ್ಮೂರ್ಧ್ನಾ ಸ್ತ್ರೀಂ ಪ್ರಣಮೇತ ಹ ॥೩೬॥

ದೇವೀ ! ನಿನ್ನ ಈ ಸುಕೋಮಲವಾದ ಪಾದಗಳ ಮೇಲೆ ನನ್ನ ಈ ಹತ್ತು ತಲೆಗಳನ್ನೂ ಇಟ್ಟು ಪ್ರಾರ್ಥಿಸುತ್ತೇನೆ. ಬೇಗ ಪ್ರಸನ್ನಳಾಗು. ನಾನು ನಿನ್ನ ಅಧೀನನಾಗಿ ದಾಸಾನುದಾಸನಾಗಿರುತ್ತೇನೆ. ಕಾಮಸಂತಪ್ತನಾಗಿರುವ ನಾನು ನಿನ್ನನ್ನು ಪಡೆಯುವ ಸಲುವಾಗಿ ಇಂತಹ ನಿಹೀನವಾದ ಮಾತುಗಳನ್ನು ಆಡುತ್ತಿದ್ದೇನೆ. ರಾವಣನು ಯಾವ ಹೆಂಗಸಿಗೇ ಆಗಲೀ–ತಲೆಬಾಗಿ ನಮಿಸುವವನಲ್ಲ."

ಕಾಲವಶನಾಗಿದ್ದ ರಾವಣನು ಸೀತೆಗೆ ಹೀಗೆ ಹೇಳಿ ಅವಳು ತನ್ನವಳೇ ಆಗಿಹೋದಳೆಂದು ಭಾವಿಸಿಕೊಂಡನು.

೫೫ನೆಯ ಸರ್ಗವು ಮುಗಿಯಿತು.

---

ವಿಶ್ರವಸ್ಸಿನ ಪುತ್ರನು ; ದೇವನಿಷ್ಯನ್ದಃ = ದೇವಸ್ಯ ಚತುರ್ಮುಖಸ್ಯ ವಂಶಜಃ। ಆರ್ಷಃ = ಋಷೇಃ ವಿಶ್ರವಸಃ ಪುತ್ರಃ ॥

ವಿದ್ಯಾವಂತರಾದರೂ ಕೆಲವು ಸಮಯಗಳಲ್ಲಿ ತಾವು ಮಾಡಿದ ಕುತ್ಸಿತವಾದ ಕಾರ್ಯಗಳಿಗೆ ಧರ್ಮಶಾಸ್ತ್ರದ ಬಣ್ಣಹಚ್ಚುವರೆಂಬುದಕ್ಕೆ ರಾವಣನ ಈ ಮಾತು ನಿದರ್ಶನವಾಗಿದೆ. ಕನ್ಯೆಯಾದವಳನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋಗುವುದು ರಾಕ್ಷಸವಿವಾಹವೆನಿಸಿಕೊಳ್ಳುತ್ತದೆ. 'ಬಲಾತ್ಕಾರೇಣ ರಾಕ್ಷಸಃ' ಆದರೆ ರಾಕ್ಷಸ ವಿವಾಹವು ನಿಂದ್ಯವಾದುದು. ಮೇಲಾಗಿ ಈ ಪ್ರಕರಣದಲ್ಲಿ ಸೀತೆಯು ಕನ್ಯೆಯಲ್ಲ, ಪರಪುರುಷನ ಧರ್ಮಪತ್ನಿಯು. ಅಂತಹವಳನ್ನು ಸೆಳೆದುಕೊಂಡುಬಂದು ಬಲಾತ್ಕಾರ ಪೂರ್ವಕವಾಗಿ ಮದುವೆಯಾಗುವುದನ್ನು ಯಾವ ಧರ್ಮಶಾಸ್ತ್ರವೂ ಅನುಮೋದಿಸುವುದಿಲ್ಲ.

## ಸೀತೆಯು ರಾಮನ ಪರಾಕ್ರಮವನ್ನೂ ಅವನಲ್ಲಿ ತನಗಿರುವ ಅನನ್ಯವಾದ ಅನುರಾಗವನ್ನೂ ವಿವರಿಸುತ್ತಾ ರಾವಣನನ್ನು ಧಿಕ್ಕರಿಸಿದುದು : ರಾವಣನ ಆಜ್ಞೆಯಂತೆ ರಾಕ್ಷಸಿಯರು ಸೀತೆಯನ್ನು ಅಶೋಕವನಕ್ಕೊಯ್ದು ಹಿಂಸಿಸಿದುದು

ಸಾ ತಥೋಕ್ತಾ ತು ವೈದೇಹೀ ನಿರ್ಭಯಾ ಶೋಕಕರ್ಶಿತಾ ।
ತೃಣಮನ್ತರತಃ ಕೃತ್ವಾ ರಾವಣಂ ಪ್ರತ್ಯಭಾಷತ ॥೧॥

ರಾವಣನು ಹೀಗೆ ಹೇಳಲು ಶೋಕಪೀಡಿತಳಾಗಿದ್ದ ವೈದೇಹಿಯು ಒಂದು ಹುಲ್ಲುಕಡ್ಡಿಯನ್ನು ಮಧ್ಯದಲ್ಲಿಟ್ಟುಕೊಂಡು ಯಾವ ವಿಧವಾದ ಭಯವೂ ಇಲ್ಲದೇ ರಾವಣನಿಗೆ ಹೇಳಿದಳು : *

"ದಶರಥನೆಂಬ ಹೆಸರಿನ ಸುವಿಖ್ಯಾತನಾದ ರಾಜನು ಧರ್ಮಕ್ಕೆ ಸ್ಥಿರವಾದ ಸೇತುವೆಯಂತಿದ್ದನು. (ಮರ್ಯಾದಾಸ್ಥಾಪಕನಾಗಿದ್ದನು)[1] ಅವನ ಮಗನು ಸತ್ಯಸಂಧನೆಂಬ ಖ್ಯಾತಿಯನ್ನು ಪಡೆದಿರತಕ್ಕವನು. ರಾಮನೆಂಬ ಹೆಸರಿನ ದಶರಥನ ಆ ಪುತ್ರನು ಧರ್ಮಾತ್ಮನೆಂಬುದಾಗಿ ಮೂರು ಲೋಕಗಳಲ್ಲಿಯೂ ಖ್ಯಾತನಾಗಿರುವನು. ದೀರ್ಘಬಾಹುವೂ ವಿಶಾಲಾಕ್ಷನೂ ಆಗಿರುವ ಶ್ರೀರಾಮನೇ ನನ್ನ ಪತಿಯು ಮತ್ತು ಪರದೈವವು. ಇಕ್ಷ್ವಾಕುಗಳ ಕುಲದಲ್ಲಿ

---

* ಎರಡು ವಿಷಯಗಳನ್ನು ಈ ಶ್ಲೋಕದಲ್ಲಿ ಗಮನಿಸಬಹುದಾಗಿದೆ: ಲಂಕಾಪಟ್ಟಣದಲ್ಲಿ ಸೀತಾದೇವಿಗೆ 'ತನ್ನವರು' ಎನ್ನುವವರು ಯಾರೂ ಇರಲಿಲ್ಲ. ರಾವಣೇಶ್ವರನು ದೇವತೆಗಳಿಗೂ ಭಯಂಕರನಾಗಿದ್ದನು. ಅವನ ಅಂತಃಪುರದಲ್ಲಿ ಸೀತೆಯಿದ್ದಾಳೆ. ಸುತ್ತಲೂ ರಾವಣನ ಕಡೆಯ ರಾಕ್ಷಸಿಯರಿದ್ದಾರೆ. ಅಂತಹ ಪರಿಸ್ಥಿತಿಯಲ್ಲಿ ರಾವಣನು ಸೀತೆಯನ್ನು ಪ್ರಲೋಭಿಸುತ್ತಿದ್ದಾನೆ. ಇಂತಹ ಸಂದರ್ಭವನ್ನು ಮನಸ್ಸಿನಲ್ಲಿ ಯೋಚಿಸಿಕೊಂಡರೇ ಭಯವುಂಟಾಗುತ್ತದೆ. ಆದರೆ ಪಾತಿವ್ರತ್ಯವೇ ಮೂರ್ತಿಮತ್ತಾಗಿದ್ದ ಸೀತಾದೇವಿಯು ರಾವಣನೊಡನೆ ನಿರ್ಭಯವಾಗಿ ಮಾತನಾಡಿದಳು. ಪ್ರಾಣದ ಹಂಗನ್ನೂ

1 ಅಚಲಃ ಧರ್ಮಸೇತುರಿವ – ಸೇತುವೆಂದರೆ ನೀರನ್ನು ತಡೆಯುವ ಅಣೆಕಟ್ಟು. ಧರ್ಮಸೇತುವೆಂದರೆ ಜನರನ್ನು ಧರ್ಮದ ಕಟ್ಟುಪಾಡಿನಲ್ಲಿಡುವುದು. ಧರ್ಮವನ್ನು ಮೀರಿಹೋಗದಂತೆ ನೋಡಿಕೊಳ್ಳುವುದು. ಅಚಲಃ ಧರ್ಮಸೇತುರಿವ ಎಂದರೆ ಸುಸ್ಥಿರವಾದ ಧರ್ಮದ ಅಣೆಕಟ್ಟು ಎಂದರ್ಥ.

ಹುಟ್ಟಿರುವ, ಸಿಂಹದಂತೆ ಹೆಗಲುಗಳುಳ್ಳ, ಮಹಾತೇಜಸ್ವಿಯಾದ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಡನೆ ನಿನ್ನ ಪ್ರಾಣಗಳನ್ನು ಅಪಹರಿಸುತ್ತಾನೆ. ನೀನೇನಾದರೂ ಅವನ ಸಮಕ್ಷದಲ್ಲಿ ನನ್ನನ್ನು ಬಲಾತ್ಕಾರವಾಗಿ ಅಪಹರಿಸಲು ಪ್ರಯತ್ನಿಸಿದ್ದರೆ– ಯುದ್ಧದಲ್ಲಿ ಖರನು ಹತನಾದಂತೆ ನೀನೂ ಈ ವೇಳೆಗಾಗಲೇ ಜನಸ್ಥಾನದಲ್ಲಿ ಹತನಾಗಿ ನೆಲದ ಮೇಲೆ ಬಿದ್ದಿರುತ್ತಿದ್ದೆ. ಘೋರರೂಪರೂ ಮಹಾಬಲರೂ ಎಂದೆನಿಸಿಕೊಂಡಿರುವ ಹಲವಾರು ಕೋಟಿ ರಾಕ್ಷಸರು ನಿನ್ನ ವಶದಲ್ಲಿರುವರೆಂದು ಹೇಳಿದೆಯಲ್ಲವೇ ? ಗರುಡನ ಮುಂದೆ ವಿಷಸರ್ಪಗಳು ವಿಷವಿಲ್ಲದ ಹುಳುಗಳಂತಾಗುವಂತೆ– ಶ್ರೀರಾಮನ ಮುಂದೆ ಆ ರಾಕ್ಷಸರೆಲ್ಲರೂ ನಿರ್ವೀರ್ಯರಾಗುತ್ತಾರೆ. ಶ್ರೀರಾಮನ ಧನುಸ್ಸಿನ ನಾಣಿನಿಂದ ಹೊರಬರುವ ಸುವರ್ಣಭೂಷಿತವಾದ ಬಾಣಗಳು–ಅಲೆಗಳು ಗಂಗಾನದಿಯ ತೀರವನ್ನು ಕೊರೆಯುವಂತೆ–ನಿನ್ನ ಶರೀರವನ್ನು ಸೀಳಿಹಾಕುತ್ತವೆ. ನೀನು ರಾಕ್ಷಸರಿಂದಾಗಲೀ ದೇವತೆಗಳಿಂದಾಗಲೀ ಅವಧ್ಯನಾಗಿರುವುದೇನೋ ಸರಿಯೇ. ಆದರೆ ಮನುಜಶ್ರೇಷ್ಠನಾದ ಶ್ರೀರಾಮನೊಡನೆ ವೈರವನ್ನು ಕಟ್ಟಿಕೊಂಡಿರುವ ನೀನು ಜೀವಸಹಿತವಾಗಿ ಅವನಿಂದ ತಪ್ಪಿಸಿಕೊಳ್ಳಲಾರೆ. ಮಹಾಬಲಿಷ್ಠನಾದ ರಾಘವನೇ ನಿನ್ನ ಉಳಿದಿರುವ ಆಯುಷ್ಯವನ್ನು ಕೊನೆಗಾಣಿಸು

---

ತೊರೆದು ಅವನ ಅಭಿಪ್ರಾಯಕ್ಕೆ ಸಂಪೂರ್ಣವಾಗಿ ವಿರುದ್ಧವಾದ ಮಾತನ್ನಾಡಿದಳು. 'ಭಾರತನಾರಿಯರ ಕೆಚ್ಚು' ಎಂದರೆ ಇದೇ ಆಗಿದೆ. ತಮ್ಮ ಸತೀತ್ವಕ್ಕೆ ವಿನಾಶಕಾಲವು ಬಂದಾಗ ಹೋರಾಡಿ ಪ್ರಾಣತೊರೆಯುವ ವೀರರಮಣಿಯರು ಭಾರತದಲ್ಲಿ ಈಗಲೂ ಇದ್ದಾರೆ. ವಾಲ್ಮೀಕಿಗಳು ಹೇಳಿರುವ 'ನಿರ್ಭಯಾ' ಎಂಬ ವಿಶೇಷಣವು ಹೃದಯಂಗಮವಾಗಿದೆ ಮತ್ತು ಅರ್ಥಗರ್ಭಿತವಾಗಿದೆ. ಸತೀತ್ವದ ಅಪಹರಣಕಾಲವು ಬಂದಾಗ ನಿರ್ಭಯರಾಗಿ ಸೆಣಸಾಡುವುದು ಭಾರತಸ್ತ್ರೀಯರ ಹುಟ್ಟುಗುಣವೇ ಆಗಿದೆ. ಒಬ್ಬ ವ್ಯಾಖ್ಯಾನಕಾರರು–'ಬಲಾತ್ಕಾರವಾಗಿ ಉಪಭೋಗಿಸಲು ಹೊರಟರೆ ರಾವಣನ ತಲೆಯು ನುಚ್ಚುನೂರಾಗುವುದೆಂಬ ಅಪ್ಸರೆಯ ಶಾಪವನ್ನು ನೆನೆದು ಸೀತೆಯು ನಿರ್ಭಯಳಾಗಿ ಮಾತನಾಡಿದಳೆಂದು' ಹೇಳಿದ್ದಾರೆ. ಹಾಗೆ ಅರ್ಥಮಾಡಿದರೆ 'ನಿರ್ಭಯಾ' ಎಂಬ ಪದಪ್ರಯೋಗದ ಸ್ವಾರಸ್ಯವೇ ಹೋಗಿಬಿಡುತ್ತದೆ. ಅದೇ ವ್ಯಾಖ್ಯಾನಕಾರರು–'ಬಲಾತ್ಕಾರೇ ಯೋಗವಶಾತ್ ಅದೃಶ್ಯಾ ಅಸ್ಪೃಶ್ಯಾ ಚ ಭವಿಷ್ಯಾಮಿ ಇತಿ ಧಿಯಾ'–ಬಲಾತ್ಕಾರ ಮಾಡಿದಲ್ಲಿ ಯೋಗಮಾರ್ಗದಿಂದ ಅದೃಶ್ಯಳೂ ಕೈಗೆಟುಕದವಳೂ ಆಗಬಲ್ಲೆನು–ಎಂಬ ಧೈರ್ಯದಿಂದ'–ಎಂದೂ ಅರ್ಥಮಾಡಿದ್ದಾರೆ. ಸೀತಾದೇವಿಗೆ ಯೋಗಮಾರ್ಗವು ತಿಳಿಯದೆಂದಲ್ಲ. ಆ ಮಾರ್ಗದಿಂದ ಅದೃಶ್ಯಳಾಗುವುದಾಗಿದ್ದರೆ ಅವಳು ಲಂಕಾಪಟ್ಟಣಕ್ಕೆ

ತ್ತಾನೆ. ಯಜ್ಞಸ್ತಂಭಕ್ಕೆ ಕಟ್ಟಿರುವ ಪಶುವಿನ ಜೀವವು ಯಾವುದೇ ಕಾರಣದಿಂದಲೂ ಉಳಿಯುವಂತೆ-ನಿನ್ನ ಜೀವವೂ ಉಳಿಯಲಾರದು. ರಾಕ್ಷಸನೇ! ರೋಷದಿಂದ ಪ್ರದೀಪ್ತವಾದ ಕಣ್ಣುಗಳಿಂದ ಶ್ರೀರಾಮನೇನಾದರೂ ನಿನ್ನನ್ನೊಮ್ಮೆ ನೋಡಿದರೆ ಸಾಕು - ರುದ್ರನ ಘೋರವಾದ ಕಣ್ಣುಗಳಿಂದ ಮನ್ಮಥನು ಬೂದಿಯಾದಂತೆ - ಕೂಡಲೇ ನೀನು ಬೂದಿಯಾಗುವೆ. ತೃಣಸಮಾನನಾದ ನಿನ್ನೊಡನೆ ಅವನು ಯುದ್ಧಮಾಡಬೇಕಾಗಿಯೇ ಇಲ್ಲ. ದೃಷ್ಟಿಪಾತಮಾತ್ರದಿಂದಲೇ ನಿನ್ನನ್ನವನು ದಹಿಸಬಲ್ಲನು.

ಯಾವಾತನು ಆಕಾಶದಿಂದ ಚಂದ್ರನನ್ನು ಕೆಳಕ್ಕೆ ಕೆಡಹಬಲ್ಲನೋ, ಸಮುದ್ರವನ್ನೇ ಶೋಷಿಸಬಲ್ಲನೋ - ಅಂತಹ ಪರಮಸಾಹಸಿಯಾದ ಶ್ರೀರಾಮನು ತನ್ನ ಪ್ರೇಯಸಿಯಾದ ಸೀತೆಯನ್ನು ವಿಮೋಚನೆಗೊಳಿಸದೇ ಇರುವುದಿಲ್ಲ. ನೀನು ಮಾಡಿರುವ ಪರಸ್ತ್ರೀಸ್ಪರ್ಶವೆಂಬ ಮಹಾಪಾಪಕಾರ್ಯದಿಂದಾಗಿ ನಿನ್ನ ಆಯುಷ್ಯವು ಕ್ಷೀಣಿಸುತ್ತದೆ. ನೀನು ಕಾಂತಿಹೀನನಾಗುವೆ. ಬಲಹೀನನಾಗುವೆ. ನಿನ್ನ ಇಂದ್ರಿಯಗಳೂ ಶಿಥಿಲಗೊಳ್ಳುತ್ತವೆ. ಕಡೆಯಲ್ಲಿ ಲಂಕೆಯೂ ಪತಿಹೀನಳಾಗಿ ಒಡೆಯನಿಲ್ಲದೇ ವಿಧವೆಯಾಗುತ್ತಾಳೆ.* ಪತಿಯ ಜೊತೆಯಲ್ಲಿದ್ದ ನನ್ನನ್ನು ಬಲಾತ್ಕಾರದಿಂದ ಸೆಳೆದು ತಂದು ಪತಿವಿಯೋಗ

---

ಬರಬೇಕಾದ ಪ್ರಮೇಯವೇ ಇರುತ್ತಿರಲಿಲ್ಲ. ದಂಡಕಾರಣ್ಯದಲ್ಲಿಯೇ ಸ್ವಲ್ಪಹೊತ್ತು ಯೋಗದಿಂದ ಅದೃಶ್ಯಳಾಗಿದ್ದರೂ ಶ್ರೀರಾಮನು ಬಂದುಬಿಡುತ್ತಿದ್ದನು. ಆದುದರಿಂದ ನಿರ್ಭಯತ್ವಕ್ಕೆ ಬೇರೆಯ ಕಾರಣಗಳನ್ನು ಕೊಡದೇ ಸತೀಮಣಿಯರಿಗೆ ಇರುವ 'ಸಹಜವಾದ ನಿರ್ಭಯತೆಯಿಂದ' ಎಂದು ಅರ್ಥಮಾಡುವುದೇ - ಸಮಂಜಸವಾಗಿ ಕಾಣುತ್ತದೆ. ತೃಣಮನ್ತರತಃ ಕೃತ್ವಾ-ಗರಿಕೆಯ ಹುಲ್ಲನ್ನು ಮಧ್ಯದಲ್ಲಿಟ್ಟುಕೊಂಡು ಮಾತನಾಡಿದಳು. ಪರಪುರುಷನೊಡನೆ ನೇರವಾಗಿ ಮಾತನಾಡಕೂಡದೆಂಬ ಧರ್ಮದ ಹಿನ್ನೆಲೆಯಲ್ಲಿ ಗರಿಕೆಯ ಹುಲ್ಲನ್ನು ಮಧ್ಯದಲ್ಲಿಟ್ಟಳು. ಮಾತಿಗೆ ಮೊದಲೇ-'ನೀನು ಪರಪುರುಷ. ನಿನಗೂ ನನಗೂ ಯಾವ ಸಂಬಂಧವೂ ಇಲ್ಲ. ನನ್ನೊಡನೆ ನೇರವಾಗಿ ಮಾತನಾಡುವ ಯೋಗ್ಯತೆಯೂ ನಿನಗಿಲ್ಲ'-ಎಂಬುದನ್ನು ಕೃತಿಯಲ್ಲಿ ತೋರಿಸಿದಳು. ಇಂತಹ ಕೆಚ್ಚೆದೆಯು ಭಾರತೀಯ ಸ್ತ್ರೀಯರಿಗಲ್ಲದೇ ಮತ್ತಾರಲ್ಲಿ ತಾನೇ ಇದ್ದೀತು?

* ಪರಪತ್ನಿಯರನ್ನು ಸ್ಪರ್ಶಿಸುವುದರಿಂದಲೇ ಇಷ್ಟು ಅನರ್ಥಗಳಾಗುವುವೆಂದು ಸ್ಮೃತಿಕಾರರೂ ಹೇಳಿದ್ದಾರೆ. ಆಯುರ್ಬಲಂ ಯಶೋ ಲಕ್ಷ್ಮೀಃ ಪರದಾರಾಭಿಮರ್ಶನಾತ್ | ಸದ್ಯ ಏವ ವಿನಶ್ಯನ್ತಿ....

ವನ್ನುಂಟುಮಾಡಿರುವ ನಿನ್ನ ಈ ಪಾಪಕಾರ್ಯವು ಸುಖವಾದ ಭವಿಷ್ಯಕ್ಕೆ ಹಾದಿಮಾಡಿಕೊಡುವುದಿಲ್ಲ. ಸರ್ವವಿನಾಶಕ್ಕೇ ಕಾರಣವಾಗುತ್ತದೆ. ಮಹಾ ತೇಜಸ್ವಿಯಾದ ನನ್ನ ಪತಿಯು ಮೈದುನನಾದ ಲಕ್ಷ್ಮಣನೊಡನೆ ಜನರಿಂದ ಶೂನ್ಯವಾಗಿರುವ ಭಯಂಕರವಾದ ದಂಡಕಾರಣ್ಯದಲ್ಲಿಯೂ ಭಯರಹಿತನಾಗಿ ತನ್ನ ಬಲ-ಪರಾಕ್ರಮಗಳನ್ನೇ ಅವಲಂಬಿಸಿ ವಾಸಮಾಡುತ್ತಿದ್ದಾನೆ. ಅಂತಹ ಅತುಲವಿಕ್ರಮಿಯಾದ ಶ್ರೀರಾಮನು ಯುದ್ಧದಲ್ಲಿ ಬಾಣಗಳ ಮಳೆಗರೆದು ನಿನ್ನ ಬಲ-ವೀರ್ಯ-ದರ್ಪಾಹಂಕಾರಗಳನ್ನು ನಿನ್ನ ಶರೀರದ ಒಂದೊಂದು ಅವಯವಗಳಿಂದಲೂ ತೆಗೆದುಹಾಕುತ್ತಾನೆ.

ಯದಾ ವಿನಾಶೋ ಭೂತಾನಾಂ ದೃಶ್ಯತೇ ಕಾಲಚೋದಿತಃ ।
ತದಾ ಕಾರ್ಯೇ ಪ್ರಮಾದ್ಯನ್ತಿ ನರಾಃ ಕಾಲವಶಂ ಗತಾಃ ॥೧೭॥

ಕಾಲನಿಂದ ಪ್ರೇರಿತವಾಗಿ ಪ್ರಾಣಿಗಳ ವಿನಾಶದ ಕಾಲವು ಸನ್ನಿಹಿತ ವಾದಾಗ ಕಾಲವಶರಾದ ಜನರು ಮಾಡಬೇಕಾದ ಕಾರ್ಯಗಳಲ್ಲಿ ಎಚ್ಚರತಪ್ಪು ತ್ತಾರೆ. ಮಾಡಬೇಕಾದ ಕಾರ್ಯವನ್ನು ಮಾಡದೇ ಮಾಡಬಾರದ ಕಾರ್ಯ ವನ್ನೇ ಮಾಡುತ್ತಾರೆ. ನನ್ನನ್ನು ಅವಮಾನಗೊಳಿಸಿರುವ ನಿನಗೆ ಅಂತಹ ಕಾಲವೀಗ ಒದಗಿಬಂದಿದೆ. ಈ ನಿನ್ನ ಪಾಪಕರ್ಮವು ನಿನ್ನ, ನಿನ್ನನ್ನಾಶ್ರಯಿ ಸಿರುವ ರಾಕ್ಷಸರ ಮತ್ತು ನಿನ್ನ ಅಂತಃಪುರದಲ್ಲಿರುವ ಸ್ತ್ರೀಯರ ಸರ್ವವಿನಾ ಶಕ್ಕೂ ಕಾರಣವಾಗುತ್ತದೆ.

ನ ಶಕ್ಯಾ ಯಜ್ಞಮಧ್ಯಸ್ಥಾ ವೇದಿಃ ಸ್ರುಗ್ಭಾಣ್ಡಮಣ್ಡಿತಾ ।
ದ್ವಿಜಾತಿಮನ್ತ್ರಸಂಪೂತಾ ಚಣ್ಡಾಲೇನಾಭಿಮರ್ಶಿತುಮ್ ॥೧೮॥

ತಥಾಹಂ ಧರ್ಮನಿತ್ಯಸ್ಯ ಧರ್ಮಪತ್ನೀ ಪತಿವ್ರತಾ ।
ತ್ವಯಾ ಸ್ಪ್ರಷ್ಟುಂ ನ ಶಕ್ಯಾಸ್ಮಿ ರಾಕ್ಷಸಾಧಮ ಪಾಪಿನಾ ॥೧೯॥

ರಾಕ್ಷಸಕುಲಕಳಂಕನೇ ! ಪಾಪಿಷ್ಠನೇ ! ಸುಕ್-ಸ್ರುವಾದಿ ಯಾಗೋಪ ಕರಣಗಳಿಂದ ಸಮಲಂಕೃತವಾಗಿರುವ ಮತ್ತು ಬ್ರಾಹ್ಮಣರ ಮಂತ್ರ ಗಳಿಂದ ಪರಿಶುದ್ಧವಾಗಿ ಮಾಡಲ್ಪಟ್ಟಿರುವ ಯಜ್ಞಮಂಟಪದ ಮಧ್ಯದಲ್ಲಿರುವ ವೇದಿಕೆಯನ್ನು ಚಂಡಾಲನು ಮುಟ್ಟಿ ಅಪವಿತ್ರಗೊಳಿಸಲು ಸಾಧ್ಯವಾಗುವು ದಿಲ್ಲ. ಹಾಗೆಯೇ ಧರ್ಮನಿತ್ಯನಾದ ಶ್ರೀರಾಮನ ಧರ್ಮಪತ್ನಿಯಾದ ಪತಿವ್ರತೆ

ಯಾದ ನನ್ನನ್ನು ಭ್ರಷ್ಟಗೊಳಿಸಲು ಪಾಪಿಯಾದ ನಿನ್ನಿಂದ ಸಾಧ್ಯವಾಗುವುದಿಲ್ಲ.

ತಾವರೇಹೂಗಳ ಕೊಳಗಳಲ್ಲಿ ರಾಜಹಂಸದೊಡನೆ ವಿಹರಿಸುತ್ತಿರುವ ಹೆಣ್ಣುಹಂಸವು ಜೊಂಡುಹುಲ್ಲಿನ ಮಧ್ಯದಲ್ಲಿರುವ ನೀರುಕಾಗೆಯನ್ನು ಹೇಗೆ ತಾನೇ ನೋಡುವುದು ?

ಇದಂ ಶರೀರಂ ನಿಃಸಂಜ್ಞಂ ಬನ್ಧ ವಾ ಘಾತಯಸ್ವ ವಾ ।
ನೇದಂ ಶರೀರಂ ರಕ್ಷ್ಯಂ ಮೇ ಜೀವಿತಂ ವಾಪಿ ರಾಕ್ಷಸ !
ನ ತು ಶಕ್ಷ್ಯಾಮ್ಯುಪಕ್ರೋಶಂ ಪೃಥಿವ್ಯಾಂ ದಾತುಮಾತ್ಮನಃ ॥ ೨೧॥

ರಾಕ್ಷಸಾಧಮನೇ ! ಈ ನನ್ನ ಶರೀರವು ಜಡವಾದುದು. ಇದನ್ನು ಬಂಧನದಲ್ಲಾದರೂ ಇಡು ; ಕತ್ತರಿಸಿಯಾದರೂ ಹಾಕು. ಈ ಶರೀರವನ್ನು ರಕ್ಷಿಸುವ ಮತ್ತು ಪ್ರಾಣದಿಂದ ಉಳಿದಿರುವ ಇಚ್ಛೆಯು ನನಗಿಲ್ಲ. ಆದರೆ ಪ್ರಪಂಚದಲ್ಲಿ ನನ್ನ ವಿಷಯವಾಗಿ ಯಾವುದೇ ಅಪವಾದಬರುವುದನ್ನೂ ನಾನು ಸಹಿಸತಕ್ಕವಳಲ್ಲ."

ಬಹಳವಾಗಿ ಕೋಪಗೊಂಡಿದ್ದ ವೈದೇಹಿಯು ಹೀಗೆ ಅತ್ಯಂತಕಠೋರವಾಗಿ ಮಾತನಾಡಿದ ಬಳಿಕ ರಾವಣನೊಡನೆ ಪುನಃ ಬೇರೆ ಯಾವ ಮಾತನ್ನೂ ಆಡಲು ಬಯಸಲಿಲ್ಲ. ಕಠೋರವಾಗಿಯೂ ರೋಮಾಂಚಕರವಾಗಿಯೂ ಇದ್ದ ಸೀತಾದೇವಿಯ ಮಾತನ್ನು ಕೇಳಿ ರಾವಣನು ಸೀತೆಗೆ ಭಯವನ್ನುಂಟು ಮಾಡುವ ಸಲುವಾಗಿ ಪುನಃ ಹೇಳಿದನು :

" ಮೈಥಿಲಿ ! ಭಾಮಿನಿ ! ಚಾರುಹಾಸಿನಿ ! ನನ್ನ ಈ ಮಾತನ್ನು ಕೇಳು. ನಿನಗೆ ಹನ್ನೆರಡು ತಿಂಗಳ ಅವಧಿಯನ್ನು ಕೊಟ್ಟಿದ್ದೇನೆ. ಆ ಅವಧಿಯು ಮುಗಿಯುವುದರೊಳಗಾಗಿ ನೀನೇನಾದರೂ ನನಗೆ ವಶಳಾಗದಿದ್ದರೆ-ಅಡಿಗೆಯವರು ನನ್ನ ಪ್ರಾತಃಕಾಲದ ಉಪಾಹಾರಕ್ಕಾಗಿ ನಿನ್ನನ್ನು ಚೂರು-ಚೂರುಗಳಾಗಿ ಕತ್ತರಿಸುತ್ತಾರೆ."

ಶತ್ರುಗಳನ್ನು ಭಯದಿಂದ ಕಿರುಚಿಕೊಳ್ಳುವಂತೆ ಮಾಡುವ, ಭಯಂಕರ ಸ್ವರೂಪನಾದ, ಕ್ರುದ್ಧನಾಗಿದ್ದ ರಾವಣನು ಇಂತಹ ಕಠಿಣವಾದ ಮಾತನ್ನು ಸೀತೆಗೆ ಹೇಳಿ ಅಲ್ಲಿದ್ದ ರಾಕ್ಷಸಿಯರಿಗೆ ಹೇಳಿದನು :

"ಭಯಂಕರವಾಗಿ ಕಾಣುವ, ಮಾಂಸಾಹಾರಿಗಳಾದ, ರಕ್ತವನ್ನು ಪಾನಮಾಡುವ ವಿರೂಪಿಣಿಯರಾದ ರಾಕ್ಷಸಿಯರೇ ! ನೀವು ಸಾಧ್ಯವಾದಷ್ಟು ಬೇಗ ಇವಳ ದರ್ಪವನ್ನು ಅಡಗಿಸಿರಿ."

ರಾವಣನ ಆ ಮಾತನ್ನು ಕೇಳುತ್ತಲೇ ಭೀಕರರಾದ ಆ ರಾಕ್ಷಸಿಯರು ರಾವಣನಿಗೆ ಕೈಮುಗಿದು ಸೀತೆಯನ್ನು ಸುತ್ತುಗಟ್ಟಿ ಕುಳಿತರು. ಅನಂತರ ರಾಕ್ಷಸರಾಜನಾದ ರಾವಣನು ಕಾಲುಗಳ ಸಪ್ಪಳದಿಂದ ಭೂಮಿಯನ್ನೇ ಸೀಳು ತ್ತಿರುವನೋ ಎಂಬಂತೆ ಅಡಿಗಳನ್ನಿಡುತ್ತಾ ಭಯಂಕರವಾಗಿ ಕಾಣುತ್ತಿದ್ದ ರಾಕ್ಷಸಿಯರಿಗೆ ಪುನಃ ಹೇಳಿದನು :

"ರಾಕ್ಷಸಿಯರೇ ! ಇವಳನ್ನು ಅಶೋಕವನದ ಮಧ್ಯಭಾಗಕ್ಕೆ ಕರೆದೊಯ್ಯಿರಿ. ಅಲ್ಲಿ ನೀವು ಇವಳ ಸುತ್ತಲೂ ಕುಳಿತು ಯಾರಿಗೂ ತಿಳಿಯದ ರೀತಿಯಲ್ಲಿ ಇವಳನ್ನು ರಕ್ಷಿಸಿರಿ. ಅಲ್ಲಿ ನೀವು ಇವಳನ್ನು ಘೋರವಾದ ಗರ್ಜನೆಗಳಿಂದ ಭಯಪಡಿಸುತ್ತಾ, ಪುನಃ ಸಾಂತ್ವವಚನಗಳಿಂದ ಸಮಾಧಾನಗೊಳಿಸುತ್ತಾ-ಕಾಡಿನಲ್ಲಿರುವ ಹೆಣ್ಣಾನೆಯನ್ನು ಪಳಗಿಸುವಂತೆ-ಇವಳು ನನ್ನ ವಶಳಾಗುವಂತೆ ಮಾಡಿರಿ."

ಹೀಗೆ ರಾವಣನಿಂದ ಆಜ್ಞಪ್ತರಾದ ರಾಕ್ಷಸಿಯರು ಮೈಥಿಲಿಯನ್ನು ಅಶೋಕವನಕ್ಕೆ ಕರೆದುಕೊಂಡು ಹೋದರು. ಆ ವನವು ಸಕಲವಿಧವಾದ ಕಾಮನಾವಸ್ತುಗಳನ್ನೂ ಫಲರೂಪದಲ್ಲಿ ಕೊಡುವ ಕಲ್ಪವೃಕ್ಷಗಳಿಂದಲೂ, ನಾನಾವಿಧವಾದ ಪುಷ್ಪಗಳಿಂದಲೂ-ಫಲಗಳಿಂದಲೂ ಸಮೃದ್ಧವಾಗಿದ್ದ ಇತರ ವೃಕ್ಷಗಳಿಂದಲೂ, ಸರ್ವಕಾಲಗಳಲ್ಲಿಯೂ ಮದಿಸಿ ಕಲ-ಕಲನಿನಾದಮಾಡುತ್ತಿದ್ದ ಪಕ್ಷಿಗಳಿಂದಲೂ ಕೂಡಿ ಶೋಭಾಯಮಾನವಾಗಿದ್ದಿತು.

ರಾಮನ ವಿರಹಶೋಕದಿಂದ ಸಂತಪ್ತವಾದ ಶರೀರವುಳ್ಳ ಜಾನಕಿಯು-ಹೆಣ್ಣುಹುಲಿಗಳ ಮಧ್ಯದಲ್ಲಿ ಸಿಕ್ಕಿಕೊಂಡ ಹೆಣ್ಣು ಜಿಂಕೆಯಂತೆ-ರಾಕ್ಷಸಿಯರ ಮಧ್ಯದಲ್ಲಿದ್ದಳು. ಮಹಾಶೋಕಕ್ಕೆ ತುತ್ತಾಗಿದ್ದ ಜಾನಕಿಯು ಬಲೆಯಲ್ಲಿ ಸಿಲುಕಿದ ಜಿಂಕೆಯಂತೆ ಭಯಗೊಂಡಳು. ಅವಳಿಗೆ ಸುಖವೇ ಇಲ್ಲವಾಯಿತು.

ವಿಕಾರವಾದ ಕಣ್ಣುಗಳನ್ನು ಹೊಂದಿದ್ದ ರಾಕ್ಷಸಿಯರಿಂದ ಬಹಳವಾಗಿ ಹೆದರಿಸಲ್ಪಡುತ್ತಿದ್ದ ಸೀತಾದೇವಿಯು ಶೋಕಪರಿಹಾರಕವಾದ ಅಶೋಕವನ

ದಲ್ಲಿದ್ದರೂ ಸುಖಿಯಾಗಿರಲಿಲ್ಲ. ಪ್ರಿಯತಮನಾದ ರಾಮನನ್ನೂ ಮತ್ತು ಮೈದುನನಾದ ಲಕ್ಷ್ಮಣನನ್ನೂ ಸ್ಮರಿಸುತ್ತಾ ಭಯಶೋಕಪೀಡಿತಳಾಗಿ ಎಚ್ಚರದಪ್ಪಿದಳು.

೫೬ನೆಯ ಸರ್ಗವು ಮುಗಿಯಿತು.

ಅರಣ್ಯಕಾಂಡ ಪ್ರಕ್ಷಿಪ್ತಸರ್ಗ*

## ಬ್ರಹ್ಮನ ಆಜ್ಞೆಯಂತೆ ಇಂದ್ರನು ನಿದ್ರಾದೇವಿಯೊಡನೆ ಅಶೋಕವನಕ್ಕೆ ಹೋಗಿ ಸೀತಾದೇವಿಗೆ ದಿವ್ಯಪಾಯಸವನ್ನು ಕೊಟ್ಟು ಅವಳ ಅನುಮತಿಯನ್ನು ಪಡೆದು ಹಿಂದಿರುಗಿದುದು

ಪ್ರವೇಶಿತಾಯಾಂ ಸೀತಾಯಾಂ ಲಙ್ಕಾಂ ಪ್ರತಿ ಪಿತಾಮಹಃ ।
ತದಾ ಪ್ರೋವಾಚ ದೇವೇನ್ದ್ರಂ ಪರಿತುಷ್ಟಂ ಶತಕ್ರತುಮ್ ॥೧॥

ರಾವಣನು ಸೀತಾದೇವಿಯನ್ನು ಲಂಕೆಗೆ ಒಯ್ದುನಂತರ ಶೀಘ್ರದಲ್ಲಿಯೇ ರಾವಣನ ಸಂಹಾರವಾಗುವುದೆಂದು ಸಂತಸಗೊಂಡಿದ್ದ, ನೂರುಯಜ್ಞಗಳನ್ನು ಮಾಡಿದ್ದ ದೇವೇಂದ್ರನಿಗೆ ಬ್ರಹ್ಮನು ಹೇಳಿದನು :

"ದೇವೇಂದ್ರನೇ ! ಮೂರು ಲೋಕಗಳ ಹಿತಕ್ಕಾಗಿಯೂ, ರಾಕ್ಷಸರ ನಾಶಕ್ಕಾಗಿಯೂ ದುರಾತ್ಮನಾದ ರಾವಣನು ಲಂಕೆಗೆ ಸೀತಾದೇವಿಯನ್ನು ಒಯ್ದಿರುವನು. ಪತಿವ್ರತೆಯಾದ, ಮಹಾಭಾಗಳಾದ, ಸುಖದಿಂದಲೇ ಬೆಳದಿರುವ ಸೀತಾದೇವಿಯು ರಾಕ್ಷಸಿಯರಿಂದ ಸುತ್ತುವರಿಯಲ್ಪಟ್ಟು ಪತಿಯನ್ನು ಕಾಣಬೇಕೆಂಬ ಲಾಲಸೆಯಿದ್ದರೂ ಕಾಣಲಾರದೇ ಸುತ್ತಲೂ ಇರುವ ಘೋರ ರೂಪಿಣಿಯರಾದ ರಾಕ್ಷಸಿಯರನ್ನು ನೋಡುತ್ತಾ ಶೋಕಪಡುತ್ತಿರುವಳು. ಲಂಕಾಪಟ್ಟಣವು ನದ-ನದಿಗಳಿಗೆ ಪತಿಯಾದ ಸಮುದ್ರರಾಜನ ತೀರಪ್ರದೇಶದಲ್ಲಿದೆ. ಅನಿಂದಿತೆಯಾದ ಸೀತಾದೇವಿಯು ಅಲ್ಲಿರುವುದು ಶ್ರೀರಾಮನಿಗೆ ಹೇಗೆ ತಾನೇ ತಿಳಿದೀತು ? ತನಗೆ ಒದಗಿರುವ ದುಃಖವನ್ನೇ ಸರ್ವದಾ ಚಿಂತಿಸುತ್ತಾ

* ಇದೊಂದು ಪ್ರಕ್ಷಿಪ್ತ ಸರ್ಗ. ಇದಕ್ಕೆ ಯಾರೂ ವ್ಯಾಖ್ಯಾನಮಾಡಿಲ್ಲ. ಇದಕ್ಕೆ ಸರ್ಗಸಂಖ್ಯೆಯನ್ನೂ ಹೇಳಿರುವುದಿಲ್ಲ. ಪ್ರಕ್ಷಿಪ್ತಸರ್ಗ ಎಂದೇ ಹೆಸರಿಟ್ಟಿದ್ದಾರೆ. ನಾವೂ ಇದನ್ನು ಹಾಗೆಯೇ ಕೊಟ್ಟಿರುತ್ತೇವೆ.

ಯಾರ ಕಣ್ಣಿಗೂ ಬೀಳದ ಅವಳು ಜೀವಿಸಲು ಇಚ್ಛೆಯಿಲ್ಲದೇ ಅಸುನೀಗುವಳು. ಇದರಲ್ಲಿ ಸಂಶಯವೇ ಇಲ್ಲ. ಈ ಸಮಯದಲ್ಲಿ ಸೀತೆಯ ಪ್ರಾಣವು ಹೋಗಿ ಬಿಡಬಹುದೆಂದು ನಾನು ಸಂದೇಹಿಸುತ್ತಿದ್ದೇನೆ. ಆದುದರಿಂದ ನೀನು ಈಗಲೇ ಹೋಗಿ ಶುಭಾನನೆಯಾದ ಸೀತೆಯನ್ನು ಸಂದರ್ಶಿಸು. ಲಂಕಾ ಪಟ್ಟಣವನ್ನು ಪ್ರವೇಶಿಸಿ ಅಶೋಕವನದಲ್ಲಿರುವ ಸೀತಾದೇವಿಗೆ ಒಳ್ಳೆಯ ಆಹಾರವನ್ನು ದಯಪಾಲಿಸು. "

ಹೀಗೆ ಬ್ರಹ್ಮನಿಂದ ಆಜ್ಞಪ್ತನಾದ ದೇವೇಂದ್ರನು ರಾವಣಪಾಲಿತವಾದ ಲಂಕಾಪಟ್ಟಣವನ್ನು ನಿದ್ರಾದೇವಿಯೊಡನೆ ಪ್ರವೇಶಿಸಿದನು. ಲಂಕೆಯನ್ನು ಪ್ರವೇಶಿಸುತ್ತಲೇ ಇಂದ್ರನು ಸೀತಾದೇವಿಯ ಸುತ್ತಲೂ ಇರುವ ರಾಕ್ಷಸಿಯರನ್ನು ವಿಮೋಹಗೊಳಿಸುವಂತೆ ನಿದ್ರಾದೇವಿಗೆ ಹೇಳಿದನು. ಅದರಂತೆ ನಿದ್ರಾದೇವಿಯು ಪರಮಹೃಷ್ಟಳಾಗಿ ದೇವಕಾರ್ಯದ ಸಿದ್ಧಿಗಾಗಿ ಸೀತಾದೇವಿಯ ಪ್ರಹರಿಗಳನ್ನು ನಿದ್ರಾಪರವಶರನ್ನಾಗಿ ಮಾಡಿದಳು. ಆ ಮಧ್ಯದಲ್ಲಿ ಸಹಸ್ರಾಕ್ಷನಾದ ಇಂದ್ರನು ಅಶೋಕವನದಲ್ಲಿದ್ದ ಸೀತಾದೇವಿಯ ಬಳಿಗೆ ಹೋಗಿ ಹೇಳಿದನು :

" ಶುಭ್ರವಾದ ಮುಗುಳ್ನಗೆಯುಳ್ಳವಳೇ ! ನಿನಗೆ ಮಂಗಳವಾಗಲಿ. ನಾನು ದೇವರಾಜನಾದ ಇಂದ್ರನು. ನಿನ್ನನ್ನು ನೋಡಲೆಂದೇ ಇಲ್ಲಿಗೆ ಬಂದಿರುವೆನು. ಮಹಾತ್ಮನಾದ ರಾಘವನ ಕಾರ್ಯದ ಸಿದ್ಧಿಗಾಗಿ ನಾನು ಸಹಾಯಮಾಡುವೆನು. ನೀನಿನ್ನು ಖಂಡಿತವಾಗಿಯೂ ಚಿಂತಿಸದಿರು. ನನ್ನ ಅನುಗ್ರಹದಿಂದಲೇ ಶ್ರೀರಾಮನು ಸಮುದ್ರವನ್ನು ದಾಟಿ ಇಲ್ಲಿಗೆ ಬರುವನು. ನನ್ನ ಮಾಯೆಯಿಂದಲೇ ನಿನ್ನ ಸುತ್ತಲೂ ಇರುವ ರಾಕ್ಷಸಿಯರು ನಿದ್ರಾಪರವಶರಾಗಿ ಮಲಗಿದ್ದಾರೆ. ನಿನಗೆ ಸಹಾಯಮಾಡುವ ಆಶಯದಿಂದಲೇ ನಾನು ಮಂತ್ರಪೂತವಾದ ಈ ಅನ್ನವನ್ನು ತೆಗೆದುಕೊಂಡು ನಿದ್ರಾದೇವಿಯೊಡನೆ ಬಂದಿರುವೆನು. ನಾನು ಕೊಡಲಿರುವ ಈ ಅನ್ನವನ್ನು ನೀನು ಭಕ್ಷಿಸಿದ್ದೇ ಆದರೆ ನಿನಗೆ ಹತ್ತು ಸಾವಿರ ವರ್ಷಗಳವರೆಗೆ ಹಸಿವಾಗಲೀ— ಬಾಯಾರಿಕೆಯಾಗಲೀ ಉಂಟಾಗುವುದಿಲ್ಲ. "

ದೇವೇಂದ್ರನು ಹೀಗೆ ಹೇಳಲು ಸೀತಾದೇವಿಯು—' ಇವನು ನಿಜ

ವಾಗಿಯೂ ದೇವೇಂದ್ರನೇ ?'– ಎಂದು ಸಂಶಯಿಸುತ್ತಾ ಸಂಶಯವನ್ನು ಪರಿಹರಿಸಿಕೊಳ್ಳಲು ಅವನನ್ನೇ ಪ್ರಶ್ನಿಸಿದಳು :

" ನೀನು ಶಚೀಪತಿಯಾದ ದೇವೇಂದ್ರನೇ–ಎಂಬುದನ್ನು ನಾನು ಹೇಗೆ ತಿಳಿಯಲಿ ? ರಾಮ-ಲಕ್ಷ್ಮಣರೊಡನಿದ್ದಾಗ ನಾನು ದೇವತೆಗಳ ಲಕ್ಷಣಗಳನ್ನು ನೋಡಿ ತಿಳಿದುಕೊಂಡಿರುವೆನು. ನೀನು ದೇವತೆಗಳ ಒಡೆಯನೇ ಆಗಿದ್ದರೆ ಆ ದೇವಲಕ್ಷಣಗಳನ್ನು ನನಗೆ ವ್ಯಕ್ತಪಡಿಸು."

ಸೀತಾದೇವಿಯ ಆ ಮಾತನ್ನು ಕೇಳಿ ಇಂದ್ರನು ಹಾಗೆಯೇ ಮಾಡಿದನು. ಕಾಲುಗಳಿಂದ ಭೂಮಿಯನ್ನು ಸ್ಪರ್ಶಿಸಲಿಲ್ಲ. ರೆಪ್ಪೆಗಳನ್ನು ಮುಚ್ಚಲಿಲ್ಲ. ಧೂಳಿನಿಂದ ಧೂಸರಿತವಾಗದಿರುವ ಪೀತಾಂಬರವನ್ನು ಧರಿಸಿದ್ದನು. ಅಲಂಕರಿಸಿಕೊಂಡಿದ್ದ ಪುಷ್ಪಮಾಲೆಯು ಬಾಡಿರಲಿಲ್ಲ. ದೇವಲಕ್ಷಣಗಳಿಂದ ಕೂಡಿದ್ದ ದೇವೇಂದ್ರನನ್ನು ನೋಡಿ ಇವನು ದೇವೇಂದ್ರನೇ–ಎಂಬುದನ್ನು ಮನಸ್ಸಿನಲ್ಲಿ ಸ್ಥಿರಪಡಿಸಿಕೊಂಡ ಸೀತೆಯು ಪರಮಹರ್ಷಿತೆಯಾಗಿ ರಾಘವನ ವಿಷಯವಾಗಿ ಕಣ್ಣೀರು ಸುರಿಸುತ್ತಾ ಇಂದ್ರನಿಗೆ ಹೇಳಿದಳು :

" ದೇವೇಂದ್ರನೇ ! ತಮ್ಮನಾದ ಲಕ್ಷ್ಮಣನೊಡನೆ ಶ್ರೀರಾಮನು ಸೌಖ್ಯದಿಂದಿರುವನೆಂಬ ವಾರ್ತೆಯನ್ನು ನಾನು ದೈವಯೋಗದಿಂದ ನಿನ್ನಿಂದ ಕೇಳುತ್ತಿದ್ದೇನೆ. ನನಗೆ ನನ್ನ ಮಾವನಾದ ದಶರಥನು ಹೇಗೆ ಮಾನ್ಯನೋ, ತಂದೆಯಾದ ಜನಕನು ಹೇಗೆ ಮಾನ್ಯನೋ–ಹಾಗೆಯೇ ನೀನೂ ಮಾನ್ಯನಾಗಿರುವೆ. ನೀನು ಕೊಡುವ, ಹಾಲಿನಿಂದ ಕೂಡಿದ ರಘುವಂಶೀಯರ ಯಶೋವರ್ಧಕವಾದ ಈ ಹವಿಸ್ಸನ್ನು ಭಕ್ಷಿಸುತ್ತೇನೆ."

ಹೀಗೆ ಹೇಳಿ ಶುಚಿಸ್ಮಿತೆಯಾದ ಸೀತಾದೇವಿಯು ಇಂದ್ರನಿಂದ ಪಾಯಸವನ್ನು ತೆಗೆದುಕೊಂಡು ಪತಿಯಾದ ಶ್ರೀರಾಮನಿಗೂ ಮತ್ತು ಲಕ್ಷ್ಮಣನಿಗೂ ಮನಸ್ಸಿನಲ್ಲಿಯೇ ಅರ್ಪಿಸಿದಳು.

ಯದಿ ಜೀವತಿ ಮೇ ಭರ್ತಾ ಸಹ ಭ್ರಾತ್ರಾ ಮಹಾಬಲಃ ।
ಇದಮಸ್ತು ತಯೋರ್ಭಕ್ತ್ಯಾ ತದಶ್ನಾತ್ಪಾಯಸಂ ಸ್ವಯಮ್ ॥

" ಮಹಾಬಲನಾದ ನನ್ನ ಪತಿಯು ಅನುಜನಾದ ಲಕ್ಷ್ಮಣನೊಡನೆ

ಜೀವಿಸಿರುವುದಾದರೆ–ಈ ಪಾಯಸವು ಅವರಿಬ್ಬರಿಗೂ ಅರ್ಪಿತವಾಗಲಿ "– ಎಂದು ಹೇಳಿ ನಿವೇದಿತವಾದ ಆ ಪಾಯಸವನ್ನು ಪರಮಭಕ್ತಿಯಿಂದ ಕುಡಿದಳು.

ಸುಂದರವಾದ ಮುಖದಿಂದ ಕೂಡಿದ್ದ ಸೀತಾದೇವಿಯು ಇಂದ್ರನು ಕೊಟ್ಟ ಪಾಯಸವನ್ನು ಕುಡಿದು ದುಃಖವನ್ನೂ, ಹಸಿವು-ಬಾಯಾರಿಕೆಗಳನ್ನೂ ನಿವಾರಿಸಿಕೊಂಡಳು. ಇಂದ್ರನಿಂದ ರಾಮ-ಲಕ್ಷ್ಮಣರ ವೃತ್ತಾಂತವನ್ನು ತಿಳಿದ ಸಂತೋಷಗೊಂಡಳು. ಮಹಾತ್ಮನಾದ ಇಂದ್ರನೂ ಸಂತುಷ್ಟನಾಗಿ ಸೀತೆಯ ಅನುಮತಿಯನ್ನು ಪಡೆದು ನಿದ್ರಾದೇವಿಯೊಡನೆ ರಾಘವನ ಕಾರ್ಯದ ಸಿದ್ಧಿಗಾಗಿ ಸ್ವರ್ಗಲೋಕಕ್ಕೆ ಪ್ರಯಾಣಮಾಡಿದನು.

ಪ್ರಕ್ಷಿಪ್ತ ಸರ್ಗವು ಮುಗಿಯಿತು.

ಅರಣ್ಯಕಾಂಡ ೫೭ನೆಯ ಸರ್ಗ

ರಾಮನು ಮಾರೀಚನನ್ನು ಕೊಂದು ಹಿಂದಿರುಗಿ ಬರುವಾಗ ಆಗುತ್ತಿದ್ದ ಅಪಶಕುನಗಳನ್ನು ಕಂಡು ಚಿಂತಿಸಿದುದು : ಸೀತೆಯು ಸಂಕಟದಲ್ಲಿ ಸಿಕ್ಕಿರುವಳೆಂದು ಸಂದೇಹಿಸಿದುದು

ರಾಕ್ಷಸಂ ಮೃಗರೂಪೇಣ ಚರನ್ತಂ ಕಾಮರೂಪಿಣಮ್ ।
ನಿಹತ್ಯ ರಾಮೋ ಮಾರೀಚಂ ತೂರ್ಣಂ ಪಥಿ ನಿವರ್ತತೇ ॥೧॥

ಶ್ರೀರಾಮನು ಮನಬಂದಂತೆ ರೂಪವನ್ನು ಬದಲಾಯಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದ, ಮೃಗರೂಪನಾಗಿ ಅರಣ್ಯದಲ್ಲಿ ಸಂಚರಿಸುತ್ತಿದ್ದ ಮಾರೀಚರಾಕ್ಷಸನನ್ನು ಸಂಹರಿಸಿ ಬಹಳ ಬೇಗ ತಾನು ಹೋದಮಾರ್ಗದಲ್ಲಿಯೇ ಹಿಂದಿರುಗಿ ಬರುತ್ತಿದ್ದನು.

ಮೈಥಿಲಿಯನ್ನು ನೋಡಬೇಕೆನ್ನುವ ಆಸೆಯಿಂದ ಬಹಳ ಶೀಘ್ರವಾಗಿ ಹೆಜ್ಜೆಗಳನ್ನಿಡುತ್ತಾ ಬರುತ್ತಿದ್ದ ರಾಮನ ಹಿಂಭಾಗದಲ್ಲಿ ಗುಳ್ಳೇನರಿಯೊಂದು ಕರ್ಕಶವಾದ ಧ್ವನಿಯಿಂದ ಊಳಿಟ್ಟಿತು. ರೋಮಾಂಚಕರವೂ ಅತಿ ದಾರುಣವೂ ಆಗಿದ್ದ ಆ ಧ್ವನಿಯನ್ನು ಕೇಳಿ ಶ್ರೀರಾಮನು ಸಂಶಯಗೊಂಡು ಅದೇ ವಿಷಯವಾಗಿ ಚಿಂತಿಸತೊಡಗಿದನು :

"ನರಿಯು ಕೂಗಿಕೊಳ್ಳುತ್ತಿರುವುದನ್ನು ನೋಡಿದರೆ ನಮಗೆ ಯಾವುದೋ ಆಪತ್ತು ಉಂಟಾಗಿದೆ. ವೈದೇಹಿಯು ರಾಕ್ಷಸರಿಂದ ಭಕ್ಷಿತಳಾಗದೇ ಕ್ಷೇಮದಿಂದಿರುವಳೇ ? ಮೃಗರೂಪನಾಗಿದ್ದ ಮಾರೀಚನು ನನ್ನ ಧ್ವನಿಯನ್ನೇ ಅನುಕರಿಸಿ ಕೂಗಿಕೊಂಡುದನ್ನು ಲಕ್ಷ್ಮಣನೇನಾದರೂ ಕೇಳಿದ್ದರೆ-ಆ ಆರ್ತ ಧ್ವನಿಯು ನನ್ನದೆಂದೇ ಭಾವಿಸಿ, ಸೀತೆಯಿಂದಲೂ ಪ್ರೇರಿತನಾಗಿ ಅವಳನ್ನು ಆಶ್ರಮದಲ್ಲಿಯೇ ಬಿಟ್ಟು ನನ್ನ ಬಳಿಗೆ ಬಹಳ ಶೀಘ್ರವಾಗಿಯೇ ಬಂದುಬಿಡುತ್ತಾನೆ. ರಾಕ್ಷಸರೆಲ್ಲರೂ ಸಂಘಟಿತರಾಗಿ ಸೀತೆಯನ್ನು ವಧಿಸಲು ಇಚ್ಛಿಸಿರಬಹುದು. ಈ ಕಾರಣದಿಂದಲೇ ಅವರು ಈ ಯೋಜನೆಯನ್ನು ಸಿದ್ಧಗೊಳಿಸಿರಬಹುದು. ಈ ದುಷ್ಟಯೋಜನೆಯ ಅಂಗವಾಗಿ ಮಾರೀಚನು ಚಿನ್ನದ ಜಿಂಕೆಯ ರೂಪವನ್ನು ತಾಳಿ ನನ್ನನ್ನು ಆಶ್ರಮದಿಂದ ಬಹಳ ದೂರಕ್ಕೆ ಕರೆದೊಯ್ದು ಬಳಿಕ ನನ್ನ ಬಾಣದಿಂದ ಹತನಾಗಿ ನಿಜರೂಪವನ್ನು ಹೊಂದಿ – 'ಹಾ ಲಕ್ಷ್ಮಣ ! ನಾನು ಸತ್ತುಹೋದೆನು'-ಎಂದು ನನ್ನ ಧ್ವನಿಯನ್ನೇ ಅನುಕರಿಸಿ ಕೂಗಿಕೊಂಡಿರುವನು.

ಆ ಧ್ವನಿಯನ್ನು ಕೇಳಿ ಲಕ್ಷ್ಮಣನಂತೂ ಇಲ್ಲಿಗೆ ಬರುವುದು ನಿಶ್ಚಯ. ನಾವಿಬ್ಬರೂ ಇಲ್ಲದೇ ಆಶ್ರಮದಲ್ಲಿ ಏಕಾಕಿನಿಯಾಗಿರುವ ಸೀತೆಯು ನಿಶ್ಚಯವಾಗಿಯೂ ಕುಶಲಿಯಾಗಿರುವಳೇ ? ಜನಸ್ಥಾನದ ನಿಮಿತ್ತವಾಗಿ ನಾನು ರಾಕ್ಷಸರಿಗೆ ಬದ್ಧವೈರಿಯಾಗಿದ್ದೇನೆ. ಮೇಲಾಗಿ ಘೋರವಾದ, ಅಶುಭಕರವಾದ ಶಕುನಗಳೂ ಕಾಣಿಸಿಕೊಳ್ಳುತ್ತಿವೆ."

ಗುಳ್ಳೇನರಿಯ ಕರ್ಕಶಧ್ವನಿಯನ್ನು ಕೇಳಿದ ಶ್ರೀರಾಮನು ಹೀಗೆ ಚಿಂತಿಸುತ್ತಾ ಆಶ್ರಮದ ಕಡೆಗೆ ಬಹಳ ತ್ವರೆಯಿಂದ ಬರುತ್ತಿದ್ದನು. ಮೃಗರೂಪನಾದ ರಾಕ್ಷಸನು ವಂಚನೆಯಿಂದ ತನ್ನನ್ನು ಬಹಳ ದೂರದವರೆಗೆ ಸೆಳೆದುಕೊಂಡು ಹೋದುದನ್ನೇ ರಾಮನು ಬಾರಿಬಾರಿಗೂ ಚಿಂತಿಸುತ್ತಿದ್ದನು. ಸೀತೆಯು ಜೀವಿಸಿರುವಳೇ ? ರಾಕ್ಷಸರು ಈ ವೇಳೆಗಾಗಲೇ ಸೀತೆಯನ್ನು ಕೊಂದುಬಿಟ್ಟರಬಹುದೇ ?-ಎಂಬ ಸಂದೇಹದಿಂದಲೇ ರಾಮನು ಜನಸ್ಥಾನಕ್ಕೆ ಬಂದನು. ದೀನವಾದ ಮನಸ್ಸಿನಿಂದ ಕೂಡಿದ್ದ, ಸೀತೆಯ ಚಿಂತೆಯಿಂದಾಗಿ ಬಹಳ ಕುಗ್ಗಿಹೋಗಿದ್ದ ಶ್ರೀರಾಮನ ಮುಂಭಾಗದಲ್ಲಿ ಅನೇಕ ಮೃಗ-ಪಕ್ಷಿಗಳು ಹಾದುಹೋದುವು. ಆದರೆ ಅವೆಲ್ಲವೂ ಮಹಾತ್ಮನಾದ

ಶ್ರೀರಾಮನನ್ನು ಅಪ್ರದಕ್ಷಿಣವಾಗಿ ಬಳಸಿಕೊಂಡು ಭಯಂಕರವಾಗಿ ಕೂಗುತ್ತಾ ಹೋಗುತ್ತಿದ್ದುವು. ರಾಮನು ಅಶುಭಸೂಚಕಗಳಾದ ಆ ನಿಮಿತ್ತಗಳೆಲ್ಲವನ್ನೂ ನೋಡುತ್ತಾ ಅತ್ಯಂತವೇಗದಿಂದ ಮತ್ತು ಅವಸರದಿಂದ ಆಶ್ರಮದ ಕಡೆಗೆ ಬರುತ್ತಿದ್ದನು. ಹೀಗೆ ರಾಮನು ವರಾರೋಹೆಯಾದ ಸೀತಾದೇವಿಯನ್ನೂ ಮಹಾಬಲನಾದ ಲಕ್ಷ್ಮಣನನ್ನೂ ಚಿಂತಿಸುತ್ತಾ ಜನ



ಸ್ಥಾನದ ಕಡೆಗೆ ಬರುತ್ತಿದ್ದಾಗ ಲಕ್ಷ್ಮಣನೂ ತನ್ನ ಕಡೆಗೇ ಬರುತ್ತಿರುವುದನ್ನೂ ನೋಡಿದನು. ಲಕ್ಷ್ಮಣನ ಮುಖವು ಬಾಡಿದ್ದಿತು. ಸ್ವಲ್ಪ ದೂರದಲ್ಲಿಯೇ ಇದ್ದ ಲಕ್ಷ್ಮಣನು ಮರುಕ್ಷಣದಲ್ಲಿಯೇ ರಾಮನನ್ನು ಸೇರಿದನು.

ಆ ಸಮಯದಲ್ಲಿ ಇಬ್ಬರ ಸ್ಥಿತಿಯೂ ಒಂದೇ ಆಗಿದ್ದಿತು. ಸೀತೆಯ

ಚಿಂತೆಯಿಂದ ವಿಷಣ್ಣನಾಗಿದ್ದ ಮತ್ತು ದುಃಖಿತನಾಗಿದ್ದ ಶ್ರೀರಾಮನೂ ಸೀತೆಯ ಮಾತಿನಿಂದ ದುಃಖಿತನಾಗಿದ್ದ ಮತ್ತು ವಿಷಣ್ಣನಾಗಿದ್ದ ಲಕ್ಷ್ಮಣನೂ ಒಟ್ಟಾಗಿ ಸೇರಿದರು. ರಾಕ್ಷಸರಿಂದ ತುಂಬಿಹೋಗಿದ್ದ, ಮನುಷ್ಯರಿಂದ ರಹಿತವಾಗಿದ್ದ, ಭಯಂಕರವಾದ ಅರಣ್ಯದಲ್ಲಿ ಸೀತೆಯೊಬ್ಬಳನ್ನೇ ಬಿಟ್ಟುಬಂದುದಕ್ಕಾಗಿ ರಾಮನು ಲಕ್ಷ್ಮಣನನ್ನು ನಿಂದಿಸಿದನು. ಲಕ್ಷ್ಮಣನ ಎಡಗೈಯನ್ನು ಹಿಡಿದು ಪರಿಣಾಮದಲ್ಲಿ ಮೃದುವಾಗಿಯೂ ಪ್ರಾರಂಭದಲ್ಲಿ ಕಠಿಣವಾಗಿಯೂ ಇದ್ದ ಕರುಣಾಜನಕವಾದ ಮಾತುಗಳನ್ನು ಹೇಳಿದನು :

**ಅಹೋಃ ಲಕ್ಷ್ಮಣ ಗರ್ಹ್ಯಂ ತೇ ಕೃತಂ ಯಸ್ತ್ವಂ ವಿಹಾಯ ತಾಮ್ ।**
**ಸೀತಾಮಿಹಾಗತಃ ಸೌಮ್ಯ ಕಚ್ಚಿತ್ಸ್ವಸ್ತಿ ಭವೇದಿಹ ॥೨೦॥**

"ಲಕ್ಷ್ಮಣ! ನೀನು ಸೀತೆಯೊಬ್ಬಳನ್ನೇ ಬಿಟ್ಟು ಬಂದಿರುವುದು ಅತಿ ನಿಂದ್ಯವಾದ ಕಾರ್ಯವಾಗಿದೆ. ಸೌಮ್ಯನೇ! ನೀನೊಬ್ಬನೇ ಇಲ್ಲಿಗೆ ಬಂದಿರುವುದರಿಂದ ಅವಳು ನಿಶ್ಚಯವಾಗಿಯೂ ಕುಶಲಿನಿಯಾಗಿರುವಳೇ?

ವನಚರರಾದ ರಾಕ್ಷಸರು ಸೀತೆಯನ್ನು ಭಕ್ಷಿಸಿರಬಹುದು ಅಥವಾ ಅಪಹರಿಸಿರಬಹುದು. ಇದರಲ್ಲಿ ಸಂಶಯವೇ ಇಲ್ಲ. ಅಶುಭಸೂಚಕವಾದ ನಿಮಿತ್ತಗಳೂ ನನ್ನ ಮುಂದೆ ಕ್ಷಣ-ಕ್ಷಣಕ್ಕೂ ಕಾಣಿಸಿಕೊಳ್ಳುತ್ತಿವೆ. ಲಕ್ಷ್ಮಣ! ಜೀವಿಸಿರುವ ಸೀತೆಯನ್ನು ಅವಳು ಹಿಂದಿದ್ದಂತೆಯೇ ನಾವು ಪಡೆಯುವೆವೇ?* ಮೃಗಗಳ ಸಮೂಹಗಳೂ, ಗುಳ್ಳೇನರಿಗಳೂ, ಕಾಗೆಯೇ ಮೊದಲಾದ ಪಕ್ಷಿಗಳೂ ಬೆಳಗುತ್ತಿರುವ ಸೂರ್ಯನ ದಿಕ್ಕಿಗೆ ಅಭಿಮುಖವಾಗಿ

---

* ಸೀತಾಯಾಃ ಸಾಮಗ್ರ್ಯಂ ಪ್ರಾಪ್ಸ್ಯಾಮಹೇ–ಎಂದು ಮೂಲವಿದೆ. ಸಮಗ್ರಃ = ಪೂರ್ಣವಾದ. ಸಾಮಗ್ರ್ಯಂ ಪೂರ್ಣವಾಗಿರುವಿಕೆ. ಸೀತೆಯು ಬದುಕಿದ್ದರೂ ಕೈಕಾಲುಗಳನ್ನು ರಾಕ್ಷಸರು ಕತ್ತರಿಸಿಹಾಕಿರಬಹುದು. ಆದುದರಿಂದ ಸಾಮಗ್ರ್ಯಂ ಎಂಬುದಕ್ಕೆ ವ್ಯಾಖ್ಯಾನಕಾರರು (೧) ಅವಿಚ್ಛಿನ್ನಾವಯವತ್ವಂ–ಅವಯವಗಳಿಂದ ಭಿನ್ನವಾಗದೇ ಇರತಕ್ಕ ಜೀವಂತಳಾದ ಸೀತಾದೇವಿಯನ್ನು (೨) ಅಕ್ಷತತ್ತ್ವಂ ಗಾಯಗೊಳ್ಳದೇ ಇರುವ ಜೀವಂತಳಾದ ಸೀತಾದೇವಿಯನ್ನು (೩) ಕ್ಷೇಮಂ, ಅನಪಹರಣರೂಪಂ ಕ್ಷೇಮಂ, ಯಾರೊಬ್ಬರೂ ಅಪಹರಿಸದೇ ಅವಳು ಕ್ಷೇಮವಾಗಿ ಜೀವಂತಳಾಗಿರುವುದನ್ನು–ಎಂಬುದಾಗಿ ಅರ್ಥ ಮಾಡಿರುತ್ತಾರೆ 'ಹೇಗಿದ್ದಳೋ ಹಾಗೆಯೇ ನಾವು ಪಡೆಯುತ್ತೇವೆಯೇ?'–ಎಂಬುದೂ ಸಮಂಜಸವಾಗಿ ಕಾಣುತ್ತದೆ.

( ಸೂರ್ಯನ ಎದುರಿಗೆ ) ನಿಂತು ಭಯಂಕರವಾಗಿ ಶಬ್ದಮಾಡುತ್ತಿವೆ. ಇಂತಹ ಅಶುಭಸೂಚಕವಾದ ನಿಮಿತ್ತಗಳು ಕಾಣಬರುತ್ತಿರುವಾಗ ಸೀತೆಯು ಕುಶಲಿನಿಯಾಗಿ ಹೇಗೆ ತಾನೇ ಇದ್ದಾಳು?

ಲಕ್ಷ್ಮಣ! ಚಿನ್ನದ ಜಿಂಕೆಯಾಗಿದ್ದ ರಾಕ್ಷಸನು ನನ್ನಲ್ಲಿ ಆಶೆಯನ್ನು ಹುಟ್ಟಿಸುತ್ತಾ ಬಹಳ ದೂರಕ್ಕೆ ನನ್ನನ್ನು ಒಯ್ದುಬಿಟ್ಟನು. ಜೀವಂತವಾಗಿ ಮೃಗವನ್ನು ತರಲು ಸಾಧ್ಯವಾಗದೇ ನಾನು ಬಹಳ ಶ್ರಮಪಟ್ಟು ಅದನ್ನು ಸಂಹರಿಸಿದೆನು. ಆದರೆ ಸಾಯುವಾಗ ಅದು ರಾಕ್ಷಸನಾಗಿ ಪರಿವರ್ತನೆ ಹೊಂದಿತು.

ಮನಶ್ಚ ಮೇ ದೀನಮಿಹಾಪ್ರಹೃಷ್ಟಂ
ಚಕ್ಷುಶ್ಚ ಸವ್ಯಂ ಕುರುತೇ ವಿಕಾರಮ್ ।
ಅಸಂಶಯಂ ಲಕ್ಷ್ಮಣ ನಾಸ್ತಿ ಸೀತಾ
ಹೃತಾ ಮೃತಾ ವಾ ಪಥಿ ವರ್ತತೇ ವಾ ॥ ೨೫॥

ನನ್ನ ಮನಸ್ಸು ಬಹಳವಾಗಿ ವ್ಯಾಕುಲಗೊಂಡಿದೆ. ಸಂತಸದಿಂದಿಲ್ಲ. ನನ್ನ ಎಡಗಣ್ಣು ಅದುರುತ್ತಿದೆ. ಈ ಕಾರಣಗಳಿಂದಾಗಿ ಈಗ ಸೀತೆಯು ಆಶ್ರಮದಲ್ಲಿ ಇಲ್ಲವೆಂಬುದರಲ್ಲಿ ಸಂಶಯವೇ ಇಲ್ಲ. ಅವಳು ಅಪಹೃತಳಾಗಿದ್ದಾಳೆ ಅಥವಾ ಸತ್ತಿದ್ದಾಳೆ. ಅಥವಾ ಯಾವುದೋ ದಿಕ್ಕುಗಾಣದ ಮಾರ್ಗದಲ್ಲಿದ್ದಾಳೆ."

ಐ೭ನೆಯ ಸರ್ಗವು ಮುಗಿಯಿತು.

ಳನೆಯ ಸಂಪುಟವು ಮುಗಿಯಿತು.

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು

ಸೀತಾ-ಲಕ್ಷ್ಮಣ-ಭರತ-ಶತ್ರುಘ್ನ-ಹನೂಮತ್ಸಮೇತ
ಶ್ರೀರಾಮಚಂದ್ರಾರ್ಪಣಮಸ್ತು

ಓಂ ತತ್ಸತ್



# ಪರಿಶಿಷ್ಟ

## ಅಗಸ್ತ್ಯರ ಆಶ್ರಮದಲ್ಲಿ ಶ್ರೀರಾಮನ ನಿಲ್ಗಡೆ

ಹೃದಯಸ್ಥಶ್ಚ ತೇ ಛನ್ದೋ ವಿಜ್ಞಾತಸ್ತಪಸಾ ಮಯಾ ।
ಇಹ ವಾಸಂ ಪ್ರತಿಜ್ಞಾಯ ಮಯಾ ಸಹ ತಪೋವನೇ ।
(ವಸನ್ತಂ ತ್ವಾಂ ಜನಾಃ ಸರ್ವೇ ಜ್ಞಾಸ್ಯನ್ತಿ ರಘುನನ್ದನ) ॥೧೮॥

ಅತಶ್ಚ ತ್ವಾಮಹಂ ಬ್ರೂಮಿ ಗಚ್ಛ ಪಞ್ಚವಟೀಮಿತಿ ।
ಸ ಹಿ ರಮ್ಯೋ ವನೋದ್ದೇಶೋ ಮೈಥಿಲೀ ತತ್ರ ರಂಸ್ಯತೇ ॥೧೯॥

ಅರಣ್ಯಕಾಂಡ–ಸರ್ಗ–೧೩

ಹಿಂದಿನ ಕೆಲವು ಮಾತುಗಳನ್ನು ಸೇರಿಸಿಕೊಂಡು ಈ ಎರಡು ಶ್ಲೋಕಗಳಿಗೂ ವ್ಯಾಖ್ಯಾನಕಾರರು ಮೂರು ಬಗೆಯಲ್ಲಿ ಅರ್ಥಮಾಡಿರುತ್ತಾರೆ. ಈ ಹಿಂದೆ ರಾಮನು ಲಕ್ಷ್ಮಣನೊಡನೆ – "ಆರಾಧಯಿಷ್ಯಾಮ್ಯತ್ರಾಹ–ಮಗಸ್ತ್ಯಂ ತಂ ಮಹಾಮುನಿಮ್ । ಶೇಷಂ ಚ ವನವಾಸಸ್ಯ ಸೌಮ್ಯ ವತ್ಸ್ಯಾಮ್ಯಹಂ ಪ್ರಭೋ ॥೧೧–೮೪॥ ಉಳಿದ ವನವಾಸದ ಅವಧಿಯನ್ನು ಈ ಅಗಸ್ತ್ಯರ ಆಶ್ರಮದಲ್ಲಿಯೇ ಕಳೆಯುತ್ತೇನೆ. ಅಗಸ್ತ್ಯರನ್ನೇ ಶುಶ್ರೂಷೆಮಾಡಿಕೊಂಡು ಇಲ್ಲಿಯೇ ಇದ್ದುಬಿಡುತ್ತೇನೆ"–ಎಂದು ಹೇಳಿದ್ದನು. ಹೀಗೆ ಲಕ್ಷ್ಮಣನೊಡನೆ ಹೇಳಿದ್ದ ರಾಮನು ಅಗಸ್ತ್ಯರ ಆಶ್ರಮಕ್ಕೆ ಬಂದು ಅವರಿಂದ ಯಥೋಚಿತವಾದ ಸತ್ಕಾರವನ್ನು ಪಡೆದನಂತರ– ಕಿಂ ತು ವ್ಯಾದಿಶ ಮೇ ದೇಶಂ (೧೩–೧೧) 'ನಾನು ತಂಗಲು ನೀರಿನ ಸೌಕರ್ಯವಿರುವ, ದಟ್ಟವಾದ ಅರಣ್ಯವಿರುವ ಯಾವುದಾದರೂ ಸ್ಥಳವನ್ನು ಸೂಚಿಸಿರಿ'–ಎಂದು ಕೇಳುತ್ತಾನೆ.

ಮೊದಲು ಅಗಸ್ತ್ಯಾಶ್ರಮದಲ್ಲಿಯೇ ಇರುವುದಾಗಿ ನಿರ್ಧರಿಸಿದ್ದವನು ಈಗ ಬೇರೆಯ ಕಡೆಗೆ ಹೋಗಿ ನೆಲೆಸಲು ಕಾರಣ ನಾನಾಪ್ರಕಾರವಾಗಿ ಊಹಿಸಲ್ಪಟ್ಟಿದೆ. ಒಬ್ಬ ವ್ಯಾಖ್ಯಾನಕಾರರ ಅಭಿಪ್ರಾಯದಂತೆ – 'ಈ ಅಗಸ್ತ್ಯಾಶ್ರಮಕ್ಕೆ ರಾಕ್ಷಸರು ಬರುವ ಅವಕಾಶವೇ ಇಲ್ಲ. ರಾಕ್ಷಸರನ್ನು ಸಂಹರಿಸುವುದು ನನ್ನ ಪ್ರತಿಜ್ಞೆಯಾಗಿದೆ. ಆದುದರಿಂದ ಇಲ್ಲಿಯೇ ಇದ್ದುಬಿಟ್ಟರೆ ರಾಕ್ಷಸರ ಸಂಹಾರವಾಗುವುದಿಲ್ಲ. ಆದುದರಿಂದ ಬೇರೆಯ ಕಡೆಗೆ ಹೋಗಬೇಕು' – ಎಂದು ಶ್ರೀರಾಮನು ಮನಸ್ಸಿನಲ್ಲಿ ಯೋಚಿಸಿದ್ದನು.

ಶ್ರೀರಾಮನ ಹೃದಯಾಂತರ್ಗತವಾಗಿದ್ದ ಅಭಿಪ್ರಾಯವನ್ನೇ ಅಗಸ್ತ್ಯರು ತಪಃಪ್ರಭಾವದಿಂದ ತಿಳಿದುಕೊಂಡು ಹೇಳುತ್ತಾರೆ: "ರಾಮ! ನಿನ್ನ ಹೃದಯದ ಅಭಿಪ್ರಾಯವೇನೆಂಬುದು ನನಗೆ ತಿಳಿದಿದೆ. ನೀನು ಈ ಹಿಂದೆ ವನವಾಸದ ಅವಧಿಯು ಮುಗಿಯುವವರೆಗೂ ನನ್ನೊಡನೆಯೇ ಇರಲು ನಿಶ್ಚಯಿಸಿ ಇಲ್ಲಿಗೆ ಬಂದೆ. ಆದರೆ ಇಲ್ಲಿಯ ವಾತಾವರಣವನ್ನು ನೋಡಿದ ನಂತರ ರಾಕ್ಷಸರ ಸಂಹಾರಕಾರ್ಯವು ಇಲ್ಲಿ ಸಾಧ್ಯವಾಗಲಾರದೆಂದು ನಿನಗೆ ತೋರಿತು. ರಾಕ್ಷಸರ ಸಂಹಾರವೇ ನಿನ್ನ ಅರಣ್ಯ ಪ್ರವಾಸದ ಮುಖ್ಯವಾದ ಉದ್ದೇಶ. ಆದುದರಿಂದ ನೀನು-ಕಿಂ ತು ವ್ಯಾದಿಶ ಮೇ ದೇಶಂ-ಎಂದು ನನ್ನನ್ನು ಕೇಳಿದೆ. ನಿನ್ನ ಹೃದಯದಲ್ಲಿರುವ ಈ ವಿಷಯಗಳೆಲ್ಲವನ್ನೂ ನನ್ನ ತಪಃಪ್ರಭಾವದಿಂದ ತಿಳಿದಿರುವ ನಾನು ಪಂಚವಟಿಗೆ ಹೋಗುವಂತೆ ಹೇಳುತ್ತಿದ್ದೇನೆ"–ಇದು ಅವರ ವ್ಯಾಖ್ಯಾನವಾಗಿದೆ. ಇನ್ನೊಬ್ಬರು ಇದನ್ನೇ ಸ್ವಲ್ಪ ವ್ಯತ್ಯಾಸವಾಗಿ ಹೇಳಿದ್ದಾರೆ: "ರಾಮ! ನೀನು ನನ್ನ ಆಶ್ರಮಕ್ಕೆ ಬಂದ ಉದ್ದೇಶವೇ ರಾಕ್ಷಸರ ಸಂಹಾರಕ್ಕಾಗಿ. ಆದುದರಿಂದಲೇ ನಾನು ನಿನ್ನನ್ನು ಪಂಚವಟಿಗೆ ಹೋಗುವಂತೆ ಹೇಳುತ್ತಿದ್ದೇನೆ. ನನ್ನ ಆಶ್ರಮಪ್ರದೇಶಕ್ಕೆ ರಾಕ್ಷಸರು ಬರುವ ಸಾಧ್ಯತೆಯಿಲ್ಲ."

ಮತ್ತೊಬ್ಬರ ವ್ಯಾಖ್ಯಾನವು ಮತ್ತೊಂದು ವಿಧಾನದಲ್ಲಿದೆ:

"ರಾಮ! ತಪಸಾ ಎಂದರೆ ಆಲೋಚನೆಯಿಂದಲೂ ಮತ್ತು ನಿನ್ನ ಮಾತಿನ ಭಂಗಿಯಿಂದಲೂ ನಿನ್ನ ಮನಸ್ಸಿನ ಅಭಿಪ್ರಾಯವೇನೆಂಬುದನ್ನು ನಾನು ತಿಳಿದಿರುವೆನು. ಮೊದಲು ನನ್ನ ಆಶ್ರಮದಲ್ಲಿ ಇರಬೇಕೆಂದೇ ನೀನು ನಿಶ್ಚಯಿಸಿ ಇಲ್ಲಿಗೆ ಬಂದೆ. ನೀನು ಈ ಆಶ್ರಮಕ್ಕೆ ಬಂದಿದ್ದರಿಂದ–'ಅಲಂಕೃತೋಽಯಂ ದೇಶಶ್ಚ'–ಈ ದೇಶವು ನಿನ್ನ ಸಾನ್ನಿಧ್ಯದಿಂದಾಗಿ ಅಲಂಕೃತವಾಯಿತು'–ಎಂದು ನಾನೂ ನಿನ್ನನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದೆನು. ಆದರೆ ಇಲ್ಲಿಯ ವಾತಾವರಣವನ್ನೆಲ್ಲಾ ಕೂಲಂಕಷವಾಗಿ ಪರೀಕ್ಷಿಸಿದ ನೀನು ಮರುಕ್ಷಣದಲ್ಲಿಯೇ–'ಕಿಂ ತು ವ್ಯಾದಿಶ ಮೇ ದೇಶಂ–ನನ್ನ ವಸತಿಗಾಗಿ ಬೇರೊಂದು ಸ್ಥಳವನ್ನು ಸೂಚಿಸಿರಿ'–ಎಂದು ಹೇಳಿದೆ. ನಿನ್ನ ಹೃದಯದಲ್ಲಿ ಖರ-ದೂಷಣಾದಿಗಳನ್ನು ಸಂಹರಿಸುವುದೇ ಮುಖ್ಯವಾದ ಆಶಯವಾಗಿದೆ. ಆದುದರಿಂದ ನೀನು ನಿಶ್ಚಯಿಸಿದ್ದಂತೆ ಈ ತಪೋವನ

ದಲ್ಲಿಯೂ ಸ್ವಲ್ಪ ದಿನಗಳಿದ್ದು ಅನಂತರ ನನ್ನ ಅನುಮತಿಯನ್ನು ಪಡೆದು ನೀನು ಪಂಚವಟಿಗೆ ಹೋಗು ಎಂದು ಹೇಳುತ್ತಿದ್ದೇನೆ."

ಆದರೆ ಈ ಪ್ರಕರಣದಲ್ಲಿ ವಿಶೇಷಾರ್ಥವನ್ನು ಕಲ್ಪಿಸುವ ಕಾರಣವೇನೂ ಕಾಣುವುದಿಲ್ಲ. ಶ್ರೀರಾಮನು ಲಕ್ಷ್ಮಣನೊಡನೆ ವನವಾಸದ ಉಳಿದ ಅವಧಿಯನ್ನು ಅಗಸ್ತ್ಯರ ಶುಶ್ರೂಷೆಯಲ್ಲಿ ಕಳೆಯಬೇಕೆಂದು ಹೇಳಿದನು. ಆಗ ಅವನು ರಾಕ್ಷಸರೊಡನೆ ಯುದ್ಧಮಾಡಬೇಕೆಂಬ ಆಶಯವನ್ನು ಸೂಚಿಸಲಿಲ್ಲ. ರಾಕ್ಷಸರು ಎದುರಾಗಿ ಬಂದರೆ–ತನಗೇನಾದರೂ ಉಪಟಳಕೊಟ್ಟರೆ ಅಥವಾ ಋಷಿಗಳಿಗೆ ಉಪಟಳಕೊಡುತ್ತಿದ್ದರೆ–ಅವರೊಡನೆ ಯುದ್ಧಮಾಡಿ ಅವರನ್ನು ಸಂಹರಿಸುವ ಆಶಯವು ಶ್ರೀರಾಮನಿಗಿದ್ದಿತೇ ಹೊರತು ಸಂಹಾರಕ್ಕೆ ಅವರನ್ನೇ ಹುಡುಕಿಕೊಂಡು ಹೋಗುವ ಉದ್ದೇಶವಿದ್ದಂತೆ ಎಲ್ಲಿಯೂ ಕಂಡುಬರುವುದಿಲ್ಲ.

ಬಾಯಿಂದ ಮಾತ್ರ ಅಗಸ್ತ್ಯಾಶ್ರಮದಲ್ಲಿರಲು ಲಕ್ಷ್ಮಣನೊಡನೆ ಹೇಳಿ ಮನಸ್ಸಿನಲ್ಲಿ ರಾಕ್ಷಸರ ವಧೆಯ ಸಂಕಲ್ಪವನ್ನಿಟ್ಟುಕೊಂಡು ಅಗಸ್ತ್ಯರ ಆಶ್ರಮಕ್ಕೆ ಹೋಗುವುದು ಶ್ರೀರಾಮನ ಉದ್ದೇಶವೂ ಅಲ್ಲ. ಬಾಯಿಂದ ಒಂದನ್ನು ಹೇಳಿ ಮನಸ್ಸಿನಲ್ಲಿ ಮತ್ತೊಂದನ್ನು ಬಗೆಯುವವನು ಶ್ರೀರಾಮನಲ್ಲ.

ಅಗಸ್ತ್ಯರ ಆಶ್ರಮಕ್ಕೆ ಶ್ರೀರಾಮನು ಬಂದಿರುವುದು ಅಗಸ್ತ್ಯರ ಆಶ್ರಮದಲ್ಲಿಯೇ ಇದ್ದುಬಿಡಬೇಕೆಂದೂ ಅಲ್ಲ. ಅವರ ಸಮೀಪವರ್ತಿಯಾಗಿದ್ದು ಅವರನ್ನು ಆಗಿಂದಾಗ್ಗೆ ಶುಶ್ರೂಷೆಮಾಡಬೇಕೆಂಬ ಆಶಯದಿಂದ ಮಾತ್ರ. ಏಕೆಂದರೆ: ರಾಜನಾದವನು ಎಂದಿಗೂ ಮತ್ತೊಬ್ಬರ ಆಶ್ರಯದಲ್ಲಿ ಇರತಕ್ಕವನಲ್ಲ. ಈ ಕಾರಣದಿಂದಾಗಿ ಅವನು–'ಕಿಂ ತು ವ್ಯಾದಿಶ ಮೇ ದೇಶಂ'–ಎಂದು ಅಗಸ್ತ್ಯರನ್ನು ಪ್ರಾರ್ಥಿಸಿದ್ದರಲ್ಲಿ ವಿಶೇಷವೇನೂ ಕಾಣುವುದಿಲ್ಲ. ಆಶ್ರಮದ ಹತ್ತಿರದಲ್ಲಿರುವ ಒಂದು ಸ್ಥಳವನ್ನು ಸೂಚಿಸಿರಿ–ಎಂಬ ಅರ್ಥವೇ ಹೊರತು ಇಲ್ಲಿಗೆ ರಾಕ್ಷಸರು ಬರುವುದಿಲ್ಲ. ರಾಕ್ಷಸರು ಬಂದು ಹೋಗುವ ಸ್ಥಳವನ್ನು ಸೂಚಿಸಿರಿ–ಎಂದು ಅರ್ಥಮಾಡಬೇಕಾದ ಕಾರಣವಿಲ್ಲ.

ಛನ್ದಃ ಎಂದರೆ ಅಭಿಪ್ರಾಯ ಎಂದರ್ಥ. ಅಭಿಪ್ರಾಯವಳಾ

ಘನೌ (ಅಮರಃ) 'ನನ್ನ ತಪೋವನದಲ್ಲಿ ನನ್ನೊಡನೆ ಇರಬೇಕೆಂದು ನೀನು ಮನಸ್ಸಿನಲ್ಲಿ ಅಂದುಕೊಂಡಿದ್ದು ಮತ್ತು ಅಂತೆಯೇ ಲಕ್ಷ್ಮಣನೊಡನೆ ಹೇಳಿದ್ದು–ಇದನ್ನು ನಾನು ತಪಸ್ಸಿನ ಮೂಲಕ ತಿಳಿದುಕೊಂಡೆನು. ಈ ಕಾರಣದಿಂದಲೇ ನಿನ್ನ ವಾಸಸ್ಥಳವನ್ನೂ ಮೊದಲೇ ನಿಶ್ಚಯಿಸಿದ್ದು ಈಗ ಪಂಚವಟಿಗೆ ಹೋಗಲು ಹೇಳುತ್ತಿದ್ದೇನೆ.' ಇಷ್ಟುಮಾತ್ರ ಅರ್ಥಮಾಡಿದರೆ ಉಚಿತವಾಗಿರುತ್ತದೆ. ಮೇಲಾಗಿ ಎರಡು ಯೋಜನಗಳಷ್ಟು ದೂರದಲ್ಲಿರುವ ಪಂಚವಟಿಯು ಆಶ್ರಮಕ್ಕೆ ಸೇರಿದಂತೆಯೇ ಇದೆ ಎನ್ನಬಹುದು. ಅಗಸ್ತ್ಯರ ಆಶ್ರಮದ ಸಮೀಪದಲ್ಲಿಯೇ ಇದ್ದಂತೆಯೂ ಆಯಿತು. ಆದುದರಿಂದ ರಾಕ್ಷಸರ ವಿಷಯವನ್ನು ಮಧ್ಯೆ ತರುವ ಆವಶ್ಯಕವಿಲ್ಲವೆಂಬುದು ನಮ್ಮ ಅಭಿಪ್ರಾಯವಾಗಿದೆ.

——

## ರಕ್ಷಾಪೇಕ್ಷಾಂ ಪ್ರತೀಕ್ಷತೇ

ಅಯೋಧ್ಯಾಕಾಂಡದ ೧೧೬ನೆಯ ಸರ್ಗದಲ್ಲಿರುವ ಕೆಲವು ಸಂದೇಹಾತ್ಮಕವಾದ ವಿಷಯಗಳನ್ನು ಪ್ರಸ್ತಾಪಿಸುವುದೂ ಅಯುಕ್ತವೆನಿಸಲಾರದು. ಇಲ್ಲಿಯ ಪ್ರಕರಣ ಹೀಗಿದೆ: ಋಷಿಗಳೆಲ್ಲರೂ ರಾಮನನ್ನೇ ನಿರ್ದೇಶಿಸಿ ಏನೇನೋ ಮಾತನಾಡಿಕೊಳ್ಳುತ್ತಿದ್ದರು. ರಾಮನು ವಿಷಯವೇನೆಂಬುದನ್ನು ಸ್ಪಷ್ಟವಾಗಿಯೇ ಕುಲಪತಿಗಳನ್ನು ಕೇಳಿದನು. 'ನಮ್ಮಿಂದೇನಾದರೂ ಅಪರಾಧವಾಗಿರುವುದೇ?' ಎಂದು ಶ್ರೀರಾಮನು ಪ್ರಶ್ನಿಸಿದನು. ಕುಲಪತಿಗಳೂ ಅವನ ಪ್ರಶ್ನೆಗೆ ನೇರವಾಗಿಯೇ ಉತ್ತರಕೊಡುತ್ತಾ–"ನೀನು ಆಶ್ರಮಕ್ಕೆ ಬಂದ ಮೇಲೆ ರಾಕ್ಷಸರ ಬಾಧೆಯು ಹೆಚ್ಚಾಗಿದೆ"–ಎಂದು ಹೇಳಿ ಅದರ ಪೂರ್ಣವಿವರಣೆಯನ್ನೇ ಕೊಟ್ಟರು. ಈ ಕಾರಣದಿಂದಲೇ ರಕ್ಷಣೆಗಾಗಿ ಬೇರೆಯ ಆಶ್ರಮಕ್ಕೆ ಹೋಗುವುದಾಗಿಯೂ ಹೇಳಿದರು. ಬೇಕಾದರೆ ನೀನೂ ಅಲ್ಲಿಗೇ ಬರಬಹುದೆಂದೂ ಹೇಳಿದರು. ರಾಮನು ಸಮಾಧಾನಮಾಡಿದರೂ ಕೇಳದೇ ತಮ್ಮ ಶಿಷ್ಯರೊಡನೆ ಕುಲಪತಿಗಳು ಹೊರಟೇಹೋದರು. ಇವಿಷ್ಟು ವಿಷಯಗಳು ಈ ಸರ್ಗದಲ್ಲಿ ಉಕ್ತವಾಗಿವೆ.

ಪ್ರಶ್ನೆಗಳನ್ನು ಹೀಗೆ ಹಾಕಿಕೊಳ್ಳಬಹುದಾಗಿದೆ: ರಾಮನಿದ್ದ ಆಶ್ರ

ಮಕ್ಕೂ ಋಷಿಗಳಿದ್ದ ಆಶ್ರಮಕ್ಕೂ ಹೆಚ್ಚು ದೂರವಿರಲಿಲ್ಲ. ಆಶ್ರಮದಲ್ಲಿ ನಡೆಯುತ್ತಿದ್ದ ರಾಕ್ಷಸರ ದಾಂಧಲೆಯು ರಾಮನಿಗೆ ತಿಳಿಯುತ್ತಿರಲಿಲ್ಲವೇ ? ರಾಮನೇಕೆ ಅವರ ರಕ್ಷಣೆಗೆ ಹೋಗಲಿಲ್ಲ ? ರಾಮನು ನಿರಾಸಕ್ತನಾಗಿದ್ದನೇ ? ಸಕಲಪ್ರಾಣಿಗಳ ರಕ್ಷಕನಾದ ರಾಮನಿಗೆ ಋಷಿಗಳು ತೊಂದರೆಯನ್ನು ಅನುಭವಿಸುತ್ತಿದ್ದರೂ ಸುಮ್ಮನಿರಲು ಸಾಧ್ಯವಾಯಿತೇ ? ಎರಡನೆಯದಾಗಿ : ' ರಾಮನು ಅಲ್ಲಿಗೆ ಆಗಮಿಸಿದ ಮೇಲೆಯೇ ತಮಗೆ ರಾಕ್ಷಸರಿಂದ ತೊಂದರೆ ಸಂಭವಿಸಿದೆ '–ಎಂದು ತಿಳಿದರೂ ರಾಮನನ್ನೂ ತಮ್ಮ ಜೊತೆಯಲ್ಲಿ ಬರಲು ಕುಲಪತಿಗಳು ಏಕೆ ಹೇಳಿದರು ?

ಈ ವಿಷಯವನ್ನು ಹೀಗೆ ವಿಮರ್ಶೆಮಾಡುತ್ತಾ ಹೋದರೆ ಎಲ್ಲವೂ ಅಸಹಜವಾಗಿಯೇ ಕಾಣಬಹುದು. ಆದರೆ ಪರಮಾತ್ಮನ ಸಹಜಗುಣಗಳನ್ನು ನಾವು ಕೂಲಂಕಷವಾಗಿ ಪರಿಶೀಲಿಸಿದರೆ ಈ ಪ್ರಕರಣದಿಂದ ಭ್ರಾಂತಿಯನ್ನೂ ಹೊಂದುವ ಕಾರಣವಿಲ್ಲ. ಪರಮಾತ್ಮನು ದಯಾಮಯನು, ದುಷ್ಟಶಿಕ್ಷಕನು, ಶಿಷ್ಟಪರಿಪಾಲಕನು–ಎಲ್ಲವೂ ನಿಜ. ಭಗವತ್ಸ್ವರೂಪನಾದ ರಾಮನಲ್ಲಿಯೂ ಈ ಎಲ್ಲ ಗುಣಗಳೂ ಇದ್ದುವು ; ಇದರಲ್ಲಾವ ಸಂಶಯವೂ ಇಲ್ಲ. ಆದರೆ ಅನನ್ಯಶರಣರಾಗಿ ಅವನನ್ನು ಮರೆಹೊಗಬೇಕು. ಆಗ ಮಾತ್ರ ಅವನು ಕೂಡಲೇ ತನ್ನ ಆರ್ತರ ರಕ್ಷಣೆಗೆ ಬರುತ್ತಾನೆ. ದ್ರೌಪದಿಯು–' ತನ್ನ ಮಾನವನ್ನು ತಾನೇ ಕಾಪಾಡಿಕೊಳ್ಳಬಲ್ಲೆನು '–ಎಂಬ ಅಭಿಮಾನದಿಂದಿರುವವರೆಗೂ ಕೃಷ್ಣನ ಅನುಗ್ರಹವಾಗಲಿಲ್ಲ. ' ಕೃಷ್ಣ ! ನನ್ನ ಮಾನಾಪಮಾನಗಳೆಲ್ಲವೂ ನಿನಗೇ ಸೇರಿದ್ದು. ನೀನೇ ನನಗೆ ದಿಕ್ಕು '–ಎಂದು ಬಿಗಿಹಿಡಿದಿದ್ದ ಸೀರೆಯನ್ನೂ ಬಿಟ್ಟು ಕೈಮುಗಿದು ಕೇಳಿಕೊಂಡನಂತರವೇ ಕೃಷ್ಣನು ಕುಳಿತಿದ್ದ ಜಾಗದಿಂದಲೇ–' ವಸ್ತ್ರವು ಅಕ್ಷಯವಾಗಲಿ '–ಎಂದನು. ಗಜೇಂದ್ರನು ತನಗೆ ಸಾಧ್ಯವಿರುವಷ್ಟು ಕಾಲ ಸಾಮರ್ಥ್ಯವನ್ನು ತೋರಿ, ಸಾಧ್ಯವಾಗದ ಬಳಿಕ ಮಹಾವಿಷ್ಣುವನ್ನು ಅನನ್ಯಶರಣನಾಗಿ ಮರೆಹೊಕ್ಕನು. ಒಡನೆಯೇ ಮಹಾವಿಷ್ಣುವು ಗರುಡವಾಹನನಾಗಿ ಬಂದು ಗಜೇಂದ್ರನನ್ನು ಮೊಸಳೆಯ ಹಿಡಿತದಿಂದ ತಪ್ಪಿಸಿದನು.

ಇಂತಹ ನಿದರ್ಶನಗಳು ನೂರಾರಿವೆ. ಈ ವಿಷಯವನ್ನೇ ಗಮನಿಸಿ ಮಹಾಮಹಿಮರಾದ ವೇದಾಂತದೇಶಿಕರು ನಿಕ್ಷೇಪರಕ್ಷೆಯಲ್ಲಿ ಹೀಗೆ ಹೇಳಿದ್ದಾರೆ :

**ಸರ್ವಜ್ಞೋಽಪಿ ಹಿ ವಿಶ್ವೇಶಃ ಮಹಾಕಾರುಣಿಕೋಽಪಿ ಸನ್ ।**
**ಸಂಸಾರತಂತ್ರವಾಹಿತ್ವಾತ್ ರಕ್ಷ್ಯಾಪೇಕ್ಷಾಂ ಪ್ರತೀಕ್ಷತೇ ॥**

" ವಿಶ್ವೇಶನು ಸರ್ವಜ್ಞನಾಗಿದ್ದರೂ – ಪರಮಕಾರುಣಿಕನಾಗಿದ್ದರೂ – ಸಕಲರ ಸಂಸಾರಸೂತ್ರವನ್ನೂ ವಹಿಸಿರುವವನಾದ್ದರಿಂದ–' ನನಗೆ ವಿಶೇಷವಾದ ರಕ್ಷಣೆ ಬೇಕು '–ಎಂಬ ಪ್ರಾರ್ಥನೆಯನ್ನು ಭಕ್ತನಿಂದ ಅಪೇಕ್ಷಿಸುತ್ತಾನೆ." *

ಇದರಿಂದ ನಾವು ಈ ಪ್ರಕರಣವನ್ನು ಹೀಗೆ ನಿರೂಪಣೆಮಾಡಬಹುದಾಗಿದೆ: ರಾಮನು ತನಗೆ ಅಪಕಾರಮಾಡದವರ ಮೇಲೆ–ಅವರು ರಾಕ್ಷಸರೇ ಆಗಿದ್ದರೂ – ಕೈಮಾಡಲು ಹೋಗನು. ಈ ವಿಷಯವನ್ನು ಮುಂದೆ ಸೀತೆಯೊಡನೆ ಸ್ಪಷ್ಟವಾಗಿ ಹೇಳುತ್ತಾನೆ. ಋಷಿಗಳ ಆಶ್ರಮದಲ್ಲಿ ನಡೆಯುತ್ತಿದ್ದ ರಾಕ್ಷಸರ ಉಪಟಳವು ಅವನಿಗೆ ಗೊತ್ತಿರಬಹುದು ; ಅಥವಾ ಗೊತ್ತಿಲ್ಲದಿರಬಹುದು. ಋಷಿಗಳು ಮಾತ್ರ ರಾಮನನ್ನು ರಕ್ಷಿಸುವಂತೆ ಪ್ರಾರ್ಥಿಸಲಿಲ್ಲವೆಂಬುದಂತೂ ನಿಶ್ಚಯ.

ಶ್ರೀರಾಮನನ್ನು ವಸಿಷ್ಠಾದಿ ಬ್ರಹ್ಮರ್ಷಿಗಳು ಪರಬ್ರಹ್ಮಸ್ವರೂಪನೆಂದೂ, ಸುಮಂತ್ರಾದಿಗಳು ವಿಭೂತಿಪುರುಷನೆಂದೂ, ಸಾಮಾನ್ಯಜನರು ರಾಮನೊಬ್ಬ ಶ್ರೇಷ್ಠರಾಜನೆಂದೂ ಭಾವಿಸಿದ್ದರು. ಆ ಯುಗದಲ್ಲಿಯೂ ರಾಮನ ವಿಷಯದಲ್ಲಿ ನಾನಾಭಾವನೆಗಳಿದ್ದುವು. ದಶರಥನಿಗೇ ರಾಮನು ಪರಮಾತ್ಮನೆಂಬ ವಿಷಯವು ತಿಳಿದಿರಲಿಲ್ಲ.

ಆದುದರಿಂದ ಚಿತ್ರಕೂಟದಲ್ಲಿ ಋಷಿಗಳೂ ಸಹ ರಾಮನು ರಾಕ್ಷಸರನ್ನು ನಿಗ್ರಹಿಸಲು ಅಸಮರ್ಥನೆಂದೇ ಭಾವಿಸಿದ್ದರೂ ಭಾವಿಸಿರಬಹುದು. ರಾಕ್ಷಸರು ತನಗೆ ಯಾವ ವಿಧವಾದ ಉಪಟಳವನ್ನೂ ಕೊಡದಿರುವಾಗ ಮತ್ತು ಋಷಿಗಳು

---

* ' ತಾಯಿಯ ಹಾಲು ಮಗುವಿಗೆ ಹೇಗೆ ಸಹಜವಾದದ್ದೋ ಹಾಗೆಯೇ ಭಗವತ್ಕೃಪೆಯೂ ಜೀವದ ವಿಷಯದಲ್ಲಿ ನಿರ್ವ್ಯಾಜವಾಗಿ ಹರಿಯುತ್ತದೆ. ಜೀವಗಳ ಪ್ರಾರ್ಥನೆಯ ಅವಶ್ಯಕತೆಯೇನೂ ಅದಕ್ಕೆ ಬೇಕಾಗಿಲ್ಲ '–ಎಂದು ಕೆಲವರು ಹೇಳುತ್ತಾರೆ. ಇದೂ ಸರಿಯೇ ಜೀವಗಳ ಮನಃಪರಿಪಾಕಕ್ಕೆ ತಕ್ಕಂತೆ ಈ ಎರಡು ಅಭಿಪ್ರಾಯಗಳೂ ಸರಿಯೇ ಆಗಿವೆ.

ರಕ್ಷಣೆಗಾಗಿ ತನ್ನನ್ನು ಪ್ರಾರ್ಥಿಸದಿರುವಾಗ-ರಾಮನು ತನಗೆ ರಾಕ್ಷಸರನ್ನು ಕೊಲ್ಲುವ ಸಾಮರ್ಥ್ಯವಿದೆಯೆಂದು ಹೇಳಿಕೊಂಡು ಮುಂದೆ ಹೋಗುವ ವ್ಯಕ್ತಿಯಲ್ಲ. ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮಾನನಾದವನೆಂದು ಹೇಳಿರುವರಲ್ಲವೇ ವಾಲ್ಮೀಕಿಗಳು ? ಋಷಿಗಳು ರಾಮನನ್ನು ತಮ್ಮ ಜೊತೆಯಲ್ಲಿ ಬರಲು ಏಕೆ ಹೇಳಿದರೆಂದರೆ : ಅವರಿಗೆ ಇಚ್ಛೆಯಿಲ್ಲದಿದ್ದರೂ ಅವನನ್ನೂ ಕರೆಯಬೇಕಾದುದು ಅವರ ಧರ್ಮ. ರಾಮನು ಕ್ಷತ್ರಿಯನಾದುದರಿಂದ ರಕ್ಷಣೆಯನ್ನು ಪಡೆಯುವ ಸಲುವಾಗಿ ತಮ್ಮೊಡನೆ ಬರಲಾರನೆಂಬ ವಿಷಯವೂ ಅವರಿಗೆ ಸ್ಪಷ್ಟವಾಗಿ ತಿಳಿದಿತ್ತು.

ಈ ಪ್ರಕರಣದಿಂದ ನಾವು ತಿಳಿದುಕೊಳ್ಳಬೇಕಾದ ಅಂಶವೂ ಒಂದಿದೆ. ಪರಮಾತ್ಮನು ಸಕಲರ ರಕ್ಷಕನಾದರೂ ಅವನಿಗೆ ಭಕ್ತರ ಮೇಲೆ ಹೆಚ್ಚು ಪ್ರೇಮ. ಕಷ್ಟಕ್ಕೆ ಸಿಕ್ಕಿ ಅನನ್ಯಶರಣರಾಗಿ ಅಂಗಲಾಚಿ ಬೇಡಿದ ಭಕ್ತರಿಗೆ ದಯಾಮಯನು ಒಡನೆಯೇ ರಕ್ಷಣೆಯನ್ನು ನೀಡುತ್ತಾನೆ. ಉಳಿದವರು ಕರ್ಮಸಂಬಂಧವಾದ ಕಷ್ಟವನ್ನು ಪೂರ್ಣವಾಗಿ ಅನುಭವಿಸಿಯೇ ತೀರಬೇಕಾಗುತ್ತದೆ. ಕರ್ಮಸಂಬಂಧವಾದ ದುಃಖವನ್ನು ನಿವಾರಿಸಲೂ ಅವನೊಬ್ಬನಿಂದಲೇ ಸಾಧ್ಯ. ಆದುದರಿಂದ ವಿಧಿವಿಲಾಸವೆಂದು ನಿಟ್ಟುಸಿರುಬಿಡುತ್ತಾ ಕುಳಿತುಕೊಳ್ಳದೇ ತಮ್ಮ-ತಮ್ಮ ಆರಾಧ್ಯದೇವತೆಗಳಲ್ಲಿ ಅನನ್ಯಶರಣತೆಯಿಂದ ಇದ್ದು ನಮ್ಮ ಸರ್ವಸ್ವವನ್ನೂ ಅವನಿಗೆ ಅರ್ಪಿಸುತ್ತಿದ್ದರೆ ನಮ್ಮ ಸಂಪೂರ್ಣ ಕಷ್ಟ-ನಷ್ಟಗಳನ್ನೂ ಅವನೇ ವಹಿಸಿಕೊಳ್ಳುವನೆಂಬುವುದರಲ್ಲಿ ಸ್ವಲ್ಪವೂ ಸಂಶಯಿಸಬೇಕಾಗಿಲ್ಲ.

——

ಶ್ರೀರಂಗಸದ್ಗುರವೇ ನಮಃ

# ರಾಮಕಥಾಸೂತ್ರದ ಕೆಲವು ಗಂಟುಗಳು

ಅಷ್ಟಾಂಗಯೋಗವಿಜ್ಞಾನಮಂದಿರದ ಸಂಸ್ಥಾಪಕರಾದ ಮತ್ತು ನಮ್ಮ ಪರಮಗುರುಗಳಾದ ಶ್ರೀರಂಗಮಹಾಗುರುಗಳು ಯಾವುದೇ ಸಮಸ್ಯೆಯನ್ನಾದರೂ ಸುಲಭವಾಗಿ, ಸರಳವಾಗಿ, ಹಾಸ್ಯಮಿಶ್ರವಾಗಿ, ನಿಸ್ಸಂದಿಗ್ಧವಾಗಿ ಬಿಡಿಸುವ ಮಹಾಮೇಧಾವಿಗಳಾಗಿದ್ದರು. ಅವರಿಗೂ ಶ್ರೀ ವರದರಿಗೂ ನಡೆದ ಒಂದು ಸಂಭಾಷಣೆಯಲ್ಲಿ ಅವರು ರಾಮಕಥಾಸೂತ್ರದ ಕೆಲವು ಗಂಟುಗಳನ್ನು ಬಿಡಿಸಿರುವ ರೀತಿಯನ್ನು ಯಥಾವತ್ತಾಗಿ ಇಲ್ಲಿ ಕೊಡಲಾಗಿದೆ.

ಹುಣಸೂರಿನಲ್ಲಿ ಒಂದು ದಿನ ಸಾಯಂಕಾಲ ಶ್ರೀಗುರುದೇವರು ಶ್ರೀವರದರೊಡನೆ ಊರ ಹೊರಗಿರುವ ಒಂದು ಏಕಾಂತಸ್ಥಳಕ್ಕೆ ಹೋಗಿ ಅಲ್ಲಿದ್ದ ಒಂದು ಬಂಡೆಯ ಮೇಲೆ ಕುಳಿತುಕೊಂಡರು. ಆ ಸಮಯದಲ್ಲಿ ಶ್ರೀಗುರುದೇವರಿಗೂ—ಶ್ರೀ ವರದರಿಗೂ ಸಂಭಾಷಣೆ ನಡೆಯಿತು.

ಶ್ರೀ ವರದ :— ಶ್ರೀಮದ್ರಾಮಾಯಣದ ವಿಷಯವಾಗಿ ಒಂದೆರಡು ಸಂಶಯಗಳು ಬಂದಿವೆ. ಅವುಗಳನ್ನು ಅರಿಕೆ ಮಾಡಬಹುದೇ ?

ಶ್ರೀಗುರು :— ಕೇಳಬಹುದಪ್ಪಾ.

ಶ್ರೀ ವರದ :— ಶ್ರೀಮದ್ರಾಮಾಯಣವನ್ನು ದೇವರ ಕಥೆ, ಬ್ರಹ್ಮದೇವರ ಆಶೀರ್ವಾದಗಳನ್ನು ಪಡೆದ ಕಾವ್ಯ, ಮಹರ್ಷಿಯ ರಚನೆ-ಎಂದು ಭಕ್ತಿ-ಶ್ರದ್ಧೆ-ಆನಂದಗಳಿಂದ ನಾನು ಪಾರಾಯಣಮಾಡುತ್ತೇನೆ.

ಇತ್ತೀಚೆಗೆ ನಾನು ಓದಿದ ಒಂದು ಲೇಖನದಲ್ಲಿ ಒಬ್ಬ ದೊಡ್ಡ ವಿದ್ವಾಂಸರು—‹ ರಾಮಾಯಣವು ಒಂದು ಸುಂದರವಾದ ಕಾವ್ಯ. ಕಾವ್ಯಮಾತ್ರವೇ ಆಗಿರುವ ಆ ಗ್ರಂಥದಲ್ಲಿ ತತ್ತ್ವಗಳನ್ನು ಹುಡುಕುವುದು ತಪ್ಪು'—ಎಂದು ಪ್ರತಿಪಾದನೆ ಮಾಡಿದ್ದಾರೆ. ಅದು 'ಧರ್ಮಾಮೃತ' ವಾಗಿರುವ ಗ್ರಂಥ ಎಂಬ ವಿಮರ್ಶಾಗ್ರಂಥವನ್ನೂ ಓದಿದ್ದೇನೆ. 'ಅದು ಸಾಕ್ಷಾತ್ ವೇದದ ಅವತಾರ. ವೇದವೇದ್ಯನಾದ ಪರಮಪುರುಷನು ದಶರಥನ ಪುತ್ರನಾಗಿ ಅವತಾರ ಮಾಡಿದನು. ಆಗ ವೇದವೂ ಕೂಡ ರಾಮಾಯಣದ ರೂಪದಲ್ಲಿ ಅವತರಿಸಿತು.'*

---

*ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ ।
ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ ॥

ಎಂಬ ಅರ್ಥವುಳ್ಳ ಒಂದು ಶ್ಲೋಕವನ್ನು ಹಿರಿಯರು ಹೇಳುತ್ತಾ ಬಂದಿದ್ದಾರೆ. ಅದು ಒಳ್ಳೆಯ ಸಮಾಜಶಾಸ್ತ್ರದ ತತ್ತ್ವಗಳನ್ನು ಪ್ರತಿಪಾದಿಸುವ ಕಾವ್ಯ ಎಂದೂ ಅಭಿನಂದನಮಾಡುತ್ತಾರೆ. ಈ ಅಭಿಪ್ರಾಯಗಳಲ್ಲಿ ಯಾವುದು ಸರಿ ?

ಶ್ರೀಗುರು :– ನಿನಗೆ ಯಾವುದು ಸರಿ ಅನ್ನಿಸುತ್ತೆ ?

ಶ್ರೀ ವರದ :– ಎಲ್ಲ ಅಭಿಪ್ರಾಯಗಳೂ ಸರಿಯಾಗಿವೆ ಎಂದೇ ಅನ್ನಿಸುತ್ತದೆ. ಆಯಾ ವಾದಗಳನ್ನು ಓದಿದಾಗ ಅದೇ ಸರಿ ಎಂದು ಕಂಡು ಬರುತ್ತದೆ.

ಶ್ರೀಗುರು :– ನಿನಗೆ ನಾನು ಮಟ್ಟೆಯೊಡನೆ ಕೂಡಿರುವ ಒಂದು ತೆಂಗಿನಕಾಯಿಯನ್ನು ಕೊಡುತ್ತೇನೆ. ಅದನ್ನು ನೀನು ಹೇಗೆ ಉಪಯೋಗಿಸಿಕೊಳ್ಳುತ್ತೀಯೇ ?

ಶ್ರೀ ವರದ :– ಅದನ್ನು ಭಕ್ತಿಯಿಂದ ತೆಗೆದುಕೊಂಡು ಮಟ್ಟೆಯನ್ನು ಸುಲಿದುಹಾಕಿ ಕರಟವನ್ನು ಒಡೆಯುತ್ತೇನೆ. ಒಳಗಿರುವ ನೀರನ್ನು ಒಂದು ಪಾತ್ರೆಗೆ ಹಾಕಿಕೊಂಡು ತಿರುಳುಕಾಯನ್ನು ಪ್ರಸಾದವೆಂದು ಮನೆಯವರಿಗೆ ಕೊಟ್ಟು ನಾನೂ ಉಪಯೋಗಿಸುತ್ತೇನೆ. ಆ ತೆಂಗಿನಕಾಯಿ ನೀರನ್ನು ಸೇವಿಸುತ್ತೇನೆ. ಕರಟವನ್ನು ಒಲೆಗೆ ಹಾಕುವುದಕ್ಕೋಸ್ಕರ ತೆಗೆದಿಡುತ್ತೇನೆ. ಅದರ ಜುಂಗನ್ನು ಪಾತ್ರೆ ಉಜ್ಜುವವರಿಗೆ ಕೊಡುತ್ತೇನೆ. ಮಟ್ಟೆಯನ್ನು ನನ್ನ ತಂದೆಯವರಿಗೆ ಕೊಟ್ಟರೆ ಅವರು ಅದನ್ನು ಜಜ್ಜಿ ಅದರ ನಾರಿನಂತಿರುವ ಭಾಗದಿಂದ ಹಗ್ಗವನ್ನು ಮಾಡುತ್ತಾರೆ. ಆ ಮೃದುವಾದ ಚಗರೆಯನ್ನು ಗೋಣಿಚೀಲದ ಒಳಗೆ ಸೇರಿಸಿ ತಲೆದಿಂಬನ್ನೂ ಹಾಸಿಗೆಯನ್ನೂ ಮಾಡಲು ಉಪಯೋಗಿಸುತ್ತಾರೆ.

ಶ್ರೀಗುರು :– ಹೀಗೆ ಉಪಯೋಗಿಸಿಕೊಂಡ ಅನೇಕವಿಧಾನಗಳಲ್ಲಿ ಯಾವುದು ಸರಿ ? ಯಾವುದು ತಪ್ಪು ?

ಶ್ರೀ ವರದ :– ಎಲ್ಲಾ ಸರಿಯೇ. ಬಲ್ಲವರು ಇನ್ನೂ ಅನೇಕ ಉಪಯೋಗಗಳನ್ನೂ ಅದರಿಂದ ಪಡೆಯಬಹುದು.

ಶ್ರೀಗುರು :– ಈ ಎಲ್ಲ ಉಪಯೋಗಗಳನ್ನೂ ಪಡೆಯಲಿ ಎಂಬ

ಉದ್ದೇಶದಿಂದಲೇ ನಿನಗೆ ಆ ತೆಂಗಿನಕಾಯಿಯನ್ನು ಕೊಟ್ಟಿದ್ದು. ಹಾಗೆಯೇ ಶ್ರೀಮದ್ರಾಮಾಯಣವನ್ನು ಅದರ ಕಾವ್ಯಸೌಂದರ್ಯ, ನೀತಿಯ ಸೌಂದರ್ಯ, ಆಧ್ಯಾತ್ಮಿಕ ತತ್ತ್ವಗಳ ಸೌಂದರ್ಯ ಮತ್ತು ಸತ್ಯ ಇತ್ಯಾದಿ ಎಲ್ಲವನ್ನೂ ಅನುಭವಿಸಬೇಕು ಎಂದೇ ಅನುಗ್ರಹಮಾಡಿದ್ದಾನಪ್ಪಾ. ಆ ಎಲ್ಲ ದೃಷ್ಟಿಗಳೂ ಸರಿಯೇ. ಅವುಗಳಲ್ಲಿ ಯಾವುದನ್ನಾದರೂ ತಪ್ಪು ಎಂದು ಹೇಳುವುದು ತಪ್ಪು.

(ಶ್ರೀಗುರುದೇವರ ಸಮಗ್ರದೃಷ್ಟಿಯ ವ್ಯಾಖ್ಯಾನ ಶ್ರೀವರದಣ್ಣನವರಿಗೆ ತುಂಬಾ ಸಂತೋಷವನ್ನುಂಟು ಮಾಡುತ್ತದೆ. ಕೆಲವು ನಿಮಿಷಗಳ ಅನಂತರ ಅವರು ಮತ್ತೊಂದು ಪ್ರಶ್ನೆಯನ್ನು ಮುಂದಿಡುತ್ತಾರೆ.)

ಶ್ರೀ ವರದ :– ರಾಮಾಯಣದ ಅಯೋಧ್ಯಾಕಾಂಡದ ಕೊನೆಯಲ್ಲಿ ಒಂದು ಸುಂದರವಾದ ಪ್ರಸಂಗ ಬರುತ್ತದೆ. ಶ್ರೀರಾಮದೇವರನ್ನು ಅಯೋಧ್ಯೆಗೆ ಒಡನೆಯೇ ಹಿಂದಿರುಗುವಂತೆ ಮಾಡಲು ಭರತನು ಸರ್ವ ಪ್ರಯತ್ನಗಳನ್ನೂ ಮಾಡುತ್ತಾನೆ. ತನ್ನ ಪ್ರಾರ್ಥನೆ, ಮಂತ್ರಿ–ಮುಂತಾದವರ ಪ್ರಾರ್ಥನೆ, ತಾಯಂದಿರ ಕರುಳಿನ ಕರೆ, ಗುರು ವಸಿಷ್ಠರ ಆದೇಶ, ಕೊನೆಗೆ ತನ್ನ ಪ್ರಾಯೋಪವೇಶ–ಎಲ್ಲವೂ ವಿಫಲವಾಗಿಬಿಟ್ಟಾಗ ಇದ್ದಕ್ಕಿದ್ದಂತೆ ಗುರು ವಸಿಷ್ಠರ ಅನುಮತಿಯಂತೆ ಒಂದು ಜೋಡಿ ಸ್ವರ್ಣಾಲಂಕೃತವಾದ ಪಾದುಕೆಗಳನ್ನು ಶ್ರೀರಾಮನ ಮುಂದೆ ಇಡುತ್ತಾನೆ. "ಓ ಆರ್ಯನೇ ! ಚಿನ್ನದಿಂದ ಅಲಂಕೃತವಾಗಿರುವ ಈ ಪಾದುಕೆಗಳ ಮೇಲೆ ನಿನ್ನ ಪೊನ್ನಡಿಗಳನ್ನು ಇಡು. ಇವುಗಳಿಗೆ ಎಲ್ಲ ಲೋಕಗಳ ಯೋಗ-ಕ್ಷೇಮಗಳನ್ನೂ ನಿರ್ವಹಿಸುವ ಸಾಮರ್ಥ್ಯವು ಬರುತ್ತದೆ"* –ಎಂದು ಕಳಕಳಿಯಿಂದ ಬೇಡಿಕೊಳ್ಳುತ್ತಾನೆ. ಗುರು ವಸಿಷ್ಠರೂ ಅವನ್ನು ಅನುಮೋದಿಸುತ್ತಾರೆ. 'ಭರತನು ಆ ಪಾದುಕೆಗಳನ್ನು ಎಲ್ಲಿಂದ ತಂದ ? ಮನೆಯಿಂದಲೇ ಮಾಡಿಸಿ ತಂದಿದ್ದನೇ ? ರಾಮನ ಆಶ್ರಮದಲ್ಲಿ ಸಿದ್ಧವಾಗಿದ್ದ ಪಾದುಕೆಗಳೇ ?'–ಎಂಬುದು ವಿವಾದದ ವಿಷಯವಾಗಿದೆ. ಈ ಬಗ್ಗೆ ತಮ್ಮ ನಿಶ್ಚಯಾತ್ಮಕವಾದ ಬುದ್ಧಿಯ ಅಭಿಪ್ರಾಯವೇನೆಂಬುದನ್ನು ಅಪ್ಪಣೆ ಕೊಡಿಸಬೇಕು.

---

*ಅಧಿರೋಹಾರ್ಯ ಪಾದಾಭ್ಯಾಂ ಪಾದುಕೇ ಹೇಮಭೂಷಿತೇ ।
ಏತೇ ಹಿ ಸರ್ವಲೋಕಸ್ಯ ಯೋಗಕ್ಷೇಮಂ ವಿಧಾಸ್ಯತಃ ॥

ಶ್ರೀಗುರು :-ನಮ್ಮ ಉತ್ತರ ಸಿದ್ಧವಾಗಿದೆ. ಅದನ್ನು ಈ ಪತ್ರದಲ್ಲಿ ಬರೆದಿಡುತ್ತೇನೆ.

(ಒಂದು ಕಾಗದದಲ್ಲಿ ತಮ್ಮ ಅಭಿಪ್ರಾಯವನ್ನು ಶ್ರೀಗುರುದೇವರು ಬರೆದಿಡುತ್ತಾರೆ. ಅನಂತರ ಮಾತನ್ನು ಮುಂದುವರಿಸುತ್ತಾರೆ.)

ಶ್ರೀಗುರು :-ನೀನು ಓದಿರುವ ಪುಸ್ತಕಗಳಲ್ಲೂ ಕೇಳಿರುವ ಉಪನ್ಯಾಸಗಳಲ್ಲೂ ವಿದ್ವಾಂಸರು ಯಾವ ಯಾವ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ? ಎಲ್ಲವನ್ನೂ ಹೇಳು.

ಶ್ರೀ ವರದ :- ಅವು ಶ್ರೀರಾಮನ ಆಶ್ರಮದಲ್ಲೇ ಇದ್ದ ರಾಮಪಾದುಕೆಗಳು-ಎಂದು ಕೆಲವರು ಹೇಳುತ್ತಾರೆ.

ಶ್ರೀಗುರು :-ಅವುಗಳನ್ನು ಭರತನು ಅಯೋಧ್ಯೆಗೆ ತೆಗೆದುಕೊಂಡು ಹೋಗಿಬಿಟ್ಟರೆ ಶ್ರೀರಾಮನಿಗೆ ತೊಂದರೆಯಾಗುವುದಿಲ್ಲವೇ? ಮುಳ್ಳುಕಲ್ಲುಗಳ ದಾರಿಯಲ್ಲಿ ಬರಿಗಾಲಿನಲ್ಲಿ ಅವನು ನಡೆಯುವುದೇ? *

ಶ್ರೀ ವರದ :-ಶ್ರೀರಾಮನಲ್ಲಿ ಇದ್ದ ಹೆಚ್ಚಿನ (extra) ಪಾದುಕೆ ಜೋಡಿ ಅದು.

ಶ್ರೀಗುರು :- ಸರಿಹೋಯಿತು. ಇತರ ಅಭಿಪ್ರಾಯಗಳನ್ನು ಹೇಳು.

ಶ್ರೀ ವರದ :- ಭರತನು ಅಯೋಧ್ಯೆಯಿಂದಲೇ ಅವುಗಳನ್ನು ತಂದಿದ್ದ-ಎಂಬುದು ಮತ್ತೊಂದು ಅಭಿಪ್ರಾಯ.

ಶ್ರೀಗುರು :- ಯಾವ ಉದ್ದೇಶದಿಂದ ತಂದಿದ್ದ?

ಶ್ರೀ ವರದ :- ಶ್ರೀರಾಮನು ಧರ್ಮನಿಷ್ಠ, ಸತ್ಯನಿಷ್ಠ. ಅವನನ್ನು ಹಿಂದಕ್ಕೆ ಕರೆತರಲು ಎಷ್ಟೇ ಪ್ರಯತ್ನಗಳನ್ನು ಮಾಡಿದರೂ ಅವನು ಖಂಡಿತ ಬರುವುದಿಲ್ಲ. ಆದ್ದರಿಂದ ಅವನ ಗುರುತಿಗಾಗಿ ಅವನು ಏರಿದ ಶ್ರೀಪಾದುಕೆಗಳನ್ನಾದರೂ ಹಿಂದಕ್ಕೆ ತರೋಣ. ಅವುಗಳು ಅವನ ಪ್ರತಿನಿಧಿಯಾಗಿ ಸಿಂಹಾಸನವನ್ನೂ ಅಲಂಕರಿಸಲಿ-ಎಂದು ರಾಮನ ಹೃದಯವನ್ನು ಬಲ್ಲ ಭಕ್ತ,

---

*ಭರತನಿಗೆ ಶ್ರೀರಾಮನನ್ನು ಕಂಡರೆ ಆಗುತ್ತಿರಲಿಲ್ಲ. ಆದಕ್ಕೋಸ್ಕರ ಅವನಿಗೆ ತೊಂದರೆಯಾಗಲಿ ಎಂದು ಅವನ ಪಾದುಕೆಗಳನ್ನೂ ಎತ್ತಿಕೊಂಡು ಬಂದುಬಿಟ್ಟ-ಎಂದು ಇತ್ತೀಚಿನ ಕುಚೋದ್ಯರಸಿಕರು ಟೀಕೆ ಮಾಡಿರುವುದೂ ಉಂಟು.

ಶ್ರೇಷ್ಠನಾದ ಭರತನು ಅಯೋಧ್ಯೆಯಿಂದಲೇ ಆ ಪಾದುಕೆಗಳನ್ನು ತೆಗೆದು ಕೊಂಡು ಬಂದಿದ್ದ.

ಶ್ರೀಗುರು :– ಸರಿ. ಇವುಗಳಲ್ಲದೇ ಬೇರೆ ಏನಾದರೂ ವಾದ ಗಳಿವೆಯೇ ?

ಶ್ರೀ ವರದ :– ಹೌದು ಇದೆ. ಒಂದು ವಿಚಿತ್ರವಾದ ಅಭಿಪ್ರಾಯ ವನ್ನು ಕೆಲವು ವಿದ್ವಾಂಸರು ಹೇಳಿದ್ದಾರೆ. ಶ್ರೀರಾಮನೇ ಅರಣ್ಯಕ್ಕೆ ಬರು ವಾಗ ತನ್ನ ಆ ಚಿನ್ನದ ಪಾದುಕೆಗಳನ್ನೂ ತಂದಿದ್ದ.

ಶ್ರೀಗುರು :– ಎಲ್ಲ ವೈಭವಗಳನ್ನೂ ತೊರೆದು ನಾರುಮಡಿಯನ್ನು ಉಟ್ಟು ಬಂದಿದ್ದ ಅವನು ಚಿನ್ನದ ಪಾದುಕೆಗಳನ್ನು ಮಾತ್ರ ಹೇಗೆ ತಂದ ? ಬಹಳ ತಮಾಷೆಯಾಗಿದೆ ಈ ಅಭಿಪ್ರಾಯ.

(ನಗುನಗುತ್ತಲೇ ಶ್ರೀಗುರುಭಗವಂತರು ಈ ಮಾತನ್ನು ಹೇಳುತ್ತಾರೆ.)

ಶ್ರೀ ವರದ :– ಅದಕ್ಕೆ ಅವರ ಉತ್ತರ ಸಿದ್ಧವಾಗಿದೆ. ಆ ಪಾದುಕೆ ಗಳನ್ನು ತರಲು ರಾಮನಿಗೆ ಹಕ್ಕು ಇತ್ತು. ಅವು ಅವನಿಗೆ ತಂದೆಯ ಕಡೆ ಯಿಂದ ಬಂದ ಆಸ್ತಿಯಲ್ಲ. ಅವನ ಮಾವ ಜನಕಮಹಾರಾಜ ವಿವಾಹ ಸಂದರ್ಭದಲ್ಲಿ ಅವುಗಳನ್ನು ಬಳುವಳಿಯಾಗಿ ಕೊಟ್ಟಿದ್ದ. ಅದು ರಾಮನ ವೈಯ್ಯಕ್ತಿಕವಾದ ಆಸ್ತಿ. ಅದನ್ನು ತೆಗೆದುಕೊಂಡು ಹೋಗಬೇಡ ಎಂದು ಹೇಳಲು ಕೈಕೇಯಿಗೆ ಯಾವ ಅಧಿಕಾರವೂ ಇರಲಿಲ್ಲ.

ಶ್ರೀಗುರು :– (ನಗುತ್ತಾ) ಭಲೇ ! ಧರ್ಮಕ್ಕೋಸ್ಕರ ಎಲ್ಲವನ್ನೂ ತ್ಯಾಗಮಾಡಿ ಬಂದ ರಾಮನಿಗೆ ಸರಿಯಾದ ಕೆಲಸವನ್ನು ಕೊಟ್ಟಿದ್ದಾರೆ. ಋಷಿಸಮಾನನಾದ ಶ್ರೀರಾಮನಿಗೆ ಅಂತಹ ಸಮಯದಲ್ಲಿ ಸಂಪತ್ತಿನ ಹಕ್ಕನ್ನು ಜ್ಞಾಪಿಸಿದ ಲಾಯರುಗಳು, ಅವರನ್ನೂ ಅವರ ಸಲಹೆಯನ್ನು ಪಾಲಿಸಿದ ರಾಮಚಂದ್ರನನ್ನೂ–ಇಬ್ಬರನ್ನೂ ಅಭಿನಂದಿಸೋಣ. ವಾದ ಚೆನ್ನಾಗಿದೆಯಪ್ಪಾ. ಆದರೆ ಶ್ರೀರಾಮನ ಪಾತ್ರಕ್ಕೆ ಹೊಂದಿಕೆಯಾಗುವುದಿಲ್ಲ, ಅಷ್ಟೇ. ನೀನು ಹಿಂದೆ ಹೇಳಿದ ಅಭಿಪ್ರಾಯಗಳೇ ಇದಕ್ಕಿಂತ ಚೆನ್ನಾಗಿವೆ. ಅವುಗಳನ್ನೇ ಇನ್ನೊಂದು ಬಾರಿ ಒಂದೊಂದಾಗಿ ಹೇಳು.

ಶ್ರೀ ವರದ :– ಶ್ರೀರಾಮನು ಹೇಗೂ ಹಿಂದಿರುಗುವುದಿಲ್ಲ. ಆದರೂ

ನಮ್ಮ ಕರ್ತವ್ಯವನ್ನು ಮಾಡೋಣ. ಅವನು ಬರುವುದಿಲ್ಲವಾದ್ದರಿಂದ ಅವನು ಮೆಟ್ಟಿದ ಪಾದುಕೆಗಳನ್ನಾದರೂ ತರೋಣ- ಎಂದು ವಸಿಷ್ಠರ ಅನುಮತಿಯಂತೆ ಆ ಚಿನ್ನದ ಪಾದುಕೆಗಳನ್ನು ಅವನು ಅಯೋಧ್ಯೆಯಿಂದ ತೆಗೆದುಕೊಂಡು ಬಂದಿದ್ದ-ಎಂದು ಒಂದು ಅಭಿಪ್ರಾಯ.

ಶ್ರೀಗುರು :- ಕೆಲಸ ಈಡೇರುವ ಭರವಸೆ ಇಲ್ಲ. ಆದರೂ ಪ್ರಯತ್ನ ಮಾಡಿ ನೋಡೋಣ-ಎಂದು ಭರತನು ಅವುಗಳನ್ನು ತಂದಿದ್ದರೆ ಅವನು ಮಂಡಿಸಿದ ಪ್ರಾರ್ಥನೆ, ಕೌಸಲ್ಯೆ-ವಸಿಷ್ಠರು ಮುಂತಾದವರ ಮೂಲಕ ಮಾಡಿಸಿದ ಪ್ರಾರ್ಥನೆ, ಆವೇಶ, ಪ್ರಾಯೋಪವೇಶ ಎಲ್ಲವೂ ರಸಹೀನವಾಗುತ್ತವೆ. ಅವನ ಪ್ರಯತ್ನವು ಪ್ರಾಮಾಣಿಕವಾಗಿದ್ದರೂ ಅದೆಲ್ಲಾ ಅಭಿನಯ ಎಂದೂ ಕೆಲವರು ಟೀಕಿಸಬಹುದು. ಮತ್ತೊಂದು ಅಭಿಪ್ರಾಯವನ್ನು ಹೇಳು.

ಶ್ರೀ ವರದ :- ಅವು ಅರಣ್ಯದಲ್ಲಿಯೇ ಇದ್ದ ಶ್ರೀರಾಮನ ಪಾದುಕೆಗಳದ್ದೇ ಮತ್ತೊಂದು ಜೋಡಿ.

ಶ್ರೀಗುರು :- ಅವನಿಗೆ ಚಿನ್ನದ ಪಾದುಕೆಗಳು ಎಲ್ಲಪ್ಪಾ ಬರಬೇಕು ? ಆ ಪಾದುಕೆಗಳನ್ನು ಅವನು ಆರಮನೆಯಿಂದ ತಂದಿದ್ದ ಎನ್ನುವುದು ಹಾಸ್ಯಾಸ್ಪದವಾಗುತ್ತದೆ.

ಶ್ರೀ ವರದ :- ಅವು ಚಿನ್ನದಿಂದ ತಯಾರಿಸಿದ ಪಾದುಕೆಗಳು ಎಂದೇನೂ ರಾಮಾಯಣದಲ್ಲಿ ಹೇಳಿಯೇ ಇಲ್ಲ. ಅವು ಮರದ ಪಾದುಕೆಗಳೇ. ಆಶ್ರಮದಲ್ಲಿ ಇದ್ದ ಆ ಪಾದುಕೆಗಳಿಗೆ ಭರತನು ಚಿನ್ನದಿಂದ ಅಲಂಕಾರಮಾಡಿ ಶ್ರೀರಾಮದೇವರಿಗೆ ಅರ್ಪಿಸಿದ. " ಪಾದುಕೇ ಹೇಮಭೂಷಿತೇ " ( ಚಿನ್ನದಿಂದ ಅಲಂಕೃತವಾದ ಪಾದುಕೆಗಳು ) ಎಂದೇ ರಾಮಾಯಣದಲ್ಲಿ ಹೇಳಿದೆ. " ಪಾದುಕೇ ಹೇಮನಿರ್ಮಿತೇ " ( ಚಿನ್ನದಿಂದ ತಯಾರಿಸಿದ ಪಾದುಕೆಗಳು ) ಎಂದೇನೂ ಹೇಳಿಲ್ಲ.

ಶ್ರೀಗುರು :- ಆಕ್ಷೇಪಕ್ಕೆ ಸಮಾಧಾನ ಬಂತು. ಪರವಾಗಿಲ್ಲ. ನಿನಗೆ ಯಾವ ಅಭಿಪ್ರಾಯ ಸರಿ ಅನ್ನಿಸುತ್ತದೆ ?

ಶ್ರೀ ವರದ :- ಇದೇ ಅಭಿಪ್ರಾಯವೇ ಸರಿ ಎಂದು ನನಗೆ ಅನ್ನಿಸುತ್ತದೆ.

ಶ್ರೀಗುರು :— ಸರೀಪ್ಪಾ. ಇವೆಲ್ಲಾ ಊಹೆಗಳ ಮಾತಾಯಿತು. ವಿಷಯ ನಿಜವಾಗಿ ಹೇಗಿತ್ತು ಅನ್ನುವುದನ್ನು ಭರತನೇ ಹೇಳಬೇಕು. ನಾನೂ ಒಂದು ವ್ಯಾಖ್ಯಾನವನ್ನು ಕೊಡುತ್ತೇನೆ. ಅದು ಋಷಿಹೃದಯಕ್ಕೆ ಅನುಗುಣವಾಗಿದೆಯೇ ನೋಡು.

ಅವು ಮಹಾತ್ಮನಾದ ಭರತನು ಅಯೋಧ್ಯೆಯಿಂದ ತಂದಿದ್ದ ರಾಜ ಯೋಗ್ಯವಾದ ಪಾದುಕೆಗಳೇ. ಆದರೆ ಅವನು ಶ್ರೀರಾಮನು ಹೇಗಿದ್ದರೂ ಬರಲಾರನು ಎಂದು ಭರವಸೆಯಿಲ್ಲದ ಮನಸ್ಸಿನಿಂದ ಅವುಗಳನ್ನು ತಂದಿರ ಲಿಲ್ಲ. ' ಅವನು ಭಕ್ತನಾದ ನನ್ನ ಮೇಲೆ ಅನುಗ್ರಹವನ್ನು ಮಾಡಿಯೇ ಮಾಡುತ್ತಾನೆ. ಅಯೋಧ್ಯೆಗೆ ಖಂಡಿತವಾಗಿಯೂ ದಯಮಾಡಿಸುತ್ತಾನೆ. ಹಾಗೆ ಅವನು ದಯಮಾಡಿಸುವಾಗ ಸಾರ್ವಭೌಮನ ವೈಭವಕ್ಕೆ ತಕ್ಕಂತೆ ಛತ್ರ-ಚಾಮರ ಮುಂತಾದುವುಗಳ ಜೊತೆಯಲ್ಲಿ ಸ್ವರ್ಣದ ಪಾದುಕೆಗಳನ್ನೂ ಧರಿಸಿ ಬಿಜಯಮಾಡಿಸಬೇಕು '—ಎಂಬ ಆಶಯದಿಂದ ಅವನು ಆ ಪಾದುಕೆ ಗಳನ್ನು ಅಯೋಧ್ಯೆಯಿಂದ ತೆಗೆದುಕೊಂಡು ಹೋಗಿದ್ದ.

ಶ್ರೀ ವರದ :— ತುಂಬಾ ಚೆನ್ನಾಗಿದೆ ಈ ವ್ಯಾಖ್ಯಾನ. ಭಕ್ತನಾದ ಭರತನ ವಿಷಯದಲ್ಲಿ ಇದರಿಂದ ನಮ್ಮ ಮೆಚ್ಚಿಗೆ ಮತ್ತೂ ಹೆಚ್ಚುತ್ತದೆ. ಆದರೆ ಭರತನು ಮಹಾವಿಶ್ವಾಸದಿಂದ ಮಾಡಿದ ಶರಣಾಗತಿಯು ಸಫಲ ವಾಗಲಿಲ್ಲವಲ್ಲಾ !

ಶ್ರೀಗುರು :— ಏಕೆ ಸಫಲವಾಗಲಿಲ್ಲ ? ಕಾಲವಿಶೇಷದಲ್ಲಿ ಮುಂದೆ ಅದು ಈಡೇರಲಿಲ್ಲವೇ ? ಈ ಮಧ್ಯದಲ್ಲಿ ಭರತನು ಪ್ರಯೋಗದಿಂದ ಲೋಕಕ್ಕೆ ತೋರಿಸಿ ಕೊಟ್ಟ ಪಾದುಕಾವೈಭವದ ಮಹಾಸಿದ್ಧಾಂತವೂ ಭಕ್ತರ ಸಮಾಜಕ್ಕೆ ದೊರೆಯಿತಲ್ಲವೇ ? ಭರತನ ಮಾಹಾತ್ಮ್ಯವು ಲೋಕದಲ್ಲಿ ಪ್ರತಿಷ್ಠಿತವಾಗುವುದಕ್ಕೂ ಅದು ಕಾರಣವಾಗಲಿಲ್ಲವೇ ?

ಶ್ರೀ ವರದ :— ( ಸ್ವಲ್ಪ ಹೊತ್ತಿನ ಬಳಿಕ ) ಈಗ ಜ್ಞಾಪಕಕ್ಕೆ ಬಂತು. ಶ್ರೀರಾಮನನ್ನು ವೈಭವದೊಡನೆ ಕರೆದುಕೊಂಡು ಹೋಗುವುದ ಕ್ಕೋಸ್ಕರ ಭರತನೇ ಅವುಗಳನ್ನು ಅಯೋಧ್ಯೆಯಿಂದ ತಂದಿದ್ದ—ಎಂಬ ಈ

ಅಭಿಪ್ರಾಯವನ್ನು ರೈಟ್ ಆನರಬಲ್ (Right Honourable) ಶ್ರೀನಿವಾಸಶಾಸ್ತ್ರಿಗಳೂ ತಮ್ಮ ಒಂದು ಉಪನ್ಯಾಸದಲ್ಲಿ ಹೇಳಿದ್ದಾರೆ.*

ಶ್ರೀಗುರು :– ಅವರ ಅಭಿಪ್ರಾಯ ರೈಟೂ, ಆನರಬಲ್ಲೂ–ಎರಡೂ ಆಗಿದೆ.

(ಶ್ರೀಗುರುದೇವರ ಸತ್ಯವೂ, ಸುಂದರವೂ, ಪ್ರಿಯವೂ ಆದ ಆ ಅಭಿನಂದನೆಯ ಮಾತು ಶ್ರೀ ವರದಣ್ಣನವರಿಗೆ ತುಂಬಾ ಸಂತೋಷವನ್ನುಂಟು ಮಾಡುತ್ತದೆ. ಅನಂತರ ಶ್ರೀ ಗುರುದೇವರು ತಾವು ಬರೆದಿಟ್ಟಿದ್ದ ಕಾಗದವನ್ನು ಓದಿಸುತ್ತಾರೆ. ಅದರಲ್ಲಿ ಗುರುಭಗವಂತರು ಆಗ ತಾನೇ ಹೇಳಿದ್ದ ಸಿದ್ಧಾಂತದ ಅಭಿಪ್ರಾಯವೇ ಕಂಡುಬರುತ್ತದೆ.)

ಶ್ರೀಗುರು :– ಅನೇಕ ವಿಮರ್ಶಕರ ಅಭಿಪ್ರಾಯಗಳನ್ನು ಕೇಳಿ ಅವುಗಳಿಂದ ಬಂದ ನಿರ್ಣಯವಲ್ಲ ನನ್ನದು–ಎಂಬುದು ನಿನಗೆ ಖಚಿತಪಡುವುದಕ್ಕೋಸ್ಕರ ಹೀಗೆ ಮೊದಲೇ ಬರೆದಿಟ್ಟದ್ದೆ. ನೀನು ನನ್ನಲ್ಲಿ ಅಪನಂಬಿಕೆ ಪಡುತ್ತೀಯೆ ಎಂದಲ್ಲ. ಅದು ನನ್ನ ಪಾಠಕ್ರಮದ ಒಂದು ವಿಧಾನ.

ಶ್ರೀಗುರುದೇವರು ಇಂತಹ ಪ್ರಯೋಗಗಳನ್ನು ಹಿಂದೆ ಹಲವು ಬಾರಿ ಮಾಡಿದ್ದರಿಂದ ಶ್ರೀವರದಣ್ಣನವರಿಗೆ ಅದು ಸಹಜವಾಗಿಯೇ ಕಂಡುಬಂದಿತು.

ಶ್ರೀ ವರದ :– ಶ್ರೀಮದ್ರಾಮಾಯಣದಲ್ಲಿ ಬರುವ ಇನ್ನೊಂದು ಪ್ರಸಂಗವು ನನಗೆ ದೊಡ್ಡ ಸಮಸ್ಯೆಯಾಗಿದೆ, ಅದನ್ನು ಈಗ ಕೇಳಬಹುದೇ? ತಮಗೆ ಆಯಾಸವಾಗದಿದ್ದರೆ ಈಗ ಅದನ್ನು ಅರಿಕೆಮಾಡುತ್ತೇನೆ.

ಶ್ರೀಗುರು :– ಆಯಾಸವೇನೂ ಇಲ್ಲ. ಸ್ವಲ್ಪಹೊತ್ತು ಮಾತನಾಡಬಹುದು. ಸಮಸ್ಯೆ ಏನು ಹೇಳಪ್ಪಾ. ಯಥಾಶಕ್ತಿ ಅದನ್ನು ಬಗೆಹರಿಸಲು ಪ್ರಯತ್ನಿಸೋಣ.

ಶ್ರೀ ವರದ :– ಅರಣ್ಯಕಾಂಡದಲ್ಲಿ ಬರುವ ಒಂದು ಪ್ರಸಂಗ:

---

* "Apparently they were part of the things that they had brought and thought of using if Rama could be persuaded to have the ceremony of Abhisheka."

Lectures on the Ramayana, Tenth lecture.

ಶ್ರೀರಾಮನು ಮಾರೀಚಮಾಯಾಮೃಗವನ್ನು ಅಟ್ಟಿಸಿಕೊಂಡು ಹೋದಾಗ ರಾಮಾಜ್ಞೆಯಂತೆ ಲಕ್ಷ್ಮಣನು ಸೀತೆಯ ಕಾವಲಾಗಿರುತ್ತಾನೆ. ಆ ಮಧ್ಯೆ ಮೃಗ ರೂಪದ ರಾಕ್ಷಸನು ಸಾಯುವ ಕಾಲದಲ್ಲಿ–" ಹಾ ಸೀತೇ! ಹಾ ಲಕ್ಷ್ಮಣ!"– ಎಂದು ಶ್ರೀರಾಮನ ಧ್ವನಿಯನ್ನು ಅನುಕರಿಸುತ್ತಾ ಸೀತೆ ಮತ್ತು ಲಕ್ಷ್ಮಣರಿಗೆ ಕೇಳುವಂತೆ ಕೂಗಿಕೊಳ್ಳುತ್ತಾನೆ. ಅದನ್ನು ಕೇಳಿ ಶೋಕ ಮತ್ತು ಭಯಗಳಿಂದ ವಿಹ್ವಲಳಾದ ಸೀತೆಯು–" ಒಡನೆಯೇ ರಾಮನ ಬಳಿಗೆ ಹೋಗಿ ಅವನಿಗೆ ಸಹಾಯಮಾಡು "–ಎಂದು ಲಕ್ಷ್ಮಣನಿಗೆ ಆಜ್ಞಾಪಿಸು ತ್ತಾಳೆ. ಆದರೆ ಲಕ್ಷ್ಮಣನು ತಕ್ಷಣ ಹೊರಡುವುದಿಲ್ಲ. ಏಕೆಂದರೆ : ಅಣ್ಣನ ಆಣತಿಯನ್ನು ಪಾಲಿಸುವ ವಿಷಯದಲ್ಲಿ ಶಿಸ್ತಿನ ಸಿಪಾಯಿ ಅವನು. ಇದಲ್ಲದೇ ಶ್ರೀರಾಮನ ಎಣೆಯಿಲ್ಲದ ಸತ್ತ್ವವನ್ನೂ ಅವನು ಬಲ್ಲವನು. ರಾಕ್ಷಸರು ಮಾಯಾವಿಗಳೆಂದೂ ಅವನಿಗೆ ಗೊತ್ತು. ಅವರ ಮೋಸಕ್ಕೆ ಮರುಳಾಗಿ ಸೀತೆ ಯನ್ನು ಒಬ್ಬಂಟಿಗಳನ್ನಾಗಿ ಬಿಟ್ಟುಹೋಗಲು ಅವನು ಇಷ್ಟಪಡುವುದಿಲ್ಲ. ಆಗ ಉಕ್ಕೇರಿದ ಕೋಪದಿಂದ ಸೀತಾದೇವಿಯು ಆತನನ್ನು ಧಿಕ್ಕರಿಸುತ್ತಾಳೆ. ಆ ಮಹಾತ್ಮನ ವಿಷಯದಲ್ಲಿ ದುಷ್ಟವಾದ ಆಪಾದನೆಯಿಂದ ಕೂಡಿದ ಆಗ್ರಹ ಪೂರ್ವಕವಾದ ನಿಂದಾವಾಕ್ಯದ ಮಳೆಯನ್ನು ಅವನ ಮೇಲೆ ಕರೆಯುತ್ತಾಳೆ. ಆರ್ಯನಾರೀಮಣಿಯಾದ ಸೀತಾದೇವಿಯಂತಹ ಮಹಾತ್ಮಳೂ ಹಾಗೆ ಮಾಡ ಬಹುದೇ ?

ಶ್ರೀಗುರು :– ಸೀತೆಯು ಲಕ್ಷ್ಮಣನನ್ನು ಹೇಗೆ ನಿಂದಿಸುತ್ತಾಳೆ ? ಹೇಳಪ್ಪಾ.

ಶ್ರೀ ವರದ :– ( ಆವೇಗದ ಧ್ವನಿಯಲ್ಲಿ ) ಆ ನಿಂದಾವಾಕ್ಯಗಳನ್ನು ಹೇಳುವುದಕ್ಕೇ ಸಂಕೋಚವಾಗುತ್ತದೆ. ಅದೂ ಲಕ್ಷ್ಮಣನಂತಹ ಮಹಾತ್ಮನ ವಿಷಯದಲ್ಲಿ ಅಂತಹ ಕೆಟ್ಟ ಮಾತನ್ನಾಡುವುದೇ ? ಅದನ್ನು ಹೇಳುವುದೂ ತಪ್ಪು ; ಕೇಳುವುದೂ ಅಷ್ಟೇ ತಪ್ಪು. ಹೇಳುವವರು, ಕೇಳುವವರು–ಇಬ್ಬರೂ ಪಾಪಕ್ಕೆ ಗುರಿಯಾಗುತ್ತಾರೆ–ಎಂದು ಮಹಾತ್ಮನಾದ ಕಾಳಿದಾಸ ಹೇಳುತ್ತಾನೆ.

" ನ ಕೇವಲಂ ಯೋ ಮಹತೋಽಪಭಾಷತೇ
ಶೃಣೋತಿ ತಸ್ಮಾದಪಿ ಯಃ ಸ ಪಾಪಭಾಕ್ "

ಶ್ರೀಗುರು :– ಸಮಾಧಾನವಾಗಿ ಮಾತನಾಡಪ್ಪಾ. ಕಾಳಿದಾಸ ಹೇಳಿ

ರುವುದು ಸರಿಯಾಗಿದೆ. ಸತ್ಪುರುಷರ ವಿಷಯದಲ್ಲಿ ಸಲ್ಲದ ಮಾತುಗಳನ್ನು ಆಡುವುದು ಮತ್ತು ಕೇಳುವುದು ಎರಡೂ ತಪ್ಪೇ. ಆದರೆ ಪ್ರಕೃತದಲ್ಲಿ ನಾವು ಸೀತೆಯು ಮಾಡಿದ ಭಾಷಣ ಸರಿಯೇ ? ತಪ್ಪೇ ? – ಎಂಬುದನ್ನು ವಿಮರ್ಶೆಮಾಡಲು ತೊಡಗಿದ್ದೇವೆ. ಈ ಸಂದರ್ಭದಲ್ಲಿ ವಿಚಾರಣೆಗೆ ವಿಷಯ ವಾಗಿರುವ ಆಕೆಯ ಮಾತುಗಳನ್ನು ಅನುವಾದಮಾಡುವುದರಲ್ಲಿ ದೋಷ ವೇನೂ ಇಲ್ಲ. ಆ ಮಾತುಗಳು ಹೇಗೇ ಇದ್ದರೂ ಅವು ನಿನ್ನ ಅಭಿಪ್ರಾಯ ವೇನೂ ಅಲ್ಲ. ಸೀತೆಯ ಪ್ರಾಮಾಣಿಕವಾದ ಅಭಿಪ್ರಾಯವು ಅವುಗಳಲ್ಲಿ ಅಡಗಿದೆ ಎಂದು ಹೇಳಲಿಕ್ಕೂ ಬರುವುದಿಲ್ಲ. ಆಕೆಯು ಏನು ಆಪಾದನೆ ಮಾಡಿದಳು ? ಯಾವ ಮಾತುಗಳಿಂದ ಲಕ್ಷ್ಮಣನನ್ನು ತೆಗಳಿದಳು ? ಹೇಳು. ಶಾಂತವಾಗಿ ವಿಚಾರಮಾಡೋಣ.

ಶ್ರೀ ವರದ :– " ಓ ಲಕ್ಷ್ಮಣ ! ನೀನು ನಿಜವಾಗಿಯೂ ಅಣ್ಣನಿಗೆ ಮಿತ್ರರೂಪದಲ್ಲಿರುವ ಶತ್ರು. ಅದಕ್ಕೇ ಅವನು ಇಂತಹ ಅವಸ್ಥೆ ಯಲ್ಲಿದ್ದರೂ ನೀನು ಅವನ ಬಳಿಗೆ ಹೋಗುತ್ತಿಲ್ಲ. ಆತನು ನಾಶಹೊಂದ ಬೇಕೆಂದೇ ನೀನು ಬಯಸುತ್ತಿದ್ದೀಯೆ. ನಿನಗೆ ನನ್ನ ಮೇಲೆ ಕಣ್ಣು. ನನ್ನ ಮೇಲಿನ ಲೋಭದಿಂದಲೇ ನೀನು ಅವನನ್ನು ಹಿಂಬಾಲಿಸಿ ಬಂದಿದ್ದೀಯೆ. ಅವನಿಗೆ ವ್ಯಸನ ಉಂಟಾದರೆ ಅದು ನಿನಗೆ ಪ್ರಿಯವೆಂದು ಭಾವಿಸುತ್ತೇನೆ. ಒಡಹುಟ್ಟಿದವನಲ್ಲಿ ನಿನಗೆ ಸ್ನೇಹವೇ ಇಲ್ಲ. ನೀನು ಅನಾರ್ಯ, ಘಾತುಕ, ಕುಲಗೇಡಿ, ವೇಷಧಾರಿ, ಸ್ವಂತ ಇಚ್ಛೆಯಿಂದಲೋ ಅಥವಾ ಭರತನ ಪ್ರೇರಣೆ ಯಿಂದಲೋ ದುಷ್ಟಭಾವದಿಂದ ಇಲ್ಲಿಗೆ ಬಂದಿದ್ದೀಯೆ. ಸೌಂದರ್ಯ, ಸದ್ಗುಣ ಗಳಿಗೆ ನಿಧಿಯಾದ ರಾಮನನ್ನು ಬಿಟ್ಟು ಬೇರೆ ಯಾರನ್ನೂ ನಾನು ಕಾಮಿಸುವು ದಿಲ್ಲ. ನಿನ್ನ ಇಷ್ಟಾರ್ಥವು ಫಲಿಸುವುದಿಲ್ಲ. ನಿನ್ನ ಕಣ್ಣೆದುರಿಗೇ ಪ್ರಾಣಬಿಡು ತ್ತೇನೆ. ಶ್ರೀರಾಮಚಂದ್ರನನ್ನು ಬಿಟ್ಟು ಭೂಮಿಯಲ್ಲಿ ಕ್ಷಣಕಾಲವೂ ಬದುಕಿರಲಾರೆ ; ಗೋದಾವರಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತೇನೆ. ವಿಷವ ನ್ನಾದರೂ ಕುಡಿಯುತ್ತೇನೆ, ಬೆಂಕಿಗಾದರೂ ಬಿದ್ದುಬಿಡುತ್ತೇನೆ. "–ಎಂದೆಲ್ಲಾ ಒದರುತ್ತಾಳೆ.[1] ಇದನ್ನು ಕೇಳಿ ಲಕ್ಷ್ಮಣನಿಗೆ ಮಿತಿಮೀರಿದ ಸಿಟ್ಟು ಬಂದರೂ

೧. ರಾಮಾಯಣ–ಅರಣ್ಯಕಾಂಡ, ೪೫ನೇ ಸರ್ಗ.

ಆರ್ಯಶೀಲನಾದ ಆ ಮಹಾತ್ಮನು ಆಕೆಗೆ ಮಂಗಳವನ್ನು ಕೋರಿ ಕೈಜೋಡಿಸಿ ನಮಸ್ಕರಿಸಿ, ರಾಮನ ಕಡೆಗೆ ವೇಗದಿಂದ ಧಾವಿಸುತ್ತಾನೆ. ಅವನ ಬಳಿ ಹೋಗಿ ನಡೆದ ಸಮಾಚಾರವನ್ನು ನಿವೇದಿಸಿದಾಗ ಶ್ರೀರಾಮನೂ ಆತನನ್ನು ಕಟು ವಾಕ್ಯಗಳಿಂದ ನೋಯಿಸುತ್ತಾನೆ. ಆ ನಿರಪರಾಧಿಯಾದ ಸಾಧುವಿಗೆ ಎರಡೂ ಕಡೆಗಳಿಂದಲೂ ಮರ್ಮಭೇದಕವಾದ ಮಾತುಗಳ ಪ್ರಹಾರ !

ಶ್ರೀಗುರು :– ಲಕ್ಷ್ಮಣನ ವಿಷಯದಲ್ಲಿ ಹಾಗೆ ಕರುಣೆಯನ್ನೂ–ಸಹಾನುಭೂತಿಯನ್ನೂ ತೋರಿಸುವುದು ನ್ಯಾಯವಾಗಿದೆ. ಆದರೆ ಸೀತೆಯ ವಿಷಯದಲ್ಲಿ ಉಗ್ರವಾದ ಭಾವವನ್ನು ತೋರಿಸುವುದು ಸರಿಯಲ್ಲ. ( ಸ್ವಲ್ಪ ನಗುವಿನ ಮುಖಮುದ್ರೆಯಿಂದ ) ಲಕ್ಷ್ಮಣನೇ ಆಕೆಯಲ್ಲಿ ನಿನ್ನಷ್ಟು ಕೋಪವನ್ನು ತೋರಿಸಲಿಲ್ಲ–ಎಂದು ಕಾಣುತ್ತೆ.

ಶ್ರೀ ವರದ :– ಸೀತೆಯು ಸಾಧುಶಿರೋಮಣಿಯಾದ ಲಕ್ಷ್ಮಣನಿಗೆ ಹಾಗೆಲ್ಲಾ ಅಂದದ್ದು ದೊಡ್ಡ ಅಪಚಾರವಲ್ಲವೇ ?

ಶ್ರೀಗುರು :– ಹೌದಪ್ಪಾ ಅಪಚಾರವೇ. ಅದರಲ್ಲಿ ಸಂಶಯವೇ ಇಲ್ಲ.

ಶ್ರೀ ವರದ :– ಹಾಗೆ ಆ ಮಹಾಭಗವದ್ಭಕ್ತನ ವಿಷಯದಲ್ಲಿ ಕೆಟ್ಟ ಆಪಾದನೆಯನ್ನು ಮಾಡಿದ್ದರಿಂದಲೇ ಆಕೆಯೂ ಮುಂದೆ ಒಬ್ಬ ಅಗಸನ ಬಾಯಿಂದ ಕೆಟ್ಟ ಆಪಾದನೆಯನ್ನು ಕೇಳಬೇಕಾಯಿತು. " ಪುಣ್ಯವಾಗಲೀ, ಪಾಪವಾಗಲೀ–ತುಂಬಾ ಉತ್ಕಟವಾಗಿದ್ದರೆ ಅದರ ಫಲವನ್ನು ಈ ಲೋಕದಲ್ಲೇ ಅನುಭವಿಸಬೇಕಾಗುತ್ತದೆ " * – ಎಂದು ಹಿರಿಯರು ಹೇಳುವುದಿಲ್ಲವೇ ?

ಶ್ರೀ ಗುರು :– ಭಾಗವತಾಪಚಾರವನ್ನು ಮಾಡಬಾರದು. ಅದರ ಫಲ ಕೆಟ್ಟದ್ದಾಗುತ್ತೆ ಎಂಬುದು ನಿಜ. ಆದರೆ ಪ್ರಕೃತದಲ್ಲಿ ಸೀತೆಯು ಅಗಸನಿಂದ ದುಷ್ಟವಾದ ಆಪಾದನೆಗೆ ಒಳಗಾಗಿದ್ದಕ್ಕೆ ಆಕೆಯು ಲಕ್ಷ್ಮಣನ ವಿಷಯದಲ್ಲಿ ಕೆಟ್ಟಮಾತನ್ನು ಆಡಿದ್ದೇ ಕಾರಣ–ಎಂದು ನ್ಯಾಯಮೂರ್ತಿಯಂತೆ ನಿರ್ದಿಷ್ಟವಾಗಿ ನ್ಯಾಯನಿರ್ಣಯವನ್ನು ನೀನು ಹೇಳುವುದು ನ್ಯಾಯವಲ್ಲ. ಈ ಕರ್ಮಕ್ಕೆ ಇದೇ ಫಲವೆಂದು ನಿರ್ಣಯವು ನಿನಗೆ ಹೇಗೆ ಗೊತ್ತಾಯಿತು ?

---

* " ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ ".

ಶ್ರೀ ವರದ :– ಅದು ನನ್ನ ಅಭಿಪ್ರಾಯವಲ್ಲ. ಸಂಪ್ರದಾಯಕ್ಕೆ ಸೇರಿರುವ ಕೆಲವು ಆಚಾರ್ಯರು ಹೀಗೆ ಹೇಳಿರುವುದನ್ನು ಕೇಳಿದ್ದೇನೆ.

ಶ್ರೀಗುರು :– ಯಾರೇ ಹೇಳಿದ್ದರೂ ಆ ಅಭಿಪ್ರಾಯವು ಸರಿಯಲ್ಲ. ವಿವೇಕದಿಂದ ವಿಷಯವನ್ನು ತಿಗೆದುಕೊಳ್ಳದೇ ಇತರರ ಅಭಿಪ್ರಾಯಕ್ಕೆ ಮರುಳಾಗುವುದು ಸರಿಯಲ್ಲ.

ಶ್ರೀ ವರದ :– (ಸಮಾಧಾನದ ಧ್ವನಿಯಿಂದ) ಸೀತಾದೇವಿಯು ಲಕ್ಷ್ಮಣನ ಮೇಲೆ ಸಲ್ಲದ ಆಪಾದನೆಗಳನ್ನು ಹೊರಿಸಿದ್ದು ಭಾರೀ ಅಪರಾಧ ವಲ್ಲವೇ ?

ಶ್ರೀಗುರು :– ಆಕೆಯ ಆಪಾದನೆಯು ಸರಿಯಲ್ಲ. ಲಕ್ಷ್ಮಣನು ಆಕೆಯ ನಿಂದಾವಾಕ್ಯಗಳಿಗೆ ಖಂಡಿತವಾಗಿಯೂ ಯೋಗ್ಯನಲ್ಲ–ಎಂದು ಹಿಂದೆಯೇ ಹೇಳಿದೆನಲ್ಲಪ್ಪಾ ! ಆದರೆ ಸೀತೆಯೂ ಆರ್ಯೆ; ಮಹಾಸಾಧ್ವಿ. ಕ್ಷಮಾಗುಣಕ್ಕೆ ಹೆಸರುವಾಸಿಯಾದವಳು. ಲಕ್ಷ್ಮಣನ ಶುದ್ಧ ಚಾರಿತ್ರ್ಯವನ್ನು ನಮಗಿಂತಲೂ ಚೆನ್ನಾಗಿ ಅರಿತವಳು. ಅಂತಹವಳೂ ಸಲ್ಲದ ಮಾತುಗಳನ್ನು ಏಕೆ ಆಡಿದಳು ? ಆರ್ಯೆಯ ಬಾಯಿಂದಲೂ ಅನಾರ್ಯವಾದ ಅಪಶಬ್ದ ಗಳು ಏಕೆ ಹೊರಬಂದುವು ? ಲಕ್ಷ್ಮಣನ ವಿಷಯದಲ್ಲಿ ಆಕೆಗೆ ನಿಜವಾಗಿಯೂ ಮೇಲೆ ಹೇಳಿದ ಅಭಿಪ್ರಾಯವಿತ್ತೇ ? ಅಥವಾ ಆ ಸನ್ನಿವೇಶ ಮತ್ತು ಪ್ರಕೃತಿಗಳ ಒತ್ತಾಯದಿಂದ ಅವಳು ಹಾಗೆ ಹೇಳಿದಳೇ ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ? ಹೇಳು.

ಶ್ರೀ ವರದ :– ಸೀತೆಗೆ ಲಕ್ಷ್ಮಣನ ವಿಷಯದಲ್ಲಿ ನಿಜವಾಗಿಯೂ ತುಂಬಾ ಒಳ್ಳೆಯ ಅಭಿಪ್ರಾಯವಿತ್ತು. ಆತನು ಮಹಾತ್ಮ; ಶುದ್ಧವಾದ ಶೀಲವುಳ್ಳವನು ; ತನ್ನಲ್ಲಿ ತಾಯಿಯ ಭಾವವನ್ನು ಇಟ್ಟು ನಡೆಯು ತ್ತಿದ್ದವನು–ಎಂಬ ನಂಬಿಕೆಯು ಅವಳಲ್ಲಿತ್ತು. ಅವನಲ್ಲಿ ತುಂಬಾ ಗೌರವ ವನ್ನು ಅವಳು ಹೊಂದಿದ್ದಳು.

ಶ್ರೀಗುರು :– ಅದಕ್ಕೆ ಪ್ರಮಾಣವೇನು ?

ಶ್ರೀ ವರದ :– ಸೀತೆಯ ಮಾತುಗಳಿಂದಲೇ ಅದು ಸ್ಪಷ್ಟವಾಗು ತ್ತದೆ. "ಆತನು ಧರ್ಮಾತ್ಮ, ಮಹಾತ್ಮ, ಸುಮಿತ್ರಾನಂದವರ್ಧನ.

ರಾಮನಲ್ಲಿ ತಂದೆಯ ಭಾವವನ್ನೂ–ತನ್ನಲ್ಲಿ ತಾಯಿಯ ಭಾವವನ್ನೂ ಇಟ್ಟು ನಡೆಯುತ್ತಿದ್ದಾನೆ. "ಪಿತೃವದ್ವರ್ತತೇ ರಾಮೋ ಮಾತೃವನ್ಮಾಂ ಸಮಾಚರನ್". ವೃದ್ಧರ ಸೇವೆ ಮಾಡಿದವನು, ಅತಿಶಕ್ತನಾದರೂ ಮಿತಭಾಷಿಯಾದವನು; ಶುಚಿಯಾದವನು; ಮೃದುಸ್ವಭಾವದವನು; ನನ್ನ ಪೂಜ್ಯ ಮಾವನಾದ ದಶರಥನಿಗೆ ಸಮಾನನಾದವನು. ಶ್ರೀರಾಮನಿಗೆ ನನಗಿಂತಲೂ ಹೆಚ್ಚು ಪ್ರಿಯನಾದವನು. ಆತನನ್ನು ನೋಡುತ್ತಿದ್ದರೆ ಶ್ರೀರಾಮನಿಗೆ ತನ್ನ ತಂದೆಯು ಸ್ವರ್ಗಸ್ಥನಾಗಿರುವುದೇ ನೆನಪಿಗೆ ಬರುವುದಿಲ್ಲ" * –ಎಂದು ಆತನ ವಿಷಯದಲ್ಲಿ ಆಂಜನೇಯನಿಗೆ ಅವಳು ಹೇಳುತ್ತಾಳೆ. ನಾವು ವಿಚಾರ ಮಾಡುತ್ತಿರುವ ಈ ಪ್ರಸಂಗವನ್ನು ಬಿಟ್ಟು ಅದಕ್ಕೆ ಹಿಂದೆಯಾಗಲೀ, ಮುಂದೆಯಾಗಲೀ–ಆಕೆಯು ಲಕ್ಷ್ಮಣನ ವಿಷಯದಲ್ಲಿ ಎಲ್ಲಿಯೂ ದುಷ್ಟವಾದ ಮಾತುಗಳನ್ನು ಆಡಿಲ್ಲ. ಆದ್ದರಿಂದ ಅವನ ವಿಷಯದಲ್ಲಿ ಆಕೆಗೆ ಶುದ್ಧವಾದ ಅಭಿಪ್ರಾಯವೇ ಇತ್ತೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಶ್ರೀಗುರು :– ಹಾಗಿದ್ದರೂ ಆಕೆಯು ಈ ಸಮಯದಲ್ಲಿ ಲಕ್ಷ್ಮಣನ ವಿಷಯದಲ್ಲಿ ಏಕೆ ಅವಾಚ್ಯವಾದ ಶಬ್ದಗಳನ್ನು ಹೇಳಿರಬಹುದು ? ಈ ಬಗೆಗೆ ನೀನು ವಿಚಾರ ಮಾಡಿದ್ದೀಯಾ ? ವಿದ್ವಾಂಸರ ಅಭಿಪ್ರಾಯವನ್ನೂ ಗಮನಿಸಿದ್ದೀಯಾ ?

ಶ್ರೀ ವರದ :– 'ಸೀತೆಗೆ ಲಕ್ಷ್ಮಣನ ಬಗೆಗೆ ಶುದ್ಧವಾದ ಅಭಿಪ್ರಾಯವೇ ಇತ್ತು. ಆದರೆ ರಾಮನ ಸಹಾಯಕ್ಕಾಗಿ ಲಕ್ಷ್ಮಣನು ಹೇಗಾದರೂ ಹೊರಡುವಂತೆ ಮಾಡಬೇಕು. ಮೇಲೆ ಹೇಳಿದಂತೆ ಕೆಟ್ಟ ಮಾತುಗಳನ್ನು ಆಡಿದರೆ ತಾನೇ ಅವನು ಅವುಗಳನ್ನು ಸಹಿಸದೇ ರಾಮನ ಬಳಿಗೆ ಧಾವಿಸುತ್ತಾನೆ. ಇಲ್ಲದಿದ್ದರೆ ಅವನು ಹೋಗುವುದಿಲ್ಲ–ಎಂದು ಅವಳು ಭಾವಿಸಿದಳು. ಅದಕ್ಕಾಗಿ ದುಷ್ಟವಾದ ಮತ್ತು ಕಟುವಾದ ಆ ಮಾತುಗಳು ಅವಳ ಪತಿಭಕ್ತಿಯನ್ನೂ, ಸಮಯಸ್ಫೂರ್ತಿಯನ್ನೂ, ವಿವೇಕವನ್ನೂ, ಬುದ್ಧಿವಂತಿಕೆಯನ್ನೂ ಸೂಚಿಸುತ್ತದೆ' – ಎಂದು ಒಬ್ಬ ವಿದ್ವಾಂಸರು ವ್ಯಾಖ್ಯಾನಿಸಿರುತ್ತಾರೆ.

---

* ಸುಂದರಕಾಂಡ ಸರ್ಗ–೩೬

ಶ್ರೀಗುರು :– ಬೇರೆ ಏನಾದರೂ ಅಭಿಪ್ರಾಯವನ್ನು ವಿದ್ವಾಂಸರು ಹೇಳುತ್ತಾರೆಯೇ ?

ಶ್ರೀ ವರದ :– 'ಸೀತೆಯು ಬುದ್ಧಿಪೂರ್ವಕವಾಗಿ ಆ ವಿಪತ್ತಿನ ಸಂದರ್ಭದಲ್ಲಿ ಸಮಯೋಚಿತವಾದ ಚಾತುರ್ಯದಿಂದ ದುಷ್ಟವಾದ ಮಾತುಗಳನ್ನು ಸೃಷ್ಟಿಸಿದಳು–ಎಂದು ಹೇಳುವುದು ಸರಿಯಲ್ಲ. ಶೋಕಕ್ಕೂ, ಮೋಹಕ್ಕೂ, ಕೋಪಕ್ಕೂ ವಶಳಾಗಿ ಅವಳು ಆ ಮಾತುಗಳನ್ನಾಡಿದಳು. ಅಂತಹ ಉದ್ವೇಗದಲ್ಲಿ ಆಡಿದ ಮಾತುಗಳು ಪ್ರಮಾಣವಲ್ಲ. ಅದಕ್ಕಾಗಿ ಸೀತೆಯನ್ನು ನಿಂದಿಸಬಾರದು. ಆಕೆಯ ಮಾತುಗಳು ದುಷ್ಟವಾಗಿದ್ದರೂ ಆ ಸಂದರ್ಭದಲ್ಲಿ ಸಹಜವಾಗಿದೆ' – ಎಂದು ಮತ್ತೊಬ್ಬ ವಿದ್ವಾಂಸರು ಹೇಳುತ್ತಾರೆ.

ಶ್ರೀಗುರು :– ಈ ವಿದ್ವಾಂಸರ ಅಭಿಪ್ರಾಯಗಳು ನಿನಗೆ ಸರಿ ಎನ್ನಿಸುತ್ತವೆಯೇ ?

ಶ್ರೀ ವರದ :– ಇವುಗಳಲ್ಲಿ ಮೊದಲನೆಯ ಅಭಿಪ್ರಾಯವು ನನಗೆ ಅಷ್ಟು ಸರಿಯಾಗಿ ತೋರುವುದಿಲ್ಲ. ಎರಡನೆಯದು ಸರಿ ಎಂದು ಅನ್ನಿಸುತ್ತದೆ. ಪ್ರಾಣಪ್ರಿಯನಾದ ಪತಿಯು ಅಪಾಯಕ್ಕೆ ಸಿಕ್ಕಿಬಿದ್ದಿದ್ದಾನೆ ಎಂದು ಉದ್ವೇಗ ಉಂಟಾದಾಗ ಆಕೆಗೆ ಬುದ್ಧಿಯ ಮೇಲಿನ ಹತೋಟಿಯು ತಪ್ಪಿ ದುಃಖದಿಂದಲೂ ಭಯದಿಂದಲೂ ಪ್ರೇರಿತಳಾಗಿ ಸರಿಯೋ ತಪ್ಪೋ, ಏನೇನೋ ಅಂದುಬಿಟ್ಟಳು–ಎಂಬ ವ್ಯಾಖ್ಯಾನವೇ ಸಹಜವೆಂದು ತೋರುತ್ತದೆ. ಅಂತಹ ಉದ್ವೇಗದ ಸಮಯದಲ್ಲಿ ಆಕೆಯು ಉದ್ದೇಶಪೂರ್ವಕವಾಗಿ ಬುದ್ಧಿಯ ಚಮತ್ಕಾರವನ್ನು ತೋರಿಸಿದಳು – ಎಂಬ ಅಭಿಪ್ರಾಯವು ಅಸಹಜವಾಗಿ ಕಾಣುತ್ತದೆ.

ಆದರೆ ಈ ಎರಡು ಅಭಿಪ್ರಾಯಗಳಲ್ಲಿಯೂ ಒಂದು ಕೊರತೆ ಕಂಡುಬರುತ್ತದೆ. ಸೀತೆಯು ಆ ಮಾತುಗಳನ್ನು ಬುದ್ಧಿಪೂರ್ವಕವಾಗಿ ಆಡಿರಲಿ ಅಥವಾ ಕೋಪವೇ ಮುಂತಾದ ವೇಗಗಳಿಂದ ಆಡಿರಲಿ–ಅವಳು ಅದರ ವಿಷಯದಲ್ಲಿ ಲಕ್ಷ್ಮಣನಲ್ಲಿ ಮುಂದೆ ಯಾವಾಗಲಾದರೂ ಕ್ಷಮೆ ಬೇಡಿದಳೆಂದು ರಾಮಾಯಣದಲ್ಲಿ ಹೇಳಿಲ್ಲ. ಮನುಷ್ಯರು ತಪ್ಪುಮಾಡುವುದು ಸಹಜ. ಆದರೆ ಯಾರ ವಿಷಯದಲ್ಲಿ ತಪ್ಪುಮಾಡಿದ್ದಾರೆಯೋ ಅವರಲ್ಲಿ ಕ್ಷಮೆಯನ್ನು

ಬೇಡುವುದು ಸಜ್ಜನರ ಧರ್ಮ. ಸೀತೆಯು ಅದನ್ನು ಏಕೆ ಮಾಡಲಿಲ್ಲ ? ಎಂದು ಒಬ್ಬ ವಿದ್ವಾಂಸರನ್ನು ಕೇಳಿದೆ. ಅದಕ್ಕೆ ಅವರು—" ಕ್ಷಮೆಯನ್ನು ಕೇಳುವುದೇನೋ ಸರಿಯೇ. ಆದರೆ ಸೀತೆಯಷ್ಟು ಉನ್ನತಮಟ್ಟದಲ್ಲಿರುವವರು ಹಾಗೆ ಕ್ಷಮೆ ಕೇಳಬೇಕಾಗಿಲ್ಲ. ಏಕೆಂದರೆ : ಅವಳು ಮಹಾರಾಣಿ ; ಇಷ್ಟಲ್ಲದೇ ಲಕ್ಷ್ಮಣನಿಗೆ ತಾಯಿಯ ಸ್ಥಾನದಲ್ಲಿರುವವಳು. ಅವಳು ಕ್ಷಮೆಬೇಡಿದರೆ ಲಕ್ಷ್ಮಣನಿಗೇ ಅದರಿಂದ ಕಸಿವಿಸಿಯಾಗುತ್ತದೆ. ಅದು ಆಕೆಯ ಪಾತ್ರಕ್ಕೆ ಉಚಿತವಲ್ಲ "—ಎಂದು ಉತ್ತರ ಹೇಳಿದರು.

ಶ್ರೀಗುರು :— ಈ ಉತ್ತರ ನಿನಗೆ ಸಮಾಧಾನವಾಯಿತೇ ?

ಶ್ರೀ ವರದ :— ಆಗಲಿಲ್ಲ. ಏಕೆಂದರೆ : ಅವಳು ಲಕ್ಷ್ಮಣನಲ್ಲಿ ನೇರವಾಗಿ ಕ್ಷಮೆ ಬೇಡದಿದ್ದರೂ ತನ್ನ ಮನಸ್ಸಿನಲ್ಲೇ ದೇವರಲ್ಲಿ ಕ್ಷಮೆ ಬೇಡಬಹುದಾಗಿತ್ತು. ಹಾಗೆ ಆಕೆಯು ಪಶ್ಚಾತ್ತಾಪವನ್ನು ಮನಸ್ಸಿನಲ್ಲಿ ವ್ಯಕ್ತಪಡಿಸಿರುವುದಾಗಿಯೂ ರಾಮಾಯಣದಲ್ಲಿ ಎಲ್ಲಿಯೂ ಉಲ್ಲೇಖವಿಲ್ಲ. ಆದ್ದರಿಂದ ನನ್ನ ಮನಸ್ಸಿಗೆ ಆ ಉತ್ತರದಿಂದ ಪೂರ್ಣಸಮಾಧಾನವಾಗಲಿಲ್ಲ. ಸಮಸ್ಯೆಯು ಹಾಗೆಯೇ ಉಳಿಯಿತು.

ಶ್ರೀಗುರು :— ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ನನ್ನ ಅಭಿಪ್ರಾಯ ವನ್ನು ಹೇಳುತ್ತೇನೆ. ಅದರಿಂದ ನಿನ್ನ ಸಮಸ್ಯೆಯು ಪರಿಹಾರವಾದರೆ ಸಂತೋಷ.

ಸೀತಾದೇವಿಗೆ ಲಕ್ಷ್ಮಣನ ಪರಿಚಯವು ನಮಗಿರುವುದಕ್ಕಿಂತಲೂ ಹೆಚ್ಚಾಗಿಯೇ ಇತ್ತು. ಆತನು ಶುದ್ಧಾತ್ಮನು ಎಂಬುದನ್ನು ಆಕೆಯು ಚೆನ್ನಾಗಿಯೇ ತಿಳಿದಿದ್ದಳು. ಆದರೆ ಆ ಮಹಾತ್ಮನ ವಿಷಯದಲ್ಲಿಯೂ ಆಕೆಯು ದುಷ್ಟವಾದ ಮಾತುಗಳನ್ನು ಆಡಿದ್ದಕ್ಕೆ—ಆಕೆಯ ಪರಿಸ್ಥಿತಿ ಮತ್ತು ಪ್ರಕೃತಿಯ ಪರಿಸ್ಥಿತಿ ಇವುಗಳನ್ನು ಕಾರಣಗಳನ್ನಾಗಿ ಗಮನಿಸಬೇಕು. ಆತ್ಮಪ್ರಿಯನಾದ ಪತಿಯು ಪ್ರಾಣಸಂಕಟದಲ್ಲಿದ್ದಾನೆಂದು ಆಕೆಗೆ ನಿಜ ವಾಗಿಯೂ ಅನ್ನಿಸಿಬಿಟ್ಟಿದೆ. ತನ್ನ ಬಳಿ ಇದ್ದ ಸಮರ್ಥನೂ ಒಡಹುಟ್ಟಿ ದವನೂ ಆದ ಲಕ್ಷ್ಮಣನನ್ನು ಅವನ ಸಹಾಯಕ್ಕೆ ಹೋಗೆಂದರೂ ಅವನು ಹೋಗುತ್ತಿಲ್ಲ. ಇಂತಹ ಸನ್ನಿವೇಶದಲ್ಲಿ ಸಾಧ್ವಿಯೂ ಸ್ತ್ರೀಪ್ರಕೃತಿಯೂ ಆದವಳಿಗೆ ಬುದ್ಧಿಯ ಸಮತೂಕವು ತಪ್ಪಿ, ಭ್ರಮೆ-ಸಂಶಯ-ವಿಕಲ್ಪಗಳು

ಉಂಟಾಗುವುದರಲ್ಲಿ ಆಶ್ಚರ್ಯವೇನಿಲ್ಲ. ಲಕ್ಷ್ಮಣನು ರಾಮನ ಮೇಲಿನ ಪ್ರೀತಿಯಿಂದ ಭರತನ ಮೇಲೆ ಸಂಶಯಪಟ್ಟ ಉದಾಹರಣೆಯನ್ನು ನೆನಪು ಮಾಡಿಕೊಳ್ಳಬೇಕು. ಲಕ್ಷ್ಮಣನೂ ಶುದ್ಧಭಾವವುಳ್ಳವನೇ. ಸೀತೆಯೂ ಸದ್ಭಾವನೆ ಉಳ್ಳವಳೇ. ಆದರೆ ಸನ್ನಿವೇಶವು ಅವರ ಬುದ್ಧಿಯ ಹತೋಟಿಯನ್ನು ತಪ್ಪಿಸಿ, ಅವರು ಹಾಗೆ ಅಸಂಬದ್ಧವಾದ ಮಾತುಗಳನ್ನು ಆಡುತ್ತಾರೆ. ಪ್ರಕೃತದಲ್ಲಿ ಸೀತಾದೇವಿಗೆ ಭಯ, ಶೋಕ, ಉದ್ವೇಗಗಳ ಪರಿಣಾಮದಿಂದ ಸನ್ನಿಪಾತಜ್ವರದ ( Delirium ) ರೋಗಿಗೆ ಉಂಟಾಗುವ ಸ್ಥಿತಿಯೇ ಉಂಟಾಗಿಬಿಟ್ಟಿದೆ. ತಾನು ಹೇಳುತ್ತಿರುವುದು ಸರಿಯೇ-ತಪ್ಪೇ ? ಎಂಬ ವಿವೇಕವು ಅಂತಹ ರೋಗಿಗೆ ಇರುವುದಿಲ್ಲ. ಅವರು ಅಸಂಬದ್ಧವಾಗಿ ಏನೇನೋ ಬಡಬಡಿಸುತ್ತಾರೆ. ಪ್ರಕೃತದಲ್ಲಿ ಸೀತೆಯಾಡುವ ಮಾತುಗಳು ಅಂತಹವುಗಳೇ. ಅವು ಆದರ್ಶವಾದ ಮಾತುಗಳಲ್ಲ. ಬುದ್ಧಿಯ ಸಮತೂಕವನ್ನು ಕಳೆದುಕೊಂಡಾಗ ಹೊರಬರುವ ಮಾತುಗಳು ಅವು. ಆ ಸನ್ನಿವೇಶದಲ್ಲಿ ಅವು ಸಹಜವಾಗಿಯೇ ಇವೆ. ಅವುಗಳ ಮೂಲದಲ್ಲಿ ಪತಿಭಕ್ತಿಯೂ ಇದೆ. ಆದರೆ ಪರಿಸ್ಥಿತಿಯು ಆಕೆಯ ಮಾತುಗಳು ವಿಷಮವಾಗುವಂತೆ ಮಾಡಿವೆ. ಅವು ಉದ್ದೇಶಪೂರ್ವಕವಾಗಿ ಆಡಿದ ಮಾತುಗಳಲ್ಲ. ಆದ್ದರಿಂದ ಆವಳು ನಿಂದನೀಯಳಲ್ಲ.

ಭಗವತಿಯಾದ ಸೀತಾದೇವಿಯ ಸ್ಥಿತಿಯನ್ನು ರೋಗಿಯ ಸ್ಥಿತಿಗೆ ಹೋಲಿಸಬಹುದೇ ? ಎಂದರೆ–ಇದರಿಂದ ಸೀತೆಯ ದಿವ್ಯಭಾವಕ್ಕೆ ಅಪಚಾರವೇನೂ ಇಲ್ಲ. ಆಕೆಯು ಕೈಗೊಂಡಿರುವ ಮಾನುಷಪ್ರಕೃತಿಗೆ ತಕ್ಕ ವರ್ತನೆ ಅದಾಗಿದೆ. ಅದರಲ್ಲಿ ಸಹಜತೆ ಇದೆ–ಎಂಬುದು ನಮ್ಮ ಉತ್ತರ.

ಶ್ರೀ ವರದ :– ಆದರೆ ತಾನು ಆಡಿದ ತಪ್ಪುಮಾತುಗಳಿಗಾಗಿ ಆಕೆಯು ಏಕೆ ಕ್ಷಮೆ ಬೇಡುವುದಿಲ್ಲ ? ಪಶ್ಚಾತ್ತಾಪವನ್ನಾದರೂ ಏಕೆ ಪಡುವುದಿಲ್ಲ ?

ಶ್ರೀಗುರು :– ನಾನು ಹೇಳಿದ ವಿವರಣೆಯಲ್ಲಿಯೇ ಈ ಪ್ರಶ್ನೆಗಳಿಗೆ ಉತ್ತರವೂ ಇದೆಯಲ್ಲಾ ! ಪಶ್ಚಾತ್ತಾಪಪಡುವುದಕ್ಕೆ ತಾನು ತಪ್ಪುಮಾತನಾಡಿದ ನೆನಪೇ ಆಕೆಗಿಲ್ಲವಲ್ಲ ! ಸನ್ನಿಪಾತಜ್ವರ ಬಂದು ವಾಸಿಯಾಗಿರುವವನಿಗೆ ನಾನು ಜ್ವರಬಂದಿದ್ದಾಗ ಹಾಗೆಲ್ಲಾ ಕಂಡಾಬಟ್ಟೆಯಾಗಿ ಮಾತ

ನಾಡಿದೆ-ಎಂಬ ನೆನಪು ಹೇಗೆ ಬರುತ್ತದೆ? ಆದ್ದರಿಂದ ಅನಾರೋಗ್ಯದಿಂದ ಗುಣಹೊಂದಿದ ಮನುಷ್ಯನಾಗಲೀ, ಮೇಲೆ ಹೇಳಿದ ವಿಷಮಪರಿಸ್ಥಿತಿಯಿಂದ ಪಾರಾಗಿ ಸಮಾಧಾನದಿಂದಿರುವ ಸೀತಾದೇವಿಯಾಗಲೀ-ತಮ್ಮ ಹಿಂದಿನ ಮಾತುಗಳಿಗಾಗಿ ಪಶ್ಚಾತ್ತಾಪಪಡುವ ಪ್ರಶ್ನೆಯೇ ಏಳುವುದಿಲ್ಲ.

ಆಕೆಯು ಹೇಳಿದ ದುಷ್ಟವಾದ ಮಾತುಗಳನ್ನು ಆಗ ಕೇಳಿದವನು ಲಕ್ಷ್ಮಣನೊಬ್ಬನೇ. ಆದರೆ ಅವನು - 'ನೀನು ಆಗ ನನ್ನನ್ನು ಹೀಗೆ ತೆಗಳಿದೆಯಲ್ಲಾ?'-ಎಂದು ಆಕೆಗೆ ಜ್ಞಾಪಿಸುವವನಲ್ಲ. ಆದ್ದರಿಂದ ಅವನಲ್ಲಿ ಆಕೆಯು ಕ್ಷಮೆಯನ್ನು ಕೇಳುವ ಪ್ರಕರಣವೂ ಬರುವುದಿಲ್ಲ."

ಶ್ರೀಗುರುದೇವರು ನೀಡಿದ ವಿವರಣೆಯಿಂದ ಶ್ರೀವರದರ ಮನಸ್ಸನ್ನು ಕಾಡಿಸುತ್ತಿದ್ದ ಸಮಸ್ಯೆಯು ಪರಿಹಾರವಾಯಿತು. ಶ್ರೀಗುರುದೇವರ ಉತ್ತರ ಸಹಜವಾಗಿತ್ತು, ಸರಳವಾಗಿತ್ತು, ಸಮಂಜಸವಾಗಿತ್ತು. ಸಂಕ್ಷೇಪವಾಗಿದ್ದರೂ ಸುಲಭಶೈಲಿ ಮತ್ತು ಸುಂದರವಾದ ದೃಷ್ಟಾಂತಗಳಿಂದ ಸುಖವಾಗಿ ಬೋಧವನ್ನುಂಟುಮಾಡಿ ಹೃದಯವನ್ನು ತುಂಬಿತ್ತು.

ಇದಲ್ಲದೇ ಕೋಪವೇ ಮುಂತಾದ ವೇಗದಲ್ಲಿರುವವನು ಜ್ವರದ ರೋಗಿಯಂತೆ. ಅವನ ವಿಷಯದಲ್ಲಿ ಇತರರು ತಾಳ್ಮೆಯಿಂದ ನಡೆದುಕೊಳ್ಳಬೇಕು. ರೋಗವು ವಾಸಿಯಾದ ಮೇಲೆ ಅವನಿಗೆ ರೋಗಸಮಯದ ನೆನಪುಗಳನ್ನು ಕೊಟ್ಟು ಮನಸ್ಸಿಗೆ ನೋವನ್ನುಂಟುಮಾಡಬಾರದು-ಎಂಬ ನೀತಿಯ ಪಾಠವೂ ಆಯಿತು. ಧರ್ಮನೀತಿಯ ಪಾಠವೂ ಆಯಿತು. ಲೋಕನೀತಿಯ ಪಾಠವೂ ಆಯಿತು. ವೇಗವಿಲ್ಲದೇ ಶಾಂತವಾಗಿ ವಿಷಯವನ್ನು ವಿಮರ್ಶೆ ಮಾಡುವ ಬೌದ್ಧಿಕವಾದ ಪಾಠವೂ ಆಯಿತು. ಪಾತ್ರಗಳ ಮನೋವಿಶ್ಲೇಷಣೆಯನ್ನು ಮಾಡುವ ಪಾಠವೂ ಮತ್ತು ಸಾಮರ್ಥ್ಯವೂ ಸಂಪೂರ್ಣವಾಗಿದ್ದರೂ ಕೂಡ - "ಯಥಾಶಕ್ತಿ ಪ್ರಯತ್ನಪಡುತ್ತೇನೆ"-ಎಂದು ಪ್ರಾರಂಭದಲ್ಲಿ ಅಪ್ಪಣೆಕೊಡಿಸಿದ್ದ ಶ್ರೀಗುರುದೇವರ ವಿನಯಸಂಪತ್ತೂ ಶ್ರೀ ವರದರ ಮನಸ್ಸಿನಲ್ಲಿ ಮುದ್ರಿತವಾಯಿತು.

ಹೀಗೆ ಪ್ರಕೃತವಾದ ಶ್ರೀಮದ್ರಾಮಾಯಣವಿಷಯದ ಸಮಸ್ಯೆಯ ಪರಿಹಾರದಿಂದಲೂ, ಹಾಗೆಯೇ ಪ್ರಾಸಂಗಿಕವಾಗಿ ದೊರೆತ ಬಗೆಬಗೆಯಾದ

ಇತರ ಉಪದೇಶಗಳ ಪ್ರಕಾಶದಿಂದಲೂ ಪ್ರಸನ್ನವಾದ ಮನಸ್ಸಿನಿಂದ ಅವರು ಶ್ರೀಗುರುದೇವರಿಗೆ ಭಕ್ತಿಯಿಂದ ಪ್ರಣಾಮಮಾಡಿದರು. ಶ್ರೀಗುರುದೇವರು ಸಹಜವಾದ ಪ್ರಸನ್ನಮುಖಮುದ್ರೆಯಿಂದ ಅನುಗ್ರಹವನ್ನು ಮಾಡಲು ಅಂದಿನ ಪಾಠಕ್ಕೆ ಮಂಗಳವಾಯಿತು.

---

## ಶ್ರೀರಾಮ-ಸೀತೆಯರ ವಯಸ್ಸಿನ ವಿಶ್ಲೇಷಣೆ

ವಾಲ್ಮೀಕಿರಾಮಾಯಣದಲ್ಲಿ ಶ್ರೀರಾಮ ಮತ್ತು ಸೀತೆಯರ ವಯಸ್ಸನ್ನು ಕುರಿತು ಹೇಳುವ ಪ್ರಕರಣಗಳು ಆರು. ಆದರೆ ಇವುಗಳು ಒಂದಕ್ಕೊಂದು ಸಮನ್ವಯವಾಗುವುದಿಲ್ಲ. ಸಮನ್ವಯಮಾಡಲು ವ್ಯಾಖ್ಯಾನಕಾರರು ಪ್ರಯತ್ನಿಸಿದ್ದಾರೆ. ಅವೆಲ್ಲವನ್ನೂ ಕ್ರೋಡೀಕರಿಸಿ ಕೊಡಲು ಉದ್ದೇಶಿಸಲಾಗಿದೆ.

ರಾಮನ ವಯಸ್ಸಿನ ಪ್ರಸ್ತಾಪ ಬರುವುದು ಮೊದಲು ಬಾಲಕಾಂಡದ ೨೦ನೆಯ ಸರ್ಗದಲ್ಲಿ. ವಿಶ್ವಾಮಿತ್ರರು ರಾಮನನ್ನು ತಮ್ಮ ಜೊತೆಯಲ್ಲಿ ರಾಕ್ಷಸರನ್ನು ಸಂಹರಿಸಲು ಕಳುಹಿಸುವಂತೆ ದಶರಥನನ್ನು ಕೇಳುತ್ತಾರೆ. ಆಗ ದಶರಥನು ಇವನಿನ್ನೂ ಬಾಲಕ ಎಂದು ಹೇಳುವ ಆಶಯದಿಂದ ಹೀಗೆ ಹೇಳುತ್ತಾನೆ.

(1) ಊನಷೋಡಶವರ್ಷೋ ಮೇ ರಾಮೋ ರಾಜೀವಲೋಚನಃ ।
ನ ಯುದ್ಧಯೋಗ್ಯತಾಮಸ್ಯ ಪಶ್ಯಾಮಿ ಸಹ ರಾಕ್ಷಸೈಃ ॥೨॥

ನನ್ನ ರಾಮನಿಗಿನ್ನೂ ಹದಿನಾರು ವರ್ಷಗಳೂ ತುಂಬಿಲ್ಲ. ಇವನು ರಾಕ್ಷಸರೊಡನೆ ಯುದ್ಧಮಾಡಲಾರ.

(2) ಶ್ರೀರಾಮನು ಅರಣ್ಯವಾಸಕ್ಕೆ ಹೊರಟ ಸಮಯದಲ್ಲಿ ತಾಯಿಯಾದ ಕೌಸಲ್ಯೆಯು ಶ್ರೀರಾಮನ ವಯಸ್ಸು ಹೇಳುತ್ತಾಳೆ.

ದಶ ಸಪ್ತ ಚ ವರ್ಷಾಣಿ ತವ ಜಾತಸ್ಯ ರಾಘವ ।
ಅತೀತಾನಿ ಪ್ರಕಾಂಕ್ಷನ್ತ್ಯಾ ಮಯಾ ದುಃಖಪರಿಕ್ಷಯಮ್ ॥೪೫॥

ಅಯೋಧ್ಯಾ–ಸರ್ಗ ೨೦

ನೀನು ಹುಟ್ಟಿ ಹದಿನೇಳು ವರ್ಷಗಳು ಕಳೆದುಹೋದುವು. ಇನ್ನು ಮೇಲಾದರೂ ನನ್ನ ದುಃಖವು ಕಡಿಮೆಯಾಗುವುದೆಂಬುದನ್ನು ಆಶಿಸಿದ್ದೆನು. ಆದರೆ ನನ್ನ ದುಃಖವು ಅಕ್ಷಯವಾಗಿದೆ .......

ಈ ಶ್ಲೋಕದ ಪ್ರಕಾರ ವಿವಾಹವಾದನಂತರ ರಾಮನು ಸೀತೆಯೊಡನೆ ಅಯೋಧ್ಯೆಯಲ್ಲಿ ಒಂದು ವರ್ಷವಿದ್ದನೆಂದಾಗುತ್ತದೆ. ಹೇಗೆಂದರೆ : ಹದಿನಾರು ತುಂಬಿದ್ದಾಗ ದಶರಥನು ರಾಮನನ್ನು ವಿಶ್ವಾಮಿತ್ರನ ಜೊತೆಯಲ್ಲಿ ಕಳುಹಿಸುತ್ತಾನೆ. ವಿಶ್ವಾಮಿತ್ರನ ಜೊತೆಯಲ್ಲಿ ಹೋದ ರಾಮನಿಗೆ ಮದುವೆಯಾಗುತ್ತದೆ. ಸ್ವಯಂವರವಾದನಂತರ ಅಯೋಧ್ಯೆಗೆ ಎಲ್ಲರೂ ಬರುತ್ತಾರೆ. ಭರತ-ಶತ್ರುಘ್ನರು ಕೇಕಯದೇಶಕ್ಕೆ ಹೊರಟುಹೋಗುತ್ತಾರೆ. ಇತ್ತಕಡೆ ರಾಮನ ಪಟ್ಟಾಭಿಷೇಕಕ್ಕೆ ದಶರಥನು ಸಂಕಲ್ಪಿಸುತ್ತಾನೆ. ಕೈಕೇಯಿಯಿಂದ ಅದಕ್ಕೆ ವಿಘ್ನವುಂಟಾಗಿ ರಾಮನು ಕಾಡಿಗೆ ಹೋಗಬೇಕಾಗುತ್ತದೆ. ಆ ಸಮಯದಲ್ಲಿ ಕೌಸಲ್ಯೆಯು ಹೇಳುವ ಮಾತಿದು. ಇದನ್ನು ಆಧರಿಸಿ ವಿವಾಹವಾದನಂತರ ಸೀತಾ-ರಾಮರು ಅಯೋಧ್ಯೆಯಲ್ಲಿ ಒಂದು ವರ್ಷ ಇದ್ದರೆಂದು ಹೇಳಬೇಕಾಗುತ್ತದೆ.

ಈ ಶ್ಲೋಕಕ್ಕೆ ಪಾಠಾಂತರಗಳಿವೆ.

ಸಪ್ತವಿಂಶತಿರದ್ಯೇಹ ತವ ಜಾತಸ್ಯ ರಾಘವ ।

ನೀನು ಹುಟ್ಟಿ ಇಪ್ಪತ್ತೇಳು ವರ್ಷಗಳಾದುವು.

ಈ ಪಾಠದಂತೆ ಶ್ರೀರಾಮನು ವಿವಾಹವಾದನಂತರ ಅಯೋಧ್ಯೆಯಲ್ಲಿ ಸೀತೆಯೊಡನೆ ಹನ್ನೆರಡು ವರ್ಷಗಳು ಇದ್ದಂತಾಗುತ್ತದೆ. ದಶರಥನು ಹೇಳಿದ **ಊನಷೋಡಶ** --ಎಂಬುದನ್ನೇ ಆಧಾರವಾಗಿಟ್ಟುಕೊಂಡು ಹದಿನಾರು ತುಂಬುವುದರೊಳಗಾಗಿ ಶ್ರೀರಾಮನಿಗೆ ಮದುವೆಯಾಯಿತೆಂದು ನಿರ್ಧರಿಸಬೇಕಾಗುತ್ತದೆ.

(3) ಪತಿಸಂಯೋಗಸುಲಭಂ ವಯೋ ದೃಷ್ಟ್ವಾ ತು ಮೇ ಪಿತಾ ।
ಚಿನ್ತಾಮಭ್ಯಗಮದ್ದೀನೋ ವಿತ್ತನಾಶಾದಿವಾಧನಃ ॥೩೪॥

ಅಯೋಧ್ಯಾ–ಸರ್ಗ ೧೧೮

ಸೀತಾದೇವಿಯು ಅನಸೂಯೆಗೆ ಹೇಳುವ ಮಾತಿದು : ' ನನಗೆ ವೈವಾ

ಹಿಕವಯಸ್ಸು ಪ್ರಾಪ್ತವಾದುದನ್ನು ಕಂಡು ನನ್ನ ತಂದೆಯು ಚಿಂತೆಗೀಡಾದನು.'—ಇಲ್ಲಿ ಆಗ ತನ್ನ ವಯಸ್ಸು ಎಷ್ಟಾಗಿತ್ತೆಂದು ಹೇಳದಿದ್ದರೂ ವಿವಾಹಸಮಯದಲ್ಲಿ ನಾನು ಪ್ರೌಢೆಯಾಗಿದ್ದೆನು—ಎಂಬ ಅರ್ಥದಲ್ಲಿ ಸೀತಾದೇವಿಯು ಹೇಳಿದ್ದಾಳೆ. ಎಂದರೆ ಆಗ ಅವಳ ವಯಸ್ಸು ಎಷ್ಟಾಗಿರಬಹುದು?

(4) ಪ್ರತ್ಯುವಾಚ ಮಹಾಭಾಗಂ ವಿಶ್ವಾಮಿತ್ರಂ ಮಹಾಮುನಿಮ್ ।
ಬಾಲೋ ದ್ವಾದಶವರ್ಷೋಽಯಂ ಅಕೃತಾಸ್ತ್ರಶ್ಚ ರಾಘವಃ ॥

ಅರಣ್ಯಕಾಂಡ—ಸರ್ಗ ೩೮—ಶ್ಲೋಕ ೬

ಮಾರೀಚನು ರಾವಣನಿಗೆ ಹೇಳುವ ಮಾತಿದು. ದಶರಥನು ವಿಶ್ವಾಮಿತ್ರನಿಗೆ ಹಿಂದೆ ಹೇಳಿದ್ದನ್ನೇ ಮಾರೀಚನು ರಾವಣನಿಗೆ ಹೇಳುತ್ತಾನೆ. ಹಾಗೆ ಹೇಳುವಾಗ ಊನಷೋಡಶವರ್ಷೋಽಯಂ—ಎಂಬುದಕ್ಕೆ ಬದಲಾಗಿ ಬಾಲೋ ದ್ವಾದಶವರ್ಷೋಽಯಂ—ಎಂದು ಹೇಳುತ್ತಾನೆ. ಮಾರೀಚನು ಹೇಳಿರುವ ಹನ್ನೆರಡು ವರ್ಷ—ಎಂಬುದನ್ನೇ ಆಧಾರವಾಗಿಟ್ಟುಕೊಳ್ಳುವುದು ಸಾಧುವೇ? ಯಾವ ಸಂದರ್ಭದಲ್ಲಿ ಮಾರೀಚನು ರಾವಣನಿಗೆ ಈ ಮಾತನ್ನು ಹೇಳಿದ್ದನು—ಎಂಬುದೆಲ್ಲವನ್ನೂ ವಿವೇಚಿಸಬೇಕಾಗಿದೆ. ಈ ಶ್ಲೋಕಕ್ಕೆ ಪಾಠಾಂತರವೂ ಇದೆ.

ಊನಷೋಡಶವರ್ಷೋಽಯಮಕೃತಾಸ್ತ್ರಶ್ಚ ರಾಘವಃ ॥

ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರು ಇದನ್ನೇ ಮುಖ್ಯಪಾಠವನ್ನಾಗಿ ಪರಿಗಣಿಸಿದ್ದಾರೆ.

ಊನದ್ವಾದಶವರ್ಷೋಽಯಂ—ಎಂಬ ಪಾಠಾಂತರವೂ ಇದೆ.

(5) ಉಷಿತ್ವಾ ದ್ವಾದಶಸಮಾ ಇಕ್ಷ್ವಾಕೂಣಾಂ ನಿವೇಶನೇ ।
.... ....
ತತಸ್ತ್ರಯೋದಶೇ ವರ್ಷೇ ರಾಜಾಮನ್ತ್ರಯತ ಪ್ರಭುಃ ॥೪॥
ಮಮ ಭರ್ತಾ ಮಹಾತೇಜಾ ವಯಸಾ ಪಞ್ಚವಿಂಶಕಃ ।
ಅಷ್ಟಾದಶ ಹಿ ವರ್ಷಾಣಿ ಮಮ ಜನ್ಮನಿ ಗಣ್ಯತೇ ॥೧೦॥

ಅರಣ್ಯಕಾಂಡ—ಸರ್ಗ ೪೭

ಸೀತಾದೇವಿಯು ರಾವಣನಿಗೆ ಹೇಳುವ ಮಾತುಗಳಿವು. ನಾನು

ವಿವಾಹವಾದ ನಂತರ ಹನ್ನೆರಡು ವರ್ಷಗಳಕಾಲ ದಶರಥನ ಅರಮನೆಯಲ್ಲಿ ರಾಮನೊಡನೆ ಸುಖವಾಗಿದ್ದೆನು. ಹದಿಮೂರನೆಯ ವರ್ಷದಲ್ಲಿ ನನ್ನ ಪತಿಯನ್ನು ದಶರಥನು ಆಹ್ವಾನಿಸಿದನು. ಆ ಸಮಯದಲ್ಲಿ ನನ್ನ ಪತಿಗೆ ೨೫ ವರ್ಷಗಳಾಗಿದ್ದುವು. ನನಗೆ ೧೮ ವರ್ಷಗಳಾಗಿದ್ದುವು.

ಇದಕ್ಕೆ ಪಾಠಾಂತರವು ಹೀಗಿದೆ.

ಸಂವತ್ಸರಂ ಚಾಧ್ಯುಷಿತಾ ರಾಘವಸ್ಯ ನಿವೇಶನೇ ।

.........

ತತಃ ಸಂವತ್ಸರಾದೂರ್ಧ್ವಂ ಸಮಮನ್ಯತ ಮೇ ಪತಿಮ್ ॥

ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನವರು ಇದನ್ನೇ ಮುಖ್ಯ ಪಾಠವನ್ನಾಗಿ ಪರಿಗಣಿಸಿದ್ದಾರೆ.

ಮಮ ಭರ್ತಾ ಮಹಾತೇಜಾಃ ವಯಸಾ ಸಪ್ತವಿಂಶಕಃ ॥

'ಅಷ್ಟಾದಶ ಹಿ ವರ್ಷಾಣಿ'–ಎಂಬ ಅರ್ಧ ಶ್ಲೋಕವು ಓರಿಯಂಟಲ್ ಇನ್‌ಸ್ಟಿಟ್ಯೂಟ್ ಇವರ ಪುಸ್ತಕದಲ್ಲಿಲ್ಲ.

ಅಷ್ಟಾದಶ–ಎಂಬುದಕ್ಕೆ ಅಷ್ಟಾದ್ಯದಶವರ್ಷಾಣಿ ಅದ್ಯಾಷ್ಟಾದಶವರ್ಷಾಣಿ–ಎಂಬ ಪಾಠಾಂತರಗಳಿವೆ.

(6) ಪುನಃ ಸುಂದರಕಾಂಡದಲ್ಲಿ ಹನುಮಂತನೊಡನೆ ಸೀತೆಯು ಹೇಳುತ್ತಾಳೆ.

ಸಮಾ ದ್ವಾದಶ ತತ್ರಾಹಂ ರಾಘವಸ್ಯ ನಿವೇಶನೇ ।<br>
ತತಸ್ತ್ರಯೋದಶೇ ವರ್ಷೇ ರಾಜ್ಯೇ ಚೇಕ್ಷ್ವಾಕುನನ್ದನಮ್ ॥೧೭-೧೮॥ ಸರ್ಗ ೩೩

ಅದರಲ್ಲಿಯೂ ಮೇಲೆ ತಿಳಿಸಿರುವಂತೆ ಪಾಠಭೇದವಿದೆ.

ಸಂವತ್ಸರಂ ಚಾಧ್ಯುಷಿತಾ ರಾಘವಸ್ಯ ನಿವೇಶನೇ ।<br>
ತತಃ ಸಂವತ್ಸರಾದೂರ್ಧ್ವಂ.......

ದಶರಥ ಮತ್ತು ಕೌಸಲ್ಯೆಯರ ಮಾತನ್ನು ಪರಿಗಣಿಸಿದರೆ ರಾಮನು ವಿವಾಹವಾದನಂತರ ಒಂದು ವರ್ಷ ಮಾತ್ರ ಅಯೋಧ್ಯೆಯಲ್ಲಿರುತ್ತಾನೆ.

ಸೀತೆಯು ಹೇಳಿರುವ ಹನ್ನೆರಡು ವರ್ಷಗಳನ್ನು ಗಣನೆಗೆ ತೆಗೆದುಕೊಂಡರೆ ಕೌಸಲ್ಯೆಯ ಮಾತು ಸರಿಹೊಂದುವುದಿಲ್ಲ. ದಶ ಸಪ್ತ ಚ ವರ್ಷಾಣಿ ಎಂಬುದಕ್ಕೆ ಸಪ್ತವಿಂಶತಿರದ್ಯೇಹ ಎಂಬ ಪಾಠಾಂತರವನ್ನಿಟ್ಟುಕೊಂಡರೂ ವಯಸಾ ಪಞ್ಚವಿಂಶಕಃ ಎಂಬ ಸೀತೆಯ ಮಾತಿಗೆ ಹೊಂದಿಕೊಳ್ಳುವುದಿಲ್ಲ. ಹನ್ನೆರಡು ವರ್ಷಗಳನ್ನು ಅಯೋಧ್ಯೆಯಲ್ಲಿ ಕಳೆದೆವು–ಎಂಬುದಕ್ಕೆ ಹೊಂದಿಕೊಳ್ಳುತ್ತದೆ.

ಇಪ್ಪತ್ತೈದನೆಯ ವಯಸ್ಸಿನಲ್ಲಿ ರಾಮನು ಅಯೋಧ್ಯೆಯನ್ನು ಬಿಟ್ಟದ್ದು ಎಂಬ ಸೀತೆಯ ಮಾತನ್ನು ಸಮರ್ಥಿಸಬೇಕಾದರೆ ರಾಮನಿಗೆ ಹದಿಮೂರನೆಯ ವರ್ಷವೇ ವಿವಾಹವಾಗಿರಬೇಕು. ಹಾಗೆ ರಾಮನು ಹದಿಮೂರು ವಯಸ್ಸಿನವನೇ ಆಗಿದ್ದಿದ್ದರೆ ದಶರಥನು ಹಾಗೆಯೇ ಹೇಳುತ್ತಿದ್ದನು. ಏಕೆಂದರೆ: ರಾಮನು ಬಹಳ ಚಿಕ್ಕವನೆಂದು ಹೇಳುವುದೇ ಅವನಿಗೆ ಬೇಕಾಗಿದ್ದಿತು. ಆದುದರಿಂದ ದಶರಥನು ಹೇಳಿದ್ದಕ್ಕಿಂತಲೂ ರಾಮನು ಕಡಿಮೆ ವಯಸ್ಸಿನವನೆಂದು ಹೇಳಲು ಸಾಧ್ಯವಾಗುವುದಿಲ್ಲ. ಮಾರೀಚನು–ಬಾಲೋ ದ್ವಾದಶವರ್ಷೋಽಯಂ–ಎಂದು ಹೇಳಿದ್ದಾನೆ. ಅದೂ ದಶರಥನ ಮಾತನ್ನೇ ಪುನರಾವರ್ತನೆ ಮಾಡಿದ್ದಾನೆ. ಊನಷೋಡಶವರ್ಷೋಽಯಂ ಎಂದು ಕೆಲವು ಪಾಠಾಂತರಗಳಲ್ಲಿದೆ. ಒಂದು ವೇಳೆ–ಬಾಲೋ ದ್ವಾದಶವರ್ಷೋಽಯಂ–ಎಂದು ಹೇಳಿದ್ದರೂ ರಾವಣನನ್ನು ಭಯಪಡಿಸುವ ಸಲುವಾಗಿ ಅಷ್ಟು ಚಿಕ್ಕವನಾಗಿದ್ದಾಗಲೇ ಅನೇಕರಾಕ್ಷಸರನ್ನು ಸಂಹರಿಸಿದ್ದನೆಂದು ಹೇಳುವ ಸಲುವಾಗಿ ಹಾಗೆ ಹೇಳಿದನು–ಎಂದಾದರೂ ಸಮರ್ಥಿಸಬಹುದಾಗಿದೆ. ಆದರೆ ಮಾರೀಚನು ಹೇಳಿದ್ದನ್ನೇ ಆಧಾರವಾಗಿಟ್ಟುಕೊಂಡು ಹನ್ನೆರಡನೆಯ ವರ್ಷದಲ್ಲಿಯೇ ವಿಶ್ವಾಮಿತ್ರರ ಜೊತೆ ಹೋದನೆಂದೂ ಅವನ ಮದುವೆಯೂ ಆಗಲೇ ಆಯಿತೆಂದೂ ಹೇಳುವುದು ಕಷ್ಟ. ಮಾರೀಚನ ಮಾತನ್ನೇ ಆಧಾರವಾಗಿಟ್ಟುಕೊಂಡರೆ ಸೀತೆಯು ಹೇಳುವ–ವಯಸಾ ಪಞ್ಚವಿಂಶಕಃ–ಎಂಬುದಕ್ಕೇನೋ ಹೊಂದಿಕೊಳ್ಳುತ್ತದೆ. ಆದರೂ ಇದನ್ನೂ ಆಧಾರವಾಗಿ ತೆಗೆದುಕೊಳ್ಳುವುದಕ್ಕಾಗುವುದಿಲ್ಲ. ಶ್ರೀರಾಮನಿಗೆ ಹದಿನೈದನೇ ವಯಸ್ಸಿನಲ್ಲಿಯೇ ವಿವಾಹವೆಂದು ಅಗ್ನಿವೇಶರಾಮಾಯಣದಲ್ಲಿ ಹೇಳಿದೆ. ಪುರಾಣಾಂತರಗಳಲ್ಲಿಯೂ ಇದೆ.

ರಾಮಃ ಪಞ್ಚದಶೇ ವರ್ಷೇ ಷಡ್ವರ್ಷಾಮಪಿ ಮೈಥಿಲೀಮ್ ।
ಉಪಯೇಮೇ ತ್ವಯೋಧ್ಯಾಯಾಂ ದ್ವಾದಶಾಬ್ದಾನುವಾಸಸಃ ॥

ರಾಮನು ತನ್ನ ಹದಿನೈದನೇ ವರ್ಷದಲ್ಲೇ ಆರು ವರ್ಷದ ಮೈಥಿಲಿಯನ್ನು ಮದುವೆಯಾದನು. ಅಯೋಧ್ಯೆಯಲ್ಲಿ ಹನ್ನೆರಡು ವರ್ಷಗಳಿದ್ದನು.

ಕೌಸಲ್ಯೆಯು ಹೇಳಿರುವ ದಶ ಸಪ್ತ ಚ ವರ್ಷಾಣಿ ಎಂಬುದಕ್ಕೂ ಸೀತೆಯು ಪಞ್ಚವಿಂಶಕಃ ಎಂದು ಹೇಳಿರುವುದಕ್ಕೂ ಸಮಾಧಾನವೆಂದರೆ: ಸಪ್ತವಿಂಶತಿರಬ್ದೇಹ ಎಂದು ಕೌಸಲ್ಯೆಯ ಪ್ರಕರಣದಲ್ಲಿಯೂ ವಯಸಾ ಸಪ್ತವಿಂಶಕಃ ಎಂದು ಸೀತೆಯ ಪ್ರಕರಣದಲ್ಲಿಯೂ ಪಾಠಾಂತರಗಳನ್ನು ಇಟ್ಟುಕೊಳ್ಳಬೇಕು. ಆಗ ಎಲ್ಲವೂ ಸಮನ್ವಯವಾಗುತ್ತದೆ.

ಈ ವಿಷಯದಲ್ಲಿ ವ್ಯಾಖ್ಯಾನಕಾರರಲ್ಲಿ ಭಿನ್ನಾಭಿಪ್ರಾಯವಿದೆ. ಹದಿನೈದನೇ ವರ್ಷದಲ್ಲಿ ವಿವಾಹವಾದ ರಾಮನಿಗೆ ಅರಣ್ಯಕ್ಕೆ ಹೋಗುವ ವೇಳೆಗೆ ಇಪ್ಪತ್ತೈದಕ್ಕಿಂತಲೂ ಹೆಚ್ಚು ವಯಸ್ಸಾಗಿತ್ತು. ಅತಿಕ್ರಾನ್ತ ಪಞ್ಚವಿಂಶಕ ಇತ್ಯರ್ಥಃ – ಎಂದು ಒಬ್ಬರ ವ್ಯಾಖ್ಯಾನ.

ಮತ್ತೊಬ್ಬ ವ್ಯಾಖ್ಯಾನಕಾರರು ದಶ ಸಪ್ತ ಚ ವರ್ಷಾಣಿ ಎಂದರೆ ಇಪ್ಪತ್ತೆಂಟು ಎಂದೂ ಪಞ್ಚವಿಂಶಕಃ ಎಂದರೂ ಇಪ್ಪತ್ತೆಂಟು ಎಂದೂ ಸಮರ್ಥನೆ ಮಾಡಿದ್ದಾರೆ.

"ಕೌಸಲ್ಯೋಕ್ತಿಪದ್ಯಘಟಿಕೀಭೂತದಶಶಬ್ದಸ್ಯೈಕಶೇಷೇಣ ವಿಂಶತಿರಿತ್ಯರ್ಥಃ, ಚ ಶಬ್ದಸ್ಯ ಚಂದ್ರವಾಚಕತ್ವೇನ ಏಕತ್ವಲಾಭಃ, ತಥಾ ಚ ದಶ ಸಪ್ತ ಚ ಯುಕ್ತಾನ್ಯೇವ ವರ್ಷಾಣೀತ್ಯಷ್ಟಾವಿಂಶತಿ ಲಾಭಃ "ಚಶ್ಚಂಡೀಶೇ ಪುಮಾನುಕ್ತಃ ಕಚ್ಛಪೇ ಚಂದ್ರ ಚೋರಯೋಃ ।" ಇತಿ ಮೇದಿನೀ.

"ಮಮ ಭರ್ತಾ ಮಹಾತೇಜಾಃ ವಯಸಾ ಪಂಚವಿಂಶಕಃ ।" ಎಂದು ಸೀತೆಯು ಹೇಳಿರುವುದನ್ನು ಮೇಲೆ ಹೇಳಿದ ಕೌಸಲ್ಯಾಶ್ಲೋಕಕ್ಕೆ ಸಮನ್ವಯಮಾಡುತ್ತಾ– "ಪಂಚವಿಂಶಯುಕ್ತಾಃ ಕಾಸ್ತ್ರಯಃ ಯಸ್ಯ ಸಃ, ಪಂಚವಿಂಶಕಃ– ಕಶಬ್ದಸ್ಯ ವಹ್ನಿವಾಚಕತ್ವೇನ ತ್ರಿತ್ವಲಾಭಃ" "ಕಃ ಪ್ರಜಾಪತಿರುದ್ದಿಷ್ಟಃ ಕೋಽರ್ಕವಾಯ್ವನಲೇಷ್ವಪಿ" ಕಃ

ಎಂಬುದು ಅಗ್ನಿಪರ್ಯಾಯದಲ್ಲಿ ಬಂದರೂ ಮೂರು ಸಂಖ್ಯೆಯು ಹೇಗೆ ಬಂತೆಂದರೆ 'ಅಗ್ನಿತ್ರಯ'ಗಳೆಂದು ಪ್ರಸಿದ್ಧವಾಗಿರುವುದರಿಂದ ಕ ಶಬ್ದಕ್ಕೆ ಪರ್ಯಾಯಾಂತರದಿಂದ ಮೂರು ಎಂದು ಅರ್ಥಮಾಡಬೇಕಾಗಿದೆ. ಆದುದರಿಂದ ಪ್ರಕೃತದಲ್ಲಿ ಕಃ ಎಂಬುದಕ್ಕೆ ಮೂರು ಎಂದು ಅರ್ಥಮಾಡಿ ಇಪ್ಪತ್ತೈದು + ಮೂರು = ಇಪ್ಪತ್ತೆಂಟೆಂದು ಸಮನ್ವಯಮಾಡುತ್ತಾರೆ.

ಮತ್ತೊಬ್ಬರ ಅಭಿಪ್ರಾಯವು ಹೀಗಿದೆ:

ಶ್ರೀರಾಮನಿಗೆ ಇಪ್ಪತ್ತೈದು ವರ್ಷಗಳೆಂದು ಹೇಳಿರುವುದೂ ಸಹ 'ಊನಷೋಡಶ' ಎಂಬುದಕ್ಕೆ 'ಹನ್ನೆರಡು' ಎಂದು ಅರ್ಥಮಾಡುವುದರಿಂದ ಸಮರ್ಥನೆಯಾಗುತ್ತದೆ. ಹೇಗೆಂದರೆ: ವಿಶ್ವಾಮಿತ್ರರು ಅಂದು ರಾಮನನ್ನು ಕಳುಹಿಸೆಂದು ಕೇಳಿದಾಗ ಹನ್ನೆರಡು ವರ್ಷಗಳು. ಆ ಸಮಯಕ್ಕೂ–ವಿವಾಹಸಮಯಕ್ಕೂ ಮತ್ತು ಸೀತಾದೇವಿಯು ಅಯೋಧ್ಯಾ ಪಟ್ಟಣಕ್ಕೆ ಬಂದ ದಿನಕ್ಕೂ ಒಂದು ವರ್ಷವು ಕಳೆದಿರಲು ಸಾಧ್ಯವಿದೆ–ಎಂದರೆ ರಾಮನಿಗೆ ಹನ್ನೆರಡು ತುಂಬಿ ಹದಿಮೂರನೆಯ ವರ್ಷವಾಗಿದ್ದಾಗಲೂ, ಸೀತಾದೇವಿಗೆ ಐದು ತುಂಬಿ ಆರನೆಯ ವರ್ಷವಾಗಿದ್ದಾಗಲೂ ಇಬ್ಬರ ವಿವಾಹವು ನಡೆದಿರಬಹುದು. ರಾಮನಿಗೆ ಹದಿಮೂರು ತುಂಬಿದ ಮೇಲೆ ಮತ್ತು ಸೀತಾದೇವಿಗೆ ಆರು ತುಂಬಿದ ಮೇಲೆ ಇಬ್ಬರೂ ಒಂದಾಗಿ ಅಯೋಧ್ಯೆಯಲ್ಲಿದ್ದರು. ಹನ್ನೆರಡು ವರ್ಷಗಳು ಕಳೆದ ನಂತರ ಅರ್ಥಾತ್ ರಾಮನಿಗೆ ಇಪ್ಪತ್ತೈದು ಮತ್ತು ಸೀತಾದೇವಿಗೆ ಹದಿನೆಂಟು ವರ್ಷಗಳು ತುಂಬಿದನಂತರ ವನವಾಸ ಪ್ರಾಪ್ತವಾಯಿತು. ಇದರಿಂದ ಅವಳು ಹೇಳಿದಂತೆ ರಾಮನಿಗೆ ಇಪ್ಪತ್ತೈದು ವರ್ಷಗಳೆಂಬುದೂ ಸಹ ಸಮನ್ವಯವಾಗುತ್ತದೆ. ಪದಗಳನ್ನು ಕ್ಲೇಶಗೊಳಿಸಿ ಅರ್ಥಮಾಡಬೇಕಾಗಿಲ್ಲ.

ಕಡೆಯದಾಗಿ ಕೌಸಲ್ಯೆಯು ಹೇಳಿರುವ "ದಶ ಸಪ್ತ ಚ ವರ್ಷಾಣಿ" ಎಂಬುದಕ್ಕಾದರೂ ವಿಶೇಷಾರ್ಥವನ್ನು ಕಲ್ಪಿಸಬೇಕಲ್ಲವೇ? ಒಬ್ಬ ವಿದ್ವಾಂಸರ ಅಭಿಪ್ರಾಯದ ರೀತ್ಯಾ ಇಲ್ಲಿಯೂ ಸಹ ಪದಗಳಿಗೆ ವಿಶೇಷಾರ್ಥವನ್ನು ಕಲ್ಪಿಸಬೇಕಾಗಿಲ್ಲ. ಹೇಗೆಂದರೆ ಬ್ರಹ್ಮ-ಕ್ಷತ್ರ-ವೈಶ್ಯರಿಗೆ ದ್ವಿಜರೆಂದು ಹೆಸರು. ಅವರಿಗೆ ಎರಡು ಜನ್ಮ. ಹುಟ್ಟುವುದೊಂದು ಜನ್ಮ, ಉಪನಯನಾನಂತರದಲ್ಲಿ ಮತ್ತೊಂದು ಜನ್ಮ. ಉಪನಯನಾನಂತರದ ವಿವಕ್ಷೆಯಿಂದ ಕೌಸಲ್ಯೆಯು

ಹದಿನೇಳು ವರ್ಷಗಳೆಂದು ಹೇಳಿರುವಳು. ಗರ್ಭಾಷ್ಟಮಕ್ಕೆ ರಾಮನಿಗೆ ಉಪ ನಯನವಾಯಿತು. ಸೀತೆಯು ಹೇಳಿದಂತೆ ರಾಮನಿಗೆ ಅರಣ್ಯವಾಸದ ವೇಳೆಗೆ ಇಪ್ಪತ್ತೈದು ವರ್ಷಗಳಾಗಿತ್ತು. ಗರ್ಭಾಷ್ಟಮದ ಎಂಟು ವರ್ಷಗಳನ್ನು ಕಳೆದು ಗಣನೆಮಾಡಿದರೆ ಶ್ರೀರಾಮನಿಗೆ ಕೌಸಲ್ಯೆಯು ಹೇಳಿದಂತೆ ಹದಿನೇಳು ವರ್ಷಗಳಾಗುತ್ತವೆ.

"ಗರ್ಭೈಕಾದಶೇಷು ರಾಜನ್ಯಂ" ಎಂದು ಗೃಹ್ಯಸೂತ್ರವಿರುವಾಗ ಬ್ರಾಹ್ಮಣನಿಗೆ ಉಕ್ತವಾದ ಗರ್ಭಾಷ್ಟಮದಲ್ಲಿ ಕ್ಷತ್ರಿಯನಾದ ರಾಮನಿಗೆ ಉಪನಯನವು ಹೇಗಾಯಿತೆಂಬ ಪ್ರಶ್ನೆಗೆ, 'ಏಕಾದಶೇಷು' ಎಂದು ಬಹುವಚನವನ್ನು ಹೇಳಿರುವುದರಿಂದ ಗರ್ಭಾಷ್ಟಮದಲ್ಲಿಯಾಗಲೀ, ಗರ್ಭನವಮದಲ್ಲಿಯಾಗಲೀ, ಗರ್ಭದಶಮದಲ್ಲಿಯೇ ಆಗಲೀ ಉಪನಯನವನ್ನು ಮಾಡಬಹುದೆಂದು ಸೂತ್ರವ್ಯಾಖ್ಯಾನಮಾಡಿರುವುದರಿಂದ ಶ್ರೀರಾಮನಿಗೆ ಎಂಟನೆಯ ವರ್ಷದಲ್ಲಿಯೇ ಉಪನಯನವಾಯಿತೆಂದು ಹೇಳಬಹುದಾಗಿದೆ. ಈ ರೀತಿಯಲ್ಲಿ ಶ್ಲೋಕದಲ್ಲಿರುವ ಪದಗಳಿಗೆ ಕ್ಲಿಷ್ಟವಾಗಿ ಅರ್ಥಮಾಡದೆಯೇ ಸಮಾಧಾನ ಹೇಳಬಹುದಾಗಿದೆ.

ವಿವಾಹವಾದನಂತರ ಅಯೋಧ್ಯೆಯಲ್ಲಿ ಶ್ರೀರಾಮನ ಜೊತೆಯಲ್ಲಿ ಹನ್ನೆರಡು ವರ್ಷಗಳನ್ನು ಸುಖವಾಗಿ ಕಳೆದೆನು–ಎಂಬ ಸೀತೆಯ ಮಾತನ್ನು ಎಲ್ಲ ವ್ಯಾಖ್ಯಾನಕಾರರೂ ಮಾನ್ಯಮಾಡಿರುತ್ತಾರೆ. ಓರಿಯಂಟಲ್ ಇನ್‌ಸ್ಟಿಟ್ಯೂಟ್, ಬರೋಡ – ಇವರು ಪ್ರಕಟಿಸಿರುವ ಪುಸ್ತಕದಲ್ಲಿ ಸಂವತ್ಸರಂ ಚಾಧ್ಯುಷಿತಾ–ಎಂಬ ಪಾಠಾಂತರವಿದೆ. 'ಒಂದು ವರ್ಷ ಮಾತ್ರ ನಾನು ಅಯೋಧ್ಯೆಯಲ್ಲಿದ್ದೆನು.' ಇದನ್ನು ತಮ್ಮ ಟಿಪ್ಪಣಿಯಲ್ಲಿ ಇದನ್ನು ಸಮರ್ಥಿಸುತ್ತಾ ಹೀಗೆ ಬರೆದಿದ್ದಾರೆ:

At the time of going to the forest Rama is naturally seventeen years old, as remarked by Kousalya. If Rama and Sita have spent twelve years in Ayodhya after marriage and before exile, one fails to understand how Rama could afford to waste such a long period in mere

enjoyment. Such an epicurean life on the part of Rama is not consistent with his noble character. Our text lends support to Rev. Fr. Bulcke's view that the time mentioning Sita's stay in Ayodhya for a period of twelve years is an interpolation.

ಆದರೆ ಇವರು ಪ್ರಧಾನವಾಗಿ ಕೊಟ್ಟಿರುವ ಪಾಠದಲ್ಲಿ–ಮಮ ಭರ್ತಾ ಮಹಾತೇಜಾ ವಯಸಾ ಪಞ್ಚವಿಂಶಕಃ- ಎಂಬುದನ್ನು ಸೇರಿಸಿದ್ದಾರೆ. ಆದರೆ ಅರಣ್ಯದಿಂದ ಹೊರಟಾಗ ರಾಮನಿಗೆ ಇಪ್ಪತ್ತೈದು ವರ್ಷಗಳು ಹೇಗಾದುವೆಂಬುದಕ್ಕೆ ಸಮರ್ಥನೆಯನ್ನು ಕೊಟ್ಟಿಲ್ಲ. ಅಥವಾ ಆಗ ಅವನಿಗೆ ಇಪ್ಪತ್ತೈದು ವರ್ಷಗಳೇ ಎಂಬುದನ್ನೂ ಹೇಳಿಲ್ಲ. ಕೌಸಲ್ಯೆಯ ಹೇಳಿಕೆಯನ್ನು ಸಮರ್ಥಿಸಿರುವ ಇವರ ಅಭಿಪ್ರಾಯದಂತೆ ಹದಿನೇಳನೇ ವರ್ಷಕ್ಕೆ ರಾಮನು ಅರಣ್ಯಕ್ಕೆ ಹೊರಟರೂ ಸೀತಾಪಹರಣದ ವೇಳೆಗೆ ರಾಮನಿಗೆ ಮೂವತ್ತು ವರ್ಷಗಳಾಗಿರಬೇಕು. ಇಪ್ಪತ್ತೈದು ಎಂಬುದು ಹೇಗೂ ಸರಿಹೊಂದುವುದಿಲ್ಲ. ಮೇಲಾಗಿ ರಾಮನು ಹನ್ನೆರಡು ವರ್ಷಗಳನ್ನು ಅಯೋಧ್ಯೆಯಲ್ಲಿ ವ್ಯರ್ಥವಾಗಿ ಕಳೆಯಲಿಲ್ಲ. ಪಟ್ಟಾಭಿಷಿಕ್ತನಾಗದಿದ್ದರೂ ಹನ್ನೆರಡು ವರ್ಷಗಳ ಕಾಲ ಪ್ರಜೆಗಳ ಯೋಗ-ಕ್ಷೇಮಗಳನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದನು. ರಾಜ್ಯವನ್ನು ಹೇಗೆ ಆಳಬೇಕೆಂಬುದರ ವಿಷಯವಾಗಿ ಸಂಪೂರ್ಣವಾದ ಮಾಹಿತಿಯನ್ನು ಪಡೆದನು. ಈ ಯೋಗ್ಯತಾಪತ್ರವನ್ನು ಕೊಟ್ಟವನು ದಶರಥನಲ್ಲ. ಪ್ರಜೆಗಳೇ ದಶರಥನಿಗಿಂತಲೂ ಮಿಗಿಲಾದವನೆಂಬ ಯೋಗ್ಯತಾಪತ್ರವನ್ನು ದಶರಥನ ಸಭೆಯಲ್ಲೇ ಕೊಟ್ಟರು. (ಅಯೋಧ್ಯಾ–ಸರ್ಗ–೨) ಇಂತಹ ಯೋಗ್ಯತಾಪತ್ರವನ್ನು ಸಂಪಾದಿಸಬೇಕಾದರೆ ಒಂದು ವರ್ಷದಲ್ಲಿ ಖಂಡಿತವಾಗಿಯೂ ಸಾಧ್ಯವಿಲ್ಲ. ಸಾಮಾನ್ಯರಿಂದ ಹತ್ತಾರು ವರ್ಷಗಳಿಂದಲೂ ಕಲಿಯಲು ಸಾಧ್ಯವಾಗುವುದಿಲ್ಲ. ಆದುದರಿಂದ ಹನ್ನೆರಡು ವರ್ಷಗಳ ಕಾಲ ಶ್ರೀರಾಮನು ರಾಜ್ಯಾಡಳಿತದ ಮಾಹಿತಿಯನ್ನು ಪಡೆದುಕೊಂಡನೆಂಬುದು ಸಮಂಜಸವೂ ಆಗಿದೆ. ಅದಕ್ಕೆ ತಕ್ಕುದಾದ ಯೋಗ್ಯತಾಪತ್ರವು ಪ್ರಜೆ

ಗಳಿಂದಲೇ ಅವನಿಗೆ ಸಂದಿದೆ. ಆದುದರಿಂದ ಒಂದು ವರ್ಷವೆಂಬುದು ಸಮಂಜಸವಲ್ಲ. ಭರತನು ಹನ್ನೆರಡು ವರ್ಷಗಳವರೆಗೆ ಅಯೋಧ್ಯೆಗೆ ಬಂದೇ ಇರಲಿಲ್ಲವೇ ?–ಎಂಬ ಪ್ರಶ್ನೆಯೂ ಇದರಿಂದ ಉದ್ಭವಿಸುತ್ತದೆ. ಅಯೋಧ್ಯೆಗೆ ಬಾರದೆಯೇ ಹನ್ನೆರಡು ವರ್ಷಗಳೂ ಸೋದರಮಾವನ ಮನೆಯಲ್ಲೇ ಇದ್ದ ನೆಂಬುದಕ್ಕೆ ಯಾವ ವಾಕ್ಯವೂ ರಾಮಾಯಣದಲ್ಲಿ ಸಿಕ್ಕುವುದಿಲ್ಲ. ಇರಲಿಲ್ಲ– ಎಂಬುದಕ್ಕೂ ಆಧಾರವಾಕ್ಯವಿಲ್ಲ. ಬಂದು ಹೋಗುತ್ತಿದ್ದನೆಂದೂ ಎಲ್ಲಿಯೂ ಹೇಳಿಲ್ಲ. ರಾಮನಿಗೆ ಪಟ್ಟಾಭಿಷೇಕಮಾಡಲು ದಶರಥನು ನಿರ್ಧರಿಸಿದಾಗ ಭರತನು ಅಯೋಧ್ಯೆಯಲ್ಲಿರಲಿಲ್ಲ. ಹನ್ನೆರಡು ವರ್ಷಗಳ ಕಾಲ ತಂದೆ-ತಾಯಿ ಗಳನ್ನೂ, ಪ್ರೀತಿಯ ಅಣ್ಣ-ತಮ್ಮಂದಿರನ್ನೂ ನೋಡದಿರಲು ಸಾಧ್ಯವಾಗದೇ ಇರುವುದರಿಂದ ಭರತ-ಶತ್ರುಘ್ನರೂ ಆಗಿಂದಾಗ್ಗೆ ಅಯೋಧ್ಯೆಗೆ ಬಂದು ಹೋಗುತ್ತಿದ್ದಿರಬಹುದು.

## ವಿವಾಹವಾದಾಗ ಸೀತೆಗೆ ಎಷ್ಟು ವರ್ಷ ?

ಜನಕನು ಬಾಲಕಾಂಡದಲ್ಲಿ–ವ್ಯವರ್ಧತ ಮಮಾತ್ಮಜಾ (ಬಾಲ-೬೬-೧೫) ವರ್ಧಮಾನಾಂ ಮಮಾತ್ಮಜಾಮ್ (ಬಾಲ-೬೬-೧೫)–ಎಂದು ಹೇಳಿ ತನ್ನ ಮಗಳು ವಿವಾಹಯೋಗ್ಯಳಾಗಿರುವಳೆಂದು ಹೇಳುತ್ತಾನೆ. ಸೀತೆಯೇ ಸ್ವಯಂವರದ ಕಥೆಯನ್ನು ಅನಸೂಯೆಗೆ ಹೇಳುವಾಗ–' ಪತಿ ಸಂಯೋಗಸುಲಭಂ ವಯೋ ದೃಷ್ಟ್ವಾ ತು ಮೇ ಪಿತಾ । ಚಿನ್ತಾ ಮಭ್ಯಗಮತ್....ನನಗೆ ಪತಿಯೊಡನೆ ಸೇರಲು ಯೋಗ್ಯವಾದ ವಯಸ್ಸಾಗಿ ರುವುದನ್ನು ನೋಡಿ ನನ್ನ ತಂದೆಯು ಚಿಂತಿಸತೊಡಗಿದನು'–ಎನ್ನುತ್ತಾಳೆ. ವಿವಾಹವಾದ ನಂತರ–ರಾಮಸ್ತು ಸೀತಯಾ ಸಾರ್ಧಂ ವಿಜಹಾರ ಬಹೂ ನೃತೂನ್–ರಾಮನು ಸೀತೆಯೊಡನೆ ಅನೇಕ ಋತುಗಳ ಪರ್ಯಂತವಾಗಿ ವಿಹ ರಿಸುತ್ತಿದ್ದನೆಂದೂ ಹೇಳಿದ್ದಾರೆ. ಹೀಗಿರುವಾಗ ಸೀತೆಯು ರಾವಣನೊಡನೆ ತನ್ನ ವಯಸ್ಸನ್ನುಹೇಳಿಕೊಳ್ಳುವಾಗ– ಅಷ್ಟಾದಶ ಹಿ ವರ್ಷಾಣಿ ಮಮ ಜನ್ಮನಿ ಗಣ್ಯತೇ । (ಅರಣ್ಯಕಾಂಡ ೪೭–೧೦) ವನವಾಸಕ್ಕೆ ಹೊರಡುವ ಕಾಲದಲ್ಲಿ ನಾನು ಹದಿನೆಂಟು ವರ್ಷದವಳಾಗಿದ್ದೆನು–ಎನ್ನುತ್ತಾಳೆ. ಅಯೋಧ್ಯೆಯಲ್ಲಿ ಹನ್ನೆರಡು ವರ್ಷಗಳಿದ್ದ ಸೀತಾದೇವಿಗೆ ಆರನೇ ವರ್ಷ ದಲ್ಲಿಯೇ ವಿವಾಹವಾಯಿತೆಂಬುದನ್ನು ಇದು ಸೂಚಿಸುತ್ತದೆ. ಆರನೆಯ

ವರ್ಷಕ್ಕೆ ಸೀತೆಯು ವಿವಾಹವಯಸ್ಕಳಾಗಿದ್ದಳೇ ? ಪತಿಸಂಯೋಗಸುಲಭಳಾಗಿದ್ದಳೇ ?–ಈ ಪ್ರಶ್ನೆಗಳು ಸ್ವಾಭಾವಿಕವಾಗಿಯೇ ಹುಟ್ಟುತ್ತವೆ. ಓರಿಯಂಟಲ್ ಇನ್‌ಸ್ಟಿಟ್ಯೂಟ್‌ನವರು ಇಲ್ಲಿ ಒಂದು ಪ್ರಮಾದವನ್ನು ಮಾಡಿದ್ದಾರೆ: ಸೀತೆಯ ಈ ಮಾತನ್ನೇ ಅವರು ಪ್ರಕ್ಷಿಪ್ತವೆಂದು ಹೇಳಿ ಟಿಪ್ಪಣಿಯಲ್ಲಿ ಮಾತ್ರ ಕೊಟ್ಟಿರುತ್ತಾರೆ. ಸಂಪಾದಕರ ಟಿಪ್ಪಣಿಯಲ್ಲಿ ಈ ಅಭಿಪ್ರಾಯವನ್ನು ಕಟುವಾಗಿ ಟೀಕಿಸಿಯೂ ಇದ್ದಾರೆ.

(Rama's marriage with Sita who was six years old), this view although very popular in the later Sanskrit and non-Sanskrit works in India is not correct. The passages in the Ramayana which appear to support the popular view have been shown as spurious in the critical edition. Janaka describes Sita as growing. It has been again stated that Rama and Sita, and his brothers and their wives enjoyed pleasures of life for several seasons.

Sita further tells Anasuya that her father became anxious and worried when he saw her attain the age of puberty. ಪತಿಸಂಯೋಗಸುಲಭಂ ವಯೋ ದೃಷ್ಟ್ವಾ ತು ಮೇ ಪಿತಾ । ಚಿನ್ತಾಮಭ್ಯಗಮತ್– This statement is found in all our MSS and cannot be looked upon as spurious.

All the above passages clearly show that Sita was not a child of six years but had already attained the age of puberty at the time of marriage.

ಆದರೆ ಉಷಿತ್ವಾ ದ್ವಾದಶಸಮಾಃ– ಹನ್ನೆರಡು ವರ್ಷಗಳ ಕಾಲ

ಅಯೋಧ್ಯೆಯಲ್ಲಿದ್ದು–ಎಂಬುದಕ್ಕೆ ಬದಲಾಗಿ–ಸಂವತ್ಸರಂ ಚಾಧ್ಯುಷಿತಾ ಅಯೋಧ್ಯೆಯಲ್ಲಿ ಒಂದು ವರ್ಷ ಮಾತ್ರವಿದ್ದೆನು–ಎಂಬುದನ್ನೇ ಪ್ರಧಾನ ಪಾಠವಾಗಿ ಪರಿಗಣಿಸಿರುವ ಇವರು–ಅಷ್ಟಾದಶ ಹಿ ವರ್ಷಾಣಿ ಮಮ ಜನ್ಮನಿ ಗಣ್ಯತೇ–ಎಂಬುದನ್ನು ಪ್ರಕ್ಷಿಪ್ತವೆಂದು ಪರಿಗಣಿಸುವ ಕಾರಣವಿರಲಿಲ್ಲ. ಏಕೆಂದರೆ : ಅರಣ್ಯಕ್ಕೆ ಹೊರಡುವ ಸಮಯದಲ್ಲಿ ಸೀತೆಗೆ ಹದಿನೆಂಟು ವರ್ಷಗಳಾಗಿದ್ದು ವಿವಾಹವಾದನಂತರ ಒಂದು ವರ್ಷ ಮಾತ್ರ ಸೀತೆಯು–ಸಂವತ್ಸರಂ ಚಾಧ್ಯುಷಿತಾ–ಎಂಬ ಇವರ ಪಾಠದ ಪ್ರಕಾರವೇ ಅಯೋಧ್ಯೆಯಲ್ಲಿ ಇದ್ದುದಾದರೆ ಸೀತೆಗೆ ವಿವಾಹವಾದದ್ದು ಅವಳ ಹದಿನೇಳನೆಯ ವಯಸ್ಸಿನಲ್ಲಿ–ಎಂದಾಗುತ್ತದೆ. ರಾಮ-ಸೀತೆಯರ ವಯಸ್ಸಿನಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆಯೂ ಇರಬಹುದು. ಸೀತೆಯ ವಯಸ್ಸೇ ಹೆಚ್ಚಾಗಿದ್ದರೂ ವೀರ್ಯಶುಲ್ಕವಿಧಿಯಲ್ಲಿ ವಿವಾಹವು ಏರ್ಪಟ್ಟುದರಿಂದ ವಯಸ್ಸು ನಗಣ್ಯ. ಆದುದರಿಂದ ಈ ಪಾಠವು ಅವಳು ಪ್ರೌಢೆಯಾಗಿದ್ದಳೆಂಬುದನ್ನು ಸಮರ್ಥಿಸಲು ಅನುಕೂಲವಾಗುತ್ತಿತ್ತು. ಸೀತಾ-ರಾಮರು ಒಂದು ವರ್ಷ ಅಯೋಧ್ಯೆಯಲ್ಲಿದ್ದರೆಂಬ ಪಾಠಾಂತರವನ್ನೇ ಆಶ್ರಯಿಸಿದ್ದರೂ ಹನ್ನೆರಡು ವರ್ಷಗಳೆಂಬ ಶಿಷ್ಟಸಮ್ಮತವಾದ ಪಾಠವನ್ನು ಮರೆಯಲಾಗದ ಇವರು ಹದಿನೆಂಟು ವರ್ಷ ಎಂದು ಹೇಳಿರುವುದನ್ನು ಪ್ರಕ್ಷಿಪ್ತವೆಂದು ಹೇಳಲು ಕಾರಣವಾಗಿದೆಯೆಂದು ಭಾವಿಸಬೇಕಾಗಿದೆ.

ಸೀತೆಯು ತನ್ನ ಮತ್ತು ತನ್ನ ಪತಿಯ ವಯಸ್ಸನ್ನು ಹೇಳಿಕೊಳ್ಳುವಾಗ ರಾಮನ ವಯಸ್ಸನ್ನು ವಯಸಾ ಪಂಚವಿಂಶಕಃ–ಎಂದು ಸ್ಪಷ್ಟವಾಗಿ ಹೇಳಿದ್ದಾಳೆ. ತನ್ನ ವಯಸ್ಸನ್ನು ಹೇಳುವಾಗ ನನ್ನ ಈ ಜನ್ಮದಲ್ಲಿ ಹದಿನೆಂಟು ವರ್ಷಗಳು ಕಳೆದಿವೆಯೆಂದು ಪರಿಗಣಿತವಾಗಿದೆ–ಎನ್ನುತ್ತಾಳೆ. ಆದುದರಿಂದ ಇವಳ ವಿವಾಹವು ಜನಕನಿಗೆ ಭೂಮಿಯಲ್ಲಿ ಸಿಕ್ಕಿದನಂತರ ಆರು ವರ್ಷಗಳಿಗೇ ಆಗಿದ್ದರೂ ಆಗ ಸೀತೆಯು ಆರೇ ವರ್ಷದವಳಾಗಿದ್ದಳೆಂದು ಭಾವಿಸುವ ಕಾರಣವಿಲ್ಲ. ಈ ಹಿನ್ನೆಲೆಯನ್ನೂ ನಾವು ಪರಿಗಣಿಸಬೇಕು.

ಸೀತೆಯ ಹಿಂದಿನ ವೃತ್ತಾಂತವನ್ನು ತಿಳಿಯಲು ನಾವು ಪುರಾಣಾಂತರಗಳನ್ನೂ ಆಶ್ರಯಿಸಬೇಕಾಗುತ್ತದೆ. ಕೆಲವನ್ನಿಲ್ಲಿ ಉದ್ಧರಿಸಲಾಗಿದೆ.

ವಿಷ್ಣುಯಾಮಳದಲ್ಲಿ :–

ವೇದಮಾತಾ ವೇದಮಯೀ ಗಾಯತ್ರೀ ಸರ್ವಸಾಕ್ಷಿಣೀ ।
ರಾಮಚನ್ದ್ರಪದಾಸಕ್ತಚಿತ್ತಾ ಸೀತೇತಿ ವಿಶ್ರುತಾ ॥
ಪೂರ್ವಂ ಜಾತಾ ವೇದವತೀ ಲಙ್ಕಾಯಾಂ ಹಿ ಸರೋವರೇ ।
ನಿತ್ಯಯೌವನಸಂಪನ್ನಾ ಪದ್ಮಕೋಶೇ ಸುಸಂಸ್ಥಿತಾ ॥

ಲಂಕಾಪಟ್ಟಣದ ಸರೋವರದಲ್ಲಿ ವೇದವತೀ ಎಂಬ ಅಭಿಧಾನದಿಂದ ನಿತ್ಯಯೌವನವುಳ್ಳವಳಾಗಿ ಪದ್ಮಕೋಶದಲ್ಲಿ ಜನಿಸಿದಳು.

ಪದ್ಮಪುರಾಣದಲ್ಲಿ :–

ಅಥ ಲೋಕೇಶ್ವರೀ ಲಕ್ಷ್ಮೀರ್ಜನಕಸ್ಯ ನಿವೇಶನೇ ।
ಶುಭೇ ಕ್ಷೇತ್ರೇ ಹಲೋತ್ಖಾತೇ ಸಮುದ್ಭೂತಾ ಸುಮಧ್ಯಮಾ ॥
ಬಾಲಾರ್ಕಕೋಟಿಸಂಕಾಶಾ ಪದ್ಮಪತ್ರನಿಭೇಕ್ಷಣಾ ।
ಲಙ್ಕಾಯಾಂ ವೈ ಸರಃಶ್ರೇಷ್ಠೇ ಪದ್ಮಕೋಶೇ ಪುರಾ ಹ್ಯಭೂತ್ ॥
ಸರ್ವಲಕ್ಷಣಸಂಪನ್ನಾ ನಿತ್ಯಯೌವನಶಾಲಿನೀ ।
ಧೃತ್ವಾ ವಕ್ಷಸಿ ಚಾರ್ವಙ್ಗೀ ಮಾಲಾಮಮ್ಲಾನಪಙ್ಕಜಾಮ್ ॥
ಸೀತಾಮುಖೇ ಸಮುತ್ಪನ್ನಾ ಸೀತೇತಿ ಭುವಿ ವಿಶ್ರುತಾ ।
ತಾಂ ದೃಷ್ಟ್ವಾ ಜನಕೋ ರಾಜಾ ಕನ್ಯಾಂ ವೇದಮಯೀಂ
ಶುಭಾಮ್ ॥
ಉದ್ಧೃತ್ಯಾಪತ್ಯಭಾವೇನ ಪುಪೋಷ ಮಿಥಿಲಾಧಿಪಃ ।
ಜನಕಸ್ಯ ಕುಲೇ ರಮ್ಯೇ ಸರ್ವಲೋಕೇಶ್ವರಪ್ರಿಯಾ ।
ವವೃಧೇ ಸರ್ವಲೋಕಸ್ಯ ರಕ್ಷಣಾರ್ಥಂ ಸುರೇಶ್ವರೀ ॥

ಇಲ್ಲಿಯೂ ಸಹ ವಿಷ್ಣುಯಾಮಳದಲ್ಲಿ ಹೇಳಿರುವಂತೆಯೇ ಪದ್ಮೋದ್ಭವಳೆಂದು ಹೇಳಿ, ನೇಗಿಲಿನ ಗುಳಕ್ಕೆ ಸಿಕ್ಕಿದ್ದರಿಂದ ಇವಳಿಗೆ 'ಸೀತಾ' ಎಂದು ಹೆಸರಿಟ್ಟರೆಂದೂ, ಕನ್ಯೆಯಾದ ಇವಳನ್ನು ಎತ್ತಿಕೊಂಡು ತನ್ನ ಮಗಳಂತೆಯೇ ಮಿಥಿಲಾಧಿಪತಿಯಾದ ಜನಕನು ಪೋಷಿಸಿದನೆಂದೂ ಹೇಳಿದೆ. ಪದ್ಮಕೋಶಸ್ಥಾಯಿನಿಯಾಗಿದ್ದವಳು ಮಿಥಿಲಾಪಟ್ಟಣಕ್ಕೆ ಹೇಗೆ ಬಂದಳು? ಎಂಬುದನ್ನು ನಾವು ವಾಲ್ಮೀಕಿಚರಿತ್ರೆಯಿಂದ ತಿಳಿಯಬಹುದಾಗಿದೆ.

ವಾಲ್ಮೀಕಿಚರಿತ್ರೆಯಲ್ಲಿ :–

ಪುರಾ ಲಕ್ಷ್ಮೀಸ್ತ್ವಭೂಜ್ಜಾತಾ ಪದ್ಮಕೋಶೇ ಸರೋವರೇ ।
ಲಙ್ಕಾಯಾಂ ಶಿವಪೂಜಾರ್ಥಂ ರಾವಣೇನ ಮಹಾತ್ಮನಾ ॥

ಪದ್ಮಾನ್ಯಾಹರ್ತುಕಾಮೇನ ದೃಷ್ಟ್ವಾ ಸಾ ಶುಭಲಕ್ಷಣಾ ।
ತಾಂ ದೇವೀಂ ಪದ್ಮಮಧ್ಯಸ್ಥಾಂ ಯೌವನಸ್ಥಾಮಯೋನಿಜಾಮ್ ॥

ದೃಷ್ಟ್ವಾ ತು ಕೇಯಮಿತಿ ಸ್ಮ ರಾವಣೋ ವಿಸ್ಮಯಾಕುಲಃ ।
ಪ್ರಹಸ್ತಾದಿಭಿರಾಲೋಚ್ಯ ಮಂತ್ರಿಭಿರ್ಮನ್ತ್ರಕೋವಿದೈಃ ॥

ನಿಕ್ಷಿಪ್ಯ ತಾಂ ಪೇಟಿಕಾಯಾಂ ಸಿನ್ಧುಮಧ್ಯೇ ವ್ಯನಿಕ್ಷಿಪತ್ ।
ಕೃತಾರ್ಥಮಿವ ಚಾತ್ಮಾನಂ ಮೇನೇಽಸೌ ರಾಕ್ಷಸೇಶ್ವರಃ ॥

ಸಮುದ್ರಮಧ್ಯೇ ವಿಕ್ಷಿಪ್ತಾ ಸಾಮ್ನಾ ವೇದವತೀ ಸ್ಮೃತಾ ।
ಪೇಟಿಕಾನ್ತಃಸ್ಥಿತಾ ತನ್ವೀ ಮಿಥಿಲಾನಗರಂ ಗತಾ ॥

ನದೀಜಲಪ್ರವಾಹಾಚ್ಚ ಚಿರಕಾಲಂ ಸ್ಥಿತಾ ಹ್ಯಭೂತ್ ।
ಮಿಥಿಲಾಯಾಃ ಶ್ಕೋಪಕಣ್ಠಭೂಮೇರನ್ತರ್ಗತಾ ಸತೀ ॥

"ರಾವಣನು ಪುಷ್ಪಾಹರಣಕ್ಕಾಗಿ ಸರೋವರಕ್ಕೆ ಹೋದಾಗ ಅಯೋನಿಜೆಯಾದ ದೇವಿಯನ್ನು ಸರೋವರದಲ್ಲಿ ಕಮಲಪುಷ್ಪದ ಮಧ್ಯದಲ್ಲಿ ಕಂಡನು. ಒಡನೆಯೇ ಮಂತ್ರಿಗಳೊಡನೆ ಸಮಾಲೋಚನೆಮಾಡಿ ಆ ಕನ್ಯೆಯನ್ನು ಒಂದು ಪೆಟ್ಟಿಗೆಯಲ್ಲಿ ಅಪಾಯವಾಗದ ರೀತಿಯಲ್ಲಿಡಿಸಿ ಸಮುದ್ರದೊಳಗೆ ಹಾಕಿಸಿಬಿಟ್ಟನು. ಈ ಪೆಟ್ಟಿಗೆಯು ಕಾಲಾನಂತರದಲ್ಲಿ ತೇಲುತ್ತಾ ಬಂದು ಮಿಥಿಲಾಪಟ್ಟಣವನ್ನು ಸೇರಿ ಅಲ್ಲಿ ಭೂಮಿಯೊಳಗೆ ಹುದುಗಿಕೊಂಡಿದ್ದಿತು." ಇತ್ಯಾದಿ.

ಪುರಾಣಾಂತರಗಳ ವಿಷಯವೇನೇ ಇದ್ದರೂ 'ಸೀತೆಯು ಅಯೋನಿಜೆ' 'ಭೂಮಿಯಲ್ಲಿ ಸಿಕ್ಕಿದವಳು' ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಎಷ್ಟು ವರ್ಷಗಳ ಕಾಲ ಭೂಮಿಯಲ್ಲಿದ್ದಳೆಂಬ ಅರಿವೂ ನಮಗಿಲ್ಲ. ಜನಕರಾಜನಿಗೆ ಸಿಕ್ಕಿದ ಆರನೆಯ ವರ್ಷಕ್ಕೆ ಸೀತೆಯು ಪ್ರಾಪ್ತವಯಸ್ಕಳಾದಳು. ಸೀತೆಯೂ ಸಹ ತಾನು ಜನಕನಿಗೆ ಸಿಕ್ಕಿದ ದಿನವನ್ನು ಗಣನೆಮಾಡಿ ಅರಣ್ಯ

ಪ್ರವೇಶಸಮಯಕ್ಕೆ ಹದಿನೆಂಟು ವರ್ಷಗಳಾಯಿತೆಂದು ಹೇಳಿರುವಳು-ಎಂದು ಅರ್ಥಮಾಡಿದರೆ ಇದರ ಸಮನ್ವಯವೂ ಆದಂತಾಗುತ್ತದೆ.

ಮತ್ತೊಂದು ರೀತಿಯಲ್ಲಿ ಇದನ್ನು ಸಮರ್ಥಿಸಬಹುದಾಗಿದೆ. ಸ್ತ್ರೀಯು ರಜಸ್ವಲೆಯಾದ ನಂತರ ಅವಳಿಗೆ ಹೊಸದಾಗಿ ವರ್ಷಪರಿಗಣನೆ ಮಾಡುವ ಪದ್ಧತಿಯೂ ಇದೆ. ಅದರ ಪ್ರಕಾರ ಸೀತಾದೇವಿಗೆ ವಿವಾಹ ಸಮಯದಲ್ಲಿ ಆರು ವರ್ಷದ ವಯಸ್ಸು ಎಂದರೆ ಹುಟ್ಟಿದಂದಿನಿಂದ ಹನ್ನೆರಡು ವರ್ಷಗಳಾದರೂ ಆಕೆಯು ಪ್ರೌಢೆಯಾದನಂತರ ಆರು ವರ್ಷಗಳೇ ಆಗಿತ್ತು. ಸೀತೆಯು ರಾವಣನಿಗೆ ತನ್ನ ವಯಸ್ಸನ್ನು ಹೇಳುವಾಗ ಪ್ರೌಢೆಯಾದ ನಂತರದ ಆರು ವರ್ಷ ಮತ್ತು ಅಯೋಧ್ಯೆಯಲ್ಲಿ ಕಳೆದ ಹನ್ನೆರಡು ವರ್ಷ ಎರಡನ್ನೂ ಸೇರಿಸಿಕೊಂಡು ಹದಿನೆಂಟು ವರ್ಷ ವಯಸ್ಸು ಆಗಿತ್ತು ಎಂದು ಹೇಳಿರುವುದು ಸಂಗತವಾಗುತ್ತದೆ. ರಾಮನಿಗೆ ಉಪನಯನಾನಂತರ ವಯಸ್ಸನ್ನು ಪರಿಗಣನೆ ಮಾಡುವಂತೆ ಸೀತೆಗೆ ಆಕೆಯು ಪ್ರೌಢೆಯಾದನಂತರ ವಯಸ್ಸನ್ನು ಪರಿಗಣಿಸುವುದು ಸಮಯೋಚಿತವಾಗಿದೆ.

## ಲಕ್ಷ್ಮಣರೇಖೆ

ಲಕ್ಷ್ಮಣರೇಖೆಯೆಂಬುದು ಸರ್ವತ್ರ ಪ್ರಸಿದ್ಧವಾಗಿದೆ. ಹೇಳಿದ ಮಾತನ್ನು ಸ್ವಲ್ಪವಾದರೂ ಮೀರುವುದಿಲ್ಲ ಎಂಬ ಅರ್ಥದಲ್ಲಿ ಲಕ್ಷ್ಮಣರೇಖೆಯನ್ನು ಉದಾಹರಣೆಯಾಗಿ ಉಪಯೋಗಿಸುತ್ತಾರೆ. ಆದರೆ ಇದರ ಪ್ರಸಂಗವು ವಾಲ್ಮೀಕಿರಾಮಾಯಣದಲ್ಲಿ ಬರುವುದಿಲ್ಲ. ತತ್ತ್ವಸಂಗ್ರಹ ರಾಮಾಯಣದಲ್ಲಿ ಈ ಪ್ರಸಂಗವು ಬರುತ್ತದೆ.

ಲಕ್ಷ್ಮಣನು ತನ್ನ ಮಾತಿನಂತೆ ರಾಮನ ಬಳಿಗೆ ಹೋಗದಿರಲು ಸೀತೆಯು ಬಹಳ ನಿಷ್ಠೂರವಾದ ಮಾತುಗಳನ್ನಾಡುವಳು.

ಮುಗ್ಧಾ ರಾಜಸುತಾ ಸಾಧ್ವೀ ನೇದೃಶಂ ವಕ್ತುಮರ್ಹತಿ ।
ಸಮ್ಮಾನಯತಿ ಮಾತೇವ ಯೋಗಕ್ಷೇಮವಿಧಾಯಿನೀ ।೪೩॥

ನ ಜಾನೀಷೇಽತ್ರ ಪೆನ್ಸ್ಥಾನಂ ರಾಮಮಾಯಾ ದುರತ್ಯಯಾ ।
ಬ್ರಹ್ಮಾದಯೋ ವಿಮುಹ್ಯನ್ತಿ ರಾಮಮಾಯಾಮಹಾರ್ಣವೇ ॥೪೪॥

"ಕೇವಲ ಮುಗ್ಧಳೂ, ಅತಿಸಾಧ್ವಿಯೂ ಆದ ಈ ರಾಜಪುತ್ರಿಯು ಇಂತಹ ಕ್ರೂರವಚನಗಳನ್ನು ಹೇಳಲಾರಳು. ಇವಳು ಹೆತ್ತತಾಯಿಯಂತೆ ನನ್ನ ಯೋಗ-ಕ್ಷೇಮಗಳನ್ನು ವಿಚಾರಿಸಿಕೊಳ್ಳುತ್ತಾ ಆದರಿಸುತ್ತಿದ್ದಳು. ಈ ಸಂದರ್ಭದಲ್ಲಿ ನನಗೆ ಯಾವ ಮಾರ್ಗವೂ ತೋರುತ್ತಿಲ್ಲ. ರಾಮನ ಮಾಯೆಯನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಿಲ್ಲ. ರಾಮನ ಮಾಯೆಯೆಂಬ ದೊಡ್ಡ ಸಮುದ್ರದಲ್ಲಿ ಬ್ರಹ್ಮಾದಿಗಳು ಕೂಡ ಮೋಹ ಗೊಳ್ಳುವರು."

ಮಹಾತೇಜಸ್ವಿಯಾದ ಲಕ್ಷ್ಮಣನು ಹೀಗೆಂದು ಯೋಚಿಸಿ ದೀರ್ಘವಾಗಿ ನಿಟ್ಟುಸಿರುಬಿಟ್ಟು ಕಣ್ಣೀರೊರೆಸಿಕೊಂಡು ಧೈರ್ಯವನ್ನವಲಂಬಿಸಿ ಧನುಸ್ಸನ್ನು ಮಧ್ಯಭಾಗದಲ್ಲಿ ಹಿಡಿದುಕೊಂಡನು.

ಜಾನಕೀ ರಕ್ಷಣಾರ್ಥಾಯ ಸೋಽಲಿಖತ್ಸಪ್ತವಂ ತಲಾನ್ ||೪೬||

ಧನುಸ್ಸಿನ ಅಗ್ರಭಾಗದಿಂದ ಜಾನಕಿಯ ರಕ್ಷಣೆಯ ಸಲುವಾಗಿ ಏಳು ಗೆರೆಗಳನ್ನೆಳೆದು ಸೀತೆಗೆ ಹೇಳಿದನು :

ಪರ್ಣಶಾಲಾಙ್ಕಣತಟಂ ಸಪ್ತಮಣ್ಡಲಮಣ್ಡಿತಮ್ ।
ವ್ಯಾಘ್ರದಸ್ಯುಪಿಶಾಚಾದ್ಯಾಃ ಯಾತುಧಾನಾಶ್ಚ ರಾಕ್ಷಸಾಃ ।
ನ ವಿಲಂಘ್ಯಾಗಮೇ ಶಕ್ತಾಃ ಸುಖಂ ತಿಷ್ಠ ನಿಜಾಲಯೇ ||೪೭||

"ವೈದೇಹಿ ! ಚೋರ-ವ್ಯಾಘ್ರ-ಪಿಶಾಚರೂ, ಯಾತುಧಾನರೂ, ರಾಕ್ಷಸರೂ ಕೂಡ ಈ ಏಳು ಗೆರೆಗಳಿಂದ ಅಂಕಿತವಾಗಿರುವ ಪರ್ಣಶಾಲೆಯ ಅಂಗಳವನ್ನು ದಾಟಿ ಒಳಕ್ಕೆ ಬರಲು ಶಕ್ತರಾಗುವುದಿಲ್ಲ. ನೀನು ನಿನ್ನ ಆಲಯವನ್ನು ಬಿಟ್ಟು ಹೊರಕ್ಕೆ ಬರದೆ ಒಳಗೆಯೇ ಸುಖವಾಗಿರು."

ಹೀಗೆ ಸೀತೆಗೆ ಕಟ್ಟುಮಾಡಿ, ಮನಸ್ಸಿನಲ್ಲಿಯೇ ಅವಳ ಪತಿಭಕ್ತಿಯನ್ನು ಶ್ಲಾಘಿಸುತ್ತಾ, ಖಡ್ಗವನ್ನು ಧರಿಸಿ ಅನೇಕರಾಕ್ಷಸರಿಂದ ನಿಬಿಡವಾಗಿದ್ದ ಅರಣ್ಯವನ್ನು ಹೊಕ್ಕನು.

—ತತ್ತ್ವಸಂಗ್ರಹರಾಮಾಯಣ–ಅರಣ್ಯಕಾಂಡ–ಸರ್ಗ ೧೪

---

# ಶ್ರೀರಾಮಚಂದ್ರನ ಜಾತಕ

ಸಂಗ್ರಹ ಮತ್ತು ಅನುವಾದ : ಡಾ॥ ಕೆ. ಮಂಜುನಾಥಯ್ಯ.

ಮೂಲ : ಪ್ರೊ॥ ಕೆ. ಶ್ರೀನಿವಾಸ ರಾಘವನ್ ಅವರ

Chronology of Ancient Bharath.

ಆಂಗ್ಲ ಮೂಲದಿಂದ.

ಶ್ರೀರಾಮಚಂದ್ರನ ಜಾತಕದ ವಿಷಯದಲ್ಲಿ ಘನವಿದ್ವಾಂಸರ ಮನಸ್ಸಿನಲ್ಲಿಯೂ ಸಾಕಷ್ಟು ಗೊಂದಲವೇರ್ಪಟ್ಟಿದೆ. ಕೆಲವರು ಅವನು ಕೇವಲ ಪೌರಾಣಿಕನಾಯಕ ಎಂದು ಸಾಧಿಸಿದರೆ, ಮತ್ತೆ ಕೆಲವರ ಅಭಿಪ್ರಾಯದಲ್ಲಿ ರಾಮನು ಲಕ್ಷಾಂತರ ವರ್ಷಗಳ ಹಿಂದೆ ಇದ್ದ ವ್ಯಕ್ತಿ. ವಾಲ್ಮೀಕಿಮಹರ್ಷಿಗಳು ಮಾತ್ರ ತಮ್ಮ ಕಾವ್ಯದ ಮೊದಲನೆಯ ಪಂಕ್ತಿಯಲ್ಲೇ ಶ್ರೀರಾಮ ತಮ್ಮ ಸಮಕಾಲೀನನೆಂದು ಸ್ಪಷ್ಟಪಡಿಸಿದ್ದಾರೆ. " ಕೋನ್ವಸ್ಮಿನ್ ಸಾಂಪ್ರತಮ್ ಲೋಕೇ ". ಅವರು ಶ್ರೀರಾಮಚಂದ್ರನು ಮಾನವ ಎಂಬ ಸತ್ಯವನ್ನು ಪುನಃ ಪುನಃ ದೃಢಪಡಿಸುತ್ತಾರೆ. ಅದಲ್ಲದೆ, ಸೀತಾದೇವಿ ತನ್ನ ಕಡೆಯ ಹನ್ನೆರಡು ವರ್ಷಗಳನ್ನು ವಾಲ್ಮೀಕಿಮಹರ್ಷಿಗಳ ಆಶ್ರಮದಲ್ಲಿಯೇ ಕಳೆದಳು. ಇದೇ ಅವಧಿಯಲ್ಲೇ ಮಹರ್ಷಿಗಳು ರಾಮಾಯಣವನ್ನು ರಚಿಸಿದ್ದೂ ಸಹ. ಶ್ರೀರಾಮಚಂದ್ರನು ಅಶ್ವಮೇಧಯಾಗವನ್ನು ಮಾಡಿದಾಗ ಅವನ ಮಕ್ಕಳು ರಾಮಾಯಣವನ್ನು ಮಹರ್ಷಿಗಳ ಸಮ್ಮುಖದಲ್ಲಿ ಹಾಡಿ ತೋರಿಸಿದರು. ತಮ್ಮ ಮುನ್ನುಡಿಯಲ್ಲಿ ವಾಲ್ಮೀಕಿಗಳು ಹೀಗೆ ಹೇಳುತ್ತಾರೆ : " ರಾಮಾಯಣದಲ್ಲಿನ ಪ್ರತಿಯೊಂದು ಪದವೂ ಸತ್ಯವಾದದ್ದು ಹಾಗೂ ಅಂದಿನ ಎಲ್ಲ ತಪಸ್ವಿಗಳೂ ಮತ್ತು ವಿದ್ವಾಂಸರೂ ಪೂರ್ಣವಾಗಿ ಒಪ್ಪಿರುವಂತಹುದು." ಆದ್ದರಿಂದ ನಮ್ಮ ಮಹರ್ಷಿಗಳಲ್ಲಿ ಗೌರವ, ಅಭಿಮಾನವಿರುವ ಹಾಗೂ ಸನಾತನಸಂಸ್ಕೃತಿಯನ್ನು ನಂಬಿರುವ ಯಾವುದೇ ವ್ಯಕ್ತಿಯು ಶ್ರೀರಾಮಚಂದ್ರನ ಅಸ್ತಿತ್ವದ ಬಗ್ಗೆ ಸಂದೇಹಪಡುವ ಅಗತ್ಯವೇ ಇಲ್ಲ.

ಕ್ರಿ. ಶ. 300ರ ನಂತರದಲ್ಲಿ ಭಾರತದ ಖಗೋಳಶಾಸ್ತ್ರಜ್ಞರು ಬೃಹತ್‌ಯುಗಗಳ ಕಾಲಚಕ್ರಗಳನ್ನು ತಮ್ಮ ಲೆಕ್ಕಾಚಾರಗಳಿಗೋಸ್ಕರ ಪರಿಚಯಿಸಿದರು. ಈ ಕಾಲಚಕ್ರಗಳ ಬಗ್ಗೆ ರಾಮಾಯಣದಲ್ಲಾಗಲೀ ಮಹಾಭಾರತದಲ್ಲಾಗಲೀ ನಮಗೆ ಆಧಾರ ಸಿಕ್ಕುವುದಿಲ್ಲ. ಆದ್ದರಿಂದ ಇವುಗಳನ್ನು ಪೌರಾಣಿಕ ಪರಂಪರೆಗೆ ಪರಿಚಯಿಸುವುದಕ್ಕಾಗುವುದಿಲ್ಲ. ಪುರಾಣ

ಗಳ ರೀತ್ಯಾ ಸೂರ್ಯವಂಶದಲ್ಲಿ ಕೇವಲ ನೂರು ಮಂದಿ ಮಹಾರಾಜರುಗಳು ಇದ್ದರು. ಈ ವಂಶದ ಪ್ರಥಮ ರಾಜ ವೈವಸ್ವತಮನುವಾದರೆ, ಬೃಹದ್ಬಾಲನೇ ಕೊನೆಯ ರಾಜ. ಈತನು ಮಹಾಭಾರತ ಯುದ್ಧದಲ್ಲಿ ಕೊನೆಯುಸಿರೆಳೆದನು. ಈ ಅವಧಿಯು ನಮಗೆ ತಿಳಿದಿರುವಂತೆ (ಕ್ರಿ. ಪೂ. 8576–3067) 5509 ವರ್ಷಗಳು ಮಾತ್ರ. ಶ್ರೀರಾಮನು ಈ ಸೂರ್ಯವಂಶದ 71ನೆಯ ರಾಜ. ಆದ್ದರಿಂದ ಶ್ರೀರಾಮನ ಕಾಲವನ್ನು ಸುಮಾರು ಕ್ರಿ. ಪೂ. 4700 ಎಂದು ಹೇಳಬಹುದು. ಆದರೆ ಜ್ಯೋತಿಷಶಾಸ್ತ್ರದ ಲೆಕ್ಕಾಚಾರಕ್ಕೆ ಅನುಗುಣವಾಗಿ ಇದು ಬುಧವಾರ, ಮೇಷ ಶುಕ್ಲ ನವಮೀ, ಪುನರ್ವಸು ನಕ್ಷತ್ರ ದಿನ, ಹತ್ತನೇ ಜನವರಿ ಕ್ರಿ. ಪೂ. 4439 ಎಂದಾಗುತ್ತದೆ. (ಇದು ಜಾತಕದಲ್ಲಿನ ಗ್ರಹಗಳ ಸ್ಥಾನಗಳಿಂದ ಕಂಡುಹಿಡಿದುದಾಗಿದೆ.)

ಒಂದು ತಪ್ಪು ಭಾಷಾಂತರ ಕೆಲವು ಗೊಂದಲಗಳಿಗೆ ಅವಕಾಶಮಾಡಿಕೊಟ್ಟಿದೆ. ಚಕ್ರವರ್ತಿಯಾದ ದಶರಥಮಹಾರಾಜನು 60,000 ವರ್ಷಗಳು ರಾಜ್ಯಭಾರಮಾಡಿದ ಎಂಬುದು ರಾಮಾಯಣದಲ್ಲಿ ಹೇಳಲ್ಪಟ್ಟ ಒಂದು ವಿಚಾರ. ಆದರೆ ಸಂಸ್ಕೃತದಲ್ಲಿ ಒಂದು, ಹತ್ತು, ನೂರು, ಸಾವಿರ, ಹತ್ತು ಸಾವಿರ, ಲಕ್ಷಗಳಿಗೆ ಬೇರೆ ಬೇರೆ ನಿರ್ದಿಷ್ಟವಾದ ಪದಗಳಿವೆ. ವಾಲ್ಮೀಕಿ ಮಹರ್ಷಿಗಳು ಹತ್ತುಸಾವಿರ ಎಂದು ಹೇಳಬೇಕಾದೆಡೆ 'ಅಯುತ' ಎಂದು ಹೇಳುತ್ತಿದ್ದರೇ ಹೊರತು 'ದಶಸಹಸ್ರ' ಎಂಬ ವ್ಯಾಕರಣವಿರೋಧವಾದ ಪದವನ್ನು ಬಳಸುತ್ತಿರಲಿಲ್ಲ. 'ಸಹಸ್ರ' ಎಂದರೆ ಈ ಸಂದರ್ಭದಲ್ಲಿ 'ಆನಂದ ಪ್ರದಾಯಕ' ಎಂಬರ್ಥ ಬರುತ್ತದೆ. ಆದ್ದರಿಂದ ಇಲ್ಲಿ ವಾಲ್ಮೀಕಿಗಳ ಹೇಳಿಕೆ ಏನೆಂದರೆ : ದಶರಥಮಹಾರಾಜನು 60 ಸುಖದಾಯಕ ವರ್ಷಗಳು ರಾಜ್ಯ ಭಾರಮಾಡಿ, ನಂತರ ತನಗೆ ವಾರಸುದಾರರು (ಪುತ್ರರು) ಇಲ್ಲದುದಕ್ಕೆ ವ್ಯಸನಪಡುತ್ತಾನೆ. (ಈ ವ್ಯಾಖ್ಯಾನವನ್ನು ವಿದ್ವಾನ್ ಮೇಲ್ಕೋಟೆ ನರಸಿಂಹ ತಾತಾಚಾರ್ಯಸ್ವಾಮಿಗಳು ನನಗೆ ಕೊಟ್ಟರು.) ಹಾಗಾಗಿ ನಾವು ಸುಲಭವಾಗಿ ದಶರಥನ ವಯಸ್ಸನ್ನು ಹೀಗೆ ಲೆಕ್ಕಹಾಕಬಹುದು. 60+25=85 ವರ್ಷಗಳು. ಈಗ ಶ್ರೀರಾಮಚಂದ್ರನ ವಯಸ್ಸನ್ನು ಲೆಕ್ಕ ಹಾಕೋಣ. ಶ್ರೀರಾಮಚಂದ್ರನು ಸೀತೆಯನ್ನು ವಾಲ್ಮೀಕಿಮಹರ್ಷಿಗಳ ಆಶ್ರಮಕ್ಕೆ ಕಳುಹುವ ಮುನ್ನ 11 ವರ್ಷಗಳು ಸುಖವಾಗಿ ರಾಜ್ಯಭಾರಮಾಡಿದ.

ಆದ್ದರಿಂದ ಶ್ರೀರಾಮನ ಒಟ್ಟು ವಯಸ್ಸು ಈ ರೀತಿ ಆಯಿತು. 25+14+11+12=62. ಸೀತೆಯನ್ನು ಕಾಡಿಗೆ ಕಳುಹಿಸಿದ 12ನೇ ವರ್ಷದಲ್ಲಿ ಶ್ರೀರಾಮಚಂದ್ರನು ಅಶ್ವಮೇಧಯಾಗ ಮಾಡಿದ ಎಂಬ ವಿಷಯ ತಿಳಿದದ್ದೇ ಆಗಿದೆ.

ದಿವಾನ್ ಬಹದ್ದೂರ್ ಸ್ವಾಮಿಕಣ್ಣುಪಿಳ್ಳೈ ಹಾಗೂ ಮತ್ತಿತರರು ವಾಲ್ಮೀಕಿಮಹರ್ಷಿಗಳ ಅಥವಾ ಅವರ ಮಾತುಗಳ ಸತ್ಯವನ್ನು ನಂಬದೆ, ಕೇವಲ ಶ್ರೀರಾಮನ ಜಾತಕವನ್ನೇ ಆಧಾರವಾಗಿಟ್ಟುಕೊಂಡು, ಅವನ ಹುಟ್ಟಿದ ದಿನವನ್ನು ಕ್ರಿ. ಶ. 7ರಿಂದ 9ನೆಯ ಶತಮಾನದ ಅವಧಿಯಲ್ಲಿ ಹುಡುಕಿ ವಿಫಲರಾಗಿ, ಈ ಜಾತಕವು ಸುಳ್ಳು ಎಂಬ ನಿರ್ಧಾರಕ್ಕೆ ಬಂದರು. ಈ ವ್ಯಕ್ತಿಗಳನ್ನು ಗಮನಿಸಿದರೆ–ಬಹು ಕಂಬಗಳುಳ್ಳ ಕತ್ತಲೆ ಕೋಣೆಯಲ್ಲಿ ಕರಿ ಬೆಕ್ಕಿಗಾಗಿ ಅರಸಿ ಮೈಕೈಗೆ ಏಟುತಿಂದವರಂತೆ ಕಂಡುಬರುತ್ತಾರೆ. ವಾಯು ಪುತ್ರನಾದ ಆಂಜನೇಯನು ಉದ್ಧರಿಸುವಂತೆ –'ಅನ್ವೇಷಣೆಯು ಹಿರಿಯರು ಹೇಳಿರುವಂತಹ ಸರಿಯಾದ ಸ್ಥಳ ಹಾಗೂ ಸಮಯದಲ್ಲಿ ಆರಂಭಿಸಬೇಕು.'

ಇದೇ ರೀತಿಯ ತಪ್ಪುಯೋಚನೆಗಳ ಗೊಂದಲದಿಂದಾಗಿ ಶ್ರೀಕೃಷ್ಣ ಹಾಗೂ ಶಂಕರಾಚಾರ್ಯರ ಜಾತಕಗಳ ಮೇಲೂ ಸಂಶಯ ಮೂಡಿಬಂದಿದೆ. ಆದರೆ ಜಾತಕದ ಗ್ರಹಸ್ಥಾನಗಳ ಮೂಲಕ ಇವರ ಹುಟ್ಟಿದ ದಿನಗಳನ್ನೂ ಬಹು ಸುಲಭವಾಗಿ ಕಂಡುಹಿಡಿಯಬಹುದಾಗಿದೆ.

ಕೆಲವರಿಗೆ ರಾಮಾಯಣದ ಚಾರಿತ್ರ್ಯಕ ಮೌಲ್ಯದ ಬಗ್ಗೆ ಅಗಾಧವಾದ ನಂಬಿಕೆಯಿದ್ದರೂ ಅಲ್ಲಲ್ಲಿ ಕೆಲವು ಸಂದೇಹಗಳಿರುತ್ತವೆ. ಈ ಕೆಲವು ಸಂದೇಹಗಳನ್ನೇ ವಾಲ್ಮೀಕಿಮಹರ್ಷಿಗಳ ವಾಕ್ಯಗಳ ಮೇಲೆ ನಂಬಿಕೆಯಿಲ್ಲ ದವರು ದೊಡ್ಡ ಪರ್ವತವನ್ನಾಗಿ ಮಾಡಿದ್ದಾರೆ. ಈ ಒಂದೆರಡು ಸಂದೇಹ ಗಳನ್ನು ಹೀಗೆ ಪರಿಹರಿಸಬಹುದಾಗಿದೆ.

ಮೇಷ ಶುಕ್ಲ ನವಮಿ ಹಾಗೂ ಪುನರ್ವಸು ನಕ್ಷತ್ರ ಒಟ್ಟಿಗೆ ಬರುವು ದಿಲ್ಲವೆಂಬುದು ವಿದಿತವಾದ ವಿಷಯವಾಗಿದೆ. ಸಾಮಾನ್ಯವಾಗಿ ಇದು ನಿಜವೂ ಹೌದು. ಮೇಷದ ಆದಿಯಿಂದ ಪುನರ್ವಸು ಅಂತ್ಯದವರೆಗೆ ಇದು $93\frac{1}{3}°$. ಸೂರ್ಯನ ಹಾಗೂ ಚಂದ್ರನ ನಡುವಿನ ಈ ಕಾಲವನ್ನು (ಅಂತರವನ್ನು) ೮ ತಿಥಿಗಳನ್ನಾಗಿ ಹೀಗೆ ವಿಂಗಡಿಸಬಹುದಾಗಿದೆ. $8 \times 12 = 96$.

ಆದ್ದರಿಂದ ಸಾಮಾನ್ಯವಾಗಿ ನವಮಿ 96° ಯಲ್ಲಿ ಆರಂಭವಾಗುತ್ತದೆ. ಆದರೆ ಈ ಕೆಲವು ಅಪರೂಪದ ನಿದರ್ಶನಗಳಲ್ಲಿ ಅಂತಹ ಕಾಯಿದೆಗಳನ್ನು ಜಾಗರೂಕತೆಯಿಂದ ಬಳಸಬೇಕಾಗುತ್ತದೆ. ಶ್ರೀಕೃಷ್ಣನ ಜಾತಕದಲ್ಲಿ ತೋರಿಸಿರುವಂತೆ ಈ ಗ್ರಹಗತಿಗಳು ಕೆಲವೇ ನಿಮಿಷಗಳವರೆಗೆ ಮಾತ್ರ ಆ ಹೊಂದಾಣಿಕೆಯಲ್ಲಿದ್ದು ಆ ನಂತರ ವಿವಿಧವಾಗಿ ಬೇರ್ಪಡೆಯಾಗುತ್ತವೆ.

ಯಾವುದೇ ಪಂಚಾಂಗದಿಂದ ತಿಥಿಗಳು ಹಾಗೂ ನಕ್ಷತ್ರಗಳು ತಮ್ಮ ಕಾಲಗಳಲ್ಲಿ $22\frac{1}{2}$ ಘಂಟೆಗಳಿಂದ $25\frac{1}{2}$ ಘಂಟೆಗಳು ವ್ಯತ್ಯಾಸಹೊಂದುತ್ತವೆ ಎಂಬುದನ್ನು ತಿಳಿಯಬಹುದಾಗಿದೆ. ಇದು ಸೂರ್ಯ ಹಾಗೂ ಚಂದ್ರರ ವೇಗದ ಗತಿ ವ್ಯತ್ಯಾಸದಿಂದಲೂ, ಸಮಭಾಜಕವೃತ್ತ ಮತ್ತು ಸೂರ್ಯ-ಚಂದ್ರರ ಪಥಗಳ ನಡುವಿನ ಕೋಣಕ್ಕನುಗುಣವಾಗಿಯೂ, ವ್ಯತ್ಯಾಸವಾಗುತ್ತದೆ.

ಈ ಕೆಲವು ಅಪೂರ್ವವಾದ ಲೆಕ್ಕಾಚಾರಗಳು ಶ್ರೀರಾಮನ ಜಾತಕಕ್ಕೆ ಸಂಬಂಧಪಟ್ಟಂತೆ ಕೆಳಗಿನಂತಿವೆ.

ಒಂದು ನಕ್ಷತ್ರ ಭಾಗ $= 13\frac{1}{3}°$.

ನಕ್ಷತ್ರಾವಧಿಯು 64 ನಳಿಗೈಗಳು ( ಘಳಿಗೆಗಳು ) ಆಗಿರುವ ಒಂದು ನಿದರ್ಶನವನ್ನು ತೆಗೆದುಕೊಳ್ಳೋಣ. ಆದ್ದರಿಂದ ಒಂದು ದಿನಕ್ಕೆ ಚಂದ್ರನು ಸಂಚರಿಸುವುದು $\frac{40}{3} \times \frac{60}{64} = 12.5°$

ಸೂರ್ಯನ ಸರಾಸರಿ ಗತಿಯು $= 1°$ ದಿನಕ್ಕೆ

ಈಗ ಅಮಾವಾಸ್ಯೆಯು ಅಶ್ವಿನ್ಯಾದಿಯಿಂದ $X°$ ದೂರದಲ್ಲಿ ಎಂದಿಟ್ಟು ಕೊಳ್ಳೋಣ ಹಾಗೂ ಸೂರ್ಯನು ಅಶ್ವಿನ್ಯಾದಿಯಿಂದ $\frac{3}{4}°$ ಇದ್ದನು ಹಾಗೂ ಚಂದ್ರ 93° ಯಲ್ಲಿದ್ದನು ( ಪುನರ್ವಸು )



ಸೂರ್ಯನು 'O' ಇಂದ A ಗೆ ಚಲಿಸಲು ಬೇಕಾದ ಕಾಲ (ದಿನಗಳಲ್ಲಿ) = $\frac{X + \frac{3}{4}}{1} = \frac{4X+3}{4}$

ಹಾಗೆಯೇ ಚಂದ್ರನು 'O' ಇಂದ 'B' ಗೆ ಚಲಿಸಲು ಬೇಕಾದ ದಿನಗಳು = $\frac{X+93}{12.5} = \frac{2X+186}{25}$

ಆದರೆ ಇವೆರಡೂ ಒಂದೇ ಎಂದರೆ $\frac{4X+3}{4} = \frac{2X+186}{25}$

ಆದ್ದರಿಂದ $92X = 669^{\circ}$ ಅಥವಾ $X = 7.27^{\circ}$

ಎಂದರೆ, ಸೂರ್ಯನು ಅಮಾವಾಸ್ಯೆಯಿಂದ $7.27 + 0.75 = 8.02^{\circ}$ ತನಕ ಚಲಿಸಿದ್ದಾನೆ. ಎಂದರೆ, ಅಮಾವಾಸ್ಯೆಯಿಂದ 9 ನೆಯ ದಿನ ಸೂರ್ಯನು ಅಶ್ವಿನ್ಯಾದಿಯಿಂದ $0.75^{\circ}$ ದೂರದಲ್ಲಿದ್ದಾನೆ ಹಾಗೂ ಚಂದ್ರನು $93^{\circ}$ (ಪುನರ್ವಸು) ಯಲ್ಲಿದ್ದಾನೆ ಎಂದು ಸಾಧಿಸಿದಂತಾಯಿತು. ಎಂದರೆ ಪುನರ್ವಸು ನಕ್ಷತ್ರದ ದಿನ ಮೇಷ ಶುಕ್ಲ ನವಮೀ ತಿಥಿ ಎಂದಾಯಿತು.

ಇದೇ ತರಹದ ತೊಡಕು ಶಂಕರಾಚಾರ್ಯರ ಜಾತಕದಲ್ಲಿಯೂ ಅನುಭವವಾಗುತ್ತದೆ. ಆದರೆ ಇದು ಮೊದಲನೆಯದರ ತಲೆಕೆಳಗು. ವೈಶಾಖ ಶುಕ್ಲ ಪಂಚಮಿ, ಜೊತೆಗೆ ಸೂರ್ಯನು ಮೇಷದಲ್ಲಿಯೂ, ಚಂದ್ರನು ಪುನರ್ವಸುವಿನಲ್ಲೂ ರಾರಾಜಿಸುತ್ತಿದ್ದಾರೆ. ಶ್ರೀರಾಮನಾದರೋ ಮೇಷ ತಿಂಗಳ ಎರಡನೆಯ ದಿನದಂದು ಜನಿಸಿದ. ಅಂದು ಚಂದ್ರನು ಪುನರ್ವಸುವಿನ ಅಂತ್ಯದಲ್ಲಿ ಇದ್ದ ಹಾಗೂ ಶುಕ್ಲ ನವಮಿಯಾಗಿತ್ತು. ಶ್ರೀ ಶಂಕರಭಗವತ್ಪಾದರು ಮೇಷ ತಿಂಗಳ ಕೊನೆಯ ದಿನ ಜೊತೆಗೆ ಚಂದ್ರನು ಪುನರ್ವಸುವಿನ ಕೊನೆಯಲ್ಲಿರುವಾಗ ಜನಿಸಿದರು. ಅಂದರೆ ಶುಕ್ಲ ಪಂಚಮಿಯಾಗಿತ್ತು. ಈ ಅಪರೂಪದ ಗ್ರಹಗತಿಗಳು ಸೂಚಿಸುವುದೇನೆಂದರೆ ಈ ಮಹಾತ್ಮರು ಅವತಾರಪುರುಷರೆಂದು.

2) ಮತ್ತೆ ಮಹಾತ್ಮರಾದ ವಾಲ್ಮೀಕಿಮಹರ್ಷಿಗಳು ಭರತ ಹಾಗೂ ಅವಳಿಗಳ ಜನ್ಮನಕ್ಷತ್ರಗಳ ಬಗ್ಗೆ ಹೇಳಿದ್ದಾರೆ. ಆದರೆ ಅವರು ಶ್ರೀರಾಮಚಂದ್ರನ ಜಾತಕದಂತೆ ಇಲ್ಲಿ ಜನ್ಮತಿಥಿಯನ್ನು ಹೆಸರಿಸಿಲ್ಲ. ಅದಕ್ಕೆ ಕಾರಣವೇನೆಂದರೆ ಅವರೆಲ್ಲರೂ ಒಂದೇ ತಿಥಿಯಲ್ಲಿ ಜನ್ಮ ತಾಳಿದರು. ಅದೇ ಶುಕ್ಲ,

ನವಮಿ. ಶ್ರೀರಾಮನು ಸುಮಾರು 12 ಗಂಟೆ ಮಧ್ಯಾಹ್ನದಲ್ಲಿಯೂ, ಭರತನು ಅದೇ ರಾತ್ರಿ ಸೂರ್ಯೋದಯಕ್ಕೆ ಮುನ್ನವೂ ಹುಟ್ಟಿದರು. ಶ್ರೀರಾಮನು ನವಮಿಯ ಆದಿಯಲ್ಲೂ, ಪುನರ್ವಸುವಿನ ಅಂತ್ಯದಲ್ಲಿಯೂ ಹುಟ್ಟಿದ್ದರಿಂದ ಭರತನು ಹುಟ್ಟಿದ್ದು ಪುಷ್ಯ ನಕ್ಷತ್ರ ಹಾಗೂ ನವಮಿ ತಿಥಿಯಾಗುತ್ತದೆ.

ಮಾರನೆಯ ದಿನ ಮಧ್ಯಾಹ್ನದ ವೇಳೆಗೆ ಪುಷ್ಯವು ಹೋಗಿ, ಆಶ್ಲೇಷವು ಬಂದಿತ್ತಾದರೂ ನವಮಿ ದೀರ್ಘ ತಿಥಿಯಾದ್ದರಿಂದ ಅವಳಿಗಳು ಜನ್ಮತಾಳಿದಾಗ ಆಶ್ಲೇಷ ನಕ್ಷತ್ರವಾದರೂ ಶುಕ್ಲನವಮಿಯೇ ಇತ್ತು. ಆದ್ದರಿಂದ ಮಹರ್ಷಿಗಳು ತಿಥಿಯನ್ನು ಈ ಸಹೋದರರ ಜಾತಕದಲ್ಲಿ ಹೇಳದಿದ್ದರೂ, ಇವರ ಜನ್ಮಕಾಲವನ್ನು ಅತಿ ಜಾಗರೂಕತೆಯಿಂದ ಹೇಳಿದ್ದಾರೆ.

ಈ ಸಂದರ್ಭದಲ್ಲಿ ಕೆಳಗಿನ ಅಂಶವನ್ನು ತೋರಿಸುವುದು ಸೂಕ್ತವಾಗಿದೆ. (1924-25) ರಕ್ತಾಕ್ಷಿ ಸಂವತ್ಸರದ ಮೇಷ ತಿಂಗಳಲ್ಲಿ ಶುಕ್ಲ ನವಮಿ ತಿಥಿಯು ಪುನರ್ವಸು ನಕ್ಷತ್ರದಲ್ಲಿ ಆರಂಭವಾಗಿದ್ದು, ಆಶ್ಲೇಷ ನಕ್ಷತ್ರದಲ್ಲಿ ಮುಕ್ತಾಯವಾಯಿತು.* ಆದ್ದರಿಂದ ಮೇಲೆ ಹೇಳಿರುವಂತೆ ಶುಕ್ಲ ನವಮಿಯ ಅವಧಿ ಅಸಾಧ್ಯವಾದದ್ದೇನೂ ಅಲ್ಲ ಎಂಬುದು ಈ ಉದಾಹರಣೆಯಿಂದ ಸ್ಪಷ್ಟವಾಗುತ್ತದೆ.

ಖಗೋಳಶಾಸ್ತ್ರದ ನಿಯಮಗಳು ಬಹಳ ಸಂಕೀರ್ಣತೆಯಿಂದ ಕೂಡಿದ್ದು. ನಾವು ಸಾಮಾನ್ಯವಾಗಿ ಸುಮಾರಾದ ಫಲಿತಾಂಶಗಳನ್ನು ತೆಗೆದುಕೊಳ್ಳುತ್ತೇವೆ. ಆದರೆ ನಿಖರವಾದ ಫಲಿತಾಂಶಗಳು ಬೇಕಾದರೆ ಹಲವಾರು ಅಂಶಗಳನ್ನು ಪರಿಗಣಿಸಬೇಕಾಗುತ್ತದೆ. ಉದಾಹರಣೆಗೆ ಒಂದು ಪ್ರದೇಶದ ರೇಖಾಂಶ, ಸಂವತ್ಸರದ ನಿರ್ದಿಷ್ಟ ಕಾಲ, ನಕ್ಷತ್ರಗಳಲ್ಲಿ ಮೇಷಸಂಕ್ರಮಣದ ಸ್ಥಾನ ಇತ್ಯಾದಿ. ಶ್ರೀರಾಮನ ಜನನಕಾಲದಲ್ಲಿ ಮೇಷಸಂಕ್ರಮಣ ಈಗಿನ ಭಾರತೀಯ ಪಂಚಾಂಗ ಪ್ರಕಾರ 66°.8′ ಇತ್ತು. ಅಂದರೆ ಮೃಗಶಿರಾ ನಕ್ಷತ್ರದ ಅಂತ್ಯ ಅಥವಾ ಆರ್ದ್ರಾನಕ್ಷತ್ರದ ಆದಿಯಾಗುತ್ತದೆ.

---

*ರಕ್ತಾಕ್ಷಿ ಸಂವತ್ಸರದ ಸಿದ್ಧಾಂತ ಪಂಚಾಂಗದಲ್ಲಿ ಇಲ್ಲಿ ಹೇಳಿರುವಂತೆ ಇಲ್ಲ. ವಾಕ್ಯ ಅಥವಾ ದೃಗ್ಗಣಿತದ ಪ್ರಕಾರ ಇದು ಇರುವುದೆಂದು ತೋರುತ್ತದೆ. ನಮಗೆ ವಾಕ್ಯ ದೃಗ್ಗಣಿತ ಪಂಚಾಂಗಗಳು ಪ್ರಯತ್ನಿಸಿದರೂ ಸಿಕ್ಕಲಿಲ್ಲ. ಸಿಕ್ಕಿದವರು ಈ ಬಗ್ಗೆ ತಿಳಿಸಬೇಕು. (ಸಂ.)

(53'.20' ಯಿಂದ 66'.40') (ಈ ಬೇಸಿಗೆಯಲ್ಲಿ ಸಂಕ್ರಮಣ ಸ್ಥಾನ 66*.30')

...

ರಾಮಾಯಣ ಹಾಗೂ ಮಹಾಭಾರತಗಳಲ್ಲಿ ಅನೇಕ ಕುತೂಹಲಕಾರಿಯಾದ ಗ್ರಹ, ತಿಥಿ, ನಕ್ಷತ್ರಗಳ ಹೊಂದಾಣಿಕೆಗಳನ್ನು ಕಾಣಬಹುದಾಗಿದೆ. ನಮಗೆ ಈ ಹೊಂದಾಣಿಕೆಗಳನ್ನು ಅರ್ಥೈಸಿಕೊಳ್ಳುವ ಅಥವಾ ಆನಂದಪಡುವ ಸಾಮರ್ಥ್ಯವಿಲ್ಲದಿದ್ದರೆ ಅದನ್ನು ಕಂಡುಕೊಂಡಿರುವ, ಬೃಹತ್‌ಗ್ರಂಥಗಳನ್ನು ರಚಿಸಿರುವ ಮಹಾತ್ಮರುಗಳನ್ನು ಗೌರವಿಸುವ ಸೌಜನ್ಯವಾದರೂ ಬೇಕು. ಈ ಬೃಹದ್ಗ್ರಂಥಗಳನ್ನು (ಪುರಾಣಗಳನ್ನು, ರಾಮಾಯಣ, ಮಹಾಭಾರತ) ಅದೇ ಕಾಲದಲ್ಲಿ ಬರೆಯದೆ ಆಮೇಲೆ ಬರೆದಿದ್ದು ಎಂದುಕೊಂಡರೆ, ಅಂತಹ ಅಪರೂಪದ ಹಾಗೂ ನೈಜವಾದ ಗ್ರಹಗತಿಗಳ ಹೊಂದಾಣಿಕೆಯನ್ನು ಬರೆಯುವುದಕ್ಕಾಗುತ್ತಿರಲಿಲ್ಲ. (ಸೃಷ್ಟಿಸಲಸಾಧ್ಯ). ದಶರಥನು ಸರ್ವಪ್ರಜೆಗಳ, ಮಂತ್ರಿಗಳ ಅನುಮೋದನೆಯಿಂದ, ಶ್ರೀರಾಮನನ್ನು ಪಟ್ಟಕ್ಕೇರಿಸುವ ನಿರ್ಧಾರ ತೆಗೆದುಕೊಂಡ. ಅವನು ತನ್ನ ಅಂತರಿಕಗೃಹದಲ್ಲಿ ಮಲಗಿರುವ ದೃಶ್ಯವನ್ನು ಸ್ವಲ್ಪ ಅವಲೋಕಿಸೋಣ. ಅವನು ಶ್ರೀರಾಮನನ್ನು ಕರೆಸಿ ಪಕ್ಕದಲ್ಲಿ ಕೂರಿಸಿಕೊಂಡು ತನ್ನ ಸ್ವಪ್ನದ ಬಗ್ಗೆಯೂ ಹಾಗೂ ಗ್ರಹಗತಿಗಳ ಹೊಂದಾಣಿಕೆಯ ಬಗ್ಗೆಯೂ ಹೇಳಿ, ತನ್ನ ಸಾವಿನ್ನು ಒಂದು ವಾರವೆಂದು ಗ್ರಹಗಳು ಸೂಚಿಸುತ್ತವೆ ಎನ್ನುತ್ತಾನೆ. ನಾವು ದಶರಥಮಹಾರಾಜನ ಈ ಹೇಳಿಕೆಗಳನ್ನು ವಿಶ್ಲೇಷಿಸೋಣ. ಶ್ರೀರಾಮಚಂದ್ರನ ಜಾತಕರೀತ್ಯ 10ನೇ ಜನವರಿ ಕ್ರಿ. ಪೂ. 4439ರಲ್ಲಿ ಗ್ರಹಗಳ ಸ್ಥಾನಗಳು ಹೀಗಿದ್ದುವು.– ಲಗ್ನ 93'16', ಸೂರ್ಯ 1'12', ಚಂದ್ರ 93°5', ಗುರು 118° 12', ಶನಿ 187'12', ಮಂಗಳ 286°', ಶುಕ್ರ 354'13', ಬುಧ 4'10', ರಾಹು 151°5', ಮೇಷ ಸಂಕ್ರಮಣ 66°8', (ಭಾರತ ಸರ್ಕಾರದ ಪಂಚಾಂಗದಲ್ಲಿ 'ಚೈತ್ರ' 180°ದಲ್ಲಿದೆ)

25 ವರ್ಷ, 22 ದಿನಗಳ ನಂತರ, ಗ್ರಹಗಳು ಈ ರೀತಿ ಇವೆ.

25 ನಾಕ್ಷತ್ರಿಕ ವರ್ಷಗಳು + 22 ದಿನಗಳು = 9153ನೆಯ ದಿನ.

(*i*) ಆ ದಿನದ ನಕ್ಷತ್ರ ಪುನರ್ವಸುವಾಗಿತ್ತು. ಮಾರನೆಯ ದಿನ,

ಅಂದರೆ ಶ್ರೀರಾಮ ಹಾಗೂ ಸೀತೆ ಅರಣ್ಯವಾಸಕ್ಕೆ ಹೊರಟ ದಿನ, ಪುಷ್ಯ ನಕ್ಷತ್ರವಾಗಿತ್ತು ಎಂದು ಸೀತೆಯ ಹೇಳಿಕೆಯಾಗಿದೆ.

(*ii*) ಅಂದು ಶುಕ್ಲ ಷಷ್ಠಿಯಾಗಿತ್ತು. (ಅಮಾವಾಸ್ಯೆಯಿಂದ 6ನೇ ದಿನ) ಶ್ರೀರಾಮನು ಕಾಡಿಗೆ ಹೊರಟ ದಿನ ಸಪ್ತಮಿಯಾಗಿತ್ತು. ಅದಕ್ಕೋಸ್ಕರವೇ ವನವಾಸ ಮುಗಿದ ತತ್‌ಕ್ಷಣ ಶ್ರೀರಾಮನು ಅಯೋಧ್ಯೆಗೆ ಸಪ್ತಮಿಯ ದಿನವೇ ಧಾವಿಸಿಬರುತ್ತಾನೆ.

(*iii*) ಸೂರ್ಯನು ಭರಣಿ ನಕ್ಷತ್ರದ ಮಧ್ಯಭಾಗದಲ್ಲಿದ್ದಾನೆ.

(*iv*) ಮಂಗಳ ಸಹ ಅದೇ ಜಾಗದಲ್ಲಿದ್ದಾನೆ.

(*v*) ರಾಹು ಸಹ ಅದೇ ಸ್ಥಾನದಲ್ಲಿದ್ದಾನೆ. (ಶ್ರೀರಾಮಚಂದ್ರನ ಜಾತಕದ ರೀತ್ಯ ರಾಹುವಿನ ದಶಮಸ್ಥಾನ, ದಶರಥನ ಅಂತ್ಯವನ್ನು ಸೂಚಿಸುತ್ತದೆ.)

(*vi*) ಪೂರ್ವ ಫಾಲ್ಗುಣಿಯಲ್ಲಿ ಶನಿ–ಭರಣಿಯ ಜನ್ಮ ಅನುಜನ್ಮ–ವಕ್ರಶನಿಯ ಕ್ರೂರದೃಷ್ಟಿ ಭರಣಿಯ ಮೇಲಿದೆ. ವೇದವ್ಯಾಸರು ಮಹಾಭಾರತದಲ್ಲಿ ಕ್ರೂರದೃಷ್ಟಿಯ ದೃಷ್ಟಾಂತವನ್ನು ಹೇಳಿದ್ದಾರೆ. ಇದಲ್ಲದೆ ಶನಿಯ $7\frac{1}{2}$ ವರ್ಷಗಳ ಅವಧಿಯ ಅಂತ್ಯವು ಶ್ರೀರಾಮಚಂದ್ರನ ಜಾತಕದಲ್ಲಿ ಕಂಡುಬರುತ್ತದೆ. ಈ ಅವಧಿಯ ಅಂತ್ಯ ಘೋರವಾದ ಸಂಕಟಗಳು ರಾಮನಿಗೆ ಬರಲಿವೆ ಎಂಬುದನ್ನು ಸೂಚಿಸುತ್ತದೆ.

(*vii*) ಬುಧನು ಮೇಷದಲ್ಲಿ ಸೂರ್ಯನ ಜೊತೆಗಿದ್ದಾನೆ.

(*viii*) ಶುಕ್ರನೂ ಮೇಷದಲ್ಲಿ ಸೂರ್ಯನ ಜೊತೆಗಿದ್ದಾನೆ.

(*ix*) ಗುರುವು ಉತ್ತರ ಫಾಲ್ಗುಣಿಯಲ್ಲೂ, ಕನ್ಯಾರಾಶಿಯಲ್ಲೂ ಇದ್ದು ಭರಣಿಯಿಂದ 6ನೆಯ ಮನೆಯನ್ನು ಆಕ್ರಮಿಸಿಕೊಂಡಿದ್ದಾನೆ. ಹೀಗಾಗಿ ಮಹರ್ಷಿ ವಾಲ್ಮೀಕಿಗಳ ಹೇಳಿಕೆಗಳು ಖಗೋಳಶಾಸ್ತ್ರಕ್ಕೆ ಹೊರತಾಗಿಲ್ಲದೆ ಸತ್ಯವಾಗಿದೆ ಎಂಬುದು ವೇದ್ಯವಾಗುತ್ತದೆ. ಶ್ರೀರಾಮಚಂದ್ರನ ಜಾತಕವು ಪರಿಪೂರ್ಣವಾಗಿ ನೈಜವಾದುದು ಎಂಬುದು ಇದರಿಂದ ಪುನಃ ದೃಢಪಡುತ್ತದೆ. ಶ್ರೀರಾಮನು ವನವಾಸಕ್ಕೆ ಹೊರಟದ್ದು ಅವನಿಗೆ 25 ನಾಕ್ಷತ್ರಿಕವರ್ಷ ಹಾಗೂ 22 ದಿನಗಳಾಗಿದ್ದಾಗ ಎಂಬುದು ಕಂಡುಬರುತ್ತದೆ.